ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ,

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಭಾಗ—೧೧

## ವಾಯವೀಯಸಂಹಿತೆಯ ಪೂರ್ವಭಾಗ



ಆಸ್ಥಾನ ವಿದ್ವಾನ್

**ಹಾಸನದ ಪಂಡಿತ ವೆಂಕಟರಾವ್**

ಅನುವಾದಕ:

—೧—

ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್

೧೯೪೬



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರುದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಎಸ್.ಐ. ರವರು**




# ಶ್ರೀ ಪ್ರಸನ್ನ ಶಂಕರ

ವಾಮಾಂಕನ್ಯಸ್ತವಾಮೇತರಕರಕಮಲಾಯಾಸ್ತಥಾ ವಾಮಬಾಹು-
ನ್ಯಸ್ತಾರಕ್ತೋತ್ಪಲಾಯಾಃ ಸ್ತನವಿಧೃತಲಸದ್ವಾಮಬಾಹುಂ ಪ್ರಿಯಾಯಾಃ ।
ಸರ್ವಾಕಲ್ಪಾಭಿರಾಮೋ ಧೃತಪರಶುಮೃಗೇಷ್ಟೈಃ ಕರೈಃ ಕಾಂಚನಾಭೋ
ಧ್ಯೇಯಃ ಪದ್ಮಾಸನಸ್ಥಃ ಸ್ಮರಲುಲಿತವಪುಃ ಸಂಪದೇ ಪಾರ್ವತೀಶಃ ॥

# ಮುನ್ನುಡಿ

ತತ್ತ್ವನಿರೂಪಣ ದೃಷ್ಟಿಯಿಂದ ವಾಯವೀಯ ಸಂಹಿತೆಯು ಶಿವಪುರಾಣದಲ್ಲಿ ಅತ್ಯಂತ ಶ್ರೇಷ್ಠಭಾಗವೆನಿಸಿರುವುದು. ಈ ಭಾಗದಲ್ಲಿ ಪ್ರತಿಪಾದಿತವಾಗಿರುವ ಪ್ರಪಂಚ ಸೃಷ್ಟಿಕ್ರಮ, ಭಸ್ಮಮಾಹಾತ್ಮ್ಯ, ಪಾಶುಪತವ್ರತ ಮುಂತಾದ ವಿಷಯಗಳನ್ನು ಓದಿ ಮನನಮಾಡುವುದರಿಂದ ಅವುಗಳಲ್ಲಿ ಅಡಗಿರುವ ಕಾರ್ಯಕಾರಣಸಹಿತವಾದ ಗೂಢಾರ್ಥವು ಚೆನ್ನಾಗಿ ಗೋಚರವಾಗುವುದು.

ಸೃಷ್ಟಿ ವಿಚಾರದಲ್ಲಿ ಒಂದೆರಡು ಮಾತುಗಳನ್ನು ಈ ಸಂದರ್ಭದಲ್ಲಿ ಹೇಳುವುದು ಉಚಿತವಾಗಿರುವುದು. ಈ ವಿಚಾರವನ್ನು ವಿಸ್ತಾರವಾಗಿ ಹೇಳುವುದಾದರೆ ಅದೇ ಒಂದು ದೊಡ್ಡ ಗ್ರಂಥವಾಗುವುದರಿಂದ, ಸಾಧಾರಣ ಜನರಿಗೆ ತಿಳಿಯುವ ರೀತಿಯಲ್ಲಿ ಅತಿ ಸಂಕ್ಷೇಪವಾಗಿ ಹೇಳಬೇಕಾಗಿದೆ ಸೃಷ್ಟ್ಯಾದಿಯಲ್ಲಿ ಅವ್ಯಕ್ತಸ್ವರೂಪವಾದ ಪರಬ್ರಹ್ಮವೊಂದೇ ಇದ್ದಿತು. ಇದಕ್ಕೆ ನಾಮರೂಪಭೇದಗಳಿಲ್ಲದ್ದರಿಂದ ಇದರ ಸ್ವರೂಪವನ್ನು ತಿಳಿಯಲು ಅಥವಾ ಊಹಿಸಲು (ಸಾಧಾರಣ) ಮನುಷ್ಯರ ಬುದ್ಧಿಗೆ ಮೀರಿದ್ದಾಗಿರುವುದು. ಪ್ರಪಂಚದಲ್ಲಿರುವ ಸಮಸ್ತ ವಸ್ತುಗಳಿಗೂ ಸೂಕ್ಷ್ಮವಾದ ಒಂದೇ ವಸ್ತುವು ಮೂಲಭೂತವಾಗಿರುವುದೆಂದು ನಂಬಲು ಸಾಕಾದಷ್ಟು ಕಾರಣಗಳಿರುವುವೆಂದು ಆಧುನಿಕ ವಿಜ್ಞಾನಿಗಳು (Modern Scientists) ಸಹ ನಿಶ್ಚಯಿಸಿರುವರು. ಇದಲ್ಲದೆ ವಸ್ತುವಿಗೂ ಶಕ್ತಿಗೂ ಭೇದವಿಲ್ಲವೆಂದೂ ವಸ್ತುವು ಶಕ್ತಿಯಾಗಿಯೂ, ಶಕ್ತಿಯು ವಸ್ತುವಾಗಿಯೂ ಮಾರ್ಪಡಲು ಸಾಧ್ಯವೆಂದೂ ಈಗಿನ ಸಂಶೋಧನೆಗಳಿಂದ ಚೆನ್ನಾಗಿ ವ್ಯಕ್ತವಾಗಿರುವುದು (Matter and energy are one and same. i.e.. matter can be changed into energy and energy into matter), ಹಿಂದೆ ಹೇಳಿದ ಅವ್ಯಕ್ತವು ಈ ಎರಡು ವಿಧವಾದ ಭೇದಗಳನ್ನು ಒಳಗೊಂಡಿರುವುದು. ಎಂದರೆ ವಸ್ತುವೂ ಶಕ್ತಿಯೂ ಇದರಲ್ಲಿ ಪರಸ್ಪರ ಸೇರಿಹೋಗಿ ಅಡಗಿರುವವು. ಇಂತಹ ಅವ್ಯಕ್ತವನ್ನು ತಿಳಿಯಲು ಮನುಷ್ಯನ ಬುದ್ಧಿಗೆ ಕಷ್ಟಸಾಧ್ಯವಾಗಿರುವುದು. ಸೃಷ್ಟಿಕಾಲದಲ್ಲಿ ಈ ಅವ್ಯಕ್ತದಲ್ಲಿ ಕ್ಷೋಭೆಯುಂಟಾಗಿ ಅದು ಪ್ರಕೃತಿ ಮತ್ತು ಶಕ್ತಿಗಳಾಗಿ ಮಾರ್ಪಟ್ಟು ಚರಾಚರಾತ್ಮಕವಾದ ಈ ಪ್ರಪಂಚದ ಉತ್ಪತ್ತಿಗೆ ಕಾರಣವಾಗಿರುವುದು.

ಪ್ರಜಾ ಸೃಷ್ಟಿವಿಚಾರದಲ್ಲಿ ಪುರಾಣಗಳಲ್ಲಿ ಹೇಳರುವ ಕೆಲವು ವಿಚಾರಗಳು ವಿಜ್ಞಾನ ದೃಷ್ಟಿಯಿಂದ ಸಮಂಜಸವೆಂದು ನಮಗೆ ತೋರದಿದ್ದರೂ ಅವು ಅಸಂಭವ ವಲ್ಲವೆಂದು ನಿರ್ವಿವಾದವಾಗಿ ಹೇಳಬಹುದು. ಉದಾಹರಣೆಗಾಗಿ ಬ್ರಹ್ಮನು ಮನಸ್ಸಿನಿಂದಲೇ ಮಾನಸಪುತ್ರರನ್ನು ಸೃಷ್ಟಿಸಿದನೆಂದು ಹೇಳಿರುವುದಷ್ಟೆ. ಮನಸ್ಸಿನಿಂದಲೇ ಅಯೋನಿಜರಾದ ಪುತ್ರರನ್ನು ಸೃಷ್ಟಿಸಲು ಸಾಧ್ಯವೇ ಎಂದು ನಮಗೆ ಸಂಶಯವು ಉಂಟಾಗಬಹುದು. ಮನಸ್ಸನ್ನು ಏಕಾಗ್ರತೆಯಿಂದ ಪರಮಾತ್ಮನಲ್ಲಿ ಇರಿಸಿ ಧ್ಯಾನ ಮಾಡುವುದರಿಂದ ಆ ಮನಸ್ಸು ಪರಮಾತ್ಮನಲ್ಲಿ ಐಕ್ಯವಾಗಿ ಪರಮಾತ್ಮನಿಗಿರುವ ಮಹಾಸಾಮರ್ಥ್ಯದಿಂದ ಯಾವ ಕಾರ್ಯಬೇಕಾದರೂ ಮಾಡಲು ಸಾಧ್ಯವೆಂದು ಯೋಗಾಭ್ಯಾಸಮಾಡುವವರಿಗೆ ಅನುಭವಸಿದ್ಧವಾಗಿರುವುದು. ಇದಲ್ಲದೆ ಪ್ರಜಾ ಸಂತತಿಯು ಅಭಿವೃದ್ಧಿಯಾಗಲೆಂದು ಪರಮೇಶ್ವರನು ಕೆಲವು ಪ್ರಕೃತಿ ನಿಯಮಗಳನ್ನು ಮಾಡಿರುವನು. ಅವುಗಳಲ್ಲಿ ಸ್ತ್ರೀಪುರುಷರ ಸಂಭೋಗವೂ ಒಂದು. ಸ್ತ್ರೀಪುರುಷರ ಸಂಬಂಧವಿಲ್ಲದೆ ಪ್ರಜೋತ್ಪಾದನೆಯಾಗಲಾರದೆಂದು ಸಾಧಾರಣ ಮನುಷ್ಯರ ನಂಬಿಕೆ. ಲೋಕರೀತಿಯೂ ಹಾಗೆಯೇ ಇರುವುದು. ಆದರೆ ಚೆನ್ನಾಗಿ ವಿಚಾರಮಾಡಿದರೆ ಸಂಭೋಗವಿಲ್ಲದೆ ಸಂತತಿಯು ವೃದ್ಧಿಯಾಗುವುದು ಪ್ರಪಂಚದಲ್ಲಿ ಕಂಡುಬರುವುದು. ವೃಕ್ಷಾದಿಗಳು, ಮೀನೇ ಮೊದಲಾದ ಕೆಲವು ಜಲಚರ ಪ್ರಾಣಿಗಳು ಸಂಭೋಗ ಕ್ರಮವಿಲ್ಲದೆ ವೃದ್ಧಿಯನ್ನೈದುವವು, ಈ ವಿಧವಾದ ಪ್ರಾಣಿಗಳ ಬುದ್ಧಿಯು ಬಹಳ ಕೆಳಮಟ್ಟದಲ್ಲಿರುವುದರಿಂದ ಮನುಷ್ಯಾದಿಗಳಿಗೆ ಇರುವ ಪ್ರಕೃತಿ ನಿಯಮವು ಇವುಗಳಿಗೆ ಅನ್ವಯಿಸುವುದಿಲ್ಲ. ಮನುಷ್ಯಾದಿಗಳಿಗೂ ಇತರ ಪ್ರಾಣಿಗಳಿಗೂ ಕಷ್ಟಸುಖಗಳನ್ನು ಅನುಭವಿಸಲು ಬುದ್ಧಿಯು ತಕ್ಕ ಸ್ಥಿತಿಯಲ್ಲಿರುವುದರಿಂದ ಸಂತಾನೋತ್ಪಾದನೆಗಾಗಿ ಒಂದು ವಿಧವಾದ ಆನಂದವನ್ನು ಪರಮೇಶ್ವರನು ಕಲ್ಪಿಸಿರುವನು. ಆದುದರಿಂದ ಪ್ರಾಣಿಗಳು ಯಾರ ನಿರ್ಬಂಧವೂ ಇಲ್ಲದೆ ಸಂತಾನೋತ್ಪಾದನೆಯಲ್ಲಿ ಆಸಕ್ತವಾಗಿರುವವು. ಇದರಂತೆಯೇ ಪ್ರಾಣಿಗಳ ಆಹಾರಾದಿ ವಿಚಾರಗಳಲ್ಲಿಯೂ ಪರಮೇಶ್ವರನು ಕೆಲವು ಪ್ರಕೃತಿ ನಿಯಮಗಳನ್ನು ಕಲ್ಪಿಸಿರುವನು. ಪಶ್ವಾದಿಗಳಿಗೆ ಹುಲ್ಲು ರುಚಿಕರವಾಗಿರುವಂತೆ ಅವುಗಳ ಜಿಹ್ವೇಂದ್ರಿಯಗಳು ರಚಿತವಾಗಿರುವವು. ಇತರ ಪ್ರಾಣಿಗಳಿಗೂ ಮನುಷ್ಯರಿಗೂ ಅವರವರ ಶರೀರ ಪ್ರಕೃತಿಯನ್ನನುಸರಿಸಿ ಜಿಹ್ವೇಂದ್ರಿಯಗಳು ರಚಿತವಾಗಿರುವವು ಆದುದರಿಂದ ಒಂದು ಪ್ರಾಣಿಗೆ ರುಚಿಕರವಾದ ಆಹಾರವು ಮತ್ತೊಂದಕ್ಕೆ ಸೇರುವುದಿಲ್ಲ. ಆಹಾರವನ್ನು ಸೇವಿಸುವುದರಲ್ಲಿಯೂ

ಒಂದು ವಿಧವಾದ ಆನಂದವು ಉಂಟಾಗುವುದರಿಂದ ಪ್ರಾಣಿಗಳು ತಮಗೆ ಕ್ಲ್ಪಪ್ತವಾಗಿರುವ ಆಹಾರವನ್ನು ಮಾತ್ರ ಸೇವಿಸುವವು. ಇದೂ ಪ್ರಕೃತಿ ನಿಯಮವೇ. ಸರ್ವಶಕ್ತನಾದ ಪರಮೇಶ್ವರನಿಗೆ ಈ ಪ್ರಕೃತಿನಿಯಮವಿಲ್ಲ. ಅವನು ಈ ನಿಯಮಗಳ ನಿರ್ಬಂಧಕ್ಕೆ ಒಳಪಡುವವನಲ್ಲ. ಅವನ ಇಚ್ಛೆಯಿಂದಲೇ ಈ ಪ್ರಪಂಚವು ನಡೆಯುತ್ತಿರುವುದರಿಂದ ಅವನು ಪ್ರಕೃತಿನಿಯಮಕ್ಕೆ ಮೀರಿದ ಯಾವ ಕೆಲಸವನ್ನು ಬೇಕಾದರೂ ಮಾಡಬಹುದು. ಅದರಂತೆ ಪರಮಾತ್ಮನಲ್ಲಿ ಯೋಗಾಭ್ಯಾಸಾದಿಗಳಿಂದ ಮನಸ್ಸನ್ನು ಸ್ಥಿರಗೊಳಿಸುವ ಯೋಗಿಗಳೇ ಮೊದಲಾದ ಮಹಾತ್ಮರು ಪ್ರಕೃತಿ ನಿಯಮಕ್ಕೆ ಮೀರಿದ ಕಾರ್ಯಗಳನ್ನು ಮಾಡಲು ಸಮರ್ಥರು. ಆದುದರಿಂದ ಬ್ರಹ್ಮನು ಮನಸ್ಸಿನಿಂದ ಪುತ್ರರನ್ನು ಸೃಷ್ಟಿಸಿದನೆಂಬುವ ವಿಚಾರದಲ್ಲಿ ಸಂಶಯಪಡಬೇಕಾಗಿಲ್ಲ.

ಭಸ್ಮವು ಪ್ರಪಂಚಸ್ವರೂಪವಾಗಿರುವುದೆಂದು ಹೇಳಿರುವ ವಿಚಾರದಲ್ಲಿ ಅತಿಶಯೋಕ್ತಿಯೇನೂ ಇರುವುದಿಲ್ಲ. ಚೈತನ್ಯಸಹಿತವಾದ ಪ್ರಾಣಿಗಳನ್ನು ಬಿಟ್ಟರೆ ಉಳಿದ ವಸ್ತುಗಳೆಲ್ಲವೂ ಭಸ್ಮ ಅಥವಾ ಬೂದಿಯಾಗಿಯೇ ಇರುವವು. ಬೂದಿಯೆಂದರೆ ಸುಟ್ಟುಹೋಗಿರುವ ಪದಾರ್ಥ. ಸುಟ್ಟಿರುವ ಪದಾರ್ಥವೆಂದರೆ ತೇಜಸ್ಸು (Oxygen) ಸಂಯೋಗವಾಗಿರುವ ವಸ್ತುವು. ಭೂಮಿಯಲ್ಲಿರುವ ಸಕಲಪದಾರ್ಥಗಳಲ್ಲಿಯೂ ತೇಜಸ್ಸಂಯೋಗವಾಗಿರುವುದರಿಂದ ಅವುಗಳೆಲ್ಲ ಭಸ್ಮವೇ ಆಗಿರುವವು. ನೀರೂ ಸಹ ಭಸ್ಮವೇ, ನೀರಿನಲ್ಲಿ (Oxygen and Hydrogen) ಆಮ್ಲಜನಕ ಮತ್ತು ಜಲಜನಕ ಎಂಬ ಎರಡು ವಾಯುಗಳು ಸಂಯೋಗವಾಗಿರುವುದರಿಂದ ದ್ರವರೂಪದಿಂದಿದ್ದರೂ ಅದು ವಿಜ್ಞಾನರೀತಿಯಾಗಿ ಭಸ್ಮವಾಗುವುದು. ಆದುದರಿಂದಲೇ "ಜಲಮಿತಿ ಭಸ್ಮ" ಎಂದು ಉಪನಿಷತ್ತಿನಲ್ಲಿಯೂ ಸಹ ಹೇಳಿರುವುದು. ಪಾಶುಪತ ವ್ರತವು ಇಂತಹ ಶ್ರೇಷ್ಠವಾದ ಭಸ್ಮದ ಮಾಹಾತ್ಮೆಯನ್ನು ಪ್ರತಿಪಾದಿಸುವುದು. ಆದುದರಿಂದಲೇ ಇದು ವ್ರತಗಳಲ್ಲಿ ಅತ್ಯಂತ ಶ್ರೇಷ್ಠವೆನಿಸಿರುವುದು. ಇಂತಹ ಅನೇಕ ವಿಚಾರಯೋಗ್ಯವಾದ ವಿಷಯಗಳು ಈ ವಾಯುವೀಯಸಂಹಿತೆಯಲ್ಲಿ ತುಂಬಿರುವವು. ಅವುಗಳನ್ನು ಚಿತ್ತೈಕಾಗ್ರತೆಯಿಂದಲೂ, ಸಮಾಧಾನ ಮನಸ್ಸಿನಿಂದಲೂ ಮನನ ಮಾಡಿದರೆ ಜ್ಞಾನಪ್ರಾಪ್ತಿಯಾಗುವುದರಲ್ಲಿ ಸಂಶಯವಿಲ್ಲ.

ಈ ಶಿವಪುರಾಣವು ಪುರಾಣಗಳಲ್ಲೆಲ್ಲಾ ಅತ್ಯುತ್ತಮವಾದ. ಗ್ರಂಥವು ಇದರಲ್ಲಿರುವ ಮಹತ್ವವಿಷಯಗಳನ್ನು ನೋಡಿದರೆ ಇದನ್ನು ಸಾಕ್ಷಾತ್ಪರಮೇಶ್ವರನೇ

ಲೋಕಹಿತಕ್ಕಾಗಿ ಹೇಳಿರುವನೆಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. ಈ ಪುರಾಣವನ್ನು ಅನೇಕಾವರ್ತಿ ಪಠನಮಾಡುವುದರಿಂದ ಈಶ್ವರಾನುಗ್ರಹದಿಂದ ಜ್ಞಾನಪ್ರಾಪ್ತಿಯಾಗಿ ಮೋಕ್ಷವು ಲಭಿಸುವುದು.

ಲೋಕಹಿತಕ್ಕಾಗಿ ಈ ಗ್ರಂಥದ ಪ್ರಕಟಣೆಗೆ ಆಜ್ಞೆಯಿತ್ತ ನಮ್ಮನ್ನಾಳುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳವರಿಗೂ, ಅವರ ಕುಟುಂಬಕ್ಕೂ ದೇಶದ ಸಕಲ ಜನರಿಗೂ ಪಾರ್ವತೀಪತಿಯು ಸಕಲಸನ್ಮಂಗಳಗಳನ್ನು ಅನುಗ್ರಹಿಸಲೆಂದು ವಿನಯದಿಂದ ಪ್ರಾರ್ಥಿಸುತ್ತೇನೆ.

ಮೈಸೂರು
ವ್ಯಯ ಸಂ|| ಜ್ಯೇಷ್ಠ ಶುದ್ಧ ತೃತೀಯಾ
ತಾ|| 2-6-46.

ಅನುವಾದಕ,
**ಹಾಸನದ ಪಂಡಿತ ವೆಂಕಟರಾವ್.**



*

## ಶಿವಮಹಾಪುರಾಣದಲ್ಲಿ ವಾಯವೀಯಸಂಹಿತೆಯ ಪೂರ್ವಭಾಗದ

# ವಿಷಯಾನುಕ್ರಮಣಿಕೆ.



ಪುಟ ಸಂಖ್ಯೆ

ಪುಟ ಸಂಖ್ಯೆ



*

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ
## ವಾಯವೀಯಸಂಹಿತಾಯಾಂ ಪೂರ್ವಭಾಗೇ
# ಪ್ರಥಮೋಽಧ್ಯಾಯಃ

॥ ವ್ಯಾಸ ಉವಾಚ ॥

**ನಮಃ ಶಿವಾಯ ಸೋಮಾಯ ಸಗಣಾಯ ಸಸೂನವೇ ।**
**ಪ್ರಧಾನಪುರುಷೇಶಾಯ ಸರ್ಗಸ್ಥಿತ್ಯಂತಹೇತವೇ ॥ ೧ ॥**

**ಶಕ್ತಿರಪ್ರತಿಮಾ ಯಸ್ಯ ಹ್ಯೈಶ್ವರ್ಯಂ ಚಾಪಿ ಸರ್ವಗಂ ।**
**ಸ್ವಾಮಿತ್ವಂ ಚ ವಿಭುತ್ವಂ ಚ ಸ್ವಭಾವಂ ಸಂಪ್ರಚಕ್ಷತೇ ॥ ೨ ॥**

---

### ಮೊದಲನೆಯ ಅಧ್ಯಾಯವು

೧. ವ್ಯಾಸಮಹರ್ಷಿಯು ಹೇಳಲುಪಕ್ರಮಿಸಿದನು :—ಪ್ರಪಂಚದ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾಗಿಯೂ, ಆ ಸೃಷ್ಟ್ಯಾದಿಗಳನ್ನು ನಿರ್ವಹಿಸಲು ಪ್ರಕೃತಿ, ಪುರುಷ, ಈಶ್ವರ ಎಂಬ ರೂಪಗಳಿಂದ ಇರುವವನಾಗಿಯೂ ಪಾರ್ವತಿ, ಪ್ರಮಥಗಣಗಳು, ಮಕ್ಕಳುಗಳಾದ ಷಣ್ಮುಖ, ಗಣಪತಿ ಇವರುಗಳಿಂದ ಕೂಡಿ ಪ್ರಕಾಶಿಸುತ್ತಿರುವವನೂ ಆದ ಶಿವನಿಗೆ ನಮಸ್ಕಾರಮಾಡುವೆನು.

೨-೩. ಆ ಶಿವನ ಶಕ್ತಿಗೆ ಸಮನಾದ ಶಕ್ತಿಯೇ ಇಲ್ಲ. ಷಡ್ಗುಣಾದ್ಯೈಶ್ವರ್ಯ, ಸರ್ವವ್ಯಾಪಕತ್ವ, ಸರ್ವಲೋಕಸ್ವಾಮಿತ್ವ, ಸರ್ವಾಧಿಕತ್ವ ಇವುಗಳಲ್ಲಿ ಶಿವನಿಗೆ

**ತಮಜಂ ವಿಶ್ವಕರ್ಮಾಣಂ ಶಾಶ್ವತಂ ಶಿವಮವ್ಯಯಂ ।**
**ಮಹಾದೇವಂ ಮಹಾತ್ಮಾನಂ ವ್ರಜಾಮಿ ಶರಣಂ ಶಿವಂ ॥ ೩ ॥**

**ಧರ್ಮಕ್ಷೇತ್ರೇ ಮಹಾತೀರ್ಥೇ ಗಂಗಾಕಾಲಿಂದಿಸಂಗಮೇ ।**
**ಪ್ರಯಾಗೇ ನೈಮಿಷಾರಣ್ಯೇ ಬ್ರಹ್ಮಲೋಕಸ್ಯ ವರ್ತ್ಮನಿ ॥ ೪ ॥**

**ಮುನಯಃ ಶಂಸಿತಾತ್ಮಾನಃ ಸತ್ಯವ್ರತಪರಾಯಣಾಃ ।**
**ಮಹೌಜಸೋ ಮಹಾಭಾಗಾ ಮಹಾಸತ್ರಂ ವಿತೇನಿರೇ ॥ ೫ ॥**

**ತತ್ರ ಸತ್ರಂ ಸಮಾಕರ್ಣ್ಯ ತೇಷಾಮಕ್ಲಿಷ್ಟಕರ್ಮಣಾಂ ।**
**ಸಾಕ್ಷಾತ್ಸತ್ಯವತೀಸೂನೋರ್ವೇದವ್ಯಾಸಸ್ಯ ಧೀಮತಃ ॥ ೬ ॥**

ಸಮಾನಾದ ಮತ್ತೊಬ್ಬ ವ್ಯಕ್ತಿಯಿಲ್ಲ. ಈ ಗುಣಗಳು ಆ ಶಿವನಿಗೆ ಸಹಜವಾಗಿರುವವು. ಮತ್ತು ಆ ಶಿವನು ಜನ್ಮರಹಿತನಾದವನು ಎಂದರೆ ಎಲ್ಲರಂತೆ ಯೋನಿಯಿಂದ ಜನಿಸಿದವನಲ್ಲ. ಸಮಸ್ತ ವಿಶ್ವವನ್ನೂ ಸೃಷ್ಟಿಮಾಡತಕ್ಕವನು. ಯಾವಾಗಲೂ ಎಂದರೆ ಪ್ರಲಯಕಾಲದಲ್ಲಿಯೂ ಸಹ ನಾಶವಿಲ್ಲದೆ ಇರತಕ್ಕವನು. ಸಮಸ್ತ ಪ್ರಾಣಿಗಳಿಗೂ ಮಂಗಳವನ್ನುಂಟುಮಾಡತಕ್ಕವನು. ಮಹಾಮಹಿಮನು. ದೇವಾದಿದೇವನು. ಇಂತಹ ಗುಣಗಳಿಂದ ಕೂಡಿದ ಪರಶಿವವನ್ನು ಶರಣುಹೊಂದುವೆನು.

೪-೫. ಗಂಗಾ, ಯಮುನಾ ನದಿಗಳ ಸಂಗಮಸ್ಥಳದಲ್ಲಿ ಪ್ರಯಾಗವೆಂಬ ಉತ್ತಮವಾದ ತೀರ್ಥವಿರುವುದು. ಅಲ್ಲಿಯೇ ನೈಮಿಷಾರಣ್ಯವೆಂಬ ಪವಿತ್ರವಾದ ಕ್ಷೇತ್ರವಿರುವುದು. ಅದು ಧರ್ಮಕ್ಕೆ ವಾಸಸ್ಥಾನವಾಗಿಯೂ, ಬ್ರಹ್ಮಲೋಕ ಪ್ರಾಪ್ತಿಗೆ ಮಾರ್ಗದಾಯಕವಾಗಿಯೂ ಇರುವುದು. ಇಂತಹ ಕ್ಷೇತ್ರದಲ್ಲಿ ಸತ್ಯಸಂಪನ್ನರೂ, ನಿಯಮನಿಷ್ಠರೂ, ಮಹಾತೇಜಸ್ವಿಗಳೂ, ಮಹಾತ್ಮರೂ, ಜಿತೇಂದ್ರಿಯರೂ ಆದ ಋಷಿಗಳು ಮಹಾಸತ್ರವೆಂಬ ದೊಡ್ಡ ಯಾಗವನ್ನು ಮಾಡಲು ಪ್ರಾರಂಭಿಸಿದರು.

೬-೯. ಈ ಋಷಿಗಳು ಯಾಗಮಾಡುತ್ತಿರುವುದನ್ನು ಕೇಳಿ, ಪೌರಾಣಿಕರಲ್ಲಿ ಶ್ರೇಷ್ಠನಾದ ಸೂತಮುನಿಯು ಅಲ್ಲಿಗೆ ಬಂದನು. ಈ ಸೂತನು ಮಹಾಬುದ್ಧಿಶಾಲಿಯೂ, ಸತ್ಯವತೀ ಪುತ್ರನೂ ಆದ ವ್ಯಾಸಮಹರ್ಷಿಯ ಶಿಷ್ಯನು. ಮಹಾಬುದ್ಧಿವಂತನೆಂದು ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾದವನು. ಪ್ರತಿಜ್ಞಾ, ಹೇತು, ಉದಾಹರಣ, ಉಪನಯ, ನಿಗಮನ ಎಂಬ ಐದು ಅವಯವಗಳಿಂದ ಕೂಡಿದ

**ಶಿಷ್ಯೋ ಮಹಾತ್ಮಾ ಮೇಧಾವೀ ತ್ರಿಷು ಲೋಕೇಷು ವಿಶ್ರುತಃ ।**
**ಪಂಚಾವಯವಯುಕ್ತಸ್ಯ ವಾಕ್ಯಸ್ಯ ಗುಣದೋಷವಿತ್ ॥ ೭ ॥**

**ಉತ್ತರೋತ್ತರವಕ್ತಾ ಚ ಬ್ರುವತೋಽಪಿ ಬೃಹಸ್ಪತೇಃ ।**
**ಮಧುರಃ ಶ್ರವಣಾನಾಂ ಚ ಮನೋಜ್ಞಪದಪರ್ವಣಾಂ ॥ ೮ ॥**

**ಕಥಾನಾಂ ನಿಪುಣೋ ವಕ್ತಾ ಕಾಲವಿನ್ನಯವಿತ್ಕವಿಃ ।**
**ಆಜಗಾಮ ಸ ತಂ ದೇಶಂ ಸೂತಃ ಪೌರಾಣಿಕೋತ್ತಮಃ ॥ ೯ ॥**

**ತಂ ಪೃಷ್ಟ್ವಾ ಸೂತಮಾಯಾಂತಂ ಮುನಯೋ ಹೃಷ್ಟಮಾನಸಾಃ ।**
**ತಸ್ಮೈ ಸಾಮ ಚ ಪೂಜಾಂ ಚ ಯಥಾವತ್ಪ್ರತ್ಯಸಾದಯನ್ ॥ ೧೦ ॥**

**ಪ್ರತಿಗೃಹ್ಯ ಸ ತಾಂ ಪೂಜಾಂ ಮುನಿಭಿಃ ಪ್ರತಿಪಾದಿತಾಂ ।**
**ಉದ್ದಿಷ್ಟಮಾಸನಂ ಭೇಜೇ ನಿಯುಕ್ತೋ ಯುಕ್ತಮಾತ್ಮನಃ ॥ ೧೧ ॥**

---

ವಾಕ್ಯಗಳಲ್ಲಿರುವ ಗುಣಗಳನ್ನೂ, ದೋಷಗಳನ್ನೂ ಚೆನ್ನಾಗಿ ತಿಳಿದಿರುವವನು. ಮಾತನಾಡುವ ಕಾಲದಲ್ಲಿ ಮುಂದಾಗಿ ಹೇಳುತ್ತಿರುವ ಬೃಹಸ್ಪತಿಯ ಮಾತಿಗೂ ಕೂಡ ಮುಂದಿನ ಕೋಟಿಗಳನ್ನು ಹೇಳಲು ಶಕ್ತನು. ಕೇಳುವುದಕ್ಕೆ ಹಿತವಾಗಿರುವಂತೆ ಮನೋಹರವಾದ ಪದಗಳೂ, ಅಲ್ಲಲ್ಲಿ ಸಮಯೋಚಿತವಾಗಿ ನಿಲ್ಲಿಸುವ ಇವುಗಳಿಂದ ಕೂಡಿದ ಕಥೆಗಳನ್ನು ಹೇಳುವುದರಲ್ಲಿ ನಿಪುಣನು. ಆಯಾಯ ಅಧ್ಯಾಯಗಳೂ ಕಾಲಧರ್ಮವನ್ನೂ, ನೀತಿಯನ್ನೂ, ತಿಳಿದವನು, ಉತ್ತಮವಾದ ಕವಿತ್ವಶಕ್ತಿಯುಳ್ಳವನು. ಇಷ್ಟು ಗುಣಗಳಿಂದ ಕೂಡಿರುವ ಸೂತನೆಂಬ ವ್ಯಾಸಶಿಷ್ಯನು ಅಲ್ಲಿಗೆ ಬರಲು,

೧೦. ಅಲ್ಲಿದ್ದ ಋಷಿಗಳೆಲ್ಲರೂ ಸಂತೋಷದಿರಿದ ಆ ಸೂತಮುನಿಗೆ ಸುಖಾಗಮನವನ್ನು ಬಯಸಿ ಅರ್ಘ್ಯಾದ್ಯುಪಚಾರಗಳಿಂದ ವಿಧ್ಯುಕ್ತವಾಗಿ ಪೂಜಿಸಿದರು.

೧೧. ಅವರು ಮಾಡಿದ ಪೂಜೆಯನ್ನು ಸ್ವೀಕರಿಸಿ, ಋಷಿಗಳು ತನಗೆ ಸಿದ್ಧಮಾಡಿದ ಉಚಿತಾಸನದಲ್ಲಿ ಅವರ ಅನುಮತಿಯಂತೆ ಕುಳಿತುಕೊಂಡನು.

ತತಸ್ತತ್ಸಂಗಮಾದೇವಮುನಿನಾಂಭಾವಿತಾತ್ಮನಾಂ ।
ಸೋತ್ಕಂಠಮಭವಚ್ಚಿತ್ತಂ ಶ್ರೋತುಂ ಪೌರಾಣಿಕೀಂ ಕಥಾಂ ॥ ೧೨ ॥

ತದಾ ತಮನುಕೂಲಾಭಿರ್ವಾಗ್ಭಿಃ ಪೂಜ್ಯ ಮಹರ್ಷಯಃ ।
ಅತೀವಾಭಿಮುಖಂ ಕೃತ್ವಾ ವಚನಂ ಚೇದಮಬ್ರುವನ್ ॥ ೧೩ ॥

॥ ಋಷಯ ಊಚುಃ ॥

ರೋಮಹರ್ಷಣ ಸರ್ವಜ್ಞ ಭವಾನ್ನೋ ಭಾಗ್ಯಗೌರವಾತ್ ।
ಸಂಪ್ರಾಪ್ತೋಽದ್ಯ ಮಹಾಭಾಗ ಶೈವರಾಜ ಮಹಾಮತೇ ॥ ೧೪ ॥

ಪುರಾಣವಿದ್ಯಾಮಖಿಲಾಂ ವ್ಯಾಸಾತ್ಪ್ರತ್ಯಕ್ಷಮೀಯಿವಾನ್ ।
ತಸ್ಮಾದಾಶ್ಚರ್ಯಭೂತಾನಾಂ ಕಥಾನಾಂ ತ್ವಂ ಹಿ ಭಾಜನಂ ॥ ೧೫ ॥

ರತ್ನಾನಾಮುರುಸಾರಾಣಾಂ ರತ್ನಾಕರ ಇವಾರ್ಣವಃ ।
ಯಚ್ಚ ಭೂತಂ ಯಚ್ಚ ಭವ್ಯಂ ಯಚ್ಚಾನ್ಯದ್ವಸ್ತು ವರ್ತತೇ ॥ ೧೬ ॥

---

೧೨. ಆ ಸೂತಮುನಿಯ ಸಾನ್ನಿಧ್ಯಮಾತ್ರದಿಂದಲೇ ಆತ್ಮಸಾಕ್ಷಾತ್ಕಾರದಲ್ಲಿ ಆಸಕ್ತರಾದ ಆ ಮುನಿಗಳಿಗೆ ಪುರಾಣಕಥೆಗಳನ್ನು ಕೇಳಲು ಕುತೂಹಲವುಂಟಾಯಿತು.

೧೩. ಆಗ ಋಷಿಗಳೆಲ್ಲರೂ ಸಮಯೋಚಿತವಾದ ಮಾತುಗಳಿಂದ ಸೂತ ಮುನಿಯನ್ನು ಗೌರವಿಸಿ ಅವನ ಅಭಿಮುಖವಾಗಿ ಕುಳಿತುಕೊಂಡು ಈರೀತಿ ಪ್ರಶ್ನೆ ಮಾಡಿದರು.

೧೪. ಋಷಿಗಳು ಕೇಳಿದರು :—ಎಲೈ ರೋಮಹರ್ಷಣನೇ, (ಸೂತನೇ) ನೀನು ಸಮಸ್ತವನ್ನೂ ತಿಳಿದವನು. ಪೂಜ್ಯನು, ಬಹು ಬುದ್ಧಿಶಾಲಿಯು. ಶೈವರಲ್ಲಿ ಶ್ರೇಷ್ಠನೆನಿಸಿದವನು. ಇಂತಹ ನೀನು ನಮ್ಮ ಅದೃಷ್ಟದಿಂದ ಇಲ್ಲಿಗೆ ಬಂದಿರುತ್ತೀಯೆ.

೧೫. ಸಾಕ್ಷಾದ್ವ್ಯಾಸನಿಂದಲೇ ಪುರಾಣಗಳೆಲ್ಲವನ್ನೂ ನೀನು ತಿಳಿದಿರುತ್ತೀಯೆ. ಆದುದರಿಂದ ಶ್ರೇಷ್ಠವಾದ ರತ್ನಗಳಿಗೆ ಸಮುದ್ರವು ಹೇಗೆ ಆಶ್ರಯಸ್ಥಾನವೋ ಹಾಗೆ ಒಳ್ಳೆಯ ಕಥೆಗಳಿಗೆ ನೀನು ನಿಧಿಯಂತಿರುತ್ತೀಯೆ.

೧೬. ಈ ಮೂರುಲೋಕಗಳಲ್ಲಿಯೂ ಹಿಂದೆ ನಡೆದಿರುವ, ಈಗ ನಡೆಯುತ್ತಿರುವ ಮತ್ತು ಮುಂದೆ ನಡೆಯುವ ವಿಷಯಗಳಲ್ಲಿ ನಿನಗೆ ತಿಳಿಯದ ವಿಚಾರವು ಯಾವುದೂ ಇರುವುದಿಲ್ಲ.

**ನ ತವಾವಿದಿತಂ ಪುಣ್ಯಂ ಸತ್ಕಥಾಜ್ಞಾನಸಂಹಿತಂ ॥**
**ವೇದಾಂತಸಾರಸರ್ವಸ್ವಂ ಪುರಾಣಂ ಶ್ರಾವಯಾಶು ನಃ ॥ ೧೭ ॥**

**ತಸ್ಮಾಚ್ಛ್ರಾವಯಿತುಂ ಪುಣ್ಯಂ ಸತ್ಕಥಾಜ್ಞಾನಸಂಹಿತಂ ।**
**ವೇದಾಂತಸಾರಸರ್ವಸ್ವಂ ಪುರಾಣಂ ಶ್ರಾವಯಾಶು ನಃ ॥ ೧೮ ॥**

**ಏವಮುಭ್ಯರ್ಥಿತಸ್ಸೂತೋ ಮುನಿಭಿರ್ವೇದವಾದಿಭಿಃ ।**
**ಶ್ಲಕ್ಷ್ಣಂ ಚ ನ್ಯಾಯಸಂಯುಕ್ತಾಂ ಪ್ರತ್ಯುವಾಚ ಶುಭಾಂ ಗಿರಂ ॥ ೧೯ ॥**

**॥ ಸೂತ ಉವಾಚ ॥**

**ಪೂಜಿತೋऽನುಗೃಹೀತಶ್ಚ ಭವದ್ಭಿರಿತಿ ಚೋದಿತಃ ।**
**ಕಸ್ಮಾತ್ಸಮ್ಯಙ್ನ ವಿಬ್ರೂಯಾಂ ಪುರಾಣಮೃಷಿಪೂಜಿತಂ ॥ ೨೦ ॥**

---

೧೭. ಹೀಗೆ ಇರುವ ನೀನು ಈ ಸಮಯಕ್ಕೆ ಸರಿಯಾಗಿ ನಮ್ಮ ಅದೃಷ್ಟವಶದಿಂದ ನಮ್ಮ ದರ್ಶನಕ್ಕಾಗಿ ಇಲ್ಲಿಗೆ ಬಂದಿರುತ್ತೀಯೆ. ನಮಗೆ ಯಾವ ವಿಧದಲ್ಲಾದರೂ ಕೊಂಚಮಟ್ಟಿಗಾದರೂ ಶ್ರೇಯಸ್ಸನ್ನು ಮಾಡದೆ ಸುಮ್ಮನೆ ಹಿಂತಿರುಗಿ ಹೋಗಬೇಡ.

೧೮. ಆದುದರಿಂದ ಈಗ ನೀನು, ಕೇಳುವುದಕ್ಕೆ ಹಿತಕರವಾಗಿಯೂ, ಪುಣ್ಯಪ್ರದವಾಗಿಯೂ, ಜ್ಞಾನವನ್ನು ಉಂಟುಮಾಡುವುದಾಗಿಯೂ, ವೇದಾಂತಸಾರವನ್ನೊಳಗೊಂಡು ಇರುವುದಾಗಿಯೂ ಇರುವ ಪುರಾಣವನ್ನು ನಮ್ಮಗಳಿಗೆ ಶ್ರವಣ ಮಾಡಿಸು ಎಂದರು.

೧೯. ವೇದಜ್ಞರಾದ ಮುನಿಗಳು ಹೀಗೆ ತನ್ನನ್ನು ಪ್ರಾರ್ಥಿಸುತ್ತಿರಲು ಸೂತನು ಮಧುರವಾಗಿಯೂ, ಸಮಯೋಚಿತವಾಗಿಯೂ ಇರುವ ಮಾತುಗಳಿಂದ ಇಂತೆಂದನು.

೨೦. ನೀವು ನನಗೆ ಪೂಜೆಯನ್ನು ಮಾಡಿದಿರಿ ಅನುಗ್ರಹವನ್ನು ಮಾಡಿರುವಿರಿ. ಕಥೆಯನ್ನು ಹೇಳಬೇಕೆಂದು ನನ್ನನ್ನು ಪ್ರಾರ್ಥಿಸುತ್ತಿರುವಿರಿ. ಹೀಗಿರುವಾಗ ಋಷಿಗಳಿಂದ ಪೂಜಿತವಾದ ಪುರಾಣವನ್ನು ನಿಮಗೆ ನಾನು ಹೇಗೆತಾನೆ ಹೇಳದೆ ಇರಲಿ? ಅವಶ್ಯವಾಗಿ ಹೇಳಿಯೇ ಹೇಳುವೆನು

**ಅಭಿವಂದ್ಯ ಮಹಾದೇವಂ ದೇವಿಂ ಸ್ಕಂದಂ ವಿನಾಯಕಂ ।**
**ನಂದಿನಂ ಚ ತಥಾ ವ್ಯಾಸಂ ಸಾಕ್ಷಾತ್ಸತ್ಯವತೀಸುತಂ ॥ ೨೧ ॥**

**ವಕ್ಷ್ಯಾಮಿ ಪರಮಂ ಪುಣ್ಯಂ ಪುರಾಣಂ ವೇದಸಂಮಿತಂ ।**
**ಶಿವಜ್ಞಾನಾರ್ಣವಂ ಸಾಕ್ಷಾದ್ಭುಕ್ತಿಮುಕ್ತಿಫಲಪ್ರದಂ ॥ ೨೨ ॥**

**ಶಬ್ದಾರ್ಥನ್ಯಾಯಸಯುಕ್ತೈರಾಗಮಾರ್ಥೈರ್ವಿಭೂಷಿತಂ ।**
**ಶ್ವೇತಕಲ್ಪಪ್ರಸಂಗೇನ ವಾಯುನಾ ಕಥಿತಂ ಪುರಾ ॥ ೨೩ ॥**

**ವಿದ್ಯಾಸ್ಥಾನಾನಿ ಸರ್ವಾಣಿ ಪುರಾಣಾನುಕ್ರಮಂ ತಥಾ ॥**
**ತತ್ಪುರಾಣಸ್ಯ ಚೋತ್ಪತ್ತಿಂ ಬ್ರುವತೋ ಮೇ ನಿಬೋಧತ ॥ ೨೪ ॥**

**ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ ।**
**ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾಶ್ಚೈತಾಶ್ಚತುರ್ದಶ ॥ ೨೫ ॥**

---

೨೧-೨೩. ಮಹಾದೇವನಾದ ಶಿವನನ್ನೂ, ದೇವಿಯಾದ ಪಾರ್ವತಿಯನ್ನೂ, ಕುಮಾರಸ್ವಾಮಿಯನ್ನೂ, ಗಣಪತಿಯನ್ನೂ, ನಂದಿಕೇಶ್ವರನನ್ನೂ, ಸಾಕ್ಷಾತ್ಸತ್ಯವತೀ ಪುತ್ರನಾದ ವ್ಯಾಸಮಹರ್ಷಿಯನ್ನೂ ನಮಸ್ಕಾರಮಾಡಿ ಈ ಶಿವಪುರಾಣವನ್ನು ಹೇಳು ವೆನು. ಈ ಪುರಾಣವು ಪರಮಪವಿತ್ರವಾದುದು. ವೇದಕ್ಕೆ ಸಮನಾದುದು. ಶಿವಜ್ಞಾನವನ್ನುಂಟುಮಾಡುವುದು. ಇಹಪರಸೌಖ್ಯಗಳನ್ನೂ, ಮುಕ್ತಿಯನ್ನೂ ಕೊಡುವುದು. ಶಬ್ದ, ಅರ್ಥ, ತರ್ಕ, ವೇದಾರ್ಥ ಇವುಗಳಿಂದ ಪರಿಪೂರ್ಣವಾಗಿರು ವುದು. ಶ್ವೇತಕಲ್ಪವೆಂಬ ಪ್ರಸ್ತಾಪದಿಂದ ವಾಯುವು ಈ ಪುರಾಣವನ್ನು ಹಿಂದೆ ಹೇಳಿರುವನು ಅಂತಹ ಉತ್ತಮವಾದ ಈ ಶಿವಪುರಾಣವನ್ನು ನಿಮಗೆ ಹೇಳುವೆನು.

೨೪. ಜ್ಞಾನಾರ್ಜನೆಗೆ ಸಹಾಯಭೂತವಾದ ಎಲ್ಲಾ ವಿದ್ಯೆಗಳನ್ನೂ, ಪುರಾಣ ಗಳನ್ನೂ, ಅವುಗಳ ಉತ್ಪತ್ತಿಕ್ರಮವನ್ನೂ ನಿಮಗೆ ಹೇಳುವೆನು. ಅದನ್ನು ಮನ ಸ್ಸಿಟ್ಟು ಕೇಳಿ.

೨೫. ವೇದಗಳು ನಾಲ್ಕು, ಅಂಗಗಳು ಆರು, ಮೀಮಾಂಸಾಶಾಸ್ತ್ರ, ನ್ಯಾಯ ಶಾಸ್ತ್ರ, ಪುರಾಣ, ಧರ್ಮಶಾಸ್ತ್ರ ಈ ಹದಿನಾಲ್ಕೂ ವಿದ್ಯೆಗಳೆನಿಸಿಕೊಳ್ಳುವುವು. ಲೋಕದ ವ್ಯವಹಾರಾದಿಗಳ ಜ್ಞಾನವನ್ನು ಚೆನ್ನಾಗಿ ತಿಳಿಸುವ ಕಾರಣ ಇವುಗಳಿಗೆ ವಿದ್ಯೆ ಎಂದು ಹೆಸರು.

**ಆಯುರ್ವೇದೋ ಧನುರ್ವೇದೋ ಗಾಂಧರ್ವಶ್ಚೇತ್ಯನುಕ್ರಮಾತ್ ।**
**ಅರ್ಥಶಾಸ್ತ್ರಂ ಪರಂ ತಸ್ಮಾದ್ವಿದ್ಯಾ ಹ್ಯಷ್ಟಾದಶ ಸ್ಮೃತಾಃ ॥ ೨೬ ॥**

**ಅಷ್ಟಾದಶಾನಾಂ ವಿದ್ಯಾನಾಮೇತಾಸಾಂ ಭಿನ್ನವರ್ತ್ಮನಾಂ ।**
**ಆದಿಕರ್ತಾ ಕವಿಸ್ಸಾಕ್ಷಾಚ್ಛೂಲಪಾಣಿರಿತಿ ಶ್ರುತಿಃ ॥ ೨೭ ॥**

**ಸ ಹಿ ಸರ್ವಜಗನ್ನಾಥಃ ಸಿಸೃಕ್ಷುರಖಿಲಂ ಜಗತ್ ।**
**ಬ್ರಹ್ಮಾಣಂ ವಿದಧೇ ಸಾಕ್ಷಾತ್ಪುತ್ರಮಗ್ರೇ ಸನಾತನಂ ॥ ೨೮ ॥**

**ತಸ್ಮೈ ಪ್ರಥಮಪುತ್ರಾಯ ಬ್ರಹ್ಮಣೇ ವಿಶ್ವಯೋನಯೇ ।**
**ವಿದ್ಯಾಶ್ಚೇಮಾ ದದೌ ಪೂರ್ವಂ ವಿಶ್ವಸೃಷ್ಟ್ಯರ್ಥಮೀಶ್ವರಃ ॥ ೨೯ ॥**

**ಪಾಲನಾಯ ಹರಿಂ ದೇವಂ ರಕ್ಷಾಶಕ್ತಿಂ ದದೌ ತತಃ ।**
**ಮಧ್ಯಮಂ ತನಯಂ ವಿಷ್ಣುಂ ಪಾತಾರಂ ಬ್ರಹ್ಮಣೋಽಪಿ ಹಿ ॥ ೩೦ ॥**

---

೨೬-೨೭. ಈ ಹದಿನಾಲ್ಕು ವಿದ್ಯೆಗಳಲ್ಲದೆ ಆಯುರ್ವೇದ, ಧನುರ್ವೇದ, ಸಂಗೀತಕ್ರಮವನ್ನು ಹೇಳುವ ಗಾಂಧರ್ವವೇದ, ಅರ್ಥಶಾಸ್ತ್ರ ಎಂಬ ಇನ್ನೂ ನಾಲ್ಕು ವಿದ್ಯೆಗಳಿರುವುವು. ಇವನ್ನೂ ಸೇರಿಸಿದರೆ ಒಟ್ಟು ಹದಿನೆಂಟು ವಿದ್ಯೆಗಳಾಗುವುವು. ಬೇರೆ ಬೇರೆ ವಿಚಾರಗಳನ್ನು ಬೋಧಿಸುವ ಈ ಹದಿನೆಂಟು ವಿದ್ಯೆಗಳನ್ನೂ ಲೋಕದಲ್ಲಿ ಪ್ರಚಾರವಾಗುವಂತೆ ಬರೆದಿರುವವನು ಪ್ರತ್ಯಕ್ಷ ಶಿವನೇ ಆಗಿರುವನೆಂದು ಕೇಳಿರುವೆನು.

೨೮. ಅವನೇ ಎಲ್ಲಾ ಜಗತ್ತಿಗೂ ಅಧಿಪತಿಯಾಗಿರುವನು. ಪ್ರಪಂಚವನ್ನು ಸೃಷ್ಟಿಮಾಡಲು ಇಚ್ಛೆಯುಳ್ಳವನಾಗಿ, ಆ ಶಿವನು ಆದಿಯಲ್ಲಿ ಸದಾಕಾಲದಲ್ಲಿಯೂ ಇರುವ ಬ್ರಹ್ಮನನ್ನು ತನಗೆ ಸಾಕ್ಷಾತ್ ಪುತ್ರನನ್ನಾಗಿ ಸೃಷ್ಟಿಸಿದನು.

೨೯. ಪ್ರಪಂಚವನ್ನು ಸೃಷ್ಟಿಮಾಡಲು ಅನುಕೂಲಿಸುವಂತೆ ತನ್ನ ಮೊದಲನೆಯ ಪುತ್ರನಾದ ಆ ಬ್ರಹ್ಮನಿಗೆ ಮೇಲೆ ಹೇಳಿದ ವಿದ್ಯೆಗಳೆಲ್ಲವನ್ನೂ ಉಪದೇಶ ಮಾಡಿದನು.

೩೦. ಅನಂತರದಲ್ಲಿ ಸೃಷ್ಟಿಮಾಡಿದವುಗಳನ್ನು ರಕ್ಷಿಸುವುದಕ್ಕಾಗಿ ವಿಷ್ಣುವನ್ನು ನಿರ್ಮಿಸಿ, ಅವನಿಗೆ ಜಗತ್ಪಾಲನಾಶಕ್ತಿಯನ್ನು ಕೊಟ್ಟನು. ಇವನು ಈಶ್ವರನಿಗೆ ಎರಡನೆಯ ಪುತ್ರನು. ಇವನು ಬ್ರಹ್ಮನನ್ನು ಕೂಡ ರಕ್ಷಿಸುವವನು.

**ಲಬ್ಧವಿದ್ಯೇನ ವಿಧಿನಾ ಪ್ರಜಾಸೃಷ್ಟಿಂ ವಿತನ್ವತಾ ।**
**ಪ್ರಥಮಂ ಸರ್ವಶಾಸ್ತ್ರಾಣಾಂ ಪುರಾಣಂ ಬ್ರಹ್ಮಣಾ ಸ್ಮೃತಂ ॥ ೩೧ ॥**

**ಅನಂತರಂ ತು ವಕ್ತ್ರೇಭ್ಯೋ ವೇದಾಸ್ತಸ್ಯ ವಿನಿರ್ಗತಾಃ ।**
**ಪ್ರವೃತ್ತಿಸ್ಸರ್ವಶಾಸ್ತ್ರಾಣಾಂ ತನ್ಮುಖಾದಭವತ್ತತಃ ॥ ೩೨ ॥**

**ಯದಾಸ್ಯ ವಿಸ್ತರಂ ಶಕ್ತಾ ನಾಧಿಗಂತುಂ ಪ್ರಜಾ ಭುವಿ ।**
**ತದಾ ವಿದ್ಯಾಸಮಾಸಾರ್ಥಂ ವಿಶ್ವೇಶ್ವರನಿಯೋಗತಃ ॥ ೩೩ ॥**

**ದ್ವಾಪರಾಂತೇಷು ವಿಶ್ವಾತ್ಮಾ ವಿಷ್ಣುರ್ವಿಶ್ವಂಭರಃ ಪ್ರಭುಃ ।**
**ವ್ಯಾಸನಾಮ್ನಾ ಚರತ್ಯಸ್ಮಿನ್ನವತೀರ್ಯ ಮಹೀತಲೇ ॥ ೩೪ ॥**

**ಏವಂ ವ್ಯಸ್ತಾಶ್ಚ ವೇದಾಶ್ಚ ದ್ವಾಪರೇದ್ವಾಪರೇಽದ್ವಿಜಃ ।**
**ನಿರ್ಮಿತಾನಿ ಪುರಾಣಾನಿ ಅನ್ಯಾನಿ ಚ ತತಃ ಪರಂ ॥ ೩೫ ॥**

೩೧. ಪ್ರಜೆಗಳನ್ನು ಸೃಷ್ಟಿಮಾಡುವವನಾದ ಬ್ರಹ್ಮನು ಶಿವನಿಂದ ಉಪದಿಷ್ಟವಾದ ವಿದ್ಯೆಗಳನ್ನು ಕಲಿತುಕೊಂಡು ಎಲ್ಲಾ ಶಾಸ್ತ್ರಗಳಿಗಿಂತಲೂ ಮೊದಲು ಪುರಾಣಗಳನ್ನು ಸೃಷ್ಟಿಸಿದನು.

೩೨-೩೪. ಅನಂತರದಲ್ಲಿ ಅವನ ಮುಖಗಳಿಂದ ವೇದಗಳೂ, ಆಮೇಲೆ ಎಲ್ಲಾ ಶಾಸ್ತ್ರಗಳೂ ಉಂಟಾಗಿ, ಆಮೇಲೆ ಲೋಕದಲ್ಲಿ ಪ್ರಚಾರವನ್ನು ಹೊಂದಿದುವು. ಭೂಮಿಯಲ್ಲಿರುವ ಪ್ರಜೆಗಳು ಇಷ್ಟು ದೊಡ್ಡದಾಗಿರುವ ಈ ವಿದ್ಯೆಗಳನ್ನು ಕಲಿಯಲು ಸಮರ್ಥರಾಗಲಿಲ್ಲ. ಆಗ ಈ ವಿದ್ಯೆಗಳನ್ನು ಸಂಕ್ಷೇಪವಾಗಿ ಮಾಡುವುದಕ್ಕಾಗಿ ಪ್ರಪಂಚಕ್ಕೆಲ್ಲಕ್ಕೂ ಅಧಿಪತಿಯಾದ ಶಿವನ ಅಪ್ಪಣೆಯಂತೆ ದ್ವಾಪರಯುಗದ ಕೊನೆಯಲ್ಲಿ ಪ್ರಭುವೂ, ಪ್ರಪಂಚವನ್ನು ರಕ್ಷಿಸುವವನೂ ಆದ ವಿಷ್ಣುವು ಭೂಮಿಯಲ್ಲಿ ವ್ಯಾಸನೆಂಬ ಹೆಸರಿನಿಂದ ಅವತಾರಮಾಡಿದನು.

೩೫. ಎಲೈ ಋಷಿಗಳಿರಾ, ಕೇಳಿರಿ. ಅವನು ವೇದಗಳನ್ನು ವಿಭಾಗಮಾಡಿದನು. ಹೀಗೆಯೇ ಪ್ರತಿಯೊಂದು ದ್ವಾಪರಯುಗದ ಕೊನೆಯಲ್ಲಿಯೂ ವೇದಗಳು ವಿಭಾಗಮಾಡಲ್ಪಟ್ಟಿರುವುವು. ಆ ವೇದಗಳಿಂದ ಬೇರೆಬೇರೆಯಾದ ಪುರಾಣಗಳು ನಿರ್ಮಿಸಲ್ಪಟ್ಟಿರುವುವು.

**ಸ ಪುನರ್ದ್ವಾಪರೇ ಚಾಸ್ಮಿನ್ಕೃಷ್ಣದ್ವೈಪಾಯನಾಖ್ಯಯಾ ।**
**ಅರಣ್ಯಾಮಿವ ಹವ್ಯಾಶೀ ಸತ್ಯವತ್ಯಾಮಜಾಯತ ॥ ೩೬ ॥**

**ಸಂಕ್ಷಿಪ್ಯ ಸ ಪುನರ್ವೇದಾಂಶ್ಚತುರ್ಧಾ ಕೃತವಾನ್ಮುನಿಃ ॥**
**ವ್ಯಸ್ತವೇದತಯಾ ಲೋಕೇ ವೇದವ್ಯಾಸ ಇತಿ ಶ್ರುತಃ ॥ ೩೭ ॥**

**ಪುರಾಣಾನಾಂ ಚ ಸಂಕ್ಷಿಪ್ತಂ ಚತುರ್ಲಕ್ಷಪ್ರಮಾಣತಃ ।**
**ಅದ್ಯಾಪಿ ದೇವಲೋಕೇ ತಚ್ಛತಕೋಟಿಪ್ರವಿಸ್ತರಂ ॥ ೩೮ ॥**

**ಯೋ ವಿದ್ಯಾಚ್ಚತುರೋ ವೇದಾನ್ಸಾಂಗೋಪನಿಷದಾನ್ ದ್ವಿಜಃ ।**
**ನ ಚೇತ್ಪುರಾಣಂ ಸಂ ವಿದ್ಯಾನ್ನೈವ ಸ ಸ್ಯಾದ್ವಿಚಕ್ಷಣಃ ॥ ೩೯ ॥**

**ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।**
**ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರತರಿಷ್ಯತಿ ॥ ೪೦ ॥**

---

೩೬. ಈ ದ್ವಾಪರಯುಗದಲ್ಲಿ ಅವನು ಪುನಃ ಕೃಷ್ಣದ್ವೈಪಾಯನನೆಂಬ ಹೆಸರಿನಿಂದ ಯಜ್ಞೇಶ್ವರನು ಅರಣಿಯಲ್ಲಿ ಹುಟ್ಟಿದಂತೆ ಸತ್ಯವತಿಯಲ್ಲಿ ಅವತರಿಸಿದನು.

೩೭. ಆ ವ್ಯಾಸಋಷಿಯು ವೇದಗಳನ್ನು ಸಂಕ್ಷೇಪಮಾಡಿ ಅವುಗಳನ್ನು ಪುನಃ ನಾಲ್ಕುಭಾಗವಾಗಿ ವಿಂಗಡಿಸಿದನು ಹೀಗೆ ವೇದಗಳನ್ನು ವಿಭಾಗಮಾಡಿದ ಕಾರಣ ಇವನಿಗೆ ವೇದವ್ಯಾಸನೆಂದು ಲೋಕದಲ್ಲಿ ಹೆಸರಾಯಿತು.

೩೮. ಪುರಾಣಗಳು ಈ ಲೋಕಕ್ಕೆ ಉಪಯೋಗವಾಗಿರುವಂತೆ ನಾಲ್ಕುಲಕ್ಷ ಗ್ರಂಥಗಳಲ್ಲಿ ಅಡಕವಾಗುವ ಹಾಗೆ ಸಂಕ್ಷೇಪಮಾಡಲ್ಪಟ್ಟಿರುತ್ತವೆ. ದೇವಲೋಕದಲ್ಲಿ ಅವುಗಳು ಈಗಲೂ ಒಂದುನೂರು ಕೋಟಿ ಗ್ರಂಥಗಳುಳ್ಳವಾಗಿರುತ್ತವೆ.

೩೯. ಯಾವ ಪುರುಷನು ಆರು ಅಂಗಗಳೂ, ಉಪನಿಷತ್ತುಗಳೂ ಇವುಗಳಿಂದ ಕೂಡಿರುವ ನಾಲ್ಕು ವೇದಗಳನ್ನೂ ಚೆನ್ನಾಗಿ ತಿಳಿದಿದ್ದರೂ, ಪುರಾಣಗಳನ್ನು ಓದಿ ಅದರ ಅರ್ಥವನ್ನು ತಿಳಿಯದಿದ್ದರೆ ಅವನು ಬುದ್ಧಿವಂತನೆನಿಸುವುದಿಲ್ಲ.

೪೦. ಇತಿಹಾಸ ಮತ್ತು ಪುರಾಣ ಇವುಗಳ ಅರ್ಥವನ್ನು ಚೆನ್ನಾಗಿ ತಿಳಿದುಕೊಂಡು ವೇದಗಳ ಅರ್ಥವನ್ನು ತಿಳಿಯಲು ಪ್ರಯತ್ನಪಡಬೇಕು. ಕೊಂಚಮಾತ್ರ

**ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।**
**ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣಂ ॥ ೪೧ ॥**

**ದಶಧಾ ಚಾಷ್ಟಧಾ ಚೈತತ್ಪುರಾಣಮುಪದಿಶ್ಯತೇ ।**
**ಬೃಹತ್ಸೂಕ್ಷ್ಮಪ್ರಭೇದೇನ ಮುನಿಭಿಸ್ತತ್ತ್ವವಿತ್ತಮೈಃ ॥ ೪೨ ॥**

**ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ ।**
**ಭವಿಷ್ಯಂ ನಾರದೀಯಂ ಚ ಮಾರ್ಕಂಡೇಯಮತಃ ಪರಂ ॥ ೪೩ ॥**

**ಆಗ್ನೇಯಂ ಬ್ರಹ್ಮವೈವರ್ತಂ ಲೈಂಗಂ ವಾರಾಹಮೇವ ಚ ।**
**ಸ್ಕಾಂದಂ ಚ ವಾಮನಂ ಚೈವ ಕೌರ್ಮ್ಯಂ ಮಾತ್ಸ್ಯಂ ಚ ಗಾರುಡಂ ॥ ೪೪ ॥**

**ಬ್ರಹ್ಮಾಂಡಂ ಚೇತಿ ಪುಣ್ಯೋಽಯಂ ಪುರಾಣಾನಾಮನುಕ್ರಮಃ ।**
**ತತ್ರ ಶೈವಂ ತುರೀಯಂ ಯಚ್ಛಾರ್ವಂ ಸರ್ವಾರ್ಥಸಾಧಕಂ ॥ ೪೫ ॥**

---

ತಿಳುವಳಿಕೆಯುಳ್ಳವನನ್ನು ನೋಡಿ, ವೇದವು—"ಇವನು ನನ್ನ ಅಭಿಪ್ರಾಯವನ್ನು ಸರಿಯಾಗಿ ತಿಳಿಯದೆ ಅಪಾರ್ಥವನ್ನು ಕಲ್ಪಿಸುವನು" ಎಂದು ಅವನಿಗೆ ಹೆದರುತ್ತವೆ.

೪೧. ಸೃಷ್ಟಿಯ ಕ್ರಮವು, ಮೊದಲು ಸೃಷ್ಟಿಯನ್ನು ಅನುಸರಿಸಿದ ಇನ್ನೊಂದು ಸೃಷ್ಟಿಯ ಕ್ರಮವು, ವಂಶವರ್ಣನೆಯು, ಮನ್ವಂತರಗಳ ವಿವರಣೆಯು, ಆಯಾಯ ವಂಶದಲ್ಲಿ ಹುಟ್ಟಿದವರ ಚರಿತ್ರೆಯು ಎಂಬ ಐದು ಲಕ್ಷಣಗಳೂ ಪುರಾಣಗಳಲ್ಲಿ ತಪ್ಪದೆ ಇರಬೇಕು.

೪೨-೪೪. ಪುರಾಣಗಳಲ್ಲಿ ಕೆಲವು ದೊಡ್ಡವು, ಕೆಲವು ಚಿಕ್ಕವು ಇರುವುವು. ತತ್ವವನ್ನು ಚೆನ್ನಾಗಿ ತಿಳಿದಿರುವ ಋಷಿಗಳು ಒಟ್ಟು ಹದಿನೆಂಟು ಪುರಾಣಗಳಿರುವುವೆಂದು ನಿಷ್ಕರ್ಷೆಮಾಡಿದ್ದಾರೆ. ಅವುಗಳ ಹೆಸರುಗಳು ಈರೀತಿ ಇವೆ:—ಬ್ರಹ್ಮಪುರಾಣ, ಪದ್ಮಪುರಾಣ, ವಿಷ್ಣುಪುರಾಣ, ಶಿವಪುರಾಣ, ಭಾಗವತ, ಭವಿಷ್ಯಪುರಾಣ, ನಾರದೀಯಪುರಾಣ, ಮಾರ್ಕಂಡೇಯಪುರಾಣ, ಅಗ್ನಿಪುರಾಣ, ಬ್ರಹ್ಮವೈವರ್ತಪುರಾಣ, ಲಿಂಗಪುರಾಣ, ವರಾಹಪುರಾಣ, ಸ್ಕಾಂದಪುರಾಣ, ವಾಮನಪುರಾಣ, ಕೂರ್ಮಪುರಾಣ, ಮತ್ಸ್ಯಪುರಾಣ, ಗರುಡಪುರಾಣ, ಬ್ರಹ್ಮಾಂಡಪುರಾಣ ಎಂದು ಹದಿನೆಂಟು ಮಹಾಪುರಾಣಗಳು.

೪೫-೪೬. ಅವುಗಳಲ್ಲಿ ನಾಲ್ಕನೆಯದಾದ ಶಿವಪುರಾಣವು ಶಿವನ ಸಂಬಂಧವಾದ ವಿಷಯಗಳನ್ನು ಹೇಳುವುದು. ಇದನ್ನು ಓದಿ ಕೇಳಿದವರಿಗೆ ಅವರ ಇಷ್ಟಾರ್ಥ

**ಗ್ರಂಥೋ ಲಕ್ಷಪ್ರಮಾಣಂ ತದ್ವ್ಯಸ್ತಂ ದ್ವಾದಶಸಂಹಿತಂ ।**
**ನಿರ್ಮಿತಂ ತಚ್ಛಿವೇನೈವ ತತ್ರ ಧರ್ಮಾಃ ಪ್ರತಿಷ್ಠಿತಾಃ ॥ ೪೬ ॥**

**ತದುಕ್ತೇನೈವ ಧರ್ಮೇಣ ಶೈವಾಸ್ತ್ರೈವರ್ಣಿಕಾ ನರಾಃ ।**
**ತಸ್ಮಾದ್ವಿಮುಕ್ತಿಮನ್ವಿಚ್ಛನ್ ಶಿವಮೇವ ಸಮಾಶ್ರಯೇತ್ ॥ ೪೭ ॥**

**ತಮಾಶ್ರಿತ್ಯೈವ ದೇವಾನಾಮಪಿ ಮುಕ್ತಿರ್ನ ಚಾನ್ಯಥಾ ।**
**ಯದಿದಂ ಶೈವಮಾಖ್ಯಾತಂ ಪುರಾಣಂ ವೇದಸಂಮಿತಂ ॥ ೪೮ ॥**

**ತಸ್ಯ ಭೇದಾನ್ಸಮಾಸೇನ ಬ್ರುವತೋ ಮೇ ನಿಬೋಧತ ।**
**ವಿದ್ಯೇಶ್ವರಂ ತಥಾ ರೌದ್ರಂ ವೈನಾಯಕಮನುತ್ತಮಂ ॥ ೪೯ ॥**

**ಔಮಂ ಮಾತೃಪುರಾಣಂ ಚ ರುದ್ರೈಕಾದಶಕಂ ತಥಾ ।**
**ಕೈಲಾಸಂ ಶತರುದ್ರಂ ಚ ಕೋಟಿರುದ್ರಾಖ್ಯಮೇವ ಚ ॥ ೫೦ ॥**

---

ಗಳೆಲ್ಲವೂ ಸಿದ್ಧಿಸುವುವು. ಇದು ಒಂದುಲಕ್ಷ ಶ್ಲೋಕಗಳುಳ್ಳದ್ದಾಗಿರುವುದು. ಹನ್ನೆರಡು ಸಂಹಿತೆಗಳಾಗಿ ವಿಭಾಗಮಾಡಲ್ಪಟ್ಟಿರುವುದು. ಈ ಪುರಾಣವನ್ನು ಸಾಕ್ಷಾತ್ ಶಿವನೇ ನಿರ್ಮಿಸಿ, ಅದರಲ್ಲಿ ಶಿವಧರ್ಮಗಳೆಲ್ಲವನ್ನೂ ಹೇಳಿರುವನು.

೪೭. ಮುಕ್ತಿಯನ್ನು ಅಪೇಕ್ಷಿಸುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಾದಿಯಾದ ಸಮಸ್ತರೂ ಆ ಪುರಾಣದಲ್ಲಿ ಹೇಳಿರುವ ಧರ್ಮವನ್ನು ಅನುಸರಿಸಿ ಶಿವನನ್ನೇ ಆಶ್ರಯಿಸಬೇಕು.

೪೮-೪೯. ಶಿವನನ್ನು ಆಶ್ರಯಿಸಿದರೇನೇ ದೇವತೆಗಳಿಗೂ ಮುಕ್ತಿಯುಂಟಾಗುವುದು. ಹೀಗಿರುವಾಗ ಶಿವನ ಅನುಗ್ರಹವಿಲ್ಲದೆ ಯಾರಿಗೂ ಮೋಕ್ಷವು ಆಗುವುದಿಲ್ಲ. ವೇದಕ್ಕೆ ಸಮನಾದ ಈ ಶಿವಪುರಾಣದಲ್ಲಿನ ಗ್ರಂಥಭಾಗಗಳನ್ನು ಸಂಕ್ಷೇಪವಾಗಿ ಹೇಳುವೆನು ಕೇಳಿರಿ.

೫೦-೫೭. ವಿದ್ಯೇಶ್ವರಸಂಹಿತಾ, ರುದ್ರಸಂಹಿತಾ, ವಿನಾಯಕಸಂಹಿತಾ, ಉಮಾಸಂಹಿತಾ, ಮಾತೃಪುರಾಣ, ರುದ್ರೈಕಾದಶಸಂಹಿತಾ, ಕೈಲಾಸಸಂಹಿತಾ, ಶತರುದ್ರಸಂಹಿತಾ, ಕೋಟಿರುದ್ರಸಂಹಿತಾ, ಸಹಸ್ರಕೋಟಿರುದ್ರಸಂಹಿತಾ, ವಾಯುವೀಯ

**ಸಹಸ್ರಕೋಟಿರುದ್ರಾಖ್ಯಂ ವಾಯುವೀಯಂ ತತಃ ಪರಂ ।**
**ಧರ್ಮಸಂಜ್ಞಂ ಪುರಾಣಂ ಚೇತ್ಯೇವಂ ದ್ವಾದಶ ಸಂಹಿತಾಃ ॥ ೫೧ ॥**

**ವಿದ್ಯೇಶಂ ದಶಸಾಹಸ್ರಮುದಿತಂ ಗ್ರಂಥಸಂಖ್ಯಯಾ ।**
**ರೌದ್ರಂ ವೈನಾಯಕಂ ಚೌಮಂ ಮಾತೃಕಾಖ್ಯಂ ತತಃ ಪರಂ ॥ ೫೨ ॥**

**ಪ್ರತ್ಯೇಕಮಷ್ಟಸಾಹಸ್ರಂ ತ್ರಯೋದಶಸಹಸ್ರಕಂ ।**
**ರುದ್ರೈಕಾದಶಕಾಖ್ಯಂ ಯತ್ಕೈಲಾಸಂ ಷಟ್ಸಹಸ್ರಕಂ ॥ ೫೩ ॥**

**ಶತರುದ್ರಂ ತ್ರಿಸಾಹಸ್ರಂ ಕೋಟಿರುದ್ರಂ ತತಃ ಪರಂ ।**
**ಸಹಸ್ರೈರ್ನವಭಿರ್ಯುಕ್ತಂ ಸರ್ವಾರ್ಥಜ್ಞಾನಸಂಯುತಂ ॥ ೫೪ ॥**

**ಸಹಸ್ರಕೋಟಿರುದ್ರಾಖ್ಯಮೇಕಾದಶಸಹಸ್ರಕಂ ।**
**ಚತುಸ್ಸಹಸ್ರಸಂಖ್ಯೇಯಂ ವಾಯುವೀಯಮನುತ್ತಮಂ ॥ ೫೫ ॥**

**ಧರ್ಮಸಂಜ್ಞಂ ಪುರಾಣಂ ಯತ್ತದ್ದ್ವಾದಶಸಹಸ್ರಕಂ ।**
**ತದೇವಂ ಲಕ್ಷಮುದ್ದಿಷ್ಟಂ ಶೈವಂ ಶಾಖಾವಿಭೇದತಃ ॥ ೫೬ ॥**

---

ಸಂಹಿತಾ, ಧರ್ಮಸಂಹಿತಾ ಎಂದು ಶಿವಪುರಾಣವು ಹನ್ನೆರಡು ಭಾಗವನ್ನೊಳಗೊಂಡಿರುವುದು. ಈ ಸಂಹಿತೆಗಳಲ್ಲಿ ಗ್ರಂಥಸಂಖ್ಯೆಯು ಈರೀತಿ ಇರುವುದು. ವಿದ್ಯೇಶ್ವರ ಸಂಹಿತೆಯಲ್ಲಿ ಹತ್ತುಸಾವಿರ ಶ್ಲೋಕಗಳಿರುವುವು. ರುದ್ರಸಂಹಿತಾ, ವಿನಾಯಕ ಸಂಹಿತಾ, ಉಮಾಸಂಹಿತಾ, ಮಾತೃಪುರಾಣ ಇವುಗಳಲ್ಲಿ ಪ್ರತಿಯೊಂದೂ ಎಂಟು ಸಾವಿರ ಶ್ಲೋಕಗಳುಳ್ಳದ್ದಾಗಿರುವುದು. ಏಕಾದಶರುದ್ರಸಂಹಿತೆಯು ಹದಿಮೂರು ಸಾವಿರ ಶ್ಲೋಕಗಳಿಂದ ಕೂಡಿ ಇರುವುದು. ಕೈಲಾಸಸಂಹಿತೆಯಲ್ಲಿ ಆರುಸಾವಿರ ಶ್ಲೋಕಗಳಿರುವುವು. ಶತರುದ್ರಸಂಹಿತೆಯಲ್ಲಿ ಮೂರುಸಾವಿರ ಶ್ಲೋಕಗಳೂ, ಕೋಟಿರುದ್ರಸಂಹಿತೆಯಲ್ಲಿ ಒಂಭತ್ತುಸಾವಿರ ಶ್ಲೋಕಗಳೂ, ಎಲ್ಲಾ ವಿಷಯಗಳ ಜ್ಞಾನವನ್ನು ತಿಳಿಸುವ ಸಹಸ್ರಕೋಟಿರುದ್ರಸಂಹಿತೆಯಲ್ಲಿ ಹನ್ನೊಂದುಸಾವಿರ ಶ್ಲೋಕಗಳೂ, ಶ್ರೇಷ್ಠವಾದ ವಾಯುವೀಯಸಂಹಿತೆಯಲ್ಲಿ ನಾಲ್ಕುಸಾವಿರ ಶ್ಲೋಕಗಳೂ ಇರುವುವು. ಧರ್ಮಪುರಾಣದಲ್ಲಿ ಹನ್ನೆರಡುಸಾವಿರ ಶ್ಲೋಕಗಳು ಇರುವುವು. ಶೈವ ಪುರಾಣವು ಈರೀತಿಯಾಗಿರುವ ಹನ್ನೆರಡು ಸಂಹಿತೆಗಳಲ್ಲಿ ಒಂದುಲಕ್ಷ ಶ್ಲೋಕಗಳುಳ್ಳದ್ದಾಗಿ ಸಮಸ್ತ ವೇದಸಾರಗಳನ್ನೂ ಒಳಗೊಂಡಿರುವುದಲ್ಲದೆ, ಇದನ್ನು ಪಠನಮಾಡು

**ಪುರಾಣಂ ವೇದಸಾರಂ ತದ್ಭುಕ್ತಿಮುಕ್ತಿಫಲಪ್ರದಂ ।**
**ವ್ಯಾಸೇನ ತತ್ತು ಸಂಕ್ಷಿಪ್ತಂ ಚತುರ್ವಿಂಶತ್ಸಹಸ್ರಕಂ ॥ ೫೭ ॥**

**ವ್ಯಾಸೇನ ತತ್ತು ಸಂಕ್ಷಿಪ್ತಂ ಚತುರ್ವಿಂಶತ್ಸಹಸ್ರಕಂ ।**
**ಶೈವಂ ತತ್ರ ಪುರಾಣಂ ವೈ ಚತುರ್ಥಂ ಸಪ್ತಸಂಹಿತಂ ॥ ೫೮ ॥**

**ವಿದ್ಯೇಶ್ವರಾಖ್ಯಾ ತತ್ರಾದ್ಯಾ ದ್ವಿತೀಯಾ ರುದ್ರಸಂಹಿತಾ ।**
**ತೃತೀಯಾ ಶತರುದ್ರಾಖ್ಯಾ ಕೋಟಿರುದ್ರಾ ಚತುರ್ಥಿಕಾ ॥ ೫೯ ॥**

**ಪಂಚಮೀ ಕಥಿತಾ ಚೋಮಾ ಷಷ್ಠೀ ಕೈಲಾಸಸಂಹಿತಾ ।**
**ಸಪ್ತಮೀ ವಾಯವೀಯಾಖ್ಯಾ ಸಪ್ತೈವಂ ಸಂಹಿತಾ ಇಹ ॥ ೬೦ ॥**

**ವಿದ್ಯೇಶ್ವರಂ ದ್ವಿಸಾಹಸ್ರಂ ರೌದ್ರಂ ಪಂಚಶತಾಯುತಂ ।**
**ತ್ರಿಂಶತ್ತಥಾ ದ್ವಿಸಾಹಸ್ರಂ ಸಾರ್ಧೈಕಶತಮೀರಿತಂ ॥ ೬೧ ॥**

---

ವವರಿಗೆ ಇಹಲೋಕದಲ್ಲಿ ಸಮಸ್ತ ಸೌಖ್ಯವನ್ನೂ, ಪರದಲ್ಲಿ ಮುಕ್ತಿಯನ್ನೂ ಕೊಡುವುದಾಗಿರುವುದು.

೫೮. ಇಷ್ಟು ವಿಸ್ತಾರವಾಗಿರುವ ಗ್ರಂಥವನ್ನು ತಿಳಿದುಕೊಳ್ಳಲು ಕಲಿಯುಗದ ಜನರು ಅಶಕ್ತರೆಂದು ಯೋಚಿಸಿ ವ್ಯಾಸಮಹರ್ಷಿಯು ಒಂದುಲಕ್ಷ ಗ್ರಂಥಗಳಿಂದ ಕೂಡಿರುವ ನಾಲ್ಕನೆಯದಾದ ಈ ಶಿವಪುರಾಣವನ್ನು ಏಳು ಸಂಹಿತೆಗಳಾಗಿ ಭಾಗ ಮಾಡಿ ಇಪ್ಪತ್ತನಾಲ್ಕುಸಾವಿರ ಶ್ಲೋಕಗಳಲ್ಲಿ ಅಡಕವಾಗಿರುವಂತೆ ಸಂಕ್ಷೇಪವಾಗಿ ವಿಂಗಡಿಸಿರುವನು. ಹೇಗೆಂದರೆ--

೫೯-೬೦. ಇವುಗಳಲ್ಲಿ ಮೊದಲನೆಯದು ವಿದ್ಯೇಶ್ವರಸಂಹಿತಾ, ಎರಡನೆಯದು ರುದ್ರಸಂಹಿತೆಯು, ಶತರುದ್ರಸಂಹಿತೆಯು ಮೂರನೆಯದು, ಕೋಟಿರುದ್ರಸಂಹಿತೆಯು ನಾಲ್ಕನೆಯದು, ಉಮಾಸಂಹಿತೆಯು ಐದನೆಯದು, ಕೈಲಾಸಸಂಹಿತೆಯು ಆರನೆಯದು, ವಾಯುಸಂಹಿತೆಯು ಏಳನೆಯದು, ಹೀಗೆ ಏಳು ಸಂಹಿತೆಗಳು ಶಿವಪುರಾಣದಲ್ಲಿರುವವು.

೬೧-೬೪. ವಿದ್ಯೇಶ್ವರಸಂಹಿತೆಯಲ್ಲಿ ಎರಡುಸಾವಿರ ಶ್ಲೋಕಗಳಿರುವುವು. ರುದ್ರಸಂಹಿತೆಯಲ್ಲಿ ಹನ್ನೆರಡುಸಾವಿರದ ನೂರಎಂಭತ್ತು ಶ್ಲೋಕಗಳಿರುವುವು.

**ಶತರುದ್ರಂ ತಥಾ ಕೋಟಿರುದ್ರಂ ವ್ಯೋಮಯುಗಾಧಿಕಂ ।**
**ದ್ವಿಸಾಹಸ್ರಂ ಚ ದ್ವಿಶತಂ ತಥೌಮಂ ಭೂಸಹಸ್ರಕಂ ॥ ೬೨ ॥**

**ಚತ್ವಾರಿಂಶತ್ಸಾಷ್ಟಶತಂ ಕೈಲಾಸಂ ಭೂಸಹಸ್ರಕಂ ।**
**ಚತ್ವಾರಿಂಶಚ್ಚ ದ್ವಿಶತಂ ವಾಯವೀಯಮತಃ ಪರಂ ॥ ೬೩ ॥**

**ಚತುಸ್ಸಾಹಸ್ರಸಂಖ್ಯಾಕಮೇವಂ ಸಂಖ್ಯಾವಿಭೇದತಃ ।**
**ಶ್ರುತಂ ಪರಮಪುಣ್ಯಂ ತು ಪುರಾಣಂ ಶಿವಸಂಜ್ಞಕಂ ॥ ೬೪ ॥**

**ಚತುಸ್ಸಹಸ್ರಕಂ ಯತ್ತು ವಾಯವೀಯಮುದೀರಿತಂ ।**
**ತದಿದಂ ವರ್ತಯಿಷ್ಯಾಮಿ ಭಾಗದ್ವಯಸಮನ್ವಿತಂ ॥ ೬೫ ॥**

**ನಾವೇದವಿದುಷೇ ವಾಚ್ಯಮಿದಂ ಶಾಸ್ತ್ರಮನುತ್ತಮಂ ।**
**ನ ಚೈವಾಶ್ರದ್ದಧಾನಾಯ ನಾಪುರಾಣವಿದೇ ತಥಾ ॥ ೬೬ ॥**

---

ಶತರುದ್ರಸಂಹಿತೆ ಮತ್ತು ಕೋಟಿರುದ್ರಸಂಹಿತೆಗಳಲ್ಲಿ ಪ್ರತಿಯೊಂದರಲ್ಲಿಯೂ ಎರಡು ಸಾವಿರದ ಎರಡುನೂರು ಹತ್ತು ಶ್ಲೋಕಗಳಿರುವುವು. ಉಮಾಸಂಹಿತೆಯಲ್ಲಿ ಒಂದು ಸಾವಿರದ ಎಂಟುನೂರನಲವತ್ತು ಶ್ಲೋಕಗಳಿರುವುವು. ಆರನೆಯದಾದ ಕೈಲಾಸ ಸಂಹಿತೆಯು ಸಾವಿರದ ಎರಡುನೂರು ಶ್ಲೋಕಗಳಿಂದ ಕೂಡಿರುವುದು. ಇದಕ್ಕೆ ಮುಂದಿನದಾದ ವಾಯುವೀಯಸಂಹಿತೆಯಲ್ಲಿ ನಾಲ್ಕುಸಾವಿರ ಶ್ಲೋಕಗಳಿರುವುವು. ಕ್ರಮವಾಗಿ ಏಳು ಸಂಹಿತೆಗಳಲ್ಲಿಯೂ ಇರುವ ಶ್ಲೋಕಸಂಖ್ಯೆಯನ್ನು ಹೇಳಿದೆನು. ಶಿವಪುರಾಣವೆಂದು ಹೆಸರುಳ್ಳ ಈ ಪುರಾಣವನ್ನು ಕೇಳಿದರೆ ಬಹಳ ಪುಣ್ಯವು ಲಭಿಸುವುದು.

[ಇಲ್ಲಿ ಹೇಳಿರುವ ಗ್ರಂಥಸಂಖ್ಯೆಯು ಸರಿಯಾಗಿಲ್ಲ. ಒಟ್ಟು ಈ ಪುರಾಣ ದಲ್ಲಿ ೨೪೦೦೦ ಶ್ಲೋಕಗಳಿವೆ. ವಿದ್ಯೇಶ್ವರಸಂಹಿತೆ, ರುದ್ರಸಂಹಿತೆ, ಶತರುದ್ರಸಂಹಿತೆ, ಕೋಟಿರುದ್ರಸಂಹಿತೆ, ಉಮಾಸಂಹಿತೆ, ಕೈಲಾಸಸಂಹಿತೆ, ವಾಯುವೀಯಸಂಹಿತೆ, ಅಂತೂ ಒಟ್ಟು ೨೪೦೦೦ ಶ್ಲೋಕಗಳಿವೆ.]

೬೫-೬೬. ಈಗ ಎರಡು ಭಾಗಗಳಿಂದ ಕೂಡಿರುವ ವಾಯುವೀಯಸಂಹಿತೆ ಯನ್ನು ವಿವರಿಸಿ ಹೇಳುವೆನು. ಇದರಲ್ಲಿ ನಾಲ್ಕುಸಾವಿರ ಶ್ಲೋಕಗಳಿರುವುವು ಎಂದು ಮೊದಲೇ ಹೇಳಿದ್ದೇನೆ. ಬಹಳ ಪವಿತ್ರವಾದ ಈ ವಾಯುವೀಯಸಂಹಿತೆಯನ್ನು

**ಪರೀಕ್ಷಿತಾಯ ಶಿಷ್ಯಾಯ ಧಾರ್ಮಿಕಾಯಾನಸೂಯವೇ ।**
**ಪ್ರದೇಯಂ ಶಿವಭಕ್ತಾಯ ಶಿವಧರ್ಮಾನುಸಾರಿಣೇ ॥ ೬೭ ॥**

**ಪುರಾಣಸಂಹಿತಾ ಯಸ್ಯ ಪ್ರಸಾದಾನ್ಮಯಿ ವರ್ತತೇ ।**
**ನಮೋ ಭಗವತೇ ತಸ್ಮೈ ವ್ಯಾಸಾಯಾಮಿತತೇಜಸೇ ॥ ೬೮ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ವಿದ್ಯಾವತಾರಕಥನವರ್ಣನಂ ನಾಮ ಪ್ರಥಮೋಽಧ್ಯಾಯಃ**



ವೇದಗಳನ್ನೂ ಅಧ್ಯಯನ ಮಾಡದೆ ಇರುವವನಿಗೂ, ವೇದಶಾಸ್ತ್ರಗಳಲ್ಲಿ ನಂಬಿಕೆ ಇಲ್ಲದ ನಾಸ್ತಿಕನಿಗೂ, ಪುರಾಣಗಳ ಅರ್ಥವನ್ನು ತಿಳಿಯದೆ ಇರುವವನಿಗೂ ಹೇಳ ಬಾರದು ಧರ್ಮದಿಂದ ನಡೆದುಕೊಂಡು, ಅಸೂಯೆಯಿಲ್ಲದೆ ಇರುವ ಶಿವಭಕ್ತನಾದ, ಶಿವಧರ್ಮಗಳನ್ನು ಅನುಸರಿಸುವ ಶಿಷ್ಯನನ್ನು ಚೆನ್ನಾಗಿ ಪರೀಕ್ಷೆಮಾಡಿ ಅವನಿಗೆ ಈ ಶಿವಪುರಾಣದಲ್ಲಿನ ವಿಷಯಗಳೆಲ್ಲವನ್ನೂ ವಿವರಿಸಿ ಹೇಳಬೇಕು.

೬೮. ಬಹಳ ತೇಜಶ್ಶಾಲಿಯಾದ ವ್ಯಾಸಋಷಿಯು ನನ್ನಲ್ಲಿ ಅನುಗ್ರಹವಿಟ್ಟು ಈ ಶಿವಪುರಾಣವನ್ನು ನನಗೆ ಉಪದೇಶಮಾಡಿರುವನು. ಇಂತಹ ಪರಮಪೂಜ್ಯನಾದ ಮತ್ತು ನನ್ನ ಗುರುವಾದ ವ್ಯಾಸಋಷಿಗೆ ಭಕ್ತಿಯಿಂದ ನಮಸ್ಕಾರವನ್ನು ಮಾಡುವೆನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಪೂರ್ವಭಾಗ ದಲ್ಲಿ ವಿದ್ಯಾವತಾರಕಥನವೆಂಬ ಮೊದಲನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ

## ದ್ವಿತೀಯೋಽಧ್ಯಾಯಃ

॥ ಸೂತ ಉವಾಚ ॥

ಪುರಾ ಕಾಲೇನ ಮಹತಾ ಕಲ್ಪೇಽತೀತೇ ಪುನಃ ಪುನಃ ।
ಅಸ್ಮಿನ್ನುಪಸ್ಥಿತೇ ಕಲ್ಪೇ ಪ್ರವೃತ್ತೇ ಸೃಷ್ಟಿಕರ್ಮಣಿ ॥ ೧ ॥

ಪ್ರತಿಷ್ಠಿತಾಯಾಂ ವಾರ್ತಾಯಾಂ ಪ್ರಬುದ್ಧಾಸು ಪ್ರಜಾಸು ಚ ।
ಮುನೀನಾಂ ಷಟ್ಕುಲೀಯಾನಾಂ ಬ್ರುವತಾಮಿತರೇತರಂ ॥ ೨ ॥

ಇದಂ ಪರಮಿದಂ ನೇತಿ ವಿವಾದಸ್ಸುಮಹಾನಭೂತ್ ।
ಪರಸ್ಯ ದುರ್ನಿರೂಪತ್ವಾನ್ನ ಜಾತಸ್ತತ್ರ ನಿಶ್ಚಯಃ ॥ ೩ ॥

## ಎರಡನೆಯ ಅಧ್ಯಾಯವು

೧-೪. ಸೂತಮುನಿಯು ಹೇಳಲುಪಕ್ರಮಿಸಿದನು :—ಬಹುಕಾಲದ ಹಿಂದೆ ಕಲ್ಪಗಳು ಒಂದಾಗುತ್ತಲೊಂದು ಕಳೆದುಹೋಗಿ ಈಗಿನ ವರ್ತಮಾನಕಲ್ಪವು ಪ್ರಾಪ್ತವಾಗಿ ಸೃಷ್ಟಿಕ್ರಮವು ನಡೆಯುತ್ತಲಿರಲು ಪ್ರಜೆಗಳು ವೃದ್ಧಿಯನ್ನೈದುತ್ತಿದ್ದರು. ಆಗ ಪ್ರಸಿದ್ಧವಾದ ಆರು ಕುಲಗಳಲ್ಲಿ ಉತ್ಪನ್ನರಾದ ಋಷಿಸಮೂಹಗಳಲ್ಲಿ ಬ್ರಹ್ಮವಿಚಾರವಾಗಿ ವಾದವಿವಾದಗಳು ನಡೆಯುತ್ತಿದ್ದುವು. ಪರಾಪರವಸ್ತುವನ್ನು ಸರಿಯಾಗಿ ತಿಳಿಯದೆ ಅವರು ತಮತಮಗೆ ತೋರಿದಂತೆ ಇದು ಪರವಸ್ತುವು, ಇದು ಪರವಸ್ತುವಲ್ಲ ಎಂದು ಪರಸ್ಪರ ವಾದಮಾಡುತ್ತಾ ಎಲ್ಲಕ್ಕಿಂತಲೂ ಉತ್ಕೃಷ್ಟವಾದ ಬ್ರಹ್ಮಪದಾರ್ಥ

ತೇऽಭಿಜಗ್ಮುರ್ವಿಧಾತಾರಂ ದ್ರಷ್ಟುಂ ಬ್ರಹ್ಮಾಣಮವ್ಯಯಂ ।
ಯತ್ರಾಸ್ತೇ ಭಗವಾನ್ಬ್ರಹ್ಮಾ ಸ್ತೂಯಮಾನಸ್ಸುರಾಸ್ಸುರೈಃ ॥ ೪ ॥

ಮೇರುಶೃಂಗೇ ಶುಭೇ ರಮ್ಯೇ ದೇವದಾನವಸಂಕುಲೇ ।
ಸಿದ್ಧಚಾರಣಸಂವಾದೇ ಯಕ್ಷಗಂಧರ್ವಸೇವಿತೇ ॥ ೫ ॥

ವಿಹಂಗಸಂಘಸಂಘುಷ್ಟೇ ಮಣಿವಿದ್ರುಮಭೂಷಿತೇ ।
ನಿಕುಂಜಕಂದರದರೀಗುಹಾನಿರ್ಝರಶೋಭಿತೇ ॥ ೬ ॥

ತತ್ರ ಬ್ರಹ್ಮವನಂ ನಾಮ ನಾನಾಮೃಗಸಮಾಕುಲಂ ।
ದಶಯೋಜನವಿಸ್ತೀರ್ಣಂ ಶತಯೋಜನಮಾಯತಂ ॥ ೭ ॥

ಸುರಸಾಮಲಪಾನೀಯಪೂರ್ಣರಮ್ಯಸರೋವರಂ ।
ಮತ್ತಭ್ರಮರಸಂಚ್ಛನ್ನರಮ್ಯಪುಷ್ಪಿತಪಾದಪಂ ॥ ೮ ॥

ವನ್ನು ಹೀಗೆಯೇ ಸರಿ ಎಂದು ನಿಶ್ಚಯಿಸಲು ಸಾಧ್ಯವಿಲ್ಲದೆ ಏನುಮಾಡಬೇಕೆಂದು ಯೋಚಿಸಿ, ಕೊನೆಗೆ ದೇವದಾನವರಿಂದ ಸ್ತುತ್ಯನೂ, ನಾಶರಹಿತನೂ, ಷಡ್ಗುಣ್ಯೈಶ್ವರ್ಯ ಸಂಪನ್ನನೂ ಆದ ಬ್ರಹ್ಮನನ್ನು ಕಾಣಲು ಹೊರಟರು.

೫-೬. ಮೇರುಪರ್ವತದ ಮನೋಹರವಾದ ಶಿಖರದಲ್ಲಿ ಬ್ರಹ್ಮವನವೆಂದು ಹೆಸರುಳ್ಳ ಒಂದು ವನವಿರುವುದು. ಈ ವನವು ಯಕ್ಷ, ಗಂಧರ್ವ, ದೇವ, ದಾನವ ರಿಂದ ತುಂಬಿ ಮಂಗಳಕರವಾಗಿ ಮನೋಹರವಾಗಿರುವುದು. ಈ ವನದಲ್ಲಿ ಪಕ್ಷಿಗಳು ಗುಂಪುಗುಂಪಾಗಿ ಧ್ವನಿಮಾಡುತ್ತಿರುವುವು. ರತ್ನ, ಹವಳ ಇವೇ ಮೊದಲಾದ ಉತ್ತಮವಾದ ಪದಾರ್ಥಗಳಿಂದ ಆ ವನವು ಬಹು ಚೆನ್ನಾಗಿ ಕಾಣುತ್ತಿರು ವುದು ಈ ವನದಲ್ಲಿ ಅನೇಕ ಗುಹೆಗಳೂ, ಲತಾಗೃಹಗಳೂ, ಗಿರಿನದಿಗಳೂ, ವಿಧವಿಧವಾದ ಅನೇಕ ಮೃಗಗಳೂ ಇರುವವು.

೭-೮. ಈ ಬ್ರಹ್ಮವನವು ಹತ್ತುಯೋಜನ ಅಗಲವಾಗಿಯೂ, ನೂರುಯೋಜನ ಉದ್ದವಾಗಿಯೂ ಇದ್ದಿತು. ಇದರಲ್ಲಿ ಕೊಳೆಯಿಲ್ಲದೆ ರುಚಿಕರವಾದ ನೀರಿನಿಂದ ತುಂಬಿ ರುವ ಸರೋವರಗಳೂ, ಮದಿಸಿದ ದುಂಬಿಗಳಿಂದ ಆವೃತವಾಗಿರುವ ಅನೇಕ ಪುಷ್ಪವೃಕ್ಷ ಗಳೂ ಇದ್ದವು. ಆ ವನದ ಮಧ್ಯದಲ್ಲಿ ಬಾಲಸೂರ್ಯನಂತೆ ಹೊಳೆಯುವ ಸುಂದರ ವಾದ ಒಂದು ದೊಡ್ಡ ಪಟ್ಟಣವು ಪ್ರಕಾಶಿಸುತ್ತಿತ್ತು.

ತರುಣಾದಿತ್ಯಸಂಕಾಶಂ ತತ್ರ ಚಾರು ಮಹತ್ಪುರಂ ।
ದುರ್ಧರ್ಷಬಲದೃಪ್ತಾನಾಂ ದೈತ್ಯದಾನವರಕ್ಷಸಾಂ ॥ ೯ ॥

ತಪ್ತಜಾಂಬೂನದಮಯಂ ಪ್ರಾಂಶುಪ್ರಾಕಾರತೋರಣಂ ।
ನಿರ್ವ್ಯೂಹವಲಭೀಕೂಟಪ್ರತೋಲೀಶತಮಂಡಿತಂ ॥ ೧೦ ॥

ಮಹಾರ್ಹಮಣಿಚಿತ್ರಾಭಿರ್ಲೇಲಿಹಾನಮಿವಾಂಬರಂ ।
ಮಹಾಭವನಕೋಟೀಭಿರನೇಕಾಭಿರಲಂಕೃತಂ ॥ ೧೧ ॥

ತಸ್ಮಿನ್ನಿವಸತಿ ಬ್ರಹ್ಮಾ ಸಭ್ಯೈಃ ಸಾರ್ಧಂ ಪ್ರಜಾಪ್ರತಿಃ ।
ತತ್ರ ಗತ್ವಾ ಮಹಾತ್ಮಾನಂ ಸಾಕ್ಷಾಲ್ಲೋಕಪಿತಾಮಹಂ ॥ ೧೨ ॥

ದದೃಶುರ್ಮುನಯೋ ದೇವಾ ದೇವರ್ಷಿಗಣಸೇವಿತಂ ।
ಶುದ್ಧಚಾಮೀಕರಪ್ರಖ್ಯಂ ಸರ್ವಾಭರಣಭೂಷಿತಂ ॥ ೧೩ ॥

ಪ್ರಸನ್ನವದನಂ ಸೌಮ್ಯಂ ಪದ್ಮಪತ್ರಾಯತೇಕ್ಷಣಂ ।
ದಿವ್ಯಕಾಂತಿಸಮಾಯುಕ್ತಂ ದಿವ್ಯಗಂಧಾನುಲೇಪನಂ ॥ ೧೪ ॥

೯-೧೧. ಮಹಾಶೂರರಾದ ಅನೇಕಮಂದಿ ದೈತ್ಯದಾನವರಾಕ್ಷಸರು ಆ ನಗರವನ್ನು ರಕ್ಷಿಸುತ್ತಿದ್ದರು. ಅದರ ಕೋಟೆಗಳೂ, ಹೆಬ್ಬಾಗಿಲೂ ಪುಟವಿಕ್ಕಿದ ಚಿನ್ನದಿಂದ ನಿರ್ಮಿಸಲ್ಪಟ್ಟಿದ್ದುವು. ಅನೇಕ ಪ್ರಾಕಾರಗಳಿಂದಲೂ, ತೋರಣಧ್ವಜಪತಾಕೆಗಳಿಂದಲೂ ಆ ಪುರವು ಶೋಭಿಸುತ್ತಿತ್ತು. ಆ ನಗರದ ಗೋಡೆಗಳನ್ನೂ, ಜೋದಿಗೆಗಳನ್ನೂ, ನಿಲುಪಟ್ಟಿಗಳನ್ನೂ ಬಹು ಬೆಲೆಯುಳ್ಳ ರತ್ನಗಳಿಂದ ಚಿತ್ರವಿಚಿತ್ರವಾಗಿ ಕಟ್ಟಿದ್ದರು. ಆ ನಗರದ ಉಪ್ಪರಿಗೆ ಮನೆಗಳು ಆಕಾಶವನ್ನು ಮುಟ್ಟುತ್ತವೆಯೋ ಎನ್ನುವಂತೆ ಬಹು ಎತ್ತರವಾಗಿದ್ದವು. ಇಂತಹ ಅನೇಕ ಕೋಟಿ ಉನ್ನತವಾದ ಸೌಧಗಳು ಆ ನಗರದಲ್ಲಿದ್ದವು.

೧೨-೧೬. ಇಂತಹ ನಗರಕ್ಕೆ ಆ ಋಷಿಗಳು ಹೋಗಿ ಅಲ್ಲಿದ್ದ ಲೋಕಪಿತಾಮಹನೆನಿಸಿದ ಸಾಕ್ಷಾದ್ಬ್ರಹ್ಮನನ್ನು ನೋಡಿದರು. ಆ ಬ್ರಹ್ಮನ ಸುತ್ತಲೂ ದೇವತೆಗಳು, ಋಷಿಗಳು ಮುಂತಾದವರು ನೆರೆದು ಅವನನ್ನು ಓಲೈಸುತ್ತಿದ್ದರು. ಅವನ ಶರೀರ ಕಾಂತಿಯು ಪುಟವಿಕ್ಕಿದ ಚಿನ್ನದಂತಿತ್ತು. ಸಮಸ್ತ ಆಭರಣಗಳನ್ನೂ ಧರಿಸಿ ಸೌಮ್ಯವಾದ ಪ್ರಸನ್ನಮುಖದಿಂದ ಶೋಭಿಸುತ್ತಿದ್ದನು. ಪದ್ಮಪತ್ರಗಳಂತೆ ಅಗಲವಾದ

**ದಿವ್ಯಶುಕ್ಲಾಂಬರಧರಂ ದಿವ್ಯಮಾಲಾವಿಭೂಷಿತಂ ।**
**ಸುರಾಸುರೇಂದ್ರಯೋಗೀಂದ್ರವಂದ್ಯಮಾನಪದಾಂಬುಜಂ ॥ ೧೫ ॥**

**ಸರ್ವಲಕ್ಷಣಯುಕ್ತಾಂಗ್ಯಾ ಲಬ್ಧಚಾಮರಹಸ್ತಯಾ ।**
**ಭ್ರಾಜಮಾನಂ ಸರಸ್ವತ್ಯಾ ಪ್ರಭಯೇವ ದಿವಾಕರಂ ॥ ೧೬ ॥**

**ತಂ ದೃಷ್ಟ್ವಾ ಮುನಯಸ್ಸರ್ವೇ ಪ್ರಸನ್ನವದನೇಕ್ಷಣಾಃ ।**
**ಶಿರಸ್ಯಂಜಲಿಮಾಧಾಯ ತುಷ್ಟುವುಸ್ಸುರಪುಂಗವಂ ॥ ೧೭ ॥**

**॥ ಮುನಯ ಊಚುಃ ॥**

**ನಮಸ್ತ್ರಿಮೂರ್ತಯೇ ತುಭ್ಯಂ ಸರ್ಗಸ್ಥಿತ್ಯಂತಹೇತವೇ ।**
**ಪುರುಷಾಯ ಪುರಾಣಾಯ ಬ್ರಹ್ಮಣೇ ಪರಮಾತ್ಮನೇ ॥ ೧೮ ॥**

ಕಣ್ಣುಗಳು, ದಿವ್ಯಕಾಂತಿಯಿಂದ ಬೆಳಗುವ ಶರೀರ ಇವುಗಳಿಂದ ಪ್ರಕಾಶಿಸುತ್ತಿದ್ದನು. ದಿವ್ಯವಾದ ಗಂಧವನ್ನು ಲೇಪನಮಾಡಿಕೊಂಡು, ಶುಭ್ರವಸ್ತ್ರವನ್ನು ಧರಿಸಿ, ಕಂಠದಲ್ಲಿ ಉತ್ತಮವಾದ ಹಾರವನ್ನು ಧರಿಸಿದ್ದನು. ಅವನ ಪಾದಪದ್ಮಗಳಿಗೆ ದೇವತೆಗಳೂ, ರಾಕ್ಷಸರೂ, ಇಂದ್ರನೂ. ಯೋಗಿಶ್ರೇಷ್ಠರೂ ನಮಸ್ಕಾರವನ್ನು ಮಾಡುತ್ತಿದ್ದರು. ಸೂರ್ಯನ ಕಾಂತಿಯಂತೆ ದಿವ್ಯವಾದ ಶರೀರಕಾಂತಿಯಿಂದ ಬೆಳಗುತ್ತಾ, ಎಲ್ಲಾ ಉತ್ತಮ ಲಕ್ಷಣಗಳಿಂದ ಕೂಡಿರುವ ಸರಸ್ವತೀದೇವಿಯು ಚಾಮರವನ್ನು ಹಾಕುತ್ತಾ ಇದ್ದಳು. ಇದರಿಂದ ಆ ಬ್ರಹ್ಮನ ಕಾಂತಿಯು ಹೇಳುವುದಕ್ಕಾಗದಷ್ಟು ಹೆಚ್ಚಾಗಿತ್ತು.

೧೭. ದೇವತೆಗಳೆಲ್ಲರಿಗೂ ಶ್ರೇಷ್ಠನಾದ ಬ್ರಹ್ಮನನ್ನು ಕಂಡೊಡನೆಯೇ ಆ ಋಷಿಗಳ ಕಣ್ಣುಗಳು ಸಂತೋಷದಿಂದ ಅರಳಿದುವು. ಆಗ ಅವರು ಕೈಮುಗಿದು ಕೊಂಡು ಸುರಪತಿಯಾದ ಬ್ರಹ್ಮನನ್ನು ಹೀಗೆ ಸ್ತೋತ್ರಮಾಡಿದರು.

೧೮. ಋಷಿಗಳು ಸ್ತೋತ್ರಮಾಡಿದರು :—ಸೃಷ್ಟಿ, ಸ್ಥಿತಿ, ಸಂಹಾರ ಇವು ಗಳನ್ನು ಮಾಡುವುದಕ್ಕಾಗಿ ಆದಿಪುರುಷನಾದ ನೀನು ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳ ಆಕಾರವನ್ನು ಧರಿಸಿರುವೆ. ಇಂತಹ ಪರಬ್ರಹ್ಮಸ್ವರೂಪನಾದ ನಿನಗೆ ನಮಸ್ಕಾರವು.

**ನಮಃ ಪ್ರಧಾನದೇಹಾಯ ಪ್ರಧಾನಕ್ಷೋಭಕಾರಿಣೇ ||**
**ತ್ರಯೋವಿಂಶತಿಭೇದೇನ ವಿಕೃತಾಯಾವಿಕಾರಿಣೇ || ೧೯ ||**

**ನಮೋ ಬ್ರಹ್ಮಾಂಡದೇಹಾಯ ಬ್ರಹ್ಮಾಂಡೋದರವರ್ತಿನೇ ।**
**ತತ್ರ ಸಂಸಿದ್ಧಕಾರ್ಯಾಯ ಸಂಸಿದ್ಧಕರಣಾಯ ಚ || ೨೦ ||**

**ನಮೋಽಸ್ತು ಸರ್ವಲೋಕಾಯ ಸರ್ವಲೋಕವಿಧಾಯಿನೇ ।**
**ಸರ್ವಾತ್ಮದೇಹಸಂಯೋಗವಿಯೋಗವಿಧಿಹೇತವೇ || ೨೧ ||**

**ತ್ವಯೈವ ನಿಖಿಲಂ ಸೃಷ್ಟಂ ಸಂಹೃತಂ ಪಾಲಿತಂ ಜಗತ್ ।**
**ತಥಾಪಿ ಮಾಯಯಾ ನಾಥ ನ ವಿದ್ಮಸ್ತ್ವಾಂ ಪಿತಾಮಹ || ೨೨ ||**

---

೧೯. ಅವ್ಯಕ್ತಸ್ವರೂಪದಿಂದ ಉಂಟಾದ ಪ್ರಧಾನಪ್ರಕೃತಿಗಳಲ್ಲಿ ಮುಖ್ಯವಾದ ಪ್ರಧಾನರೂಪದಿಂದಿದ್ದು ಪ್ರಕೃತಿಯಲ್ಲಿ ವಿಕಾರವನ್ನುಂಟುಮಾಡುವ ನಿನಗೆ ನಮಸ್ಕಾರವು. ಪ್ರಕೃತಿಯೇ ಮೊದಲಾಗಿ ಇಪ್ಪತ್ತುಮೂರು ವಿಕಾರಪದಾರ್ಥಗಳಿಂದ ಇರುವವನಾದರೂ, ತಾನು ಮಾತ್ರ ಕೊಂಚವೂ ಆ ವಿಕಾರಪದಾರ್ಥಗಳ ಸಂಬಂಧವಿಲ್ಲದೆ ಇರುವ ನಿನಗೆ ನಮಸ್ಕಾರವನ್ನು ಮಾಡುತ್ತೇವೆ.

೨೦. ಬ್ರಹ್ಮಾಂಡವೇ ನಿನಗೆ ಶರೀರವಾಗಿದ್ದಾಗ್ಯೂ ಆ ಬ್ರಹ್ಮಾಂಡದ ಒಳಗಡೆಯಲ್ಲಿ ಕಾರ್ಯಗಳೆಲ್ಲವನ್ನೂ ಆಯಾಯ ಸಿದ್ಧವಾದ ಉಪಕರಣಗಳಿಂದ ಮಾಡುತ್ತಿರುವೆ. ಇಂತಹ ನನಗೆ ನಮಸ್ಕಾರವು.

೨೧. ಎಲ್ಲಾ ಪ್ರಾಣಿಗಳನ್ನೂ ನಿರ್ಮಿಸಿ ಎಲ್ಲಾ ಲೋಕಗಳನ್ನೂ ನಿರ್ಮಿಸುವ ಕಾಲದಲ್ಲಿ ಎಲ್ಲಾ ಶರೀರಗಳ ಸಂಬಂಧವು ಆಯಾಯ ಪ್ರಾಣಿಗಳಿಗೆ ಉಂಟಾಗುವುದಕ್ಕೂ, ಆ ಶರೀರದ ಸಂಬಂಧವು ಆ ಪ್ರಾಣಿಗಳಿಗೆ ತಪ್ಪುವಂತೆ ಮಾಡುವುದಕ್ಕೂ ತಕ್ಕ ಕೆಲಸಗಳನ್ನು ಮಾಡುತ್ತಿರುವುದಕ್ಕೆ ಕಾರಣನಾದ ನಿನಗೆ ನಮಸ್ಕಾರವು. ಸರ್ವಲೋಕಸ್ವರೂಪನೂ ನೀನೇ. ಸರ್ವಲೋಕಗಳಲ್ಲಿರುವ ಚರಾಚರವಸ್ತುಗಳ ನಿಯಾಮಕನೂ ನೀನೇ ಆಗಿರುವೆ. ಇಂತಹ ನಿನಗೆ ನಮಸ್ಕಾರವು.

೨೨. ಎಲೈ ಪ್ರಭುವೇ, ನೀನು ಎಲ್ಲವನ್ನೂ ನಿರ್ಮಿಸಿರುತ್ತೀಯೆ. ಅವನ್ನು ಕಾಪಾಡುತ್ತೀಯೆ. ಕೊನೆಯಲ್ಲಿ ಅವನ್ನು ನಾಶಪಡಿಸುತ್ತೀಯೆ. ನಾವುಗಳು ಮಾಯೆಯಿಂದ ಮೋಹಿತರಾಗಿ ನೀನು ಮಾಡುವ ಈ ಕೆಲಸಗಳನ್ನು ತಿಳಿಯಲು ಶಕ್ತರಾಗಿಲ್ಲ.

॥ ಸೂತ ಉವಾಚ ॥

ಏವಂ ಬ್ರಹ್ಮಾ ಮಹಾಭಾಗೈರ್ಮಹರ್ಷಿಭಿರಭಿಷ್ಟುತಃ ।
ಪ್ರಾಹ ಗಂಭೀರಯಾ ವಾಚಾ ಮುನೀನ್ಪ್ರಹ್ಲಾದಯನ್ನಿವ ॥ ೨೩ ॥

॥ ಬ್ರಹ್ಮೋವಾಚ ॥

ಋಷಯೋ ಹೇ ಮಹಾಭಾಗಾ ಮಹಾಸತ್ತ್ವಾ ಮಹೌಜಸಃ ।
ಕಿಮರ್ಥಂ ಸಹಿತಾಸ್ಸರ್ವೇ ಯೂಯಮತ್ರ ಸಮಾಗತಾಃ ॥ ೨೪ ॥

ತಮೇವಂ ವಾದಿನಂ ದೇವಂ ಬ್ರಹ್ಮಾಣಂ ಬ್ರಹ್ಮವಿತ್ತಮಾಃ ।
ವಾಗ್ಭಿರ್ವಿನಯಗರ್ಭಾಭಿಸ್ಸರ್ವೇ ಪ್ರಾಂಜಲಯೋಽಬ್ರುವನ್ ॥ ೨೫ ॥

॥ ಮುನಯ ಊಚುಃ ॥

ಭಗವನ್ನಂಧಕಾರೇಣ ಮಹತಾ ವಯಮಾವೃತಾಃ ।
ಖಿನ್ನಾ ವಿವದಮಾನಾಶ್ಚ ನ ಪಶ್ಯಾಮೋಽತ್ರ ಯತ್ಪರಂ ॥ ೨೬ ॥

ತ್ವಂ ಹಿ ಸರ್ವಜಗದ್ಧಾತಾ ಸರ್ವಕಾರಣಕಾರಣಂ ।
ತ್ವಯಾ ಹ್ಯವಿದಿತಂ ನಾಥ ನೇಹ ಕಿಂಚನ ವಿದ್ಯತೇ ॥ ೨೭ ॥

೨೩. ಸೂತಪುರಾಣಿಕನು ಹೇಳಿದನು :- ಪೂಜ್ಯರಾದ ಆ ಮಹರ್ಷಿಗಳು ಚತುರ್ಮುಖಬ್ರಹ್ಮನನ್ನು ಹೀಗೆ ಸ್ತೋತ್ರಮಾಡಿದ ನಂತರ, ಆ ಸ್ತುತಿಯನ್ನು ಕೇಳಿ ಅವರನ್ನು ಸಂತೋಷಪಡಿಸುವುದಕ್ಕಾಗಿ ಗಂಭೀರವಾದ ಧ್ವನಿಯಿಂದ.

೨೪ ಬ್ರಹ್ಮನು ಹೇಳಿದನು :—ಎಲೈ ಋಷಿಗಳೇ, ನೀವು ಪೂಜ್ಯರು. ಮಹಾಸತ್ವಶಾಲಿಗಳು ಮತ್ತು ವರ್ಚಸ್ವಿಗಳು. ನೀವೆಲ್ಲರೂ ಹೀಗೆ ಒಟ್ಟಿಗೆ ಸೇರಿ ಇಲ್ಲಿಗೆ ಯಾವ ಕಾರ್ಯಾರ್ಥವಾಗಿ ಬಂದಿರುವಿರಿ? ಎಂದು ಕೇಳಲು.

೨೫. ಬ್ರಹ್ಮಜ್ಞಾನವುಳ್ಳವರಲ್ಲಿ ಶ್ರೇಷ್ಠರಾದ ಆ ಋಷಿಗಳೆಲ್ಲರೂ ಬ್ರಹ್ಮನು ಹೀಗೆ ಹೇಳುವುದನ್ನು ಕೇಳಿ, ವಿನಯದಿಂದ ಕೈಮುಗಿದುಕೊಂಡು ಇಂತೆಂದರು.

೨೬-೨೯. ಎಲೈ ಪೂಜ್ಯನಾದ ಬ್ರಹ್ಮನೇ, ನಾವು ಅಜ್ಞಾನಾಂಧಕಾರದಿಂದ ಕೂಡಿ ಸತ್ಯವಾದ ವಸ್ತುವು (ಬ್ರಹ್ಮ) ಯಾವುದೆಂದು ತಿಳಿಯಲು ಅಸಮರ್ಥರಾಗಿರುವೆವು. ಆದುದರಿಂದ ನಮ್ಮನಮ್ಮಲ್ಲೇ ವಾದವಿವಾದಮಾಡುತ್ತಾ ಖಿನ್ನ

**ಕಃ ಪುಮಾನ್ಸರ್ವಸತ್ತ್ವೇಭ್ಯಃ ಪುರಾಣಃ ಪುರುಷಃ ಪರಃ ।**
**ವಿಶುದ್ಧಃ ಪರಿಪೂರ್ಣಶ್ಚ ಶಾಶ್ವತಃ ಪರಮೇಶ್ವರಃ ॥ ೨೮ ॥**

**ಕೇನೈವ ಚಿತ್ರಕೃತ್ಯೇನ ಪ್ರಥಮಂ ಸೃಜ್ಯತೇ ಜಗತ್ ।**
**ತತ್ತ್ವಂ ವದ ಮಹಾಪ್ರಾಜ್ಞ ಸ್ವಸಂದೇಹಾಪನುತ್ತಯೇ ॥ ೨೯ ॥**

**ಏವಂ ಪೃಷ್ಟಸ್ತದಾ ಬ್ರಹ್ಮಾ ವಿಸ್ಮಯಸ್ಮೇರವೀಕ್ಷಣಃ ।**
**ದೇವಾನಾಂ ದಾನವಾನಾಂ ಚ ಮುನೀನಾಮಪಿ ಸನ್ನಿಧೌ ॥ ೩೦ ॥**

**ಉತ್ಥಾಯ ಸುಚಿರಂ ಧ್ಯಾತ್ವಾ ರುದ್ರ ಇತ್ಯುದ್ಧರನ್ಗಿರಂ ।**
**ಆನಂದಕ್ಲಿನ್ನಸರ್ವಾಂಗಃ ಕೃತಾಂಜಲಿರಭಾಷತ ॥ ೩೧ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ಮುನಿಪ್ರಸ್ತಾವವರ್ಣನಂ ನಾಮ ದ್ವಿತೀಯೋಽಧ್ಯಾಯಃ**

---

ರಾಗಿರುವೆವು. ನೀನಾದರೋ ಸರ್ವಲೋಕಗಳಿಗೂ ಒಡೆಯನು. ಸಮಸ್ತ ವಿಶ್ವಕ್ಕೂ ಕಾರಣಕರ್ತನು. ನಿನಗೆ ತಿಳಿಯದಿರುವ ವಿಚಾರವು ಒಂದೂ ಇರುವುದಿಲ್ಲ. ಆದುದರಿಂದ ನಮ್ಮ ಮೇಲೆ ದಯವಿಟ್ಟು ಉತ್ತಮವಾದ ವಸ್ತುಗಳಲ್ಲಿ ಶ್ರೇಷ್ಠನೂ, ಅನಾದಿಪುರುಷನೂ, ಶುದ್ಧನೂ, ಸಕಲಗುಣಪರಿಪೂರ್ಣನೂ, ನಾಶರಹಿತನೂ ಆದ ಪುರುಷನಾರು? ಯಾರಿಂದ ವಿಚಿತ್ರವಾದ ಈ ಜಗತ್ತು ಸೃಷ್ಟಿಸಲ್ಪಡುವುದು? ಎಲೈ ಪ್ರಾಜ್ಞನೇ, ಇದೆಲ್ಲವನ್ನೂ ನಮಗೆ ವಿಶದವಾಗಿ ವಿವರಿಸಿ ನಮ್ಮ ಸಂದೇಹವನ್ನು ಪರಿಹಾರಮಾಡು ಎಂದು ಪ್ರಾರ್ಥಿಸಿದರು.

೩೦-೩೧. ಆಗ ಬ್ರಹ್ಮನು, ಋಷಿಗಳು ಹೀಗೆ ಹೇಳಿದ ಮಾತನ್ನು ಕೇಳಿ ಆಶ್ಚರ್ಯದಿಂದ ಅರಳಿದ ಕಣ್ಣುಳ್ಳವನಾಗಿ ದೇವತೆಗಳು, ದಾವನರು ಮತ್ತು ಋಷಿಗಳ ಎದುರಿಗೆ ಎದ್ದು ನಿಂತುಕೊಂಡು ಕೊಂಚಕಾಲ ಧ್ಯಾನಮಾಡಿದನು. ಅನಂತರದಲ್ಲಿ ಸಂತೋಷದಿಂದ ಸಕಲಾವಯವಗಳಲ್ಲಿಯೂ ರೋಮಾಂಚವುಂಟಾಗಲು 'ರುದ್ರ' ಎಂಬ ದಿವ್ಯನಾಮವನ್ನುಚ್ಚರಿಸಿ, ಅಂಜಲಿಬದ್ಧನಾಗಿ ಋಷಿಗಳನ್ನು ಕುರಿತು ಇಂತೆಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಪೂರ್ವಭಾಗದಲ್ಲಿ ಮುನಿಪ್ರಸ್ತಾಪವರ್ಣನವೆಂಬ ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ

## ತೃತೀಯೋಽಧ್ಯಾಯಃ

---

॥ ಬ್ರಹ್ಮೋವಾಚ ॥

**ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।**
**ಆನಂದಂ ಯಸ್ಯ ವೈ ವಿದ್ವಾನ್ನ ಬಿಭೇತಿ ಕುತಶ್ಚನ ॥ ೧ ॥**

**ಯಸ್ಮಾತ್ಸರ್ವಮಿದಂ ಬ್ರಹ್ಮವಿಷ್ಣುರುದ್ರೇಂದ್ರಪೂರ್ವಕಂ ।**
**ಸಹ ಭೂತೇಂದ್ರಿಯೈಃ ಸರ್ವೈಃ ಪ್ರಥಮಂ ಸಂಪ್ರಸೂಯತೇ ॥ ೨ ॥**

---

### ಮೂರನೆಯ ಅಧ್ಯಾಯವು

೧-೪. ಬ್ರಹ್ಮನು ಋಷಿಗಳನ್ನು ಕುರಿತು ಹೇಳಲುಪಕ್ರಮಿಸಿದನು :—ಎಲೈ ಋಷಿಗಳೇ, ಕೇಳಿ. ಬ್ರಹ್ಮಸ್ವರೂಪವನ್ನು ಸಂಕ್ಷೇಪವಾಗಿ ವಿವರಿಸುವೆನು. ಆ ಬ್ರಹ್ಮನ ಸ್ವರೂಪವನ್ನು (ಅವ್ಯಕ್ತಸ್ವರೂಪವನ್ನು) ವಾಕ್ಯಗಳಿಂದ ವಿವರಿಸುವುದು ಸಾಧ್ಯವಿಲ್ಲ ಅಷ್ಟೇಕೆ? ಆ ಬ್ರಹ್ಮನು ಹೀಗಿರುವುದೆಂದು ಮನಸ್ಸಿನಲ್ಲಿ ಸಹ ಯೋಚಿಸುವುದಕ್ಕಾಗುವುದಿಲ್ಲ. ಎಂದರೆ ಸಾಧಾರಣ ಮನುಷ್ಯರ ವರ್ಣನೆಗೂ, ಊಹೆಗೂ ಆ ಬ್ರಹ್ಮಸ್ವರೂಪವು ನಿಲುಕುವುದಿಲ್ಲ. ಅನೇಕಕಾಲ ತಪಸ್ಸನ್ನು ಮಾಡುವ ಯೋಗಿಗಳಿಗೆ ಮಾತ್ರ ಸ್ವಲ್ಪಮಟ್ಟಿಗೆ ಆ ಸ್ವರೂಪವು ತಿಳಿಯುವುದು. ಅಂತಹ ಆನಂದಸ್ವರೂಪನಾದ ಬ್ರಹ್ಮನನ್ನು ತಿಳಿದ ಜ್ಞಾನಿಗಳಿಗೆ ಸಂಸಾರಸಂಬಂಧವಾದ ಕ್ಲೇಶಗಳಿಂದಲೂ, ಇತರ ವಿಧವಾದ ಕಾರಣಗಳಿಂದಲೂ ಯಾವ ಭಯವೂ ಉಂಟಾಗುವುದಿಲ್ಲ. ಪರಾಪರವಸ್ತುವನ್ನು ತಿಳಿಯುವುದರಿಂದ ಸರ್ವವನ್ನೂ ತಿಳಿದಂತಾಗುವುದು.

**ಕಾರಣಾನಾಂ ಚ ಯೋ ಧಾತಾ ಧ್ಯಾತಾ ಪರಮಕಾರಣಂ ।**
**ನ ಸಂಪ್ರಸೂಯತೇಽನ್ಯಸ್ಮಾತ್ಕುತಶ್ಚನ ಕದಾಚನ ॥ ೩ ॥**

**ಸರ್ವೈಶ್ವರ್ಯೇಣ ಸಂಪನ್ನೋ ನಾಮ್ನಾ ಸರ್ವೇಶ್ವರಃ ಸ್ವಯಂ ।**
**ಸರ್ವೈರ್ಮುಮುಕ್ಷುಭಿರ್ಧ್ಯೇಯಶ್ಶಂಭುರಾಕಾಶಮಧ್ಯಗಃ ॥ ೪ ॥**

**ಯೋಽಗ್ರೇ ಮಾಂ ವಿಧದೇ ಪುತ್ರಂ ಜ್ಞಾನಂ ಚ ಪ್ರಹಿಣೋತಿ ಮೇ ।**
**ತತ್ಪ್ರಸಾದಾನ್ಮಯಾ ಲಬ್ಧಂ ಪ್ರಾಜಾಪತ್ಯಮಿದಂ ಪದಂ ॥ ೫ ॥**

**ಈಶೋ ವೃಕ್ಷ ಇವ ಸ್ತಬ್ಧೋ ಯ ಏಕೋ ದಿವಿ ತಿಷ್ಠತಿ ।**
**ಯೇನೇದಮಖಿಲಂ ಪೂರ್ಣಂ ಪುರುಷೇಣ ಮಹಾತ್ಮನಾ ॥ ೬ ॥**

ಎಂದರೆ ಸರ್ವಜ್ಞರಾಗುವರು. ಸಕಲಸಿದ್ಧಿಗಳೂ ಅವರಿಗೆ ಕರಗತವಾಗಿರುವುವು. ಅಂಥವರಿಗೆ ಭಯಚಿಂತೆಗಳೆಂದರೇನು? ಆ ಬ್ರಹ್ಮನಿಂದಲೇ ಬ್ರಹ್ಮವಿಷ್ಣುರುದ್ರರೂ, ಸಮಸ್ತಪ್ರಾಣಿಗಳೂ, ಚರಾಚರವಸ್ತುಗಳೂ ಮೊದಲು ಉತ್ಪನ್ನವಾಗುವುವು. ಆ ಬ್ರಹ್ಮನೇ ಎಲ್ಲದಕ್ಕೂ ಕಾರಣನು. ಯೋಗನಿದ್ರೆಯಲ್ಲಿ ಧ್ಯಾನಾಸಕ್ತನಾಗಿದ್ದು ಅವನೇ ಈ ಪ್ರಪಂಚವನ್ನು ಸೃಷ್ಟಿಸುವನು. ಆ ಬ್ರಹ್ಮನಿಂದಲ್ಲದೆ ಯಾರಿಂದಲೂ ಯಾವ ಪದಾರ್ಥವೂ ಯಾವಾಗಲೂ ಉತ್ಪನ್ನವಾಗುವುದೇ ಇಲ್ಲ. ಅವನು ಷಡ್ಗುಣೈಶ್ವರ್ಯ ಸಂಪನ್ನನು. ಸಮಸ್ತ ಸಿದ್ಧಿಗಳಿಗೂ ಆಶ್ರಯಭೂತನು. ಅವನೇ ಸರ್ವೇಶ್ವರನೆಂದೂ, ಶಂಭುವೆಂದೂ ಪ್ರಸಿದ್ಧನು. ಆಕಾಶಮಧ್ಯದಲ್ಲಿರುವ (ಚಿದಾಕಾಶ ಅಥವಾ ಹೃದಯಾಕಾಶ) ಅವನನ್ನು ಮೋಕ್ಷಾಪೇಕ್ಷಿಗಳಾದ ಸಮಸ್ತಯೋಗಿಗಳೂ ಧ್ಯಾನಮಾಡುವರು.

[೧-೪ ಶ್ಲೋಕಗಳು.—ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕುತಶ್ಚನೇತಿ ॥ (ತೈತ್ತಿರೀಯ ಉಪನಿಷತ್ ಅಧ್ಯಾಯ ೨, ಅನು. ೯). ಇದರ ಅನುವಾದವು.]

೫. ಆ ಬ್ರಹ್ಮನೇ ಮೊದಲು ನನ್ನನ್ನು ಪುತ್ರನನ್ನಾಗಿ ಸೃಷ್ಟಿಸಿ ನನಗೆ ಜ್ಞಾನವನ್ನು ಅನುಗ್ರಹಿಸಿರುವನು. ಅವನ ಕೃಪೆಯಿಂದಲೇ ನನಗೆ ಈ ಬ್ರಹ್ಮಪದವಿಯು ಪ್ರಾಪ್ತವಾಗಿರುವುದು.

೬. ಅವನು ಮರದಂತೆ ಸ್ಥಿರನಾಗಿ ಹೆಚ್ಚುಕಡಿಮೆಯಿಲ್ಲದೆ ಒಬ್ಬನೇ ತಾನೇ ತಾನಾಗಿ (ಅಂತರಿಕ್ಷದಲ್ಲಿ) ಬುದ್ಧಿಯಲ್ಲಿ ಸ್ಥಿರನಾಗಿ ಇರುವನು. ಮಹಾಮಹಿಮನಾದ ಅವನು ಈ ಪ್ರಪಂಚವೆಲ್ಲವನ್ನೂ ವ್ಯಾಪಿಸಿಕೊಂಡಿರುವನು.

**ಏಕೋ ಬಹೂನಾಂ ಜಂತೂನಾಂ ನಿಷ್ಕ್ರಿಯಾಣಾಂ ಚ ಸಕ್ರಿಯಃ ।**
**ಯ ಏಕೋ ಬಹುಧಾ ಬೀಜಂ ಕರೋತಿ ಸ ಮಹೇಶ್ವರಃ ॥ ೭ ॥**

**ಜೀವೈರೇಭಿರಿಮಾಂಲ್ಲೋಕಾನ್ಸರ್ವಾನೀಶೋ ಯ ಈಶತೇ ।**
**ಯ ಏಕೋ ಭಗವಾನ್ರುದ್ರೋ ನ ದ್ವಿತೀಯೋಽಸ್ತಿ ಕಶ್ಚನ ॥ ೮ ॥**

**ಸದಾ ಜನಾನಾಂ ಹೃದಯೇ ಸಂನಿವಿಷ್ಟೋಽಪಿ ಯಃ ಪರೈಃ ।**
**ಅಲಕ್ಷ್ಯೋ ಲಕ್ಷಯನ್ವಿಶ್ವಮಧಿತಿಷ್ಠತಿ ಸರ್ವದಾ ॥ ೯ ॥**

---

["ವೃಕ್ಷ ಇವ ಸ್ತಬ್ಧೋ ದಿವಿ ತಿಷ್ಠತ್ಯೇಕಸ್ತೇನೇದಂ ಪುರುಷೇಣ ಸರ್ವಂ." (ತೈ. ಉ. ಅಧ್ಯಾಯ ೪, ಅನು. ೧೨) ಇದರಲ್ಲಿ ಪ್ರತಿಪಾದಿಸಲ್ಪಟ್ಟಿರುವುದು.

೭. ಅವನು ತಾನೇ ಯಾವ ಕೆಲಸವನ್ನೂ ಮಾಡದಿದ್ದರೂ ಎಲ್ಲ ಪ್ರಾಣಿಗಳ ಮಧ್ಯದಲ್ಲಿ ನೆಲಸಿ ಕಾರ್ಯವನ್ನು ಮಾಡುವವನಾಗಿರುವನು. ಅವನೊಬ್ಬನೇ ಎಲ್ಲರಿಗೂ ದೊಡ್ಡವನಾಗಿ ಈಶ್ವರನೆನಿಸಿಕೊಂಡು ಪ್ರಪಂಚವು ಸೃಷ್ಟಿಯಾಗುವುದಕ್ಕೆ ತಕ್ಕ ಕಾರಣಗಳನ್ನು ಯಾವಾಗಲೂ ಒದಗಿಸುವನು.

೮. ಅವನು ಯಾರಿಗೂ ಅಧೀನನಾಗದೆ ಈ ಜೀವರೆಲ್ಲರನ್ನೂ ತನ್ನ ಅಧೀನವಲ್ಲಿಟ್ಟುಕೊಂಡು ಈ ಎಲ್ಲಾ ಲೋಕಗಳನ್ನೂ ಆಳುತ್ತಾ ಇರುವನು. ಷಡ್ಗುಣೈಶ್ವರ್ಯಸಂಪನ್ನನಾದ ಈ ರುದ್ರನೊಬ್ಬನೇ ಎಲ್ಲಕ್ಕೂ ಅಧಿಪತಿಯಾಗಿರುವನು. ಎರಡನೆಯವನು ಯಾರೂ ಇಲ್ಲ.

["ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ." (ತೈ. ಸಂ. ಅ. ೬, ಅ. ೨.) ]

೯. ಇವನು ಯಾವಾಗಲೂ ಪ್ರಾಣಿಗಳ ಹೃದಯದಲ್ಲಿ ಅಂತರ್ಯಾಮಿಯಾಗಿ ನೆಲಸಿರುವವನಾದರೂ ಯಾರೂ ಇವನನ್ನು ನೋಡಲು ಸಾಧ್ಯವಿಲ್ಲದೆ ಇರುವುದು. ಇವನು ಮಾತ್ರ ಎಲ್ಲವನ್ನೂ ನೋಡುತ್ತಾ ಎಲ್ಲರಲ್ಲಿಯೂ ಇರುವನು.

[ಅಂತಃ ಪ್ರವಿಷ್ಟಃ ಶಾಸ್ತಾ ಜನಾನಾಂ ಸರ್ವಾತ್ಮಾ. (ತೈ. ಆ. ಅ. ೩, ಅ. ೧೧).].

**ಯಸ್ತು ಕಾಲಾತ್ಪ್ರಮುಕ್ತಾನಿ ಕಾರಣಾನ್ಯಖಿಲಾನ್ಯಪಿ ।**
**ಅನಂತಶಕ್ತಿರೇವೈಕೋ ಭಗವಾನಧಿತಿಷ್ಠತಿ ॥ ೧೦ ॥**

**ನ ಯಸ್ಯ ದಿವಸೋ ರಾತ್ರಿರ್ನ ಸಮಾನೋ ನ ಚಾಧಿಕಃ ।**
**ಸ್ವಾಭಾವಿಕೀ ಪರಾ ಶಕ್ತಿರ್ನಿತ್ಯಾ ಜ್ಞಾನಕ್ರಿಯೇ ಅಪಿ ॥ ೧೧ ॥**

**ಯದಿದಂ ಕ್ಷರಮವ್ಯಕ್ತಂ ಯದಸ್ಯನ್ಯತಮಕ್ಷರಂ ।**
**ತಾವುಭಾವಕ್ಷರಾತ್ಮಾನಾವೇಕೋ ದೇಹಃ ಸ್ವಯಂ ಹರಃ ॥ ೧೨ ॥**

**ಈಶತೇ ತದಭಿಧ್ಯಾನಾದ್ಯೋಜನಾಸತ್ತ್ವಭಾವನಃ ।**
**ಭೂಯೋ ಹ್ಯಸ್ಯ ಪಶೋರಂತೇ ವಿಶ್ವಮಾಯಾ ನಿವರ್ತತೇ ॥ ೧೩ ॥**

೧೦. ಈ ರುದ್ರನ ಶಕ್ತಿಯು ಅಪಾರವಾದುದು. ಕಾಲಾನುಗುಣವಾಗಿ ನಡೆಯುವ ಕಾರಣಗಳನ್ನು ಎಂದರೆ ಸೃಷ್ಟ್ಯಾದಿಗಳಿಗೆ ಕಾರಣವಾದ ಶಕ್ತಿವಿಶೇಷಗಳನ್ನೂ, ತನ್ನಧೀನದಲ್ಲಿಟ್ಟುಕೊಂಡಿರುವನು. ಅವನ ಆಜ್ಞೆಯಿಲ್ಲದೆ ಯಾವ ಕಾರ್ಯವೂ ನಡೆಯುವುದಿಲ್ಲ.

೧೧. ಈ ರುದ್ರನಿಗೆ ರಾತ್ರಿ, ದಿವಸ, ಹಗಲು ಎಂಬ ಕಾಲನಿಯಮವಿರುವುದಿಲ್ಲ. ಇವನಿಗಿಂತ ಹೆಚ್ಚಾದವನೂ ಇಲ್ಲ. ಸಮನಾದವನೂ ಇಲ್ಲ. ಎಲ್ಲರನ್ನೂ ಮೀರಿಸಿರುವ ಶಕ್ತಿಯು ಇವನ ಸ್ವಭಾವಗುಣವಾಗಿರುವುದು. ಅಲ್ಲದೆ ಜ್ಞಾನ, ಕ್ರಿಯೆ ಎಂಬ ಎರಡು ಶಕ್ತಿಗಳು ಇವನಿಗೆ ಯಾವಾಗಲೂ ಇರುವುವು.

೧೨. ನಾಶವನ್ನು ಹೊಂದುವ ಅವ್ಯಕ್ತವೆಂಬುವುದು, ನಾಶರಹಿತವಾದ ಅಕ್ಷರವೆಂಬುದು, ಎಂಬ ಎರಡು ರೂಪಗಳಿಂದಲೂ ಷಡ್ಗುಣೈಶ್ವರ್ಯಸಂಪನ್ನನಾದ ಈ ರುದ್ರನು ತಾನೇತಾನಾಗಿ ಪ್ರಕಾಶಿಸುತ್ತಿರುವನು.

೧೩. ತತ್ವಗಳನ್ನು ಭಾವನೆ (ಧ್ಯಾನ) ಮಾಡುವವನು ತನ್ನ ಮನಸ್ಸನ್ನು ಧ್ಯಾನಕ್ಕೆ ತಿರುಗಿಸಿ, ಈ ರುದ್ರನ ಧ್ಯಾನಮಾಡುವುದರಿಂದ ತನ್ನ ಪಶುಭಾವವನ್ನೂ, ಕೊನೆಗೆ ತನ್ನಲ್ಲಿರುವ ಎಲ್ಲಾ ಅಜ್ಞಾನವನ್ನೂ ಕಳೆದುಕೊಳ್ಳುವನು. ಮಾಯಾಮೋಹವಿನಿರ್ಮುಕ್ತನಾಗಿ ಜ್ಞಾನಸಂಪನ್ನನಾಗುವನು.

ಯಸ್ಮಿನ್ನ ಭಾಸತೇ ವಿದ್ಯುನ್ನ ಸೂರ್ಯೋ ನ ಚ ಚಂದ್ರಮಾಃ ।
ಯಸ್ಯ ಭಾಸಾ ವಿಭಾತೀದಮಿತ್ಯೇಷಾ ಶ್ವಾಶತೀ ಶ್ರುತಿಃ ॥ ೧೪ ॥

ಏಕೋ ದೇವೋ ಮಹಾದೇವೋ ವಿಜ್ಞೇಯಸ್ತು ಮಹೇಶ್ವರಃ ।
ನ ತಸ್ಯ ಪರಮಂ ಕಿಂಚಿತ್ಪದಂ ಸಮಧಿಗಮ್ಯತೇ ॥ ೧೫ ॥

ಅಯಮಾದಿರನಾದ್ಯಂತಸ್ಸ್ವಭಾವಾದೇವ ನಿರ್ಮಲಃ ।
ಸ್ವತಂತ್ರಃ ಪರಿಪೂರ್ಣಶ್ಚ ಸ್ವೇಚ್ಛಾಧೀನಶ್ಚರಾಚರಃ ॥ ೧೬ ॥

ಅಪ್ರಾಕೃತವಪುಃ ಶ್ರೀಮಾಂಲ್ಲಕ್ಷ್ಯಲಕ್ಷಣವರ್ಜಿತಃ ।
ಅಯಂ ಮುಕ್ತೋ ಮೋಚಕಶ್ಚ ಹ್ಯಕಾಲಃ ಕಾಲಚೋದಕಃ ॥ ೧೭ ॥

೧೪. ದೇವದೇವನಾದ ಈ ರುದ್ರನ ಸನ್ನಿಧಿಯಲ್ಲಿ ಸೂರ್ಯ, ಚಂದ್ರ, ಮಿಂಚು ಇವುಗಳ ಕಾಂತಿಯು ಸ್ವಲ್ಪವೂ ಪ್ರಕಾಶಿಸುವುದಿಲ್ಲ. ಆದರೆ ಆ ಈಶ್ವರನ ದಿವ್ಯಕಾಂತಿಯಿಂದಲೇ ಈ ಸೂರ್ಯಚಂದ್ರಾದಿಗಳಿಗೆ ಅವರ ಕಾಂತಿಯು ಉಂಟಾಗುವುದಲ್ಲದೆ, ಅವರಿಗೆ ಸ್ವತಃ ತೇಜಸ್ಸು ಬೇರೆ ಇಲ್ಲವೆಂದು ವೇದಗಳು ಸಾರುತ್ತಿವೆ.

೧೫. ಇವನೊಬ್ಬನೇ ದೇವನೆಂತಲೂ, ಮಹಾದೇವನೆಂತಲೂ, ಮಹೇಶ್ವರನೆಂತಲೂ ತಿಳಿಯಬೇಕು. ಎಲ್ಲರಿಗಿಂತಲೂ ಹೆಚ್ಚಾದ (ಐಶ್ವರ್ಯವು) ಸ್ವಾತಂತ್ರ್ಯವು ಇರುವುದರಿಂದ ಇವನನ್ನು ಮಹೇಶ್ವರನೆಂದು ಹೇಳುವರು. ಇವನು ಇರುವ ಉತ್ಕೃಷ್ಟವಾದ ಪದವಿಯಲ್ಲಿ ಒಂದು ಅಣುಮಾತ್ರ ಅಂಶವನ್ನೂ ಸಹ ಯಾರೂ ಹೊಂದಲಾಗುವುದಿಲ್ಲ.

೧೬-೧೭. ಈ ರುದ್ರನು ಆದಿಯಿಲ್ಲದವನು. ಆದ್ಯಂತವೆರಡೂ ಇಲ್ಲದವನು. ಪವಿತ್ರನಾಗಿರುವುದು ಇವನ ಹುಟ್ಟುಗುಣವಾಗಿರುವುದು. ಪ್ರಕೃತಿಸಂಬಂಧವಿಲ್ಲದ ಕಾಂತಿಯುಳ್ಳ ಶರೀರದಿಂದ ಇವನು ಬೆಳಗುತ್ತಿರುವನು. ಕಲ್ಮಷರಹಿತನು, ಸ್ವತಂತ್ರನು, ಗುಣಪರಿಪೂರ್ಣನು. ತನ್ನ ಇಚ್ಛೆಬಂದಂತೆ ಪ್ರವರ್ತಿಸಲು ಶಕ್ತಿಯುಳ್ಳವನು; ಎಂದರೆ ಪರಾಧೀನನಲ್ಲ. ಇವನಿಗೆ ಅಪ್ಪಣೆಮಾಡುವವರು ಯಾರೂ ಇಲ್ಲ. ಚರಾಚರ ಪ್ರಪಂಚವೆಲ್ಲವೂ ಇವನ ಸ್ವರೂಪವೇ ಆಗಿರುವುದು. ಇವನಿಗೆ ಸಮನಾದ ಪುರುಷನು ಮತ್ತೊಬ್ಬನಿಲ್ಲ. ಇವನಿಗೆ ಉಪಮಾನವಾದ ವಸ್ತುವೇ ಜಗತ್ತಿನಲ್ಲಿಲ್ಲ. ಈ ರುದ್ರನು ಸ್ವಯಂ ಮುಕ್ತಿದಶೆಯಲ್ಲಿದ್ದು ಇತರರನ್ನೂ ಸಹ ಸಂಸಾರಬಂಧನಗಳಿಂದ ಬಿಡಿಸಿ

**ಸರ್ವೋಽಪರಿಕೃತಾವಾಸಸ್ಸರ್ವಾವಾಸಶ್ಚ ಸರ್ವವಿತ್ ।**
**ಷಡ್ವಿಧಾಧ್ವಮಯಸ್ಯಾಸ್ಯ ಸರ್ವಸ್ಯ ಜಗತಃ ಪತಿಃ ॥ ೧೮ ॥**

**ಉತ್ತರೋತ್ತರಭೂತಾನಾಮುತ್ತರಶ್ಚ ನಿರುತ್ತರಃ ।**
**ಅನಂತಾನಂದಸಂದೋಹಮಕರಂದಮಧುವ್ರತಃ ॥ ೧೯ ॥**

**ಅಖಂಡಜಗದಂಡಾನಾಂ ಪಿಂಡೀಕರಣಪಂಡಿತಃ ।**
**ಔದಾರ್ಯವೀರ್ಯಗಾಂಭೀರ್ಯಮಾಧುರ್ಯಮಕರಾಲಯಃ ॥ ೨೦ ॥**

**ನೈವಾಸ್ಯ ಸದೃಶಂ ವಸ್ತು ನಾಧಿಕಂ ಚಾಪಿ ಕಿಂಚನ ।**
**ಅತುಲಃ ಸರ್ವಭೂತಾನಾಂ ರಾಜರಾಜಶ್ಚ ತಿಷ್ಠತಿ ॥ ೨೧ ॥**

---

ಮುಕ್ತಿಯನ್ನು ಕೊಡಲು ಸಮರ್ಥನಾಗಿರುವನು. ಇವನು ಕಾಲಕ್ಕೆ ಅಧೀನನಲ್ಲ. ಇವನೇ ಕಾಲವನ್ನು ಪ್ರೇರಿಸತಕ್ಕವನು. ಎಲ್ಲರ ಮೇಲೂ ತಾನು ವಾಸಮಾಡುತ್ತಿದ್ದರೂ, ಎಂದರೆ ಎಲ್ಲರ ಮೇಲೆ ತನಗೆ ಅಧಿಕಾರವಿದ್ದರೂ ತಾನೇ ಎಲ್ಲರಲ್ಲಿಯೂ ಇದ್ದುಕೊಂಡು ಎಲ್ಲವನ್ನೂ ತಿಳಿಯುತ್ತಿರುವನು. ಆರುವಿಧವಾದ ಅಧ್ವಗಳಿಂದ ಕೂಡಿರುವ ಈ ಜಗತ್ತೆಲ್ಲಕ್ಕೂ ತಾನೇ ಅಧಿಪತಿಯಾಗಿರುವನು.

೧೯. ಒಂದಕ್ಕಿಂತ ಒಂದು ಶ್ರೇಷ್ಠವೆನಿಸಿಕೊಂಡಿರುವ ಪ್ರಾಣಿಗಳಿಗಿಂತಲೂ ತಾನು ಮೇಲೆನಿಸಿಕೊಂಡು ತನಗಿಂತಲೂ ಶ್ರೇಷ್ಠರು ಯಾರೂ ಇಲ್ಲದೆ ಇರುವನು. ಅಪಾರವಾದ ಸಂತೋಷವೆಂಬ ಹೂವಿನ ರಸದಲ್ಲಿ ದುಂಬಿಯಂತೆ ಯಾವಾಗಲೂ ಆನಂದವನ್ನು ಅನುಭವಿಸುತ್ತಿರುವನು.

೨೦. ಅಖಿಲಾಂಡಕೋಟಿ ಬ್ರಹ್ಮಾಂಡಗಳನ್ನು ಒಂದೇ ಉಂಡೆಯಂತೆ ಮಾಡುವುದರಲ್ಲಿ ನಿಪುಣನಾಗಿರುವನು. ಎಂದರೆ ಸಮಸ್ತ ವಿಶ್ವವೂ ನಾಮರೂಪಾದಿಗಳಿಂದ ರಹಿತವಾಗಿ ತನ್ನಲ್ಲಿ ಲಯ ಹೊಂದುವಂತೆ ಮಾಡಲು ಸಮರ್ಥನಾಗಿರುವನು. ಇಂತಹ ಈ ರುದ್ರನಿಗೆ ಇರುವ ಶೌರ್ಯ, ಔದಾರ್ಯ, ಗಾಂಭೀರ್ಯ, ಮೃದುತ್ವ ಎಂಬ ಗುಣಗಳು ಸಮುದ್ರದಲ್ಲಿ ನೀರು ತುಂಬಿರುವಂತೆ ಬಹಳವಾಗಿರುವುವು.

೨೧. ಈ ರುದ್ರನಿಗೆ ಸಮಾನವಾದ ಪದಾರ್ಥವಾಗಲೀ, ಇವನಿಗಿಂದ ಹೆಚ್ಚಾದ ಪದಾರ್ಥವಾಗಲೀ ಇಲ್ಲ. ಎಲ್ಲಾ ಪ್ರಾಣಿಗಳ ಮಧ್ಯದಲ್ಲಿ ಇವನಿಗೆ ಹೋಲಿಕೆಯುಳ್ಳವರು ಯಾರೂ ಇಲ್ಲದ ಕಾರಣ ಇವನು ಎಲ್ಲರಿಗೂ ಶ್ರೇಷ್ಠನಾದ ರಾಜನಾಗಿರುತ್ತಾನೆ.

**ಅನೇನ ಚಿತ್ರಕೃತ್ಯೇನ ಪ್ರಥಮಂ ಸೃಜ್ಯತೇ ಜಗತ್ ।**
**ಅಂತಕಾಲೇ ಪುನಶ್ಚೇದಂ ತಸ್ಮಿನ್ಪ್ರಲಯಮೇಷ್ಯತಿ ॥ ೨೨ ॥**

**ಅಸ್ಯ ಭೂತಾನಿ ವಶ್ಯಾನಿ ಅಯಂ ಸರ್ವನಿಯೋಜಕಃ ।**
**ಅಯಂ ತು ಪರಯಾ ಭಕ್ತ್ಯಾ ದೃಶ್ಯತೇ ನಾನ್ಯಥಾ ಕ್ವಚಿತ್ ॥ ೨೩ ॥**

**ವ್ರತಾನಿ ಸರ್ವದಾನಾನಿ ತಪಾಂಸಿ ನಿಯಮಾಸ್ತಥಾ ।**
**ಕಥಿತಾನಿ ಪುರಾ ಸದ್ಭಿರ್ಭಾವಾರ್ಥಂ ನಾತ್ರ ಸಂಶಯಃ ॥ ೨೪ ॥**

**ಹರಿಶ್ಚಾಹಂ ಚ ರುದ್ರಶ್ಚ ತಥಾನ್ಯೇ ಚ ಸುರಾಸುರಾಃ ।**
**ತಪೋಭಿರುಗ್ರೈರದ್ಯಾಪಿ ತಸ್ಯ ದರ್ಶನಕಾಂಕ್ಷಿಣಃ ॥ ೨೫ ॥**

**ಅದೃಶ್ಯಃ ಪತಿತೈರ್ಮೂಢೈರ್ದುರ್ಜನೈರಪಿ ಕುತ್ಸಿತೈಃ ।**
**ಭಕ್ತೈರಂತರ್ಬಹಿಶ್ಚಾಪಿ ಪೂಜ್ಯಃ ಸಂಭಾಷ್ಯ ಏವ ಚ ॥ ೨೬ ॥**

೨೨. ಇವನು ಚಿತ್ರವನ್ನು ಬರೆದಂತೆ ಜಗತ್ತೆಲ್ಲವನ್ನೂ ಮೊದಲು ಸೃಷ್ಟಿಮಾಡಿ ಪ್ರಳಯಕಾಲವು ಬಂದಾಗ ಆ ಜಗತ್ತೆಲ್ಲವನ್ನೂ ತನ್ನಲ್ಲಿಯೇ ಅಡಗಿಸಿಕೊಳ್ಳುವನು.

೨೩. ಈ ರುದ್ರನಿಗೆ ಪ್ರಾಣಿಗಳೆಲ್ಲವೂ ಅಧೀನದಲ್ಲಿರುವುವು. ಇವನು ಎಲ್ಲಾ ಪ್ರಾಣಿಗಳನ್ನೂ ಆಯಾಯ ರೀತಿಯಲ್ಲಿರುವಂತೆ ಹತೋಟಿಯಲ್ಲಿರಿಸಿರುವನು. ಈ ರುದ್ರನನ್ನು ಉತ್ತಮವಾದ ಭಕ್ತಿಯಿಂದ ತಿಳಿಯಬಹುದೇ ಹೊರತು ಬೇರೆ ಯಾವ ಉಪಾಯದಿಂದಲೂ ಹೊಂದಲು, ಕಾಣಲು, ತಿಳಿಯಲು ಸಹ ಆಗುವುದಿಲ್ಲ.

೨೪. ಈ ರುದ್ರನ ಭಾವನೆಯು ಮನಸ್ಸಿನಲ್ಲಿ ಹುಟ್ಟುವುದಕ್ಕಾಗಿ ಸತ್ಪುರುಷರು ವ್ರತಗಳನ್ನೂ, ದಾನಗಳನ್ನೂ, ತಪಸ್ಸುಗಳನ್ನೂ ಮತ್ತು ನಿಯಮಗಳನ್ನೂ ಬಹಳ ವಾಗಿ ಹೇಳಿರುವರು. ಇದರಲ್ಲಿ ಸಂಶಯವೇನಿಲ್ಲ.

೨೫. ವಿಷ್ಣುವೂ, ಬ್ರಹ್ಮನಾದ ನಾನೂ, ಈ ರುದ್ರನೂ, ಇನ್ನೂ ಇತರ ದೇವತೆಗಳೂ ಕೂಡ ಘೋರವಾದ ತಪಸ್ಸನ್ನು ಮಾಡುತ್ತಾ ಈಗಲೂ ಅವನ ದರ್ಶನ ವನ್ನು ಅಪೇಕ್ಷಿಸುತ್ತಾ ಇರುತ್ತೇವೆ.

೨೬. ತಮ್ಮ ತಮ್ಮ ಜಾತಿ, ಕುಲ, ವರ್ಣಾಶ್ರಮಧರ್ಮಗಳಿಂದ ಪತಿತರೂ, ದಡ್ಡರೂ, ದುಷ್ಟರೂ, ಕೆಟ್ಟಗುಣವುಳ್ಳವರೂ ಇವನನ್ನು ನೋಡಲಾರರು. ತುಂಬಾ

**ತದಿದಂ ತ್ರಿವಿಧಂ ರೂಪಂ ಸ್ಥೂಲಂ ಸೂಕ್ಷ್ಮಂ ತತಃ ಪರಂ ।**
**ಅಸ್ಮದಾದ್ಯಮರೈರ್ದೃಶ್ಯಂ ಸ್ಥೂಲಂ ಸೂಕ್ಷ್ಮಂ ತು ಯೋಗಿಭಿಃ ॥ ೨೭ ॥**

**ತತಃ ಪರಂ ತು ಯನ್ನಿತ್ಯಂ ಜ್ಞಾನಮಾನಂದಮವ್ಯಯಂ ।**
**ತನ್ನಿಷ್ಠೈಸ್ತತ್ಪರೈರ್ಭಕ್ತೈರ್ದೃಶ್ಯಂ ತದ್ವ್ರತಮಾಶ್ರಿತೈಃ ॥ ೨೮ ॥**

**ಬಹುನಾತ್ರ ತಮುಕ್ತೇನ ಗುಹ್ಯಾದ್ಗುಹ್ಯತರಂ ಪರಂ ।**
**ಶಿವೇ ಭಕ್ತಿರ್ನ ಸಂದೇಹಸ್ತಯಾ ಯುಕ್ತೋ ವಿಮುಚ್ಯತೇ ॥ ೨೯ ॥**

**ಪ್ರಸಾದಾದೇವ ಸಾ ಭಕ್ತಿಃ ಪ್ರಸಾದೋ ಭಕ್ತಿಸಂಭವಃ ।**
**ಯಥಾ ಚಾಂಕುರತೋ ಬೀಜಂ ಬೀಜತೋ ವಾ ಯಥಾಂಕುರಃ ॥ ೩೦ ॥**

ಭಕ್ತಿಯುಳ್ಳವರು ಮಾತ್ರ ತಮ್ಮ ತಮ್ಮ ಮನಸ್ಸಿನ ಒಳಗೂ ಹೊರಗೂ ಇವನನ್ನು ಕಂಡು ಪೂಜಿಸಬಹುದು. ಇವನ ಸಂಗಡ ಮಾತುಗಳನ್ನು ಆಡಬಹುದು.

೨೭. ಈ ರುದ್ರನಿಗೆ ಸ್ಥೂಲ, ಸೂಕ್ಷ್ಮ, ಪರವೆಂದು ಮೂರು ರೂಪಗಳುಂಟು. ಈ ಮೂರು ರೂಪಗಳಲ್ಲಿ ಸ್ಥೂಲರೂಪವನ್ನು ದೇವತೆಗಳಾದ ನಮ್ಮಂಥವರು ಕಾಣ ಬಹುದು. ಯೋಗಿಗಳು ಸೂಕ್ಷ್ಮವಾದ ರೂಪವನ್ನು ಕಾಣುವರು.

೨೮. ಹೆಚ್ಚು ಹೇಳಿ ಪ್ರಯೋಜನವೇನು? ಜ್ಞಾನನಿಷ್ಠೆಯನ್ನು ಹೊಂದಿ ಆ ರುದ್ರನ ಸೇವೆಯಲ್ಲಿ ಆಸಕ್ತರಾಗಿ, ಅವನ ಭಕ್ತರಾಗಿ, ಅವನ ವ್ರತವನ್ನು ತಪ್ಪದೆ ಮಾಡತಕ್ಕವರು ಮಾತ್ರ ಈ ರುದ್ರನ ಸ್ಥೂಲಸೂಕ್ಷ್ಮರೂಪಗಳಿಗಿಂತ ಬೇರೆ ಯಾಗಿಯೂ, ಸತ್ಯಜ್ಞಾನಾನಂದರೂಪವಾದುದೂ, ಪರಿಪೂರ್ಣವಾದುದೂ ಆದ ಮೂರನೆಯ ಪರರೂಪವನ್ನು ಕಾಣಬಹುದು.

೨೯. ಶಿವನ ವಿಷಯದಲ್ಲಿ ಭಕ್ತಿಯು ಉಂಟಾದರೇನೇ ಪುರುಷನು ಮುಕ್ತಿ ಯನ್ನು ಹೊಂದುವನು. ಇದು ರಹಸ್ಯಗಳಲ್ಲಿಯೂ ಅತಿರಹಸ್ಯವಾದುದು. ಈ ವಿಷಯದಲ್ಲಿ ಹೆಚ್ಚೇನೂ ಹೇಳಬೇಕಾಗಿಲ್ಲ.

೩೦. ಮುಕ್ತಿಯನ್ನುಂಟುಮಾಡುವಷ್ಟು ಮಟ್ಟಿನ ಭಕ್ತಿಯು ಶಿವನ ಅನು ಗ್ರಹದಿಂದಲೇ ಉಂಟಾಗುವುದು. ಶಿವನನ್ನು ಭಕ್ತಿಯಿಂದ ಸೇವಿಸಿದರೆ ಶಿವನ ಅನುಗ್ರಹವು ಉಂಟಾಗುವುದು. ಹೀಗೆ ಭಕ್ತಿ, ಅನುಗ್ರಹ ಇವೆರಡರ ವಿಷಯದಲ್ಲಿ

**ಪ್ರಸಾದಪೂರ್ವಿಕಾ ಏವ ಪಶೋಸ್ಸರ್ವತ್ರ ಸಿದ್ಧಯಃ ।**
**ಸ ಏವ ಸಾಧನೈರಂತೇ ಸರ್ವೈರಪಿ ಚ ಸಾಧ್ಯತೇ ॥ ೩೧ ॥**

**ಪ್ರಸಾದಸಾಧನಂ ಧರ್ಮಸ್ಸ ಚ ವೇದೇನ ದರ್ಶಿತಃ ।**
**ತದಭ್ಯಾಸವಶಾತ್ಸಾಮ್ಯಂ ಪೂರ್ವಯೋಃ ಪುಣ್ಯಪಾಪಯೋಃ ॥ ೩೨ ॥**

**ಸಾಮ್ಯಾತ್ಪ್ರಸಾದಸಂಪರ್ಕೋ ಧರ್ಮಸ್ಯಾತಿಶಯಸ್ತತಃ ।**
**ಧರ್ಮಾತಿಶಯಮಾಸಾದ್ಯ ಪಶೋಃ ಪಾಪಪರಿಕ್ಷಯಃ ॥ ೩೩ ॥**

**ಏವಂ ಪ್ರಕ್ಷೀಣಪಾಪಸ್ಯ ಬಹುಭಿರ್ಜನ್ಮಭಿಃ ಕ್ರಮಾತ್ ।**
**ಸಾಂಬೇ ಸರ್ವೇಶ್ವರೇ ಭಕ್ತಿರ್ಜ್ಞಾನಪೂರ್ವಾ ಪ್ರಜಾಯತೇ ॥ ೩೪ ॥**

---

ಬೀಜವಿಲ್ಲದೆ ಗಿಡದ ಮೊಳಕೆಯೂ, ಗಿಡದ ಮೊಳಕೆಯು ಇಲ್ಲದೆ ಗಿಡದ ಬೀಜವೂ ಇರುವುದಿಲ್ಲವೆಂಬ ನ್ಯಾಯದಂತೆ ಅನ್ಯೋನ್ಯಾಶ್ರಯವು ಇರುವುದು.

೩೧. ಪಶುಗಳಿಗೆ ಶಿವನ ಅನುಗ್ರಹವನ್ನು ಹೊಂದಿದರೇ ಸಿದ್ಧಿಗಳು ಉಂಟಾಗುವುವು ಆದ್ದರಿಂದ ಎಲ್ಲಾ ಕಡೆಯಲ್ಲಿಯೂ ಎಲ್ಲರೂ ಸಿದ್ಧಿಯನ್ನು ಹೊಂದುವುದಕ್ಕಾಗಿ ಶಿವನ ಅನುಗ್ರಹವನ್ನು ಹೇಗಾದರೂ ಸಾಧಿಸಲೇಬೇಕಾಗಿರುವುದು. ಆದುದರಿಂದ ಅದಕ್ಕೆ ತಕ್ಕ ಉಪಾಯವನ್ನೂ, ಮೇಲೆ ಹೇಳಿರುವ ಅನ್ಯೋನ್ಯಾಶ್ರಯವೆಂಬ ದೋಷವು ಪರಿಹಾರವಾಗಲು ತಕ್ಕ ಉಪಾಯವನ್ನೂ ಹೇಳುವರು.

೩೨-೩೪. ಶಿವನ ಅನುಗ್ರಹವನ್ನು ಹೊಂದುವುದಕ್ಕಾಗಿ ವೇದದಲ್ಲಿ ಹೇಳಿರುವ ಧರ್ಮವನ್ನು ತಿಳಿದುಕೊಂಡು ಅದನ್ನು ಆಚರಿಸಬೇಕು. ಹೀಗೆ ಧರ್ಮಾಚರಣೆಯ ಅಭ್ಯಾಸದಿಂದ ಹಿಂದಿನ ಪುಣ್ಯಪಾಪಗಳೆರಡೂ ಸಮನಾದ ಸ್ಥಿತಿಗೆ ಬರುವುವು. ಬರಬರುತ್ತಾ ಪಾಪವು ಕಡಿಮೆಯಾಗಿ ಪುಣ್ಯವು ಕೊಂಚಮಟ್ಟಿಗಾದರೂ ಹೆಚ್ಚಾದಾಗ ಶಿವನ ಅನುಗ್ರಹವು ಉಂಟಾಗುವುದು. ಅನಂತರದಲ್ಲಿ ಹೆಚ್ಚಾಗಿ ಧರ್ಮವನ್ನು ಅಚರಿಸಬೇಕೆಂಬ ಬುದ್ಧಿಯು ಹುಟ್ಟಿ, ಅಜ್ಞಾನಿಯಾದ ಪಶುವಿನ ಎಂದರೆ ಜ್ಞಾನರಹಿತನಾಗಿ ಪಶುವಿನಂತಿರುವ ಪುರುಷನ ಪಾಪವೆಲ್ಲವೂ ನಾಶವಾಗುವುದು. ಹೀಗೆಯೇ ಜನ್ಮಜನ್ಮಗಳಲ್ಲಿ ಕ್ರಮಕ್ರಮವಾಗಿ ಪಾಪವು ನಾಶವಾಗುತ್ತಾ, ಜ್ಞಾನವು ಹೆಚ್ಚಿ ತನ್ಮೂಲಕವಾಗಿ ಎಲ್ಲಕ್ಕೂ ಅಧಿಪತಿಯಾದ ಶಿವನಲ್ಲಿ ಹೆಚ್ಚಾದ ಭಕ್ತಿಯು ಉಂಟಾಗುವುದು. ಇದರಿಂದ ಹಿಂದೆ ಹೇಳಿದ ಅನ್ಯೋನಾಶ್ರಯದೋಷವು ಪರಿಹೃತವಾಗುತ್ತದೆ.

ಭಾವಾನುಗುಣಮೀಶಸ್ಯ ಪ್ರಸಾದೋ ವ್ಯತಿರಿಚ್ಯತೇ ।
ಪ್ರಸಾದಾತ್ಕರ್ಮಸಂತ್ಯಾಗಃ ಫಲತೋ ನ ಸ್ವರೂಪತಃ ॥ ೩೫ ॥

ತಸ್ಮಾತ್ಕರ್ಮಫಲತ್ಯಾಗಾಚ್ಛಿವಧರ್ಮಾನ್ವಯಃ ಶುಭಃ ।
ಸ ಚ ಗುರ್ವನಪೇಕ್ಷಶ್ಚ ತದಪೇಕ್ಷ ಇತಿ ದ್ವಿಧಾ ॥ ೩೬ ॥

ತತ್ರಾನಪೇಕ್ಷಾತ್ಸಾಪೇಕ್ಷೋ ಮುಖ್ಯಃ ಶತಗುಣಾಧಿಕಃ ।
ಶಿವಧರ್ಮಾನ್ವಯಸ್ಯಾಸ್ಯ ಶಿವಜ್ಞಾನಸಮನ್ವಯಃ ॥ ೩೭ ॥

ಜ್ಞಾನಾನ್ವಯವಶಾತ್ಪುಂಸಃ ಸಂಸಾರೇ ದೋಷದರ್ಶನಂ ।
ತತೋ ವಿಷಯವೈರಾಗ್ಯಂ ವೈರಾಗ್ಯಾದ್ಭಾವಸಾಧನಂ ॥ ೩೮ ॥

೩೫. ಎಷ್ಟುಮಟ್ಟಿನ ಭಕ್ತಿಯಿಂದ ಶಿವನನ್ನು ಸೇವಿಸುವನೋ ಅದಕ್ಕನುಸಾರವಾಗಿ ಶಿವನ ಅನುಗ್ರಹವೂ ಹೆಚ್ಚುಕಡಿಮೆಯಾಗುವುದು. ಶಿವನ ಅನುಗ್ರಹವು ಹೆಚ್ಚುತ್ತಾ ಕರ್ಮಸನ್ಯಾಸವನ್ನು ಮಾಡಲು ಬುದ್ಧಿಹುಟ್ಟುವುದು. ಕರ್ಮಸನ್ಯಾಸವೆಂದರೆ ಮಾಡಬೇಕಾದ ಕೆಲಸಗಳೆಲ್ಲವನ್ನೂ ಬಿಡುವುದೆಂದಲ್ಲ ಕೆಲಸಗಳನ್ನು ಮಾಡಿ, ಅದರ ಫಲವನ್ನು ಈಶ್ವರನಿಗೆ ಅರ್ಪಿಸುವುದು ಅಥವಾ ಫಲಾಭಿಸಂಧಿಯಿಲ್ಲದೆ ಕರ್ಮ ಮಾಡುವುದು. ಇದು ಕರ್ಮಸನ್ಯಾಸವೆನಿಸುವುದು.

೩೬. ನಿಷ್ಕಾಮಕರ್ಮವನ್ನು ಮಾಡುವುದರಿಂದ ಮಂಗಳಕರವಾದ ಶಿವಧರ್ಮಾಚರಣೆಯಲ್ಲಿ ಬುದ್ಧಿಯು ಹುಟ್ಟುವುದು. ಗುರುವನ್ನು ಸೇವಿಸಿ ಅವನಿಂದ ಧರ್ಮಗಳನ್ನು ತಿಳಿದು ಆಚರಿಸುವುದು ಒಂದು ವಿಧ ಗುರುವಿನ ಅಪೇಕ್ಷೆಯಿಲ್ಲದೆ ಶಿವಧರ್ಮಗಳನ್ನು ತಿಳಿದು ಆಚರಿಸುವುದು ಮತ್ತೊಂದು ವಿಧ. ಈರೀತಿ ಇರುವ ಎರಡು ವಿಧಗಳಲ್ಲಿ ಗುರುವನ್ನು ಸೇವಿಸಿ, ಅವನಿಂದ ಧರ್ಮವನ್ನು ತಿಳಿದು ಅದನ್ನು ಆಚರಿಸುವುದೇ ಮುಖ್ಯವಾಗಿಯೂ, ಹೆಚ್ಚು ಗುಣಗಳುಳ್ಳದ್ದಾಗಿಯೂ ಇರುವುದು.

೩೭-೩೮. ಹೀಗೆ ಶಿವಧರ್ಮಾಚರಣೆಯುಳ್ಳವನಿಗೆ ಶಿವಜ್ಞಾನವುಂಟಾಗುವುದು. ಆ ಶಿವಜ್ಞಾನದಿಂದ ಸಂಸಾರದಲ್ಲಿರುವ ದೋಷಗಳೆಲ್ಲವೂ ಚೆನ್ನಾಗಿ ತಿಳುವಳಿಕೆಗೆ ಬಂದು, ಅದರಿಂದ ಭೋಗಪದಾರ್ಥಗಳಲ್ಲಿ ವೈರಾಗ್ಯವು ಹುಟ್ಟುವುದು. ಈ ವೈರಾಗ್ಯದಿಂದ ಶಿವಭಾವನೆಯನ್ನು ಸಾಧಿಸಲು ಅನುಕೂಲವಾಗುವುದು.

ಭಾವಸಿದ್ಧ್ಯುಪಪನ್ನಸ್ಯ ಧ್ಯಾನೇ ನಿಷ್ಠಾ ನ ಕರ್ಮಣಿ ।
ಜ್ಞಾನಧ್ಯಾನಾಭಿಯುಕ್ತಸ್ಯ ಪುಂಸೋ ಯೋಗಃ ಪ್ರವರ್ತತೇ ॥ ೩೯ ॥

ಯೋಗೇನ ತು ಪರಾ ಭಕ್ತಿಃ ಪ್ರಸಾದಸ್ತದನಂತರಂ ।
ಪ್ರಸಾದಾನ್ಮುಚ್ಯತೇ ಜಂತುರ್ಮುಕ್ತಃ ಶಿವಸಮೋ ಭವೇತ್ ॥ ೪೦ ॥

ಅನುಗ್ರಹಪ್ರಕಾರಸ್ಯ ಕ್ರಮೋಽಯಮವಿವಕ್ಷಿತಃ ।
ಯಾದೃಶೀ ಯೋಗ್ಯತಾ ಪುಂಸಸ್ತಸ್ಯ ತಾದೃಗನುಗ್ರಹಃ ॥ ೪೧ ॥

ಗರ್ಭಸ್ಥೋ ಮುಚ್ಯತೇ ಕಶ್ಚಿಜ್ಜಾಯಮಾನಸ್ತಥಾಪರಃ ।
ಬಾಲೋ ವಾ ತರುಣೋ ವಾಥ ವೃದ್ಧೋ ವಾ ಮುಚ್ಯತೇಽಪರಃ ॥ ೪೨ ॥

೩೯. ಶಿವನ ಭಾವನೆಯು ಚೆನ್ನಾಗಿ ಉಂಟಾಗಿ, ಮನಸ್ಸು ಶುದ್ಧಿಯಾದಲ್ಲಿ ಇವನು ಧ್ಯಾನವನ್ನು ಯಾವಾಗಲೂ ಅಭ್ಯಾಸಮಾಡುತ್ತಾ ಕರ್ಮಗಳನ್ನು ಬಿಡಬೇಕು. ಶಿವಜ್ಞಾನ, ಶಿವಧ್ಯಾನ, ಇವುಗಳಲ್ಲಿ ಸಂಪೂರ್ಣವಾದ ತಿಳಿವಳಿಕೆಯುಳ್ಳವನಿಗೆ ಯೋಗಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಶಿವನನ್ನು ಸವಿಕಲ್ಪ, ನಿರ್ವಿಕಲ್ಪಸಮಾಧಿಗಳಿಂದ ಧ್ಯಾನಮಾಡುವ ಯೋಗ್ಯತೆಯು ಉಂಟಾಗುವುದು.

೪೦. ಯೋಗಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಶಿವನನ್ನು ಧ್ಯಾನದಿಂದ ಸಾಕ್ಷಾತ್ಕಾರಮಾಡುವವನಿಗೆ ಉತ್ತಮವಾದ ಭಕ್ತಿಯೂ, ಆ ಭಕ್ತಿಯಿಂದ ಶಿವನ ಅನುಗ್ರಹವೂ ಉಂಟಾಗುವುದು. ಶಿವನ ಅನುಗ್ರಹದಿಂದ ಪ್ರಾಣಿಯು ಮುಕ್ತಿಯನ್ನು ಹೊಂದಿ ಶಿವನಿಗೆ ಸಮಾನನಾಗುವನು.

೪೧. ಶಿವನ ಅನುಗ್ರಹ ಪ್ರಕಾರವು ಅನೇಕ ವಿಧವಾಗಿರುವುದು. ಯಾವ ಪುರುಷನಿಗೆ ಯೋಗ್ಯತೆಯು, ಎಂದರೆ ಶಿವನಲ್ಲಿ ಭಕ್ತಿಯು ಎಷ್ಟುಮಟ್ಟಿಗೆ ಇರುವುದೋ ಅವನಿಗೆ ಅವನ ಭಕ್ತಿಗನುಸಾರವಾದ ಅನುಗ್ರಹವು ಉಂಟಾಗುವುದು. ಆದುದರಿಂದ ಶಿವನ ಅನುಗ್ರಹವು ಒಬ್ಬ ಪುರುಷನಿಗೆ ಎಷ್ಟರಮಟ್ಟಿಗೆ ಆಗುವುದೆಂದು ನಿರ್ಧರಿಸಿ ಹೇಳುವುದಕ್ಕಾಗುವುದಿಲ್ಲ.

೪೨-೪೫. ಒಬ್ಬನು ಗರ್ಭದಲ್ಲಿರುವಾಗಲೇ ಮುಕ್ತನಾಗುವನು. ಇನ್ನೊಬ್ಬನು ಹುಟ್ಟುತ್ತಿರುವಾಗಲೇ ಮುಕ್ತನಾಗುವನು. ಮತ್ತೊಬ್ಬನು ಹುಡುಗನಾಗಲಿ, ಪ್ರಾಯದವನಾಗಲಿ, ಮುದುಕನೇ ಆಗಲಿ ಮುಕ್ತಿಯನ್ನು ಹೊಂದುವನು. ಹಾಗೆಯೇ

ತಿರ್ಯಗ್ಯೋನಿಗತಃ ಕಶ್ಚಿನ್ಮುಚ್ಯತೇ ನಾರಕೋऽಪರಃ ।
ಅಪರಸ್ತು ಪದಂ ಪ್ರಾಪ್ತೋ ಮುಚ್ಯತೇ ಸ್ವಪದಕ್ಷಯೇ ॥ ೪೩ ॥

ಕಶ್ಚಿತ್ಕ್ಷೀಣಪದೋ ಭೂತ್ವಾ ಪುನರಾವೃತ್ಯ ಮುಚ್ಯತೇ ।
ಕಶ್ಚಿದಧ್ವಗತಸ್ತಸ್ಮಿನ್ಸ್ಥಿತ್ವಾ ಸ್ಥಿತ್ವಾ ವಿಮುಚ್ಯತೇ ॥ ೪೪ ॥

ತಸ್ಮಾನ್ನೈಕಪ್ರಕಾರೇಣ ನರಾಣಾಂ ಮುಕ್ತಿರಿಷ್ಯತೇ ।
ಜ್ಞಾನಭಾವಾನುರೂಪೇಣ ಪ್ರಸಾದೇನೈವ ನಿರ್ವೃತಿಃ ॥ ೪೫ ॥

ತಸ್ಮಾದಸ್ಯ ಪ್ರಸಾದಾರ್ಥಂ ವಾಙ್ಮನೋದೋಷವರ್ಜಿತಾಃ ।
ಧ್ಯಾಯಂತಶ್ಶಿವಮೇವೈಕಂ ಸದಾರತನಯಾಗ್ನಯಃ ॥ ೪೬ ॥

ತನ್ನಿಷ್ಠಾಸ್ತತ್ಪರಾಸ್ಸರ್ವೇ ತದ್ಯುಕ್ತಾಸ್ತದುಪಾಶ್ರಯಾಃ ।
ಸರ್ವಕ್ರಿಯಾಃ ಪ್ರಕುರ್ವಾಣಾಸ್ತಮೇವ ಮನಸಾ ಗತಾಃ ॥ ೪೭ ॥

ಇನ್ನೊಬ್ಬನು ತಿರ್ಯಕ್‌ಪ್ರಾಣಿಗಳಲ್ಲಿ ಜನ್ಮವನ್ನು ಎತ್ತಿದ್ದರೂ ಮುಕ್ತಿಯನ್ನೈದುವನು. ಮತ್ತೊಬ್ಬನು ನರಕದಲ್ಲಿದ್ದರೂ ಮುಕ್ತನಾಗುವನು. ಅಧಿಕಾರದಲ್ಲಿದ್ದ ಮತ್ತೊಬ್ಬನಿಗೆ ಆ ಅಧಿಕಾರವು ಮುಗಿದನಂತರ ಮುಕ್ತಿಯಾಗುವುದು. ಇನ್ನೊಬ್ಬನು ತನ್ನ ಅಧಿಕಾರವು ಕಳೆದ ಮೇಲೆ ಪುನಃ ಅಧಿಕಾರವನ್ನು ಹೊಂದಿ ಮುಕ್ತನಾಗುವನು. ಇನ್ನೊಬ್ಬನು ಲೋಕರೀತಿಯಲ್ಲಿರುವ ವರ್ಣ, ಪದ, ಭುವನ ಇವೇ ಮೊದಲಾದ ಆರು ಮಾರ್ಗಗಳಲ್ಲಿ ಸುತ್ತಿ ಸುತ್ತಿ ಕೊನೆಗೆ ಮುಕ್ತಿಯನ್ನು ಹೊಂದುವನು. ಆದ್ದರಿಂದ ಮನುಷ್ಯನಿಗೆ ಮುಕ್ತಿಯಾಗುವುದು ಒಂದೇ ಪ್ರಕಾರದಲ್ಲಲ್ಲ. ಜ್ಞಾನವೂ, ಶಿವನ ಭಾವನೆಯೂ ಇವುಗಳಿಗನುಸಾರವಾದ ಶಿವನ ಅನುಗ್ರಹವೂ ಎಷ್ಟುಮಟ್ಟಿಗಿರುವುದೋ ಅದಕ್ಕನುಸಾರವಾಗಿ ಮುಕ್ತಿಯಾಗುವುದು.

೪೬. ಆದ್ದರಿಂದ ಆ ಶಿವನ ಅನುಗ್ರಹಕ್ಕಾಗಿ ವಾಕ್, ಮನಸ್ಸು ಇವುಗಳ ದೋಷದಿಂದ ಬಿಡುಗಡೆಯನ್ನು ಹೊಂದಿ, ಎಂದರೆ ತ್ರಿಕರಣಶುದ್ಧರಾಗಿ ನಿಮ್ಮ ನಿಮ್ಮ ಪತ್ನಿಯರೊಡನೆ ಅಗ್ನಿಯನ್ನು ಪೂಜಿಸುತ್ತಾ ಶಿವನೊಬ್ಬನನ್ನೇ ಧ್ಯಾನಮಾಡುತ್ತಿರಿ.

೪೭. ಹೀಗೆ ಧ್ಯಾನಮಾಡುವಾಗ ಎಲ್ಲರೂ ಶಿವಭಾವನೆಯಲ್ಲಿ ನಿಷ್ಠರಾಗಿರಬೇಕು. ಶಿವಧ್ಯಾನಾಸಕ್ತರಾಗಿ ಶಿವಯೋಗವನ್ನು ಅಭ್ಯಸಿಸಬೇಕು. ಶಿವನ ಆಶ್ರಯವನ್ನು ಹೊಂದಿ, ಶಿವನಲ್ಲೇ ಮನಸ್ಸನ್ನಿರಿಸಿ ಎಲ್ಲಾ ಕೆಲಸಗಳನ್ನೂ ಮಾಡುತ್ತಿರಬೇಕು.

ದೀರ್ಘಸೂತ್ರಸಮಾರಬ್ಧಂ ದಿವ್ಯವರ್ಷಸಹಸ್ರಕಂ ।
ಸತ್ರಾಂತೇ ಮಂತ್ರಯೋಗೇನ ವಾಯುಸ್ತತ್ರ ಗಮಿಷ್ಯತಿ ॥ ೪೮ ॥

ಸ ಏವ ಭವತಾಂ ಶ್ರೇಯಃ ಸೋಪಾಯಂ ಕಥಯಿಷ್ಯತಿ ।
ತತೋ ವಾರಾಣಸೀ ಪುಣ್ಯಾ ಪುರೀ ಪರಮಶೋಭನಾ ॥ ೪೯ ॥

ಗಂತವ್ಯಾ ಯತ್ರ ವಿಶ್ವೇಶೋ ದೇವ್ಯಾ ಸಹ ಪಿನಾಕಧೃಕ್ ।
ಸದಾ ವಿಹರತಿ ಶ್ರೀಮಾನ್ಭಕ್ತಾನುಗ್ರಹಕಾರಣಾತ್ ॥ ೫೦ ॥

ತತ್ರಾಶ್ಚರ್ಯಂ ಮಹದ್ದೃಷ್ಟ್ವಾ ಮತ್ಸಮೀಪಂ ಗಮಿಷ್ಯಥ ।
ತತೋ ವಃ ಕಥಯಿಷ್ಯಾಮಿ ಮೋಕ್ಷೋಪಾಯಂ ದ್ವಿಜೋತ್ತಮಾಃ ॥ ೫೧ ॥

ಯೇನೈಕಜನ್ಮನಾ ಮುಕ್ತಿರ್ಯುಷ್ಮತ್ಕರತಲೇ ಸ್ಥಿತಾ ।
ಅನೇಕಜನ್ಮಸಂಸಾರಬಂಧನಿರ್ಮೋಕ್ಷಕಾರಿಣೀ ॥ ೫೨ ॥

೪೮ ನೀವುಗಳು ಬಹಳಕಾಲ ನಡೆಯುವ ಯಾಗವನ್ನು ಮಾಡಲುಪಕ್ರಮಮಾಡಿರುವಿರಿ. ಇದು ದೇವಮಾನದಿಂದ ಸಾವಿರವರ್ಷಗಳು ನಡೆಯುವುದು. ಈ ಯಾಗವು ಮುಗಿದ ನಂತರ ನಿಮ್ಮ ಮಂತ್ರಗಳ ಮಹಿಮೆಯಿಂದ ವಾಯುದೇವನು ನಿಮ್ಮ ಸಮೀಪಕ್ಕೆ ಬರುವನು.

೪೯-೫೦. ಅವನು ನಿಮ್ಮೆಲ್ಲರಿಗೂ ಶ್ರೇಯಸ್ಸುಂಟಾಗುವ ಉಪಾಯವನ್ನು ಹೇಳುವನು. ಬಳಿಕ ನೀವೆಲ್ಲರೂ ಬಹಳ ಪವಿತ್ರವಾದ ಕಾಶೀಪಟ್ಟಣಕ್ಕೆ ಹೋಗಿರಿ. ಆ ದಿವ್ಯನಗರದಲ್ಲಿ ಪಿನಾಕಧಾರಿಯಾಗಿ ವಿಶ್ವೇಶ್ವರನು ಭಕ್ತರನ್ನು ಅನುಗ್ರಹಮಾಡುವುದಕ್ಕಾಗಿ ಪಾರ್ವತಿಯೊಡನೆ ವಿಹರಿಸುತ್ತಿರುವನು.

೫೧. ಆಗ ಆ ನಗರದಲ್ಲಿ ಒಂದು ಆಶ್ಚರ್ಯವು ನಡೆಯುವುದು. ಅದನ್ನು ನೋಡಿಕೊಂಡು ನನ್ನ ಸಮೀಪಕ್ಕೆ ಬನ್ನಿರಿ. ಎಲೈ ಮುನಿಗಳಿರಾ ! ಆಮೇಲೆ ನಾನು ನಿಮಗೆ ಮೋಕ್ಷವಾಗುವ ಉಪಾಯವನ್ನು ಹೇಳುವೆನು.

೫೨. ಅನೇಕ ಜನ್ಮಗಳಲ್ಲಿ ನಿಮಗೆ ಉಂಟಾಗಿರುವ ಸಂಸಾರದ ಬಂಧವನ್ನು ಬಿಡಿಸುವ ಮುಕ್ತಿಯು ಒಂದೇ ಜನ್ಮದಲ್ಲಿ ಹೇಗೆ ನಿಮಗೆ ಸುಲಭವಾಗಿ ಆಗುವುದೋ, ಅಂತಹ ಉಪಾಯವನ್ನು ಹೇಳುವೆನು.

ಏತನ್ಮನೋಮಯಂ ಚಕ್ರಂ ಮಯಾ ಸೃಷ್ಟಂ ವಿಸೃಜ್ಯತೇ ।
ಯತ್ರಾಸ್ಯ ಶೀರ್ಯತೇ ನೇಮಿಃ ಸ ದೇಶಸ್ತಪಸಶ್ಶುಭಃ ॥ ೫೩ ॥

ಇತ್ಯುಕ್ತ್ವಾ ಸೂರ್ಯಸಂಕಾಶಂ ಚಕ್ರಂ ದೃಷ್ಟ್ವಾ ಮನೋಮಯಂ ।
ಪ್ರಣಿಪತ್ಯ ಮಹಾದೇವಂ ವಿಸಸರ್ಜ ಪಿತಾಮಹಃ ॥ ೫೪ ॥

ತೇಽಪಿ ಹೃಷ್ಟತರಾ ವಿಪ್ರಾಃ ಪ್ರಣಮ್ಯ ಜಗತಾಂ ಪ್ರಭುಂ ।
ಪ್ರಯಯುಸ್ತಸ್ಯ ಚಕ್ರಸ್ಯ ಯತ್ರ ನೇಮಿರಶೀರ್ಯತ ॥ ೫೫ ॥

ಚಕ್ರಂ ತದಪಿ ಸಂಕ್ಷಿಪ್ತಂ ಶ್ಲಕ್ಷ್ಣಂ ಚಾರುಶಿಲಾತಲೇ ।
ವಿಮಲಸ್ವಾದುಪಾನೀಯೇ ನಿಪಪಾತ ವನೇ ಕ್ವಚಿತ್ ॥ ೫೬ ॥

ತದ್ವನಂ ತೇನ ವಿಖ್ಯಾತಂ ನೈಮಿಷಂ ಮುನಿಪೂಜಿತಂ ।
ಅನೇಕಯಕ್ಷಗಂಧರ್ವವಿದ್ಯಾಧರಸಮಾಕುಲಂ ॥ ೫೭ ॥

೫೩. ಈಗ ಮನೋಮಯವಾದ ಈ ಚಕ್ರವನ್ನು ನಾನು ಸೃಷ್ಟಿಮಾಡಿ ಬಿಡುವೆನು. ಅದರ ಪಟ್ಟಿಯು ಕಳಚಿಬಿದ್ದು ಅದು ನಿಲ್ಲುವ ಸ್ಥಳವೇ ನಿಮಗೆ ತಪಸ್ಸನ್ನು ಮಾಡಲು ಉತ್ತಮವಾಗಿರುವ ಪ್ರದೇಶದವೆಂದು ತಿಳಿಯಿರಿ.

೫೪. ಜಗತ್ತಿಗೆಲ್ಲಕ್ಕೂ ಪಿತಾಮಹನೆನಿಸಿದ ಬ್ರಹ್ಮನು ಋಷಿಗಳಿಗೆ ಹೀಗೆಂದು ಹೇಳಿ, ಸೂರ್ಯನ ಹಾಗೆ ಪ್ರಕಾಶಮಾನವಾದ ಮನೋಮಯಚಕ್ರವನ್ನು ನೋಡಿ ಮಹಾದೇವನಾದ ಶಿವನಿಗೆ ನಮಸ್ಕಾರಮಾಡಿ ಅದನ್ನು ಬಿಟ್ಟನು.

೫೫. ಆ ಬ್ರಾಹ್ಮಣರೆಲ್ಲರೂ ಸಂತೋಷವುಳ್ಳವರಾಗಿ ಜಗತ್ಪ್ರಭುವಾದ ಬ್ರಹ್ಮನಿಗೆ ನಮಸ್ಕಾರಮಾಡಿ ಆ ಚಕ್ರದ ಪಟ್ಟಿಯು ಬೀಳುವ ಸ್ಥಳವನ್ನು ನೋಡಲು ಅದರ ಹಿಂದೆಯೇ ಹೊರಟರು.

೫೬. ಬ್ರಹ್ಮನು ಅತಿರಭಸದಿಂದ ಎಸೆದ ಆ ಚಕ್ರವು ಒಂದಾನೊಂದು ವನದ ಮಧ್ಯದಲ್ಲಿ ನಿರ್ಮಲವಾದ ಸ್ವಾದೂಕದಿಂದ ಕೂಡಿದ ಜಲಾಶಯದ ಸಮೀಪದಲ್ಲಿ ಒಂದು ಕಲ್ಲುಬಂಡೆಯ ಮೇಲೆ ಬಿದ್ದಿತು.

೫೭. ಆಗ ಆ ವನಕ್ಕೆ ನೈಮಿಶಾರಣ್ಯವೆಂದು ಹೆಸರಾಯಿತು. ಅದು ಋಷಿಗಳಿಗೆ ವಾಸಯೋಗ್ಯವಾದ ಪ್ರದೇಶವಾಯಿತು. ಮತ್ತು ಯಕ್ಷರು, ಗಂಧರ್ವರು, ವಿದ್ಯಾಧರರು ಮುಂತಾದವರೆಲ್ಲ ಅಲ್ಲಿಯೇ ವಾಸಮಾಡಲುಪಕ್ರಮಿಸಿದರು.

ಅಷ್ಟಾದಶ ಸಮುದ್ರಸ್ಯ ದ್ವೀಪಾನಶ್ನನ್ಪುರೂರವಾಃ ।
ವಿಲಾಸವಶಮುರ್ವಶ್ಯಾ ಯಾತೋ ದೈವೇನ ಚೋದಿತಃ ॥ ೫೮ ॥

ಅಕ್ರಮೇಣ ಹರನ್ಮೋಹಾದ್ಯಜ್ಞವಾಟಂ ಹಿರಣ್ಮಯಂ ।
ಮುನಿಭಿರ್ಯತ್ರ ಸಂಕ್ರುದ್ಧೈಃ ಕುಶವಜ್ರೈರ್ನಿಪಾತಿತಃ ॥ ೫೯ ॥

ವಿಶ್ವಂ ವಿಸೃಕ್ಷಮಾಣಾ ವೈ ಯತ್ರ ವಿಶ್ವಸೃಜಃ ಪುರಾ ।
ಸತ್ರಮಾರೇಭಿರೇ ದಿವ್ಯಂ ಬ್ರಹ್ಮಜ್ಞಾ ಗಾರ್ಹಪತ್ಯಗಾಃ ॥ ೬೦ ॥

ಋಷಿಭಿರ್ಯತ್ರ ವಿದ್ವದ್ಭಿಃ ಶಬ್ದಾರ್ಥನ್ಯಾಯಕೋವಿದೈಃ ।
ಶಕ್ತಿಪ್ರಜ್ಞಾಕ್ರಿಯಾಯೋಗೈರ್ವಿಧಿರಾಸೀದನುಷ್ಠಿತಃ ॥ ೬೧ ॥

ಯತ್ರ ವೇದವಿದೋ ನಿತ್ಯಂ ವೇದವಾದಬಹಿಷ್ಕೃತಾನ್ ।
ವಾದಜಲ್ಪಬಲೈರ್ಘ್ನಂತಿ ವಚೋಭಿರತಿವಾದಿನಃ ॥ ೬೨ ॥

೫೮. ಹೀಗಿರಲು ಸಮುದ್ರದಲ್ಲಿದ್ದ ಹದಿನೆಂಟು ದ್ವೀಪಗಳನ್ನೂ ಏಕಚ್ಛತ್ರಾಧಿಪತಿಯಾಗಿ ಆಳುತ್ತಿದ್ದ ಪುರೂರವಸ್ಸೆಂಬ ರಾಜನು ದೈವಗತಿಯಿಂದ ಊರ್ವಶಿಯೆಂಬ ಅಪ್ಸರಸ್ತ್ರೀಯ ವಿಲಾಸಕ್ಕೆ ಬೆರಗಾಗಿ ಅವಳಿಗೆ ಅಧೀನನಾಗಿದ್ದನು.

೫೯. ಇವನು ಆ ನೈಮಿಶಾರಣ್ಯದಲ್ಲಿ ಋಷಿಗಳೆಲ್ಲರೂ ಸೇರಿ ನಡೆಸುತ್ತಿದ್ದ ಯಾಗಶಾಲೆಯನ್ನು ಪ್ರವೇಶಿಸಿ, ಅದರಲ್ಲಿದ್ದ ಸುವರ್ಣಾದಿ ಪದಾರ್ಥಗಳನ್ನು ಅನ್ಯಾಯದಿಂದ ಹೊತ್ತುಕೊಂಡು ಹೋಗಲು ಉದ್ಯುಕ್ತನಾದಾಗ ಅವನ ಮೇಲೆ ಋಷಿಗಳು ಕೋಪಗೊಂಡು, ತಮ್ಮ ದರ್ಭೆಗಳನ್ನು ಅಭಿಮಂತ್ರಿಸಿ ವಜ್ರಾಯುಧದಂತೆ ಉಪಯೋಗಿಸಿ ಈ ರಾಜನನ್ನು ನಾಶಮಾಡಿದರು.

೬೦-೬೧. ಹಿಂದೆ ಈ ವನದಲ್ಲಿ ಪ್ರಪಂಚವನ್ನು ಸೃಷ್ಟಿಮಾಡಬೇಕೆಂಬ ಇಚ್ಛೆಯಿಂದ ಬ್ರಹ್ಮಜ್ಞರಾದ ಋಷಿಗಳು ಆ ನೈಮಿಶಾರಣ್ಯದಲ್ಲಿ ಸಪತ್ನೀಕರಾಗಿದ್ದೇ ಉತ್ತಮವಾದ ಯಾಗವನ್ನು ಪ್ರಾರಂಭಿಸಿದರು. ಅವರು ವ್ಯಾಕರಣಶಾಸ್ತ್ರ, ನ್ಯಾಯಶಾಸ್ತ್ರ ಇವುಗಳಲ್ಲಿ ಬುದ್ಧಿವಂತರಾಗಿ ತಮ್ಮ ತಮ್ಮ ದೇಹಶಕ್ತಿ, ಬುದ್ಧಿಶಕ್ತಿ ಮತ್ತು ಕಾರ್ಯಕುಶಲತೆ ಇವುಗಳಿಂದ ಯಾಗದ ಕೆಲಸವನ್ನು ಚೆನ್ನಾಗಿ ಮಾಡುತ್ತಿದ್ದರು.

೬೨. ಆ ನೈಮಿಶಾರಣ್ಯದಲ್ಲಿ ವೇದಗಳನ್ನು ಚೆನ್ನಾಗಿ ತಿಳಿದಿರುವ ಈ ಋಷಿಗಳು ವೇದಬಾಹ್ಯರಾದವರನ್ನು ವಾದ, ಜಲ್ಪವೆಂಬ ನಿಗ್ರಹಸ್ಥಾನಗಳನ್ನು ಆಶ್ರಯಿಸಿ ಬಹಳವಾಗಿ ವಾದಮಾಡಿ ಯಾವಾಗಲೂ ಗೆಲ್ಲುತ್ತಿದ್ದಾರೆ.

ಸ್ಫಟಿಕಮಯಮಹೀಭೃತ್ಪಾದಜಾಭ್ಯಶ್ಶಿಲಾಭ್ಯಃ-
ಪ್ರಸರದಮೃತಕಲ್ಪಸ್ವಚ್ಛಪಾನೀಯರಮ್ಯಂ ।
ಅತಿರಸಫಲವೃಕ್ಷಪ್ರಾಯಮವ್ಯಾಲಸತ್ವಂ-
ತಪಸ ಉಚಿತಮಾಸೀನ್ನೈಮಿಷಂ ತನ್ಮುನೀನಾಂ ॥ ೬೩ ॥

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾಂ ಪೂರ್ವಭಾಗೇ ನೈಮಿಷೋಪಾಖ್ಯಾನಂ ನಾಮ ತೃತೀಯೋಽಧ್ಯಾಯಃ**



೬೩. ಆ ನೈಮಿಷಾರಣ್ಯವು ಸ್ಫಟಿಕಮಯವಾದ ಪರ್ವತದ ತಪ್ಪಲಿನಲ್ಲಿ ಇದ್ದಿತು. ಅಲ್ಲಿ ರಮಣೀಯವಾದ ಗಿರಿನದಿಗಳೂ, ಅಮೃತಕ್ಕೆ ಸಮಾನವಾದ ನಿರ್ಮಲೋದಕದಿಂದ ಕೂಡಿದ ಜಲಾಶಯಗಳೂ ಕಂಗೊಳಿಸುತ್ತಿದ್ದವು. ರುಚಿಕರವಾದ ಫಲಗಳನ್ನು ಬಿಡುವ ಬಗೆಬಗೆಯ ವೃಕ್ಷಗಳು ಅಲ್ಲಿ ವಿಶೇಷವಾಗಿದ್ದವು. ದುಷ್ಟ ಜಂತುಗಳ ಬಾಧೆಯೆಂಬುದೇ ಅಲ್ಲಿರಲಿಲ್ಲ. ಇಂತಹ ಉತ್ತಮವಾದ ಆ ನೈಮಿಶಾರಣ್ಯವೆಂಬ ವನವು ಋಷಿಗಳಿಗೆ ತಪಸ್ಸುಮಾಡಲು ಅನುಕೂಲವಾದ ಪ್ರದೇಶವಾಗಿತ್ತು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಪೂರ್ವಭಾಗದಲ್ಲಿ ನೈಮಿಷೋಪಾಖ್ಯಾನವೆಂಬ ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಾಯುವೀಯಸಂಹಿತಾಯಾಂ

## ಚತುರ್ಥೋಽಧ್ಯಾಯಃ

॥ ಸೂತ ಉವಾಚ ॥

ತಸ್ಮಿನ್ದೇಶೇ ಮಹಾಭಾಗಾ ಮುನಯಶ್ಶಂಸಿತವ್ರತಾಃ ।
ಅರ್ಚಯಂತೋ ಮಹಾದೇವಂ ಸತ್ರಮಾರೇಭಿರೇ ತದಾ ॥ ೧ ॥

ತಚ್ಚ ಸತ್ರಂ ಪ್ರವವೃತೇ ಸರ್ವಾಶ್ಚರ್ಯಂ ಮಹರ್ಷಿಣಾಂ ।
ವಿಶ್ವಂ ಸಿಸೃಕ್ಷ್ಯಮಾಣಾನಾಂ ಪುರಾ ವಿಶ್ವಸೃಜಾಮಿವ ॥ ೨ ॥

## ನಾಲ್ಕನೆಯ ಅಧ್ಯಾಯವು

೧. ಸೂತಪೌರಾಣಿಕನು ಹೇಳಲುಪಕ್ರಮಿಸಿದನು:—ಹೀಗಿರುವ ಆ ನೈಮಿಶಾರಣ್ಯದಲ್ಲಿ ವ್ರತನಿಯಮನಿಷ್ಠರೂ, ಪೂಜ್ಯರೂ ಆದ ಋಷಿಗಳು ಶಿವನನ್ನು ಪೂಜಿಸುತ್ತಾ ದೊಡ್ಡ ಯಾಗವನ್ನು ಮಾಡಲು ಉಪಕ್ರಮಮಾಡಿದರು.

೨. ಪೂರ್ವದಲ್ಲಿ ಪ್ರಪಂಚವನ್ನು ಸೃಷ್ಟಿಮಾಡುವುದಕ್ಕೆ ಪ್ರಾರಂಭಿಸಿದ ಬ್ರಹ್ಮರ್ಷಿಗಳು ಯಾಗವನ್ನು ಮಾಡಿದ ರೀತಿಯಲ್ಲಿಯೇ ಆ ನೈಮಿಶಾರಣ್ಯದಲ್ಲಿ ಮಹರ್ಷಿಗಳು ನಡೆಸುತ್ತಿದ್ದ ಯಜ್ಞವು ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುವುದಾಗಿ ಪ್ರಕಾಶಿಸುತ್ತಿತ್ತು.

ಅಥ ಕಾಲೇ ಗತೇ ಸತ್ರೇ ಸಮಾಪ್ತೇ ಭೂರಿದಕ್ಷಿಣೇ ।
ಪಿತಾಮಹನಿಯೋಗೇನ ವಾಯುಸ್ತತ್ರಾಗಮತ್ಸ್ವಯಂ ॥ ೩ ॥

ಶಿಷ್ಯಸ್ಸ್ವಯಂಭುವೋ ದೇವಸ್ಸರ್ವಪ್ರತ್ಯಕ್ಷದೃಗ್ವಶೀ ।
ಆಜ್ಞಾಯಾಂ ಮರುತೋ ಯಸ್ಯ ಸಂಸ್ಥಿತಾಸ್ಸಪ್ತಸಪ್ತಕಾಃ ॥ ೪ ॥

ಪ್ರೇರಯಚ್ಛಶ್ವದಂಗಾನಿ ಪ್ರಾಣಾದ್ಯಾಭಿಃ ಸ್ವವೃತ್ತಿಭಿಃ ।
ಸರ್ವಭೂತಶರೀರಾಣಾಂ ಕುರುತೇ ಯಶ್ಚ ಧಾರಣಂ ॥ ೫ ॥

ಅಣಿಮಾದಿಭಿರಷ್ಟಾಭಿರೈಶ್ವರ್ಯೈಶ್ಚ ಸಮನ್ವಿತಃ ।
ತಿರ್ಯಕ್ಕರಾದಿಭಿರ್ಮೇಧ್ಯೈರ್ಭುವನಾನಿ ಬಿಭರ್ತಿ ಯಃ ॥ ೬ ॥

೩. ಬಹಳ ದಕ್ಷಿಣೆಯನ್ನು ಕೊಡಬೇಕಾದ ಆ ಯಾಗವು ಕೆಲವು ಕಾಲ ಕಳೆದ ನಂತರ ಮುಗಿಯುತ್ತ ಬರಲು ಬ್ರಹ್ಮನ ಅಪ್ಪಣೆಯ ಮೇರಿಗೆ ವಾಯುದೇವನು ತಾನಾಗಿಯೇ ಅಲ್ಲಿಗೆ ಬಂದನು.

೪. ಈ ವಾಯುದೇವನು ಬ್ರಹ್ಮನಿಗೆ ಸಾಕ್ಷಾತ್ ಶಿಷ್ಯನಾಗಿಯೂ, ಇಂದ್ರಿಯ ನಿಗ್ರಹವುಳ್ಳವನೂ, ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡುವವನೂ ಆಗಿದ್ದನು. ಇವನ ಆಜ್ಞೆಯನ್ನು ಅನುಸರಿಸಿ ಸಪ್ತಮರುತ್ತುಗಳು ಸರಿಯಾಗಿ ಕೆಲಸಮಾಡುತ್ತಿರುವರು.

೫. ಆಯಾಯ ಪ್ರಾಣಿಗಳ ಶರೀರದಲ್ಲಿ ಆಯಾಯ ಕೆಲಸಕ್ಕೆ ಅನುಗುಣವಾಗಿ ಆಯಾಯ ಅವಯವಗಳನ್ನೂ ಪ್ರಾಣ, ಅಪಾನ, ಉದಾನ, ವ್ಯಾನ, ಸಮಾನ ಎಂಬ ಪಂಚಪ್ರಾಣಗಳ ಹೆಸರಿನಿಂದ ಪ್ರೇರಿಸುತ್ತಲೂ, ಶರೀರವನ್ನು ನಿಗ್ರಹಮಾಡಿದವರಿಗೆ ಪ್ರಾಣಾಯಾಮಕ್ಕೆ ತಕ್ಕಂತೆ ವಾಯುಧಾರಣೆಯು ನಡೆಯುವಂತೆಯೂ ಈ ವಾಯುದೇವನು ಅನುಗ್ರಹಿಸುತ್ತಿರುವನು.

೬. ಪವಿತ್ರಕರವಾದ ತನ್ನ ಅಂಗಗಳಿಂದ ಎಲ್ಲಾ ಲೋಕಗಳನ್ನೂ ಧರಿಸಿಕೊಂಡಿರುವ ಈ ವಾಯುದೇವನಿಗೆ ಅಣಿಮಾದಿ ಅಷ್ಟೈಶ್ವರ್ಯಗಳು ಅಧೀನವಾಗಿರುವುವು.

ಆಕಾಶಯೋರ್ನಿರ್ದ್ವಿಗುಣಃ ಸ್ಪರ್ಶಶಬ್ದಸಮನ್ವಯಾತ್ ।
ತೇಜಸಾಂ ಪ್ರಕೃತಿಶ್ಚೇತಿ ಯಮಾಹುಸ್ತತ್ತ್ವಚಿಂತಕಾಃ ॥ ೭ ॥

ತಮಾಶ್ರಮಗತಂ ದೃಷ್ಟ್ವಾ ಮುನಯೋ ದೀರ್ಘಸತ್ರಿಣಃ ।
ಪಿತಾಮಹವಚಃ ಸ್ಮೃತ್ವಾ ಪ್ರಹರ್ಷಮತುಲಂ ಯಯುಃ ॥ ೮ ॥

ಅಭ್ಯುತ್ಥಾಯ ತತಸ್ಸರ್ವೇ ಪ್ರಣಮ್ಯಾಂಬರಸಂಭವಂ ।
ಚಾಮೀಕರಮಯಂ ತಸ್ಮೈ ವಿಷ್ಟರಂ ಸಮಕಲ್ಪಯನ್ ॥ ೯ ॥

ಸೋಽಪಿ ತತ್ರ ಸಮಾಸೀನೋ ಮುನಿಭಿಸ್ಸಮ್ಯಗರ್ಚಿತಃ ।
ಪ್ರತಿನಂದ್ಯ ಚ ತಾನ್ಸರ್ವಾನ್ಸಪ್ರಚ್ಛ ಕುಶಲಂ ತತಃ ॥ ೧೦ ॥

॥ ವಾಯುರುವಾಚ ॥

ಅತ್ರ ವಃ ಕುಶಲಂ ವಿಪ್ರಾಃ ಕಚ್ಚಿದ್ವೃತ್ತೇ ಮಹಾಕ್ರತೌ ।
ಕಚ್ಚಿದ್ಯಜ್ಞಹನೋ ದೈತ್ಯಾ ನ ಬಾಧೇರನ್ಸುರದ್ವಿಷಃ ॥ ೧೧ ॥

೭. ಈ ವಾಯುದೇವನಿಗೆ ಶಬ್ದ, ಸ್ಪರ್ಶ ಎಂಬ ಎರಡು ಗುಣಗಳು ಮಾತ್ರವೇ ಇರುವುವೆಂತಲೂ, ಇವನು ಆಕಾಶದಲ್ಲಿ ಹುಟ್ಟಿ ಬೆಳೆಯುವವನೆಂತಲೂ, ಇವನು ತೇಜಸ್ತತ್ವಕ್ಕೆ ಕಾರಣನೆಂತಲೂ ತತ್ತ್ವವನ್ನು ತಿಳಿದವರು ಹೇಳುವರು.

೮. ಬಹಳ ಕಾಲ ನಡೆಯುವ ಸತ್ರಯಾಗವನ್ನು ಮಾಡತಕ್ಕ ಋಷಿಗಳು, ಆ ವಾಯುದೇವನು ತಮ್ಮ ಆಶ್ರಮಕ್ಕೆ ಬಂದದ್ದನ್ನು ನೋಡಿ ಚತುರ್ಮುಖಬ್ರಹ್ಮನ ಮಾತನ್ನು ಸ್ಮರಿಸಿಕೊಂಡು ಬಹಳ ಸಂತೋಷವನ್ನು ಹೊಂದಿದರು.

೯. ಆಗ ಅವರೆಲ್ಲರೂ ಮರ್ಯಾದೆಯಿಂದ ಮೇಲಕ್ಕೆ ಎದ್ದು ಆಕಾಶವೇ ಕಾರಣವಾಗಿರುವ ಆ ವಾಯುದೇವನಿಗೆ ನಮಸ್ಕಾರವನ್ನು ಮಾಡಿ ಚಿನ್ನದ ಪೀಠವನ್ನು ಸಿದ್ಧಮಾಡಿಕೊಟ್ಟರು.

೧೦. ಅನಂತರದಲ್ಲಿ ಅವನು ಆ ಪೀಠದಲ್ಲಿ ಕುಳಿತುಕೊಂಡು ಮುನಿಗಳು ತನಗೆ ಮಾಡಿದ ಪೂಜೆಯನ್ನು ಸ್ವೀಕರಿಸಿ ಅವರೆಲ್ಲರಿಗೂ ಬಹುಮಾನ ಮಾಡಿದನಂತರ ಅವರೆಲ್ಲರನ್ನೂ ಕುಶಲಪ್ರಶ್ನೆಯನ್ನು ಮಾಡಿದನು.

೧೧ ೧೨. ವಾಯುದೇವನು ಹೇಳಿದನು:—ಎಲೈ ಋಷಿಗಳಿರಾ, ನಿಮ್ಮ ಈ ಸತ್ರವು ನಡೆಯುತ್ತಿರುವುದೇ? ನೀವೆಲ್ಲರೂ ಆರೋಗ್ಯವಾಗಿರುವಿರಾ ?

ಪ್ರಾಯಶ್ಚಿತ್ತಂ ದುರಿಷ್ಟಂ ವಾ ನ ಕಚ್ಚಿತ್ಸಮಜಾಯತ ।
ಸ್ತೋತ್ರಶಸ್ತ್ರಗ್ರಹೈರ್ದೇವಾನ್ಪಿತ್ರ್ಯಾನ್ಪಿತ್ರ್ಯೈಶ್ಚ ಕರ್ಮಭಿಃ ॥ ೧೨ ॥

ಕಚ್ಚಿದಭ್ಯರ್ಚ್ಯ ಯುಷ್ಮಾಭಿರ್ವಿಧಿರಾಸೀತ್ಸ್ವನುಷ್ಠಿತಃ ।
ನಿವೃತ್ತೇ ಚ ಮಹಾಸತ್ರೇ ಪಶ್ಚಾತ್ಕಿಂ ವಶ್ಚಿಕೀರ್ಷಿತಂ ॥ ೧೩ ॥

ಇತ್ಯುಕ್ತಾ ಮುನಯಃ ಸರ್ವೇ ವಾಯುನಾ ಶಿವಭಾವಿನಾ ।
ಪ್ರಹೃಷ್ಟಮನಸಃ ಪೂತಾ ಪ್ರತ್ಯೂಚುರ್ವಿನಯಾನ್ವಿತಾಃ ॥ ೧೪ ॥

॥ ಮುನಯ ಊಚುಃ ॥

ಅದ್ಯ ನಃ ಕುಶಲಂ ಸರ್ವಮದ್ಯ ಸಾಧು ಭವೇತ್ತಪಃ ।
ಅಸ್ಮಚ್ಛ್ರೇಯೋಭಿವೃದ್ಧ್ಯರ್ಥಂ ಭವಾನತ್ರಾಗತೋ ಯತಃ ॥ ೧೫ ॥

ದೇವತೆಗಳ ಶತ್ರುಗಳಾದ ರಾಕ್ಷಸರು ಯಜ್ಞವನ್ನು ನಾಶಮಾಡಲು ಬಂದಿದ್ದರೇ? ನೀವು ಯಾಗಮಾಡುವಾಗ ಪ್ರಾಯಶ್ಚಿತ್ತವನ್ನೇನಾದರೂ ಮಾಡಬೇಕಾಯಿತೆ? ನೀವು ಶಾಸ್ತ್ರದ ಕ್ರಮವನ್ನು ತಪ್ಪಿ ಮರೆತು ಹೋಮವನ್ನೇನಾದರೂ ಮಾಡಿದಿರಾ? ದೇವತೆಗಳೂ, ಪಿತೃಗಳೂ ಇವರುಗಳನ್ನು ಉದ್ದೇಶಮಾಡಿ ಕರ್ಮಮಾಡುವಾಗ ಸ್ತೋತ್ರ, ಶಸ್ತ್ರ (ಯಜ್ಞದಲ್ಲಿ ಹೋತೃವು ಹೇಳುವ ಋಗ್ವೇದಮಂತ್ರಕ್ಕೆ ಸ್ತೋತ್ರವೆಂದೂ, ಉದ್ಗಾತೃವು ಹೇಳುವ ವೇದಗಾನಕ್ಕೆ ಶಸ್ತ್ರವೆಂದೂ ಹೆಸರು.) ಇವುಗಳಿಂದ ಅವರಿಗೆ ಉಕ್ತವಾದ ಕ್ರಮದಂತೆ ವಿಧಿಗನುಸಾರವಾಗಿ ಯಜ್ಞವನ್ನು ನಡೆಸಿರುವಿರಾ?

೧೩-೧೪. ದೇವ, ಪಿತೃ ಇವರುಗಳ ಪೂಜೆಯನ್ನು ಸರಿಯಾಗಿ ಮಾಡಿದ್ದರಿಂದ ನಿಮ್ಮ ಯಾಗವು ವಿಧಿವತ್ತಾಗಿ ಸರಿಯಾಗಿ ನಡೆದಿರುವುದೆ? ಈ ಸತ್ರಯಾಗವು ಮುಗಿದನಂತರ ನೀವು ಯಾವ ಕೆಲಸವನ್ನು ಮಾಡಬೇಕೆಂದಿರುವಿರಿ? ಶಿವಭಾವನೆಯನ್ನು ಹೊಂದಿರುವ ವಾಯುದೇವನು ಋಷಿಗಳೆಲ್ಲರನ್ನೂ ಹೀಗೆ ಕೇಳುತ್ತಿರುವಾಗ ಪರಿಶುದ್ಧರಾದ ಆ ಋಷಿಗಳು ಸಂತೋಷಗೊಂಡು ವಿನಯದಿಂದ ಆ ವಾಯುವನ್ನು ಕುರಿತು—

೧೫-೧೭. ಎಲೈ ವಾಯುದೇವನೇ, ನಮ್ಮ ಶ್ರೇಯಸ್ಸು ವೃದ್ಧಿಯಾಗುವುದಕ್ಕಾಗಿ ನೀನೇ ಇಲ್ಲಿಗೆ ಬಂದಿರುವುದರಿಂದ ನಮ್ಮೆಲ್ಲರಿಗೂ ಈಗ ಕುಶಲವುಂಟಾಗಿರುವುದು. ನಮ್ಮ ತಪಸ್ಸು ಚೆನ್ನಾಗಿ ನಡೆಯುತ್ತಿರುವುದು. ಎಲೈ ವಾಯುದೇವನೆ,

**ಶೃಣು ಚೇದಂ ಪುರಾವೃತ್ತಂ ತಮಸಾಕ್ರಾಂತಮಾನಸೈಃ ।**
**ಉಪಾಸಿತಃ ಪುರಾಸ್ಮಾಭಿರ್ವಿಜ್ಞಾನಾರ್ಥಂ ಪ್ರಜಾಪತಿಃ ॥ ೧೬ ॥**

**ಸೋಽಪ್ಯಸ್ಮಾನನುಗೃಹ್ಯಾಹ ಶರಣ್ಯಶ್ಶರಣಾಗತಾನ್ ।**
**ಸರ್ವಸ್ಮಾದಧಿಕೋ ರುದ್ರೋ ವಿಪ್ರಾಃ ಪರಮಕಾರಣಂ ॥ ೧೭ ॥**

**ತಮಪ್ರತರ್ಕ್ಯಂ ಯಾಥಾತ್ಮ್ಯಂ ಭಕ್ತಿಮಾನೇವ ಪಶ್ಯತಿ ।**
**ಭಕ್ತಿಶ್ಚಾಸ್ಯ ಪ್ರಸಾದೇನ ಪ್ರಸಾದಾದೇವ ನಿರ್ವೃತಿಃ ॥ ೧೮ ॥**

**ತಸ್ಮಾದಸ್ಯ ಪ್ರಸಾದಾರ್ಥಂ ನೈಮಿಷೇ ಸತ್ರಯೋಗತಃ ।**
**ಯಜಧ್ವಂ ದೀರ್ಘಸತ್ರೇಣ ರುದ್ರಂ ಪರಮಕಾರಣಂ ॥ ೧೯ ॥**

**ತತ್ಪ್ರಸಾದೇನ ಸತ್ರಾಂತೇ ವಾಯುಸ್ತತ್ರಾಗಮಿಷ್ಯತಿ ।**
**ತನ್ಮುಖಾಜ್ಞಾನಲಾಭೋ ವಸ್ತತ್ರ ಶ್ರೇಯೋ ಭವಿಷ್ಯತಿ ॥ ೨೦ ॥**

**ಇತ್ಯಾದಿಶ್ಯ ವಯಂ ಸರ್ವೇ ಪ್ರೇಷಿತಾಃ ಪರಮೇಷ್ಠಿನಾ ।**
**ಅಸ್ಮಿನ್ದೇಶೇ ಮಹಾಭಾಗ ತವಾಗಮನಕಾಂಕ್ಷಿಣಃ ॥ ೨೧ ॥**

ಕೇಳು, ಕೆಲವು ಕಾಲದ ಹಿಂದೆ ನಮಗೆ ಅಜ್ಞಾನವು ಆವರಿಸಿಕೊಂಡಿದ್ದಾಗ ನಾವೆಲ್ಲರೂ ಜ್ಞಾನಾರ್ಥಿಗಳಾಗಿ ಬ್ರಹ್ಮನನ್ನು ಸೇವಿಸಲು ಹೊರಟೆವು. ನಾವೆಲ್ಲರೂ ಅವನನ್ನು ಸೇವಿಸಿದ ನಂತರ ಅವನು ನಮ್ಮಲ್ಲಿ ಅನುಗ್ರಹವನ್ನು ಮಾಡಿ ಶರಣಾಗತರಾದವರಿಗೆ ರಕ್ಷಕನಾದ ಕಾರಣ, ನಮ್ಮನ್ನು ಕುರಿತು ಇಂತೆಂದನು. ಎಲೈ ಬ್ರಾಹ್ಮಣರಾ, ಕೇಳಿರಿ ರುದ್ರನು ಎಲ್ಲರಿಗಿಂತಲೂ ದೊಡ್ಡವನು. ಅವನೇ ಎಲ್ಲಕ್ಕೂ ಕಾರಣನು. ರುದ್ರನು ಹೀಗೆಯೇ ಇರುವನೆಂದು ಊಹಿಸಲೂ ಆಗದಿರುವ ಅವನ ನಿಜವಾದ ರೂಪವನ್ನು ಶಿವನಲ್ಲಿ ಭಕ್ತಿಯುಳ್ಳವನು ಮಾತ್ರವೇ ಕಾಣುವನು.

೧೮-೨೨. ಈ ರುದ್ರನ ಅನುಗ್ರಹದಿಂದಲೇ ಭಕ್ತಿಯೂ, ಭಕ್ತಿಯುಂಟಾದ ನಂತರ ಶಿವನ ಅನುಗ್ರಹವೂ ಉಂಟಾಗಿ ಅದರಿಂದಲೇ ಮುಕ್ತಿಯೂ ಉಂಟಾಗುವುದು. ಆದ್ದರಿಂದ ಈ ಶಿವನ ಅನುಗ್ರಹಕ್ಕಾಗಿ ನೈಮಿಶಾರಣ್ಯದಲ್ಲಿ ಎಲ್ಲಕ್ಕೂ ಕಾರಣನಾಗಿರುವ ರುದ್ರನನ್ನು ಯಾಗದಿಂದ ಸಂತೋಷಪಡಿಸಿರಿ. ಅವನ ಅನುಗ್ರಹದಿಂದಲೇ ಯಾಗವು ಮುಗಿಯುವ ಹೊತ್ತಿಗೆ ಸರಿಯಾಗಿ ವಾಯುದೇವನು ಅಲ್ಲಿಗೆ ಬರುವನು. ಅವನಿಂದ ನಿಮಗೆ ಜ್ಞಾನೋಪದೇಶವು ಆಗಿ ಶ್ರೇಯಸ್ಸುಂಟಾಗುವುದು.

ದೀರ್ಘಸತ್ರಂ ಸಮಾಸೀನಾ ದಿವ್ಯವರ್ಷಸಹಸ್ರಕಂ ।
ಅತಸ್ತ್ವಾಗಮಾದನ್ಯತ್ಪ್ರಾರ್ಥ್ಯಂ ನೋ ನಾಸ್ತಿ ಕಿಂಚನ ॥ ೨೨ ॥

ಇತ್ಯಾಕರ್ಣ್ಯ ಪುರಾವೃತ್ತಮೃಷೀಣಾಂ ದೀರ್ಘಸತ್ರಿಣಾಂ ।
ವಾಯುಃ ಪ್ರೀತಮನಾ ಭೂತ್ವಾ ತತ್ರಾಸೀನ್ಮುನಿಸಂವೃತಃ ॥ ೨೩ ॥

ತತಸ್ತೈರ್ಮುನಿಭಿಃ ಪೃಷ್ಟಸ್ತೇಷಾಂ ಭಾವವಿವೃದ್ಧಯೇ ।
ಸರ್ಗಾದಿ ಶಾರ್ವಮೈಶ್ವರ್ಯಂ ಸಮಾಸಾದವದದ್ವಿಭುಃ ॥ ೨೪ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ
ಪೂರ್ವಭಾಗೇ ವಾಯುಸಮಾಗಮೋ ನಾಮ ಚತುರ್ಥೋಽಧ್ಯಾಯಃ



ಹೀಗೆಂದು ಬ್ರಹ್ಮನು ನಮಗೆ ಅಪ್ಪಣೆಯನ್ನು ಮಾಡಿ ಕಳುಹಿಸಿದನು. ನಾವೆಲ್ಲರೂ ಈ ಪ್ರದೇಶದಲ್ಲಿ ನಿನ್ನ ಆಗಮನವನ್ನೇ ನಿರೀಕ್ಷಿಸುತ್ತಾ ದೇವಮಾನದಿಂದ ಸಹಸ್ರ ವರ್ಷಗಳು ನಡೆಸತಕ್ಕ ಯಾಗವನ್ನು ಪ್ರಾರಂಭಿಸಿ ನಡೆಸಿದೆವು. ನಿನ್ನ ಆಗಮನ ಹೊರತು ಬೇರೆ ಯಾವುದನ್ನೂ ನಾವು ಆಶೆಮಾಡುವವರಲ್ಲ ಎಂದರು

೨೩. ಋಷಿಗಳೆಲ್ಲರೂ ತಮ್ಮ ಹಿಂದಿನ ವರ್ತಮಾನವೆಲ್ಲವನ್ನೂ ಈ ರೀತಿ ಹೇಳುತ್ತಿರುವುದನ್ನು ಕೇಳಿ ವಾಯುದೇವನು ಸಂತೋಷದಿಂದ ಶಿವಧ್ಯಾನಾಸಕ್ತನಾಗಿ ಆ ಋಷಿಗಳ ಗುಂಪಿನಲ್ಲಿ ಪ್ರಕಾಶಿಸುತ್ತಿದ್ದನು.

೨೪. ಅನಂತರ ಋಷಿಗಳೆಲ್ಲರೂ ತಮ್ಮ ತಮ್ಮ ಜ್ಞಾನಾಭಿವೃದ್ಧಿಗಾಗಿ ಆ ವಾಯುದೇವನನ್ನು ಪ್ರಶ್ನೆ ಮಾಡಿದರು. ಪ್ರಭುವಾದ ಅವನು ಆ ಋಷಿಗಳಿಗೆ ಶಿವನ ಸಂಬಂಧವಾದ ಸೃಷ್ಟಿಕ್ರಮ, ಅಣಿಮಾದಿ ಸಿದ್ಧಿಗಳುಂಟಾಗುವ ಪ್ರಕಾರ ಇವುಗಳನ್ನು ಸಂಕ್ಷೇಪವಾಗಿ ಹೇಳಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಪೂರ್ವಭಾಗ
ದಲ್ಲಿ ವಾಯುಸಮಾಗಮವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಾಯುವೀಯಸಂಹಿತಾಯಾಂ

## ಪಂಚಮೋಽಧ್ಯಾಯಃ

---

॥ ಸೂತ ಉವಾಚ ॥

ತತ್ರ ಪೂರ್ವಂ ಮಹಾಭಾಗಾ ನೈಮಿಷಾರಣ್ಯವಾಸಿನಃ ।
ಪ್ರಣಿಪತ್ಯ ಯಥಾನ್ಯಾಯಂ ಪಪ್ರಚ್ಛುಃ ಪವನಂ ಪ್ರಭುಂ ॥ ೧ ॥

॥ ನೈಮಿಷೀಯಾ ಊಚುಃ ॥

ಭವಾನ್ಕಥಮನುಪ್ರಾಪ್ತೋ ಜ್ಞಾನಮೀಶ್ವರಗೋಚರಂ ।
ಕಥಂ ಚ ಶಿವಭಾವಸ್ತೇ ಬ್ರಹ್ಮಣೋಽವ್ಯಕ್ತಜನ್ಮನಃ ॥ ೨ ॥

---

## ಐದನೆಯ ಅಧ್ಯಾಯವು

೧. ಸೂತಮುನಿಯಿಂತೆಂದನು:— ಪೂರ್ವಕಾಲದಲ್ಲಿ ನೈಮಿಶಾರಣ್ಯದಲ್ಲಿ ವಾಸವಾಗಿದ್ದ ಋಷಿಗಳು, ಆ ವನದಲ್ಲಿಯೇ ತಮ್ಮ ಸಮೀಪಕ್ಕೆ ಬಂದಿರುವ ಪ್ರಭುವಾದ ವಾಯುದೇವನಿಗೆ ಶಾಸ್ತ್ರಕ್ರಮದಿಂದ ನಮಸ್ಕರಿಸಿ ಪ್ರಶ್ನೆಮಾಡಿದರು.

೨. ಎಲೈ ವಾಯುದೇವನೇ, ಅವ್ಯಕ್ತವೆನಿಸುವುದಕ್ಕೆ ಕಾರಣವೆನಿಸುವ ಬ್ರಹ್ಮನ ದೆಸೆಯಿಂದ ಶಿವಭಾವವು ನಿನಗೆ ಹೇಗೆ ಉಂಟಾಯಿತು ? ನೀನು ಶಿವನನ್ನು ಪ್ರತ್ಯಕ್ಷವಾಗಿ ದರ್ಶನಮಾಡುವ ಜ್ಞಾನವನ್ನು ಹೇಗೆ ಸಂಪಾದಿಸಿದೆ? ಇದನ್ನು ನಮಗೆ ತಿಳಿಸು ಎನ್ನಲು,

॥ ವಾಯುರುವಾಚ ॥

ಏಕೋನವಿಂಶತಿಃ ಕಲ್ಪೋ ವಿಜ್ಞೇಯಃ ಶ್ವೇತಲೋಹಿತಃ ।
ತಸ್ಮಿನ್ಕಲ್ಪೇ ಚತುರ್ವಕ್ತ್ರಸ್ಸ್ರಷ್ಟುಕಾಮೋಽತಪತ್ತಪಃ ॥ ೩ ॥

ತಪಸಾ ತೇನ ತೀವ್ರೇಣ ತುಷ್ಟಸ್ತಸ್ಯ ಪಿತಾ ಸ್ವಯಂ ।
ದಿವ್ಯಂ ಕೌಮಾರಮಾಸ್ಥಾಯ ರೂಪಂ ರೂಪವತಾಂ ವರಃ ॥ ೪ ॥

ಶ್ವೇತೋ ನಾಮ ಮುನಿರ್ಭೂತ್ವಾ ದಿವ್ಯಾಂ ವಾಚಮುದೀರಯನ್ ।
ದರ್ಶನಂ ಪ್ರದದೌ ತಸ್ಮೈ ದೇವದೇವೋ ಮಹೇಶ್ವರಃ ॥ ೫॥

ತಂ ದೃಷ್ಟ್ವಾ ಪಿತರಂ ಬ್ರಹ್ಮಾ ಬ್ರಹ್ಮಣೋಽಧಿಪತಿಂ ಪತಿಂ ।
ಪ್ರಣಮ್ಯ ಪರಮಜ್ಞಾನಂ ಗಾಯತ್ರ್ಯಾ ಸಹ ಲಬ್ಧವಾನ್ ॥ ೬ ॥

ತತಸ್ಸ ಲಬ್ಧವಿಜ್ಞಾನೋ ವಿಶ್ವಕರ್ಮಾ ಚತುರ್ಮುಖಃ ।
ಅಸೃಜತ್ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ॥ ೭ ॥

---

೩. ವಾಯುದೇವನು ಹೇಳಿದನು:—ಶ್ವೇತಲೋಹಿತವೆಂಬುವುದು ಹತ್ತೊಂಭತ್ತನೆಯ ಕಲ್ಪವೆನಿಸಿಕೊಳ್ಳುವುದು. ಆ ಕಲ್ಪದಲ್ಲಿ ಚತುರ್ಮುಖಬ್ರಹ್ಮನು ಸೃಷ್ಟಿ ಮಾಡಲು ಇಚ್ಛೆಯಿಂದ ತಪಸ್ಸನ್ನು ಮಾಡಿದನು.

೪-೫. ಅವನ ತಂದೆಯಾದ ಮಹೇಶ್ವರನು ಅವನ ಉಗ್ರವಾದ ತಪಸ್ಸಿಗೆ ಮೆಚ್ಚಿ ಸುಂದರವಾಗಿರುವ ಯೌವನಾಕಾರವನ್ನು ಹೊಂದಿ, ಶ್ವೇತನೆಂಬ ಮುನಿಯ ಹೆಸರಿನಿಂದ ಆ ಬ್ರಹ್ಮನಿಗೆ ದರ್ಶನವನ್ನಿತ್ತನು.

೬. ಚತುರ್ಮುಖಬ್ರಹ್ಮನು ತನಗೂ, ಬ್ರಹ್ಮನಿಗೂ ಅಧಿಪತಿಯಾದ ತನ್ನ ತಂದೆಯನ್ನು ನೋಡಿ, ಅವನಿಗೆ ನಮಸ್ಕರಿಸಿ ಅವನಿಂದ ಗಾಯಿತ್ರೀಮಂತ್ರವನ್ನೂ ಉತ್ತಮವಾದ ಜ್ಞಾನವನ್ನೂ ಕೂಡ ಹೊಂದಿದನು.

೭. ಪ್ರಪಂಚವೆಲ್ಲವನ್ನೂ ಸೃಷ್ಟಿಮಾಡುವ ಚತುರ್ಮುಖಬ್ರಹ್ಮನು ಅವನಿಂದ ಜ್ಞಾನವನ್ನು ಹೊಂದಿದ ನಂತರ ಸ್ಥಾವರಜಂಗಮರೂಪವಾದ ಎಲ್ಲಾ ಪ್ರಾಣಿಗಳನ್ನೂ ಸೃಷ್ಟಿಮಾಡಿದನು.

ಯತಶ್ಶ್ರುತ್ವಾಮೃತಂ ಲಬ್ಧಂ ಬ್ರಹ್ಮಣಾ ಪರಮೇಶ್ವರಾತ್ ।
ತತಸ್ತದ್ವದನಾದೇವ ಮಯಾ ಲಬ್ಧಂ ತಪೋಬಲಾತ್ ॥ ೮ ॥

॥ ಮುನಯ ಊಚುಃ ॥
ಕಿಂ ತಜ್ಜ್ಞಾನಂ ತ್ವಯಾ ಲಬ್ಧಂ ತಥ್ಯಾತ್ತಥ್ಯತರಂ ಶುಭಂ ।
ಯತ್ರ ಕೃತ್ವಾ ಪರಾಂ ನಿಷ್ಠಾಂ ಪುರುಷಸ್ಸುಖಮೃಚ್ಛತಿ ॥ ೯ ॥

॥ ವಾಯುರುವಾಚ ॥
ಪಶುಪಾಶಪತಿಜ್ಞಾನಂ ಯಲ್ಲಬ್ಧಂ ತು ಮಯಾ ಪುರಾ ।
ತತ್ರ ನಿಷ್ಠಾ ಪರಾ ಕಾರ್ಯಾ ಪುರುಷೇಣ ಸುಖಾರ್ಥಿನಾ ॥ ೧೦ ॥

ಅಜ್ಞಾನಪ್ರಭವಂ ದುಃಖಂ ಜ್ಞಾನೇನೈವ ನಿವರ್ತತೇ ।
ಜ್ಞಾನಂ ವಸ್ತುಪರಿಚ್ಛೇದೋ ವಸ್ತು ಚ ದ್ವಿವಿಧಂ ಸ್ಮೃತಂ ॥ ೧೧ ॥

೮. ಯಾವ ಪರಮೇಶ್ವರನ ಅನುಗ್ರಹದಿಂದ ಬ್ರಹ್ಮನು ಜ್ಞಾನೋಪದೇಶವನ್ನು ಹೊಂದಿ ಮೋಕ್ಷವನ್ನು ಹೊಂದಿದನೋ, ಆ ಪರಮೇಶ್ವರನ ಅನುಗ್ರಹದಿಂದಲೇ ನಾನೂ ಕೂಡ ತಪಸ್ಸನ್ನು ಮಾಡಿ ಆ ಪರಮೇಶ್ವರನ ಮುಖದಿಂದಲೇ ಜ್ಞಾನವನ್ನು ಉಪದೇಶಮಾಡಿಸಿಕೊಂಡು ಅಮೃತತ್ವವನ್ನು ಹೊಂದಿರುವೆನು ಎಂದನು

೯. ಋಷಿಗಳು ಮತ್ತೆ ಕೇಳಿದರು:—ಸತ್ಯರೂಪದಿಂದ ಇರುವ. ನೀನು ಹೊಂದಿರುವ ಉತ್ತಮವಾದ ಆ ಜ್ಞಾನವು ಯಾವುದು? ಸುಖವನ್ನು ಹೊಂದಬಹುದಾದ ಆ ಜ್ಞಾನವನ್ನು ನಮಗೂ ಉಪದೇಶಿಸು ಎಂದು ಪ್ರಾರ್ಥಿಸಲು.

೧೦. ವಾಯುದೇವನಿಂತೆಂದನು:—ನಾನು ಪಶು, ಪಾಶ, ಪತಿ ಈ ಮೂರು ಪದಾರ್ಥಗಳ ಜ್ಞಾನವನ್ನು ಚೆನ್ನಾಗಿ ವಿಚಾರಮಾಡಿ ತಿಳಿದಿರುವೆನು. ಸುಖವನ್ನು ಅಪೇಕ್ಷಿಸುವ ಮನುಷ್ಯನು ಈ ಮೂರು ಪದಾರ್ಥಗಳನ್ನು ತಿಳಿದುಕೊಂಡು ಜ್ಞಾನನಿಷ್ಠೆಯನ್ನು ಸಂಪಾದಿಸಬೇಕು.

೧೧-೧೩. ಲೋಕದಲ್ಲಿ ದುಃಖವು ತಿಳುವಳಿಕೆಯಿಲ್ಲದಿರುವುದರಿಂದ ಹುಟ್ಟುವುದು. ಅದು ಜ್ಞಾನದಿಂದ ಹೋಗುವುದು. ಪದಾರ್ಥಗಳ ಸರಿಯಾದ ತಿಳುವಳಿ.

ಅಜಡಂ ಚ ಜಡಂ ಚೈವ ನಿಯಂತೃ ಚ ತಯೋರಪಿ ।
ಪಶುಃ ಪಾಶಃ ಪತಿಶ್ಚೇತಿ ಕಥ್ಯತೇ ತತ್ತ್ರಯಂ ಕ್ರಮಾತ್ ॥ ೧೨ ॥

ಅಕ್ಷರಂ ಚ ಕ್ಷರಂ ಚೈವ ಕ್ಷರಾಕ್ಷರಪರಂ ತಥಾ ।
ತದೇತತ್ತ್ರಿತಯಂ ಭೂಮ್ನಾ ಕಥ್ಯತೇ ತತ್ತ್ವವೇದಿಭಿಃ ॥ ೧೩ ॥

ಅಕ್ಷರಂ ಪಶುರಿತ್ಯುಕ್ತಃ ಕ್ಷರಂ ಪಾಶ ಉದಾಹೃತಃ ।
ಕ್ಷರಾಕ್ಷರಪರಂ ಯತ್ತತ್ಪತಿರಿತ್ಯಭಿಧೀಯತೇ ॥ ೧೪ ॥

॥ ಮುನಯ ಊಚುಃ ॥

ಕಿಂ ತದಕ್ಷರಮಿತ್ಯುಕ್ತಂ ಕಿಂ ಚಾಕ್ಷರಮುದಾಹೃತಂ ।
ತಯೋಶ್ಚ ಪರಮಂ ಕಿಂ ವಾ ತದೇತದ್ಬ್ರೂಹಿ ಮಾರುತ ॥ ೧೫ ॥

ಕೆಯು ಜ್ಞಾನವೆನಿಸಿಕೊಳ್ಳುವುದು. ವಸ್ತುಗಳು ಅಥವಾ ಪದಾರ್ಥಗಳು ಜಡವೆಂದೂ ಅಜಡವೆಂದೂ ಎರಡು ವಿಧವಾಗಿರುವವು. ಜಡವಾದ ಪದಾರ್ಥಗಳು ಎಂದರೆ ಕಲ್ಲು, ಮಣ್ಣು ಮುಂತಾದವು. ಅಜಡವೆಂದರೆ ಜಡವಲ್ಲದ ಪ್ರಾಣಿ ಮುಂತಾದವುಗಳು. ಇವುಗಳ ನಿಜಸ್ಥಿತಿಯನ್ನು ತಿಳಿದುಕೊಳ್ಳುವುದೇ ಜ್ಞಾನವೆನಿಸುವುದು. ಈ ಜಡ ಮತ್ತು ಅಜಡ ವಸ್ತುಗಳಿಗೆ ನಿಯಾಮಕನಾದವನು ಒಬ್ಬನಿರುವನು. ಅವನೇ ಶಿವನು. ಈ ಜಡ, ಅಜಡ, ನಿಯಾಮಕರಿಗೆ ಕ್ರಮವಾಗಿ ಪಾಶ, ಪಶು, ಪತಿ ಎಂತಲೂ ಕ್ಷರ, ಅಕ್ಷರ, ಕ್ಷರಾಕ್ಷರಪರ ಎಂತಲೂ ಶಿವತತ್ತ್ವವನ್ನು ತಿಳಿದ ಜ್ಞಾನಿಗಳು ಹೇಳುವರು.

೧೪. ಇವುಗಳಲ್ಲಿ ಪಶುವಾದ ಜೀವನು ಅಕ್ಷರನೆಂಬುದಾಗಿಯೂ, ಪಾಶವೆಂಬುದನ್ನು ಕ್ಷರವೆಂತಲೂ, ಇವೆರಡಕ್ಕೂ ನಿಯಾಮಕನಾಗಿರುವ ಪತಿಯೆಂಬುದನ್ನು ಕ್ಷರಾಕ್ಷರಪರವೆಂತಲೂ ಶಿವತತ್ವಗಳನ್ನು ಬಲ್ಲವರು ಹೇಳುತ್ತಾರೆ ಎಂದನು.

೧೫. ಋಷಿಗಳಿಂತೆಂದರು :--ಎಲೈ ವಾಯುದೇವನೇ, ಅಕ್ಷರವೆಂಬುದು ಯಾವುದು ? ಕ್ಷರವೆಂದು ಏತಕ್ಕೆ ಹೆಸರು ? ಇವೆರಡಕ್ಕಿಂತಲೂ ಉತ್ತಮವಾದ ಕ್ಷರಾಕ್ಷರಪರವೆಂಬುವುದು ಯಾವುದು ? ಇದರ ವಿವರವನ್ನು ನಮಗೆ ಚೆನ್ನಾಗಿ ತಿಳಿಯ ಹೇಳು ಎನ್ನಲು.

॥ ವಾಯುರುವಾಚ ॥

ಪ್ರಕೃತಿಃ ಕ್ಷರಮಿತ್ಯುಕ್ತಂ ಪುರುಷೋಽಕ್ಷರ ಉಚ್ಯತೇ ।
ತಾವಿಮೌ "ಪ್ರೇರಯತ್ಯನ್ಯಸ್ಸ ಪರಃ ಪರಮೇಶ್ವರಃ" ॥ ೧೬ ॥

॥ ಮುನಯ ಊಚುಃ ॥

ಕೈಷಾ ಪ್ರಕೃತಿರಿತ್ಯುಕ್ತಾ ಕ ಏಷ ಪುರುಷೋ ಮತಃ ।
ಅನಯೋಃ ಕೇನ ಸಂಬಂಧಃ ಕೋಽಯಂ ಪ್ರೇರಕ ಈಶ್ವರಃ ॥ ೧೭ ॥

॥ ವಾಯುರುವಾಚ ॥

ಮಾಯಾಪ್ರಕೃತಿರುದ್ದಿಷ್ಟಾ ಪುರುಷೋ ಮಾಯಯಾ ವೃತಃ ।
ಸಂಬಂಧೋ ಮೂಲಕರ್ಮಭ್ಯಾಂ ಶಿವಃ ಪ್ರೇರಕ ಈಶ್ವರಃ ॥ ೧೮ ॥

॥ ಮುನಯ ಊಚುಃ ॥

ಕೇಯಂ ಮಾಯಾ ಸಮಾಖ್ಯಾತಾ ಕಿಂರೂಪೋ ಮಾಯಯಾ ವೃತಃ ।
ಮೂಲಂ ಕೀದೃಕ್ಕುತೋ ವಾಸ್ಯ ಕಿಂ ಶಿವತ್ವಂ ಕುತಶ್ಶಿವಃ ॥ ೧೯ ॥

---

೧೬. ವಾಯುದೇವನಿಂತೆಂದನು :—ಪ್ರಕೃತಿಯನ್ನು ಕ್ಷರವೆಂತಲೂ, ಪುರುಷನನ್ನು ಅಕ್ಷರನೆಂತಲೂ, ಇವರಿಬ್ಬರನ್ನೂ ಪ್ರೇರಿಸುವ ಪರಮೇಶ್ವರನನ್ನು ಕ್ಷರಾಕ್ಷರಪರನೆಂತಲೂ ಹೇಳುವರು ಎಂದನು

೧೭. ಋಷಿಗಳು ಪ್ರಕೃತಿಯೆಂದು ಯಾರಿಗೆ ಹೆಸರು ? ಪುರುಷನೆನಿಸಿಕೊಳ್ಳುವವನು ಯಾರು ? ಪ್ರಕೃತಿ ಪುರುಷ ಇವರಿಬ್ಬರಿಗೂ ಏನು ಸಂಬಂಧವು ? ಇವರಿಬ್ಬರನ್ನೂ ಪ್ರೇರಿಸುವ ಈಶ್ವರನು ಯಾರು ? ಇದನ್ನು ನಮಗೆ ತಿಳಿಸು ಎಂದು ಕೇಳಿದರು.

೧೮. ವಾಯುದೇವ ಮಾಯೆಗೆ ಪ್ರಕೃತಿ ಎಂದು ಹೆಸರು. ಈ ಮಾಯೆಯಿಂದ ಆವರಿಸಲ್ಪಟ್ಟ ಜೀವನಿಗೆ ಪುರುಷನೆಂದು ಹೆಸರು. ಮಾಯೆಗೂ ಈ ಪುರುಷನಿಗೂ ಇರುವ ಸಂಬಂಧವು ಮೊದಲನಿಂದಲೂ ಕರ್ಮದಿಂದ ಉಂಟಾಗಿರುವುದು. ಈಶ್ವರನಾದ ಶಿವನು ಇವರಿಬ್ಬರನ್ನೂ ಪ್ರೇರಿಸುವವನಾಗಿರುವನು ಎಂದು ಹೇಳಿದನು.

೧೯. ಋಷಿಗಳು ಎಲೈ ವಾಯುದೇವನೆ, ಮಾಯೆಯೆಂಬುವುದು ಯಾವುದು? ಮಾಯೆಯ ಆವರಣದಲ್ಲಿರುವವನು ಪಶುವಾಗುವುದಾದರೆ ಜ್ಞಾನಸ್ವರೂಪನಾದ ಪುರುಷನ ನಿಜವಾದ ರೂಪವನ್ನು ಮರೆಮಾಡುವ ಗುಣವು ಮಾಯೆಯಲ್ಲಿರಬೇಕಾ

॥ ವಾಯುರುವಾಚ ॥

**ಮಾಯಾ ಮಹೇಶ್ವರೀ ಶಕ್ತಿಃ ಚಿದ್ರೂಪೋ ಮಾಯಯಾ ವೃತಃ ।**
**ಮಲಶ್ಛಿಚ್ಛಾದಕೋ ನೈಜೋ ವಿಶುದ್ಧಶ್ಶಿವತಾ ಸ್ವತಃ ॥ ೨೦ ॥**

॥ ಮುನಯ ಊಚುಃ ॥

**ಆವೃಣೋತಿ ಕಥಂ ಮಾಯಾ ವ್ಯಾಪಿನಂ ಕೇನ ಹೇತುನಾ ।**
**ಕಿಮರ್ಥಂ ಚಾ ವೃತಿಃ ಪುಂಸಃ ಕೇನ ವಾ ವಿನಿವರ್ತತೇ ॥ ೨೧ ॥**

॥ ವಾಯುರುವಾಚ ॥

**ಆವೃತಿರ್ವ್ಯಾಪಿನೋಽಪಿ ಸ್ಯಾದ್ವ್ಯಾಪಿ ಯಸ್ಮಾತ್ಕಲಾದ್ಯಪಿ ।**
**ಹೇತುಃ ಕರ್ಮೈವ ಭೋಗಾರ್ಥಂ ನಿವರ್ತೇತ ಮಲಕ್ಷಯಾತ್ ॥ ೨೨ ॥**

---

ಯಿತು. ಅಥವಾ ಪುರುಷನಲ್ಲಿ ಕರ್ಮಗಳ ದೆಸೆಯಿಂದ ತನ್ನ ಸ್ವರೂಪವನ್ನು ತಿಳಿಯದಂತೆ ಮಾಡಿಕೊಳ್ಳುವುದಾದರೆ ಮಾಯೆಯಲ್ಲಿರುವ ಪುರುಷನ ನಿಜಸ್ಥಿತಿಯನ್ನು ಮರೆಮಾಡುವ ಮಲದ ರೂಪವು ಹೇಗಿರುವುದು ? ಈ ಪುರುಷನಿಗೆ ಕರ್ಮಗಳ ಮೂಲಕ ಮಾಯೆಯ ಸಂಬಂಧವು ಏತಕ್ಕಾಗಿ ಬಂದಿತು ? ಈ ಮಾಯೆಯ ಸಂಬಂಧವು ಪುರುಷನಿಗೆ ತಪ್ಪಿದರೆ ಇವನಿಗೆ ಶಿವಭಾವವು ಉಂಟಾಗುವುದೆಂದರೆ ಶಿವನನ್ನು ಪ್ರತ್ಯೇಕವಾಗಿ ಏತಕ್ಕೆ ಒಪ್ಪಬೇಕು ? ಶಿವನೆಂದರೆ ಯಾರು ? ಎಂದು ಪ್ರಶ್ನೆ ಮಾಡಲು.

೨೦. ವಾಯುದೇವನು ಮಹೇಶ್ವರನ ಶಕ್ತಿಯೇ ಮಾಯೆಯೆಂಬ ಹೆಸರಿನಿಂದ ಜ್ಞಾನರೂಪವನ್ನು ಆವರಿಸಿಕೊಂಡು ಪುರುಷನಿಗೆ ತನ್ನ ನಿಜ ಸ್ವರೂಪವು ತಿಳಿಯದಂತೆ ಮಾಡುವುದು ಮಾಯೆಯಲ್ಲಿರುವ ಜ್ಞಾನವನ್ನು ಮರೆಮಾಡುವ ಸಾಮರ್ಥ್ಯವುಳ್ಳ ಭಾಗವು ಮಲವೆನಿಸಿಕೊಳ್ಳುವುದು. ಸ್ವಾಭಾವಿಕವಾದ ಮಲಸಂಬಂಧವಿಲ್ಲದೆ ಇರುವ ಸ್ವರೂಪವು ಶಿವನ ರೂಪವೇ ಆಗಿರುವುದು ಎಂದನು.

೨೧. ಋಷಿಗಳು ಈ ಮಾಯೆಯು ಏತಕ್ಕಾಗಿ ಪುರುಷನನ್ನು (ಪ್ರಾಣಿಯನ್ನು) ಆವರಿಸುವುದು ? ಇದು ಯಾವುದರಿಂದ ಹೋಗುವುದು ಎನಲು ?

೨೨. ವಾಯುದೇವನು ಕಲಾದಿಗಳೂ ಕೂಡ ಜಗತ್ತೆಲ್ಲವನ್ನೂ ವ್ಯಾಪಿಸಿಕೊಂಡಿರುವ ಕಾರಣ ತನ್ನಂತೆಯೇ ವ್ಯಾಪಿಯಾಗಿರುವ ಶಿವಸ್ವರೂಪವನ್ನು ಆವರಿಸುವುದು. ಈ ರೀತಿಯಾದ ಆವರಣವು ಉಂಟಾಗುವುದಕ್ಕೆ ಕರ್ಮಗಳನ್ನು ಮಾಡಿ

**॥ ಮುನಯ ಊಚುಃ ॥**

**ಕಲಾದಿ ಕಥ್ಯತೇ ಕಿಂ ತತ್ಕರ್ಮ ವಾ ಕಿಮುದಾಹೃತಂ ।**
**ತತ್ಕಿಮಾದಿ ಕಿಮಂತಂ ವಾ ಕಿಂ ಫಲಂ ವಾ ಕಿಮಾಶ್ರಯಂ ॥ ೨೩ ॥**

**ಕಸ್ಯ ಭೋಗೇನ ಕಿಂ ಭೋಗ್ಯಂ ಕಿಂ ವಾ ತದ್ಭೋಗಸಾಧನಂ ।**
**ಮಲಕ್ಷಯಸ್ಯ ಕೋ ಹೇತುಃ ಕೀದೃಕ್ಷೀಣಮಲಃ ಪುಮಾನ್ ॥ ೨೪ ॥**

**॥ ವಾಯುರುವಾಚ ॥**

**ಕಲಾ ವಿದ್ಯಾ ಚ ರಾಗಶ್ಚ ಕಾಲೋ ನಿಯತಿರೇವ ಚ ।**
**ಕಲಾದಯಸ್ಸಮಾಖ್ಯಾತಾ ಯೋ ಭೋಕ್ತಾ ಪುರುಷೋ ಭವೇತ್ ॥ ೨೫ ॥**

---

ಆ ಕರ್ಮಗಳ ಫಲಭೋಗವೇ ಕಾರಣವು. ಭೋಗವು ಕಡಿಮೆಯಾಗುತ್ತಾ ಕರ್ಮ ಸಂಬಂಧವು ತಪ್ಪಿದಲ್ಲಿ ಈ ಆವರಣವು ನಾಶವಾಗಿ ನಿಜವಾದ ಜ್ಞಾನಸ್ವರೂಪವು ಪ್ರಕಾಶಿಸುವುದು ಎಂದನು

೨೩-೨೪. ಋಷಿಗಳು—ಕಲಾ ಎಂಬುವುಗಳು ಯಾವುವು? ಕರ್ಮವೆಂದು ಯಾವುದಕ್ಕೆ ಹೆಸರು? ಆ ಕರ್ಮವು ಯಾವಾಗ ಪ್ರಾರಂಭವಾಗಿ ಯಾವಾಗ ಕೊನೆಯನ್ನು ಮುಟ್ಟುವುದು? ಎಂದರೆ ಕರ್ಮಕ್ಕೆ ಆದ್ಯಂತಗಳು ಯಾವವು? ಕರ್ಮವು ಸಂತತವಾಗಿ ಯಾವ ಆಧಾರದಿಂದ ನಡೆಯುವುದು? ಕರ್ಮಗಳ ಫಲಕ್ಕೆ ಆಶ್ರಯನಾದವನು ಯಾರು? ಕರ್ಮದ ಫಲರೂಪವಾಗಿ ಅನುಭವಿಸಬೇಕಾದ ಭೋಗವಾವುದು? ಏನನ್ನು ಭೋಗಿಸಬೇಕು? ಭೋಗಪಡಲು ತಕ್ಕ ಸಾಧನ ಯಾವುದು? ಆವರಿಸಿರುವ ಮಲವು ಯಾವ ಕಾರಣದಿಂದ ನಾಶವಾಗುವುದು? ಮಲವು ನಾಶವಾದ ನಂತರ ಪುರುಷನು ಯಾವ ರೂಪದಿಂದ ಇರುವನು? ಎಂದರೆ ಮಲವಿಲ್ಲದೆ ನಿರ್ದೋಷವಾಗಿರುವ ಪುರುಷನ ನಿಜಸ್ವರೂಪವು ಹೇಗಿರುವದು ಎನಲು?

೨೫. ವಾಯುದೇವನು—ಕಲಾ, ಅವಿದ್ಯಾ, ರಾಗ, ಕಾಲ, ನಿಯತಿ ಎಂಬುವುಗಳು ಕಲಾದಿತತ್ವಗಳೆನಿಸಿಕೊಳ್ಳುವುವು. ಯಾವನು ಕರ್ಮಫಲವನ್ನು ಭೋಗಿಸುವನೋ ಅವನು ಪುರುಷನೆನಿಸಿಕೊಳ್ಳುವನು. ಮೊದಲು ಶಿವಭಾವದಿಂದಿರುವವನಿಗೆ ಮಾಯಾಸಂಬಂಧದಿಂದ ಆವರಣವು ಬಂದು ಅವನಲ್ಲಿ ಒಂದುವಿಧವಾದ ಅಜ್ಞಾನವು ಕಲಾ ಎನಿಸಿಕೊಂಡು ಬರುವುದು. ಅಜ್ಞಾನದ ರೂಪದಿಂದ ಇರುವವನಿಗೆ ಪುನಃ ವಿದ್ಯಾಸಂಬಂಧವು ಬಂದು ಕರ್ಮಗಳನ್ನು ಮಾಡುವ ರಾಗವೆಂಬ ಇಚ್ಛೆಯು ಹುಟ್ಟು

ಪುಣ್ಯಪಾಪಾತ್ಮಕಂ ಕರ್ಮ ಸುಖದುಃಖಫಲಂ ತು ಯತ್ ।
ಅನಾದಿಮಲಭೋಗಾಂತಮಜ್ಞಾನಾತ್ಮಸಮಾಶ್ರಯಂ ॥ ೨೬ ॥

ಭೋಗಃ ಕರ್ಮವಿನಾಶಾಯ ಭೋಗಮವ್ಯಕ್ತಮುಚ್ಯತೇ ।
ಬಾಹ್ಯಾಂತಃಕರಣದ್ವಾರಂ ಶರೀರಂ ಭೋಗಸಾಧನಂ ॥ ೨೭ ॥

ಭಾವಾತಿಶಯಲಬ್ಧೇನ ಪ್ರಸಾದೇನ ಮಲಕ್ಷಯಃ ।
ಕ್ಷೀಣೇ ಚಾತ್ಮಮಲೇ ತಸ್ಮಿನ್ನ್ಪುಮಾನ್ನಿವಸಮೋ ಭವೇತ್ ॥ ೨೮ ॥

ವುದು. ಆ ರಾಗದಿಂದ ಮಾಡಿದ ಕರ್ಮವು ಫಲವನ್ನು ಅನುಭವಿಸುವ ಕಾಲವು ಒದಗಿದ ಕೂಡಲೇ ನಿಯತಿಯಿಂದ ಕ್ಲುಪ್ತವಾದ ಕರ್ಮಫಲವನ್ನು ಭೋಗಿಸುವ ಪುರುಷಭಾವವು ಬರುವುದು. ಹೀಗೆ ಮಾಯಾಸಂಬಂಧದಿಂದ ಶಿವಭಾವವು ಹೋಗಿ ಪುರುಷಭಾವವು ಬರುವುದು.

೨೬. ಪುಣ್ಯಪಾಪಗಳನ್ನು ಉಂಟುಮಾಡುವ ಕರ್ಮಗಳ ಫಲವು ಸುಖ ಅಥವಾ ದುಃಖರೂಪವಾಗಿ ಇರುವುದು ಎಂದರೆ ಪುಣ್ಯಕರ್ಮಕ್ಕೆ ಸುಖವೂ ಪಾಪ ಕರ್ಮಕ್ಕೆ ದುಃಖವೂ ಫಲಗಳು. ಈ ಕರ್ಮಸಂಬಂಧವು ಅಜ್ಞಾನದಿಂದುಂಟಾದ ಮಲಸಂಬಂಧವು ಇರುವವರಿಗೂ ತಪ್ಪದೆ ಇರುವುದು.

೨೭. ತಾನು ಮಾಡಿದ ಕರ್ಮವು ಮುಗಿಯುವವರಿಗೂ ಆ ಕರ್ಮಫಲವನ್ನು ಅನುಭವಿಸುವುದು ಭೋಗವೆನಿಸಿಕೊಳ್ಳುವುದು ಇದರ ಸ್ವರೂಪವು ಯಾರಿಗೂ ತಿಳಿಯಲು ಸಾಧ್ಯವಾಗದಿರುವ ಕಾರಣ ಇದಕ್ಕೆ ಅವ್ಯಕ್ತವೆಂದು ಹೆಸರು. ಬಹಿರ್ಮುಖವಾಗಿರುವ ಅಂತಃಕರಣದ ಮುಖಾಂತರವಾಗಿ ಭೋಗವು ಉಂಟಾಗುವ ಕಾರಣ, ಶರೀರಕ್ಕೆ ಭೋಗಸಾಧನವೆಂದು ಹೆಸರು.

೨೮. ಭಕ್ತಿಯಿಂದ ಮಾಡಿದ ಶಿವಪೂಜೆಯಿಂದ ಶಿವಭಾವವು ಉಂಟಾಗುವುದು. ಶಿವನ ಅನುಗ್ರಹ ಮೂಲಕವಾಗಿ ಉಂಟಾದ ಈ ಶಿವಭಾವವೇ ಈ ಅಜ್ಞಾನ ಸಂಬಂಧವನ್ನು ನಾಶಮಾಡುವುದು. ಹೀಗೆ ಉಂಟಾಗುವ ಅಜ್ಞಾನನಾಶವು ಮಲಕ್ಷಯವೆನಿಸಿಕೊಳ್ಳುವುದು. ತನ್ನ ಅಜ್ಞಾನ ಸಂಬಂಧವೆಲ್ಲವೂ ತಪ್ಪಿದ ನಂತರ ಪುರುಷನು ತನ್ನ ನಿಜವಾದ ಶಿವಭಾವವನ್ನು ಹೊಂದುವನು ಎಂದು ಹೇಳಿದನು.

॥ ಮುನಯ ಊಚುಃ ॥

ಕಲಾದಿಪಂಚತತ್ತ್ವಾನಾಂ ಕಿಂ ಕರ್ಮ ಪೃಥಗುಚ್ಯತೇ ।
ಭೋಕ್ತೇತಿ ಪುರುಷಶ್ಚೇತಿ ಯೇನಾತ್ಮಾ ವ್ಯಪದಿಶ್ಯತೇ ॥ ೨೯ ॥

ಕಿಮಾತ್ಮಕಂ ತದವ್ಯಕ್ತಂ ಕೇನಾಕಾರೇಣ ಭುಜ್ಯತೇ ।
ಕಿಂ ತಸ್ಯ ಶರಣಂ ಭುಕ್ತೌ ಶರೀರಂ ಚ ಕಿಮುಚ್ಯತೇ ॥ ೩೦ ॥

॥ ವಾಯುರುವಾಚ ॥

ದಿಕ್ಕ್ರಿಯಾವ್ಯಂಜಕಾ ವಿದ್ಯಾ ಕಾಲೋ ರಾಗಃ ಪ್ರವರ್ತಕಃ ।
ಕಾಲೋಽವಚ್ಛೇದಕಸ್ತತ್ರ ನಿಯತಿಸ್ತು ನಿಯಾಮಿಕಾ ॥ ೩೧ ॥

ಅವ್ಯಕ್ತಂ ಕಾರಣಂ ಯತ್ತತ್ತ್ರಿಗುಣಂ ಪ್ರಭವಾಪ್ಯಯಂ ।
ಪ್ರಧಾನಂ ಪ್ರಕೃತಿಶ್ಚೇತಿ ಯದಾಹುಸ್ತತ್ತ್ವಚಿಂತಕಾಃ ॥ ೩೨ ॥

೨೯. ಋಷಿಗಳು ಕಲಾದಿಯಾಗಿರುವ ಐದು ತತ್ತ್ವಗಳಲ್ಲಿ ಕರ್ಮವನ್ನು ಸೇರಿಸದಿರುವ ಕಾರಣ, ಶಿವಭಾವವನ್ನು ತಪ್ಪಿಸುವ ಈ ಕರ್ಮವು ಪುರುಷನೆಂತಲೂ, ಭೋಕ್ತನೆಂತಲೂ, ವ್ಯವಹಾರಕ್ಕೆ ಯೋಗ್ಯನನ್ನಾಗಿ ಮಾಡುವುದರಿಂದ ಈ ಕರ್ಮವನ್ನು ಬೇರೆಯಾಗಿ ಏತಕ್ಕೆ ಹೇಳಬೇಕು? ಕಲಾದಿಗಳಲ್ಲಿ ಯಾತಕ್ಕೆ ಸೇರಿಸಲಿಲ್ಲ?

೩೦. ಹಿಂದೆ ಹೇಳಿದ ಕರ್ಮಫಲರೂಪವಾದ ಅವ್ಯಕ್ತವೆಂಬುವುದು ಯಾವ ರೂಪದಿಂದ ಇರುವುದು? ಅದನ್ನು ಯಾವ ರೀತಿಯಿಂದ ಭೋಗಿಸಬೇಕು? ಅದನ್ನು ಭೋಗಿಸಲು ಭೋಕ್ತೃವು ಯಾರು? ಯಾವುದಕ್ಕೆ ಶರೀರವೆಂದು ಹೆಸರು ಎನಲು?

೩೧. ವಾಯುದೇವನು -ದಿಕ್, ಕ್ರಿಯಾ ಎಂದರೆ ಪ್ರದೇಶ, ಕೆಲಸ ಇವುಗಳನ್ನು ಸೂಚಿಸುವುದೇ ವಿದ್ಯೆಯೆನಿಸಿಕೊಳ್ಳುವುದು. ಕಾಲವು ಇಚ್ಛಾರೂಪದಿಂದ ಕೆಲಸಗಳನ್ನು ಮಾಡಿಸುವುದು. ಆದರೆ ಇಚ್ಛೆಯಲ್ಲಿ ಕಾಲವು ಹಿಂದೆ ಇದ್ದುಕೊಂಡು ಇರುವುದು. ಕಾರ್ಯವನ್ನು ಹೀಗೆಯೇ, ಇಂತಹ ಪ್ರದೇಶದಲ್ಲಿಯೇ ಮಾಡಬೇಕು ಎಂದು ನಿಯಮಮಾಡುವುದೇ ನಿಯತಿಯೆನಿಸಿಕೊಳ್ಳುವುದು.

೩೧-೩೨. ವ್ಯವಹರಿಸಲ್ಪಡುವ ಅವ್ಯಕ್ತವೆಂಬುದು ಸತ್ತ್ವರಜಸ್ತಮೋಗುಣವಾಗಿರುವುದು ಮತ್ತು ಇದು ಕಾರಣವೆಂದು ಪ್ರಧಾನ, ಪ್ರಕೃತಿ ಎಂಬ ಹೆಸರಿನಿಂದ ಆಯಾಯ ತತ್ತ್ವಜ್ಞರಿಂದ ವ್ಯವಹರಿಸಲ್ಪಟ್ಟದ್ದಾಗಿರುವುದು. ಇದು ಪುರುಷನ ಜನನ

**ಕಲಾತಸ್ತದಭಿವ್ಯಕ್ತಮನಭಿವ್ಯಕ್ತಲಕ್ಷಣಂ ।**
**ಸುಖದುಃಖವಿಮೋಹಾತ್ಮಾ ಭುಜ್ಯತೇ ಗುಣವಾಂಸ್ತ್ರಿಧಾ ॥ ೩೩ ॥**

**ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।**
**ಪ್ರಕೃತೌ ಸೂಕ್ಷ್ಮರೂಪೇಣ ತಿಲೇ ತೈಲಮಿವ ಸ್ಥಿತಾಃ ॥ ೩೪ ॥**

**ಸುಖಂ ಚ ಸುಖಹೇತುಶ್ಚ ಸಮಾಸಾತ್ಸಾತ್ವಿಕಂ ಸ್ಮೃತಂ ।**
**ರಾಜಸಂ ತದ್ವಿಪರ್ಯಾಸಾತ್ ಸ್ತಂಭಮೋಹೌ ತು ತಾಮಸೌ ॥ ೩೫ ॥**

**ಸಾತ್ವಿಕ್ಯೂರ್ಧ್ವಗತಿಃ ಪ್ರೋಕ್ತಾ ತಾಮಸೀ ಸ್ಯಾದಧೋಗತಿಃ ।**
**ಮಧ್ಯಮಾ ತು ಗತಿರ್ಯಾ ಸಾ ರಾಜಸೀ ಪರಿಪಠ್ಯತೇ ॥ ೩೬ ॥**

---

ಮರಣಗಳಿಗೆ ಕಾರಣವಾಗಿರುವುದು. ಈ ಅವ್ಯಕ್ತವೆಂಬುವುದು ಕಲಾತತ್ವಕ್ಕಿಂತಲೂ ಸ್ಪಷ್ಟವಾದ ರೂಪವನ್ನು ಹೊಂದಿ ಕೊಂಚಮಟ್ಟಿಗೆ ಕೋರುವ ರೂಪದಿಂದಿರುವುದು. ಇದು ತ್ರಿಗುಣರೂಪದಿಂದ ಇರುವ ಕಾರಣ ಇದಕ್ಕೆ ಅಧೀನನಾದವನು ಸುಖ, ದುಃಖ, ಅಜ್ಞಾನ ಇವುಗಳಿಂದ ಕೂಡಿದವನಾಗಿ ಮೂರು ವಿಧವಾದ ಭೋಗವನ್ನು ಅನುಭವಿಸುವನು.

೩೪. ಈ ಪ್ರಕೃತಿಯು ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳ ರೂಪದಿಂದ ಇರುವುದು. ಈ ಗುಣಗಳು ಎಳ್ಳಿನಲ್ಲಿ ಎಣ್ಣೆಯು ಇರುವಂತೆ ಪ್ರಕೃತಿಯಲ್ಲಿ ಸೂಕ್ಷ್ಮವಾದ ರೂಪದಿಂದ ಇರುವುವು.

೩೫. ಸುಖವೂ ಸುಖಕ್ಕೆ ಕಾರಣವೂ ಸತ್ವಗುಣದಿಂದಲೇ ಉಂಟಾಗುವುದು. ದುಃಖವೂ, ದುಃಖಕ್ಕೆ ಕಾರಣವೂ ಸತ್ವಗುಣಕ್ಕೆ ವಿರೋಧವಾಗಿರುವುದರಿಂದ ರಜೋಗುಣದಿಂದ ಉಂಟಾಗುವುದು. ಸೋಮಾರಿತನವೂ, ದಡ್ಡತನವೂ ತಮೋಗುಣದಿಂದ ಉಂಟಾಗುವುದು ಎಂದು ಸಂಕ್ಷೇಪದಿಂದ ಹೇಳಿರುವೆನು.

೩೬. ಸತ್ವಗುಣವು ಹೆಚ್ಚಾಗಿ ಕಂಡುಬಂದರೆ ಅವನಿಗೆ ಉತ್ತಮವಾದ ಗತಿಯು ಉಂಟಾಗುವುದು. ತಮೋಗುಣವು ಹೆಚ್ಚಾಗಿದ್ದರೆ ಅವನು ತಾನು ಇರುವುದಕ್ಕಿಂತಲೂ ಕೀಳುಸ್ಥಿತಿಯನ್ನು ಹೊಂದುವನು. ಇವೆರಡಕ್ಕೂ ಮಧ್ಯದ ರಜೋಗುಣವು ಹೆಚ್ಚಾಗಿದ್ದರೆ ಅವನು ರಾಜಸನೆನಿಸಿಕೊಂಡು ಒಂದೇ ಸಮನಾಗಿರುವನು.

**ತನ್ಮಾತ್ರಾಪಂಚಕಂ ಚೈವ ಭೂತಪಂಚಕಮೇವ ಚ ।**
**ಜ್ಞಾನೇಂದ್ರಿಯಾಣಿ ಪಂಚೈಕ್ಯಂ ಪಂಚ ಕರ್ಮೇಂದ್ರಿಯಾಣಿ ಚ ॥ ೩೭ ॥**

**ಪ್ರಧಾನಬುಧ್ಯಹಂಕಾರಮನಾಂಸಿ ಚ ಚತುಷ್ಟಯಂ ।**
**ಸಮಾಸಾದೇವಮವ್ಯಕ್ತಂ ಸವಿಕಾರಮುದಾಹೃತಂ ॥ ೩೮ ॥**

**ತತ್ಕಾರಣದಶಾಪನ್ನಮವ್ಯಕ್ತಮಿತಿ ಕಥ್ಯತೇ ।**
**ವ್ಯಕ್ತಂ ಕಾರ್ಯದಶಾಪನ್ನಂ ಶರೀರಾದಿಘಟಾದಿವತ್ ॥ ೩೯ ॥**

**ಯಥಾ ಘಟಾದಿಕಂ ಕಾರ್ಯಂ ಮೃದಾದೇರ್ನಾತಿಭಿದ್ಯತೇ ।**
**ಶರೀರಾದಿ ತಥಾ ವ್ಯಕ್ತಮವ್ಯಕ್ತಾನ್ನಾತಿಭಿದ್ಯತೇ ॥ ೪೦ ॥**

---

೩೭-೩೮. ಪಂಚಮಹಾಭೂತಗಳ ಸೂಕ್ಷ್ಮರೂಪಗಳೈದು, ಪಂಚಮಹಾಭೂತಗಳು, ಐದು. ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳೈದು, ಪ್ರಕೃತಿ, ಬುದ್ಧಿ, ಅಹಂಕಾರ, ಮನಸ್ಸು ಎಂಬ ಅಂತಃಕರಣದ ಭೇದಗಳು ನಾಲ್ಕು, ಇವುಗಳು ಇಪ್ಪತ್ತನಾಲ್ಕು ಪದಾರ್ಥಗಳು ಒಟ್ಟಾಗಿ ಅವ್ಯಕ್ತವೆಂಬ ಹೆಸರನ್ನು ಹೊಂದುವುವು. ಅವ್ಯಕ್ತವು ತನ್ನ ವಿಕಾರವಾದ ಈ ಪದಾರ್ಥಗಳ ಮೂಲಕ ಜೀವನಿಗೆ ಸಹಕಾರಿಯಾಗಿರುವುದು.

೩೯. ಈ ಪದಾರ್ಥಗಳಿಗೆ ಕಾರಣಭೂತವಾದದ್ದನ್ನು ಅವ್ಯಕ್ತವೆಂದು ಹೇಳುವರು. ಈ ಅವ್ಯಕ್ತವೂ ಕಣ್ಣಿಗೆ ಕಾಣಿಸುವುದಿಲ್ಲ. ಕಾರ್ಯರೂಪಕ್ಕೆ ಬಂದಾಗ ವ್ಯಕ್ತವೆನಿಸಿಕೊಳ್ಳುವುದು. ಶರೀರವೂ, ಘಟಾದಿವಸ್ತುಗಳೂ ಈ ವ್ಯಕ್ತಕ್ಕೆ ಉದಾಹರಣೆಗಳು. ಆದುದರಿಂದ ಸ್ಥೂಲರೂಪದಿಂದಿರುವ ವಸ್ತುಗಳೆಲ್ಲವೂ ವ್ಯಕ್ತವೆನಿಸುವವು.

೪೦-೪೧. ಘಟಾದಿಗಳು ತಮಗೆ ಕಾರಣವಾದ ಮಣ್ಣಿಗಿಂತಲೂ ಬೇರೆಯಾಗಿ ಕಂಡುಬಂದರೂ ಮಣ್ಣಿನ ವಿಕಾರವಾದ ಪದಾರ್ಥಗಳಾಗಿರುವಂತೆ ಶರೀರ, ಇಂದ್ರಿಯ ಇವೇ ಮೊದಲಾದುವುಗಳು ಬೇರೆ ಎಂದು ಕಂಡುಬಂದರೂ. ಅವ್ಯಕ್ತಕ್ಕಿಂತ ಬೇರೆಯಾಗಿರುವುದಿಲ್ಲ. ಆದ್ದರಿಂದ ಜೀವನ ಭೋಗಕ್ಕೆ ಕಾರ್ಯ. ಕಾರಣಗಳ ರೂಪದಿಂದಿರುವ ಈ ಪದಾರ್ಥಗಳಲ್ಲಿ ಕೆಲವು ಕಾರಣಗಳಾಗಿಯೂ, ಕೆಲವು ಮುಖ್ಯಸಾಧನಗಳಾಗಿಯೂ ಇರುತ್ತವೆ. ಕಾರಣ ಮತ್ತು ಸಾಧನ ಈ ರೂಪಭೇದ ಮಾತ್ರದಿಂದ ಇವುಗಳನ್ನು ಬೇರೆ ಎಂದು ಹೇಳುವುದಕ್ಕಾಗುವುದಿಲ್ಲವಾಗಿ ಇವುಗಳನ್ನು ಅವ್ಯಕ್ತಪದಾರ್ಥದಲ್ಲಿ ಅಂತರ್ಭಾವವನ್ನು ಹೇಳಿ ಅವ್ಯಕ್ತವೆಂಬ ಪದಾರ್ಥವು ಜೀವನಿಗೆ

ತಸ್ಮಾದವ್ಯಕ್ತಮೇವೈಕ್ಯಕಾರಣಂ ಕರಣಾನಿ ಚ ।
ಶರೀರಂ ಚ ತದಾಧಾರಂ ತದ್ಭೋಗ್ಯಂ ಚಾಪಿ ನೇತರತ್ ॥ ೪೧ ॥

॥ ಮುನಯ ಊಚುಃ ॥
ಬುದ್ಧೀಂದ್ರಿಯಶರೀರೇಭ್ಯೋ ವ್ಯತಿರೇಕಸ್ಯ ಕಸ್ಯಚಿತ್ ।
ಆತ್ಮಶಬ್ದಾಭಿಧೇಯಸ್ಯ ವಸ್ತುತೋಽಪಿ ಕುತಃ ಸ್ಥಿತಿಃ ॥ ೪೨ ॥

॥ ವಾಯುರುವಾಚ ॥
ಬುದ್ಧೀಂದ್ರಿಯಶರೀರೇಭ್ಯಂ ವ್ಯತಿರೇಕೋ ವಿಭೋರ್ಧ್ರುವಂ ।
ಅಸ್ತ್ಯೇವ ಕಶ್ಚಿದಾತ್ಮೇತಿ ಹೇತುಸ್ತತ್ರ ಸುದುರ್ಗಮಃ ॥ ೪೩ ॥

ಬುದ್ಧೀಂದ್ರಿಯಶರೀರಾಣಾಂ ನಾತ್ಮತಾ ಸದ್ಭಿರುಚ್ಯತೇ ।
ಸ್ಮೃತೇರನಿಯತಜ್ಞಾನಾದಯಾವದ್ದೇಹವೇದನಾತ್ ॥ ೪೪ ॥

ಶರೀರ, ಶರೀರಕ್ಕೆ ಆಶ್ರಯ, ಜೀವನಭೋಗಕ್ಕೆ ಉಪಯೋಗವಾದ ವಸ್ತುಗಳು ಇವುಗಳನ್ನೆಲ್ಲವನ್ನು ಒಳಗೊಂಡಿರುವುದೆಂದು ಹೇಳಲ್ಪಟ್ಟಿರುವುದು. ಇದನ್ನು ಬಿಟ್ಟು ಬೇರೆ ಯಾವುದೂ ಇಲ್ಲವು ಎಂದುತ್ತರ ಕೊಟ್ಟನು.

೪೨. ಋಷಿಗಳು—ಜ್ಞಾನ, ಕರ್ಮೇಂದ್ರಿಯ, ಮನಸ್ಸು ಇವೇ ಮೊದಲಾದ ಇಪ್ಪತ್ತುನಾಲ್ಕು ಪದಾರ್ಥಗಳಿಂದಲೇ ಅವ್ಯಕ್ತವು ತಾನೇ ತಾನಾಗಿ ಎಲ್ಲವನ್ನೂ ನಡೆಸುತ್ತಿರುವಾಗ ಇವುಗಳಿಂದ ಬೇರೆಯಾದ ಆತ್ಮನೆಂಬ ಪದಾರ್ಥವು ಬೇರೆ ಯಾವುದಿರುವುದು ? ಎಂದು ಕೇಳಲು.

೪೩. ವಾಯುದೇವನು—ಬುದ್ಧಿ, ಇಂದ್ರಿಯ, ಶರೀರ ಇವುಗಳಿಗಿಂತಲೂ ಬೇರೆಯಾಗಿ, ಎಲ್ಲಾ ಕಡೆಯಲ್ಲಿಯಲ್ಲಿಯೂ ವ್ಯಾಪಿಸಿಕೊಂಡಿರುವಆತ್ಮನೆಂಬ ಪದಾರ್ಥವನ್ನು ಅಂಗೀಕರಿಸದೆ ಇದ್ದರೆ ಶಾಸ್ತ್ರವು ಒಪ್ಪುವುದಿಲ್ಲ. ಇದಕ್ಕೆ ಸರಿಯಾದ ಯುಕ್ತಿಯನ್ನು ಮುಂದೆ ಹೇಳುವೆನು. ಅವ್ಯಕ್ತವೇ ಮೊದಲಾದಈ ಪದಾರ್ಥಗಳ ಸಮೂಹಕ್ಕಿಂತಲೂ ಬೇರೆಯಾಗಿ ಆತ್ಮನೊಬ್ಬನಿರುವನೆಂದು ಹೇಳಲೇಬೇಕು. ಆದರೂ ಇಂತಹ ಆತ್ಮನಿರುವನೆಂಬುವುದನ್ನು ಕಾರಣಸಹಿತವಾಗಿ ಪ್ರತಿಪಾದನೆ ಮಾಡುವುದು ಕಷ್ಟವಾಗಿರುವುದು.

೪೪. ಸ್ಮೃತಿಯೆಂಬುವುದು ಎಲ್ಲಾ ಕಾಲದಲ್ಲಿಯೂ ಇಲ್ಲದಿರುವುದರಿಂದ ಆತ್ಮನೆನಿಸಿಕೊಳ್ಳುವುದಿಲ್ಲ. ಎಲ್ಲಾ ಶರೀರಗಳನ್ನೂ ವ್ಯಾಪಿಸಿಕೊಂಡಿರುವುದಕ್ಕಾಗದೇ

**ಅತಃ ಸ್ಮರ್ತಾನುಭೂತಾನಾಮಶೇಷಜ್ಞೇಯಗೋಚರಃ ।**
**ಅಂತರ್ಯಾಮೀತಿ ವೇದೇಷು ವೇದಾಂತೇಷು ಚ ಗೀಯತೇ ॥ ೪೫ ॥**

**ಸರ್ವಂ ತತ್ರ ಸ ಸರ್ವತ್ರ ವ್ಯಾಪ್ಯ ತಿಷ್ಠತಿ ಶಾಶ್ವತಃ ।**
**ತಥಾಪಿ ಕ್ವಾಪಿ ಕೇನಾಪಿ ವ್ಯಕ್ತಮೇಷ ನ ದೃಶ್ಯತೇ ॥ ೪೬ ॥**

**ನೈವಾಯಂ ಚಕ್ಷುಷಾ ಗ್ರಾಹ್ಯೋ ನಾಪರೈರಿಂದ್ರಿಯೈರಪಿ ।**
**ಮನಸೈವ ಪ್ರದೀಪ್ತೇನ ಮಹಾನಾತ್ಮಾವಸೀಯತೇ ॥ ೪೭ ॥**

**ನ ಚ ಸ್ತ್ರೀ ನ ಪುಮಾನೇಷ ನೈವ ಚಾಪಿ ನಪುಂಸಕಃ ।**
**ನೈವೋರ್ಧ್ವಂ ನಾಪಿ ತಿರ್ಯಕ್ಚ ನಾಧಸ್ತಾನ್ನ ಕುತಶ್ಚನ ॥ ೪೮ ॥**

---

ಇರುವ ಕಾರಣ, ಬುದ್ಧಿ, ಇಂದ್ರಿಯ, ಶರೀರ ಇವುಗಳನ್ನೂ ಆತ್ಮನೆಂದು ಹೇಳಲಾಗುವುದಿಲ್ಲ. ಆತ್ಮನು ಸರ್ವವ್ಯಾಪಕನೆಂದು ಹಿಂದೆಯೇ ಹೇಳಿರುವೆನು.

೪೫. ಅವ್ಯಕ್ತವು ಜ್ಞಾನೇಂದ್ರಿಯಾದಿ ಪದಾರ್ಥಗಳ ಸಮುದಾಯಗಳಿಗೆ ಕಾರಣವಾಗಿದ್ದರೂ, ಜ್ಞಾನೇಂದ್ರಿಯಗಳಿಂದ ಅನುಭವಿಸಲ್ಪಟ್ಟದ್ದನ್ನು ಸ್ಮರಿಸಿಕೊಳ್ಳುವವನೂ, ಜ್ಞಾನದಿಂದ ಎಲ್ಲವನ್ನೂ ತಿಳಿಯತಕ್ಕವನೂ ಆಗಿರುವವನು ಬೇರೆ ಇರುವನೆಂದು ವೇದಗಳಲ್ಲಿಯೂ, ವೇದಾಂತಗಳಲ್ಲಿಯೂ ಅಂತರ್ಯಾಮಿ ಎಂದು ಪ್ರಸಿದ್ಧವಾಗಿರುವುದು.

೪೬. ಈ ಆತ್ಮನು ಯಾವಾಗಲೂ ಇರುವವನು. ಅವನು ಎಲ್ಲವನ್ನೂ ವ್ಯಾಪಿಸಿಕೊಂಡು ಎಲ್ಲಾ ಕಡೆಯಲ್ಲಿಯೂ ಇರುವನು ಹೀಗಿದ್ದಾಗ್ಯೂ ಅವನನ್ನು ಯಾರೂ, ಎಲ್ಲಿಯೂ ಸ್ಪಷ್ಟವಾಗಿ ಕಾಣುವುದಕ್ಕಾಗುವುದಿಲ್ಲ.

೪೭. ಇವನು ಇಷ್ಟುಮಟ್ಟಿನ ಮಹಿಮೆಯಿಂದ ಇದ್ದರೂ, ಇವನನ್ನು ಕಣ್ಣಿನಿಂದ ನೋಡಲು ಆಗುವುದಿಲ್ಲ. ಬೇರೆ ಇಂದ್ರಿಯಗಳಿಂದಲೂ ಇವನು ಹೀಗಿರುವನೆಂದು ತಿಳಿಯಲೂ ಸಾಧ್ಯವಿಲ್ಲ. ಆದರೆ ಬಹಳ ಪರಿಶುದ್ಧವಾದ ಮತ್ತು ಶಾಸ್ತ್ರಾಭ್ಯಾಸಾದಿಗಳಿಂದ ಪರಿಪಕ್ವವಾದ ಮನಸ್ಸಿನಿಂದ ಮಾತ್ರ ಆತ್ಮನೆಂಬುವನು ಒಬ್ಬನು ಇರುವನೆಂದು ನಿಶ್ಚಯಮಾಡಬಹುದು

೪೮. ಆತ್ಮನಿಗೆ ಲಿಂಗಭೇದವಿಲ್ಲ ಎಂದರೆ ಗಂಡಸಿನ, ಹೆಂಗಸಿನ ಅಥವಾ ನಪುಂಸಕನ ಆಕಾರವೂ ಇರುವುದಿಲ್ಲ ಇವನು ಮೇಲುಗಡೆಯಲ್ಲಿಯಾಗಲಿ, ಕೀಳು ಭಾಗದಲ್ಲಿಯಾಗಲಿ, ಅಡ್ಡಡ್ಡಲಾಗಿಯಾಗಲಿ ಇರುವುದಿಲ್ಲ. ಇವನು ಇಂತಹ ಪ್ರದೇಶ

**ಅಶರೀರಂ ಶರೀರೇಷು ಚಲೇಷು ಸ್ಥಾಣುಮವ್ಯಯಂ ।**
**ಸದಾ ಪಶ್ಯತಿ ತಂ ಧೀರೋ ನರಃ ಪ್ರತ್ಯವಮರ್ಶನಾತ್ ॥ ೪೯ ॥**

**ಕಿಮತ್ರ ಬಹುನೋಕ್ತೇನ ಪುರುಷೋ ದೇಹತಃ ಪೃಥಕ್ ।**
**ಅಪೃಥಗ್ಯೇ ತು ಪಶ್ಯಂತಿ ಹ್ಯಸಮ್ಯಕ್ತೇಷು ದರ್ಶನಂ ॥ ೫೦ ॥**

**ಯಚ್ಛರೀರಮಿದಂ ಪ್ರೋಕ್ತಂ ಪುರುಷಸ್ಯ ತತಃ ಪರಂ ।**
**ಅಶುದ್ಧಮವಶಂ ದುಃಖಮಧ್ರುವಂ ನ ಚ ವಿದ್ಯತೇ ॥ ೫೧ ॥**

**ವಿಪದಾಂ ಬೀಜಭೂತೇನ ಪುರುಷಸ್ತೇನ ಸಂಯುತಃ ।**
**ಸುಖೀ ದುಃಖೀ ಚ ಮೂಢಶ್ಚ ಭವತಿ ಸ್ವೇನ ಕರ್ಮಣಾ ॥ ೫೨ ॥**

---

ದಲ್ಲಿಯೇ ಇರುವನೆಂದು ಹೇಳುವುದಕ್ಕಾಗುವುದಿಲ್ಲ. ಎಂದರೆ ಇವನಿಗೆ ದೇಶಪರಿಮಿತಿ ಇಲ್ಲ. ಮತ್ತು ಇವನಿಗೆ ದೇಹಪರಿಮಿತಿ ಇಲ್ಲ.

೪೯. ಇವನು ಎಲ್ಲಾ ಪ್ರಾಣಿಗಳ ದೇಹಗಳಲ್ಲಿರುವವನಾದರೂ ನಮಗೆ ಇರುವಂತೆ ಇವನಿಗೆ ಪ್ರತ್ಯೇಕವಾದ ಶರೀರವಿಲ್ಲ. ಶರೀರವುಳ್ಳ ಪ್ರಾಣಿಗಳಲ್ಲಿ ಅಶರೀರನಾಗಿ ಎಂದರೆ ಅಂತರ್ಯಾಮಿಯಾಗಿರುವನು. ಚಲಿಸುವ ಪ್ರಾಣಿ ಮೊದಲಾದ ಸಮಸ್ತ ವಸ್ತುಗಳಲ್ಲಿಯೂ ಯಾವ ವಿಕಾರಕ್ಕೂ ಒಳಗಾಗದೆ ಸ್ಥಿರವಾಗಿ ನೆಲಸಿರುವನು. ಇಂತಹ ಆತ್ಮನನ್ನು ಜಿತೇಂದ್ರಿಯನಾದ ತತ್ತ್ವಾಭಿಲಾಷಿಯು ಶಾಸ್ತ್ರವಿಮರ್ಶೆ ಮೊದಲಾದ ಸಾಧನಗಳಿಂದ ತಿಳಿಯುವನು.

೫೦. ಆತ್ಮನು ಶರೀರಾದಿಗಳಿಂದ ಬೇರೆಯಾಗಿರುವನು ಎಂಬ ವಿಷಯದಲ್ಲಿ ಬಹಳವಾಗಿ ಹೇಳುವುದರಿಂದ ಪ್ರಯೋಜನವೇನು? ಆದರೆ ಯಾರು ಶರೀರವನ್ನೇ ಆತ್ಮನೆಂದು ತಿಳಿಯುವರೋ ಅವರ ತಿಳುವಳಿಕೆಯು ಸರಿಯಾದದ್ದಲ್ಲವು.

೫೧. ಶರೀರವು ಆತ್ಮನಾಗುವುದಾದರೆ ಲೋಕವ್ಯವಹಾರದಲ್ಲಿ, ಅವನ ಶರೀರ ಎಂಬುದೇ ಮೊದಲಾದದ್ದು ಲೋಕರೂಢಿಗೆ ವಿರುದ್ಧವಾಗುವುದು. ಶರೀರವೇ ಆತ್ಮನಾಗುವುದಾದರೆ ಶರೀರದಲ್ಲಿರುವ ಅಶುದ್ಧತೆ, ಪರಾಧೀನತೆ, ದುಃಖಾನುಭವ, ನಾಶವಾಗುವಿಕೆ, ಇವುಗಳೆಲ್ಲವೂ ಹೋಗಬೇಕಾಗುವುದು. ಆತ್ಮನಲ್ಲಿ ಈ ಗುಣಗಳು ಯಾವುದೂ ಇಲ್ಲ.

೫೨. ಪುರುಷನು ತಾನು ಮಾಡಿರುವ ಕರ್ಮದಿಂದ ವಿಪತ್ತಿಗೆ ಕಾರಣವಾಗಿರುವ ಈ ಶರೀರದ ಸಂಬಂಧವನ್ನು ಹೊಂದಿ ಸುಖವುಳ್ಳವನೆಂತಲೂ, ದುಃಖವುಳ್ಳವನೆಂತಲೂ, ದೊಡ್ಡವನೆಂತಲೂ ಲೋಕದಲ್ಲಿ ಅನ್ನಿಸಿಕೊಳ್ಳುವನು.

**ಅದ್ಭಿರಾಪ್ಲಾವಿತಂ ಕ್ಷೇತ್ರಂ ಜನಯತ್ಯಂಕುರಂ ಯಥಾ ।**
**ಅಜ್ಞಾನಾತ್ಪ್ಲಾವಿತಂ ಕರ್ಮ ದೇಹಂ ಜನಯತೇ ತಥಾ ॥ ೫೩ ॥**

**ಅತ್ಯಂತಮಸುಖಾವಾಸಾಸ್ತಥಾಶ್ಚೈಕಾಂತನಶ್ವರಾಃ ।**
**ಅನಾಗತಾ ಅತೀತಾಶ್ಚ ತನವೋಽಸ್ಯ ಸಹಸ್ರಶಃ ॥ ೫೪ ॥**

**ಆಗತ್ಯಾಗತ್ಯ ಶೀರ್ಣೇಷು ಶರೀರೇಷು ಶರೀರಿಣಃ ।**
**ಅತ್ಯಂತವಸತಿಃ ಕ್ವಾಪಿ ನ ಕೇನಾಪಿ ಚ ಲಭ್ಯತೇ ॥ ೫೫ ॥**

**ಛಾದಿತಶ್ಚ ವಿಯುಕ್ತಶ್ಚ ಶರೀರೈರೇಷು ಲಕ್ಷ್ಯತೇ ।**
**ಚಂದ್ರಬಿಂಬವದಾಕಾಶೇ ತರಲೈರಭ್ರಸಂಚಯೈಃ ॥ ೫೬ ॥**

---

೫೩. ನೀರಿನಿಂದ ಚೆನ್ನಾಗಿ ಹದವಾಗಿರುವ ಭೂಮಿಯಲ್ಲಿ ಮೊಳಕೆಯು ಬರುವಂತೆ, ಅಜ್ಞಾನದಿಂದ ಕೂಡಿರುವ ಕರ್ಮವು ದೇಹವು ಹುಟ್ಟುವುದಕ್ಕೆ ಕಾರಣವಾಗಿರುವುದು. ಆದುದರಿಂದ ಅಜ್ಞಾನವೇ ಎಂದರೆ ಶರೀರವೇ ಆತ್ಮನೆಂದು ತಿಳಿಯುವ ತಪ್ಪಾದ ಅಜ್ಞಾನವೇ ದೇಹಾದಿಗಳನ್ನು ಉಂಟುಮಾಡುವ ಕರ್ಮಕ್ಕೆ ಕಾರಣವಾಗಿರುವುದು. ಸರಿಯಾದ ಆತ್ಮಜ್ಞಾನವುಂಟಾದರೆ ಕರ್ಮ ಕ್ಷಯವಾಗಿ ಮುಕ್ತಿಯು ಲಭಿಸುವುದು.

೫೪. ಈ ಪುರುಷನಿಗೆ ಬಹಳ ದುಃಖಕರಗಳಾಗಿಯೂ, ನಾಶವನ್ನು ಹೊಂದತಕ್ಕವುಗಳಾಗಿಯೂ ಇರುವ ಶರೀರಗಳು ಸಾವಿರಗಟ್ಟಲೆಯಾಗಿ ಕಳೆದಿರುವುವು. ಇನ್ನೂ ಎಷ್ಟು ಶರೀರಗಳು ಬರುವುವೋ ಅವುಗಳು ಇಷ್ಟೇ ಸರಿ ಎಂದು ಲೆಕ್ಕಮಾಡುವುದಕ್ಕಾಗುವುದಿಲ್ಲ

೫೫. ಪ್ರಾಣಿಗಳಿಗೆ ಬರುವ ಶರೀರಗಳು ಕೆಲವುಕಾಲಾನಂತರ ನಾಶವನ್ನು ಹೊಂದುವವು. ಆದುದರಿಂದ ಬಹಳ ಕಾಲದವರಿಗೆ ಇದ್ದು ನಾಶವನ್ನು ಹೊಂದದೇ ಇರುವಷ್ಟುಮಟ್ಟಿನ ಶರೀರವನ್ನು ಯಾರೂ ಎಲ್ಲಿಯೂ ಹೊಂದುವುದೇ ಇಲ್ಲ.

೫೬. ಚಂಚಲವಾಗಿರುವ ಮೋಡಗಳ ಗುಂಪಿನಲ್ಲಿ ಸಿಕ್ಕಿರುವ ಚಂದ್ರಮಂಡಲವು ಕೆಲವುಕಾಲ ಕಣ್ಣಿಗೆ ಕಾಣಿಸದಿದ್ದರೂ ಮೋಡಗಳು ಹೋದಮೇಲೆ ಚೆನ್ನಾಗಿ ಪ್ರಕಾಶಿಸುವಂತೆ ಆತ್ಮನು ಶರೀರದಿಂದ ಕೂಡಿದ್ದಾಗ ಅಜ್ಞಾನಿಯಾಗಿದ್ದರೂ ಜ್ಞಾನಿಯಾದ ಮೇಲೆ ಶರೀರಾದಿಗಳ ಸಂಪರ್ಕವಿಲ್ಲದೆ ಸ್ವಪ್ರಕಾಶದಿಂದ ಬೆಳಗುವನು.

ಅನೇಕದೇಹಭೇದೇನ ಭಿನ್ನಾ ವೃತ್ತಿರಿಹಾತ್ಮನಃ ।
ಅಷ್ಟಾಪದಪರಿಕ್ಷೇಪೇ ಹ್ಯಕ್ಷಮುದ್ರೇವ ಲಕ್ಷ್ಯತೇ ॥ ೫೭ ॥

ನೈವಾಸ್ಯ ಭವಿತಾ ಕಶ್ಚಿನ್ನಾಸೌ ಭವತಿ ಕಸ್ಯಚಿತ್ ।
ಪಥಿ ಸಂಗಮ ಏವಾಯಂ ದಾರೈಃ ಪುತ್ರೈಶ್ಚ ಬಂಧುಭಿಃ ॥ ೫೮ ॥

ಯಥಾ ಕಾಷ್ಠಂ ಚ ಕಾಷ್ಠಂ ಚ ಸಮೇಯಾತಾಂ ಮಹೋದಧೌ ।
ಸಮೇತ್ಯ ಚ ವ್ಯಪೇಯಾತಾಂ ತದ್ವದ್ಭೂತಸಮಾಗಮಃ ॥ ೫೯ ॥

ಸ ಪಶ್ಯತಿ ಶರೀರಂ ತಚ್ಛರೀರಂ ತನ್ನ ಪಶ್ಯತಿ ।
ತೌ ಪಶ್ಯತಿ ಪರಃ ಕಶ್ಚಿತ್ತಾವುಭೌ ತಂ ನ ಪಶ್ಯತಃ ॥ ೬೦ ॥

೫೭. ಈ ದೇಹಸಂಬಂಧದಿಂದ ಅನೇಕ ಸಂಸ್ಕಾರಗಳಿಂದ ಕೂಡಿರುವ ಈ ಆತ್ಮನ ಮನೋವೃತ್ತಿಯು, ಚಿನ್ನವನ್ನು ಪರೆಹಚ್ಚುವ ಪರೆಗಳಲ್ಲಿ ಕಂಡು ಬರುವ ಚಿನ್ನದ ಭೇದಗಳ ಹಾಗೆ ಬೇರೆ ಬೇರೆಯಾಗಿ ಕಾಣುವುದು.

೫೮. ಇವನಿಗೆ ಯಾರೂ ಸಂಬಂಧಿಗಳಲ್ಲ ಇವನು ಯಾರಿಗೂ ನಿಜವಾದ ಸಂಬಂಧಿಯಲ್ಲ. ಹೆಂಡತಿ, ಮಕ್ಕಳು, ಬಂಧುಗಳು ಇವರ ಜತೆಯಲ್ಲಿರುವುದು, ದಾರಿಯಲ್ಲಿ ನಡೆಯುವಾಗ ನಾಲ್ಕಾರು ಜನಗಳೊಡನೆ ಇರುವಂತೆಯೇ ಆಗಿರುವುದು.

೫೯. ಸಮುದ್ರದಲ್ಲಿ ತೇಲುತ್ತಿರುವ ಕಟ್ಟಿಗೆಗಳು ಕೆಲವುವೇಳೆ ಒಂದೆಡೆ ಸೇರಿದ್ದು, ಕೆಲವು ಕಾಲಾನಂತರ ಅಲೆಗಳ ಹೊಡೆತದಿಂದ ಬೇರೆ ಬೇರೆ ಕಡೆಗೆ ಹೇಗೆ ಹೋಗುವುವೋ ಅದರ ಹಾಗೆಯೇ ಪ್ರಾಣಿಗಳು, ಎಂದರೆ ಹೆಂಡತಿ, ಮಕ್ಕಳು ಮುಂತಾದವರು ಒಂದು ಕಡೆಯಲ್ಲಿ ಸೇರುವರು ಮತ್ತು ಬೇರೆ ಬೇರೆಯಾಗುವರು.

೬೦. ಪುರುಷನು ಎಂದರೆ ಜೀವನು ಶರೀರವನ್ನು ನೋಡುವನು ಶರೀರವು ಅವನನ್ನು ನೋಡುವುದಿಲ್ಲ. ಇವರಿಬ್ಬರನ್ನೂ ಇನ್ನೊಬ್ಬನು ನೋಡುವನು. ಶರೀರವೂ, ಶರೀರವನ್ನು ನೋಡಿಕೊಳ್ಳುವವನೂ ಕೂಡ ಇವನನ್ನು ನೋಡಲಾರರು. ಶರೀರ, ಶರೀರವನ್ನು ನೋಡುವವ ಇವರಿಬ್ಬರಲ್ಲಿ ಶರೀರವು ಪ್ರಕೃತಿಯೇ ಆದ್ದರಿಂದ ಜಡವು. ಶರೀರವನ್ನು ನೋಡುವವನು ಪ್ರಕೃತಿಸಂಬಂಧವಿದ್ದಾಗ್ಯೂ ಜ್ಞಾನಸ್ವರೂಪದಿಂದಿರುವ ಜೀವನೆನಿಸಿಕೊಳ್ಳುವನು. ಇವೆರಡನ್ನೂ ನೋಡುವವನು ಮಾತ್ರ ಪ್ರಕೃತಿ ಸಂಬಂಧವಿಲ್ಲದಿರುವ ಆತ್ಮನೆಂತಲೂ, ಬ್ರಹ್ಮನೆಂತಲೂ ಹೆಸರನ್ನು ಹೊಂದಿರುವವನು.

**ಬ್ರಹ್ಮಾದ್ಯಾಃ ಸ್ಥಾವರಾಂತಾಶ್ಚ ಪಶವಃ ಪರಿಕೀರ್ತಿತಾಃ ।**
**ಪಶೂನಾಮೇವ ಸರ್ವೇಷಾಂ ಪ್ರೋಕ್ತಮೇತನ್ನಿದರ್ಶನಂ ॥ ೬೧ ॥**

**ಸ ಏಷ ಬಧ್ಯತೇ ಪಾಶೈಃ ಸುಖದುಃಖಾಶನಃ ಪಶುಃ ।**
**ಲೀಲಾಸಾಧನಭೂತೋ ಯ ಈಶ್ವರಸ್ಯೇತಿ ಸೂರಯಃ ॥ ೬೨ ॥**

**ಅಜ್ಞೋ ಜಂತುರನೀಶೋಽಯಮಾತ್ಮನಸ್ಸುಖದುಃಖಯೋಃ ।**
**ಈಶ್ವರಪ್ರೇರಿತೋ ಗಚ್ಛೇತ್ಸ್ವರ್ಗಂವಾ ಶ್ವಭ್ರಮೇವ ವಾ ॥ ೬೩ ॥**

**॥ ಸೂತ ಉವಾಚ ॥**

**ಇತ್ಯಾಕರ್ಣ್ಯಾನಿಲವಚೋ ಮುನಯಃ ಪ್ರೀತಮಾನಸಾಃ ।**
**ಪ್ರೋಚುಃ ಪ್ರಣಮ್ಯ ತಂ ವಾಯುಂ ಶೈವಾಗಮವಿಚಕ್ಷಣಂ ॥ ೬೪ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯ ಸಂಹಿತಾಯಾಂ ಪೂರ್ವಭಾಗೇ ಶಿವತತ್ತ್ವ ಜ್ಞಾನವರ್ಣನಂ ನಾಮ ಪಂಚಮೋಽಧ್ಯಾಯಃ**

೬೧. ಚತುರ್ಮುಖ ಬ್ರಹ್ಮನೇ ಆದಿಯಾಗಿ ಮರವೇ ಮುಂತಾದ ಸ್ಥಿರವಾದ ವಸ್ತುಗಳೆಲ್ಲವೂ ಪಶುವೆನಿಸಿಕೊಳ್ಳುವುವು. ಎಲ್ಲಾ ವಿಧವಾದ ಪಶುಗಳೆಲ್ಲರೂ ಇದೇ ರೀತಿಯಾಗಿರುವರೆಂದು ಉದಾಹರಣೆಯನ್ನು ಹೇಳಿದ್ದಾಯಿತು.

೬೨. ಈ ಪಶುವಾಗಿರುವವನು ಸುಖದುಃಖಗಳನ್ನು ಪಾಶರೂಪದಿಂದಿರುವ ಕರ್ಮಸಂಬಂಧದಿಂದಲೇ ಅನುಭವಿಸುತ್ತಾ, ಪಶುಪಾಶವೆಂಬ ಭೇದಕ್ಕೆ ಒಳಪಡದಿರುವ ಈಶ್ವರನಿಗೆ ಆಟದ ಬೊಂಬೆಯಾಗಿರುವನು ಎಂದು ತಿಳಿದವರು ಹೇಳುವರು.

೬೩. ಏನನ್ನೂ ತಿಳಿಯದೆ ಇರುವ ಪಶುವಾದ ಜೀವನು, ತಾನು ಅನುಭವಿಸಬೇಕಾಗಿರುವ ಸುಖದುಃಖಗಳ ವೇಗಕ್ಕೆ ಅಧೀನನಾಗಿ ಈಶ್ವರ ಪ್ರೇರಣೆಯಿಂದ ತನ್ನ ಕರ್ಮದ ಫಲವಾಗಿ ತನಗೆ ಒದಗಿ ಬಂದ ಸ್ವರ್ಗವನ್ನಾಗಲಿ, ಹಾಳುಗುಂಡಿಯಂತಿರುವ ನರಕವನ್ನಾಗಲಿ ಹೊಂದುವನು ಎಂದು ಹೇಳಿದನು.

೬೪. ಸೂತಪುರಾಣಿಕನು ಹೇಳಿದನು — ಈ ಪ್ರಕಾರವಾಗಿ ಹೇಳುತ್ತಿರುವ ವಾಯುದೇವನ ಮಾತುಗಳನ್ನು ಆ ಋಷಿಗಳೆಲ್ಲರೂ ಕೇಳಿ ಸಂತೋಷಪಟ್ಟು ಶೈವಾಗಮವಿಶಾರದನಾದ ಎಂದರೆ ಶಿವನ ಸಂಬಂಧವಾದ ಶಾಸ್ತ್ರಜ್ಞಾನವನ್ನು ಚೆನ್ನಾಗಿ ತಿಳಿದವನಾದ ಆ ವಾಯುದೇವನಿಗೆ ನಮಸ್ಕಾರಮಾಡಿ ಮತ್ತೆ ಪ್ರಶ್ನೆಮಾಡಿದರು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಪೂರ್ವಭಾಗದಲ್ಲಿ ಶಿವತತ್ತ್ವಜ್ಞಾನವರ್ಣನವೆಂಬ ಐದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ಷಷ್ಠೋಽಧ್ಯಾಯಃ

---

॥ ಮುನಯಊಚುಃ ॥

**ಯೋಽಯಂ ಪಶುರಿತಿ ಪ್ರೋಕ್ತೋ ಯಶ್ಚ ಪಾಶ ಉದಾಹೃತಃ ।**
**ಆಭ್ಯಾಂ ವಿಲಕ್ಷಣಃ ಕಶ್ಚಿತ್ಕೋಽಯಮಸ್ತಿ ತಯೋಃ ಪತಿಃ ॥ ೧ ॥**

॥ ವಾಯುರುವಾಚ ॥

**ಅಸ್ತಿ ಕಶ್ಚಿದಪರ್ಯಂತರಮಣೀಯಗುಣಾಶ್ರಯಃ ।**
**ಪತಿರ್ವಿಶ್ವಸ್ಯ ನಿರ್ಮಾತಾ ಪಶುಪಾಶವಿಮೋಚನಃ ॥ ೨ ॥**

## ಆರನೆಯ ಅಧ್ಯಾಯವು

೧. ಋಷಿಗಳು.—ಎಲೈ ವಾಯುದೇವನೆ! ನೀನು ಹೇಳಿದ ಪಶು, ಪಾಶ, ಪತಿ ಎಂಬ ಮೂರು ಪದಾರ್ಥಗಳಲ್ಲಿ ಪಶುವೆಂಬುವುದು ಯಾವುದು ? ಪಾಶವೆಂಬುವುದು ಯಾವುದು ? ಇವೆರಡಕ್ಕಿಂತಲೂ ಬೇರೆಯಾಗಿರುವ ಪತಿಯೆಂಬುವನು ಯಾರು ? ಇದನ್ನು ನಮಗೆ ಹೇಳಬೇಕು ಎನ್ನಲು,

೨. ವಾಯುದೇವನು ಹೇಳಿದನು.—ಅನೇಕ ಉತ್ತಮಗುಣಗಳುಳ್ಳವನಾದ ಓರ್ವಪುರುಷನಿರುವನು. ಇವನು ಪ್ರಪಂಚಕ್ಕೆಲ್ಲಕ್ಕೂ ಯಜಮಾನನಾಗಿಯೂ ಪ್ರಪಂಚವನ್ನು ನಿರ್ಮಿಸುವವನಾಗಿಯೂ ಇರುವುದಲ್ಲದೆ, ಪಶುವಾಗಿರುವವನ ಪಾಶವನ್ನು ಬಿಡಿಸುವನು.

**ಅಭಾವೇ ತಸ್ಯ ವಿಶ್ವಸ್ಯ ಸೃಷ್ಟಿರೇಷಾ ಕಥಂ ಭವೇತ್ ।**
**ಅಚೇತನತ್ವಾದಜ್ಞಾನಾದನಯೋಃ ಪಶುಪಾಶಯೋಃ ॥ ೩ ॥**

**ಪ್ರಧಾನಪರಮಾಣ್ವಾದಿ ಯಾವತ್ಕಿಂಚಿದಚೇತನಂ ।**
**ತತ್ಕರ್ತೃಕಂ ಸ್ವಯಂ ದೃಷ್ಟಂ ಬುದ್ಧಿಮತ್ಕಾರಣಂ ವಿನಾ ॥ ೪ ॥**

**ಜಗಚ್ಚ ಕರ್ತೃಸಾಪೇಕ್ಷಂ ಕಾರ್ಯಂ ಸಾವಯವಂ ಯತಃ ।**
**ತಸ್ಮಾತ್ಕಾರ್ಯಸ್ಯ ಕರ್ತೃತ್ವಂ ಪತ್ಯುರ್ನ ಪಶುಪಾಶಯೋಃ ॥ ೫ ॥**

**ಪಶೋರಪಿ ಚ ಕರ್ತೃತ್ವಂ ಪತ್ಯುಃ ಪ್ರೇರಣಪೂರ್ವಕಂ ।**
**ಅಯಥಾಕರಣಜ್ಞಾನಮಂಧಸ್ಯ ಗಮನಂ ಯಥಾ ॥ ೬ ॥**

೩. ಇಂತಹ ಯಜಮಾನನಾದವನು ಒಬ್ಬನಿಲ್ಲದ ಪಕ್ಷದಲ್ಲಿ ಜಡವಾಗಿಯೂ ಅಚೇತನರಾಗಿಯೂ ಜ್ಞಾನರಹಿತನಾಗಿಯೂ ಇರುವ ಪಶುಪಾಶಗಳೆಂಬ ಪದಾರ್ಥಗಳು ಹೇಗೆ ಜನಿಸುವವು ?

೪. ಪ್ರಕೃತಿ, ಪರಮಾಣು ಇವೇ ಮೊದಲಾದ ಜಡಪದಾರ್ಥಗಳು ಎಲ್ಲವೂ ಚೇತನವುಳ್ಳ ಒಬ್ಬ ಕರ್ತೃವಿನಿಂದ ಮಾಡಲ್ಪಟ್ಟದ್ದೆಂದು ಸ್ವಯಂ ವ್ಯಕ್ತವಾಗಿರುವುದು. ಇಲ್ಲದಿದ್ದರೆ ಕಾರಣವಿಲ್ಲದೆ ಕಾರ್ಯವು ಹುಟ್ಟುವ ಸಂಭವ ಬರುವುದು.

೫. ಅಂಗಗಳಿಂದ ಕೂಡಿರುವ ಕಾರ್ಯಗಳೆಲ್ಲವೂ ತನಗಿಂತ ಬೇರೆಯಾಗಿರುವ ಇನ್ನೊಬ್ಬನಿಂದ ಮಾಡಲ್ಪಟ್ಟಿರುವಕಾರಣ, ಜಗತ್ತೆಲ್ಲವನ್ನೂ ನಿರ್ಮಾಣಮಾಡಿದವನು ಒಬ್ಬನು ಇರಲೇಬೇಕಾಗಿರುವುದು. ಪಶು, ಪಾಶವೆಂಬ ಎರಡೂ ಜಡವಾದ ಕಾರಣ ಪತಿ ಎಂಬ ಪದಾರ್ಥವೇ ಈ ಜಗತ್ಕಾರ್ಯಕ್ಕೆ ಕರ್ತೃವಾಗಿರುವದು.

೬. ಕುರುಡನು ಲೋಕದಲ್ಲಿ ಇನ್ನೊಬ್ಬರ ಸಹಾಯವಿಲ್ಲದೆ ತನಗೆ ಬೇಕಾದೆಡೆಗೆ ಹೋಗಲಾರನಷ್ಟೆ. ಅದರಂತೆ ಪಶುಪಾಶಗಳಿಗೆ ತಕ್ಕಷ್ಟು ಜ್ಞಾನವಿಲ್ಲದ್ದರಿಂದ ಪ್ರಯುಕ್ತ ಪತಿಯೆಂಬ ಪದಾರ್ಥದ ಪ್ರೇರಣೆಯಿಂದ ಪಾಶವಾದ ಪದಾರ್ಥವು ಕೆಲಸ ಮಾಡುವುದು.

**ಆತ್ಮಾನಂ ಚ ಪೃಥಕ್ ಮತ್ವಾ ಪ್ರೇರಿತಾರಂ ತತಃ ಪೃಥಕ್ ।**
**ಅಸೌ ಜುಷ್ಟಸ್ತತಸ್ತೇನ ಹ್ಯಮೃತತ್ವಾಯ ಕಲ್ಪತೇ ॥ ೭ ॥**

**ಪಶೋಃ ಪಾಶಸ್ಯ ಪತ್ಯುಶ್ಚ ತತ್ವತೋಽಸ್ತಿ ಪದಂ ಪರಂ ।**
**ಬ್ರಹ್ಮವಿತ್ತದ್ವಿದಿತ್ವೈವ ಯೋನಿಮುಕ್ತೋ ಭವಿಷ್ಯತಿ ॥ ೮ ॥**

**ಸಂಯುಕ್ತಮೇತದ್ದ್ವಿತಯಂ ಕ್ಷರಮಕ್ಷರಮೇವ ಚ ।**
**ವ್ಯಕ್ತಾವ್ಯಕ್ತಂ ಬಿಭರ್ತೀಶೋ ವಿಶ್ವಂ ವಿಶ್ವವಿಮೋಚಕಃ ॥ ೯ ॥**

**ಭೋಕ್ತಾ ಭೋಗ್ಯಂ ಪ್ರೇರಯಿತಾ ಮಂತವ್ಯಂ ತ್ರಿವಿಧಂ ಸ್ಮೃತಂ ।**
**ನಾತಃ ಪರಂ ವಿಜಾನದ್ಭಿರ್ವೇದಿತವ್ಯಂ ಹಿ ಕಿಂಚನ ॥ ೧೦ ॥**

**ತಿಲೇಷು ವಾ ಯಥಾ ತೈಲಂ ದಧ್ನಿ ವಾ ಸರ್ಪಿರರ್ಪಿತಂ ।**
**ಯಥಾಪಸ್ಸ್ರೋತಸಿ ವ್ಯಾಪ್ತಾ ಯಥಾರಣ್ಯಾಂ ಹುತಾಶನಃ ॥ ೧೧ ॥**

---

೭. ಪಶುವಾದವನು ತನ್ನನ್ನು ಪ್ರೇರಿಸುವವನು ತನಗಿಂತಲೂ ಬೇರೆಯಾದ ಇನ್ನೊಬ್ಬನು ಇರುವನೆಂದು ತಿಳಿಯಬೇಕು. ಅನಂತರ ತಾನು ತನ್ನ ಪ್ರೇರಕನೊಡನೆ ಸೇರಿದಾಗ ತನ್ನ ಪಶುಭಾವವನ್ನು ಕಳೆದುಕೊಂಡು ಮುಕ್ತಿಯನ್ನು ಹೊಂದುವನು.

೮. ಪಶು, ಪಾಶ, ಪತಿ ಎಂಬ ಈ ಮೂರು ಪದಾರ್ಥಗಳಿಗೂ ತತ್ವದ ದೃಷ್ಟಿಯಿಂದ ಉತ್ತಮವಾದ ಸ್ಥಾನವಿರುವುದು ಬ್ರಹ್ಮಜ್ಞಾನಿಯಾದವನು ಅದನ್ನು ತಿಳಿದುಕೊಂಡು ಜನನಮರಣಗಳಿಂದ ಬಿಡುಗಡೆಯನ್ನು ಹೊಂದುವನು.

೯. ಕ್ಷರ, ಅಕ್ಷರ ಎಂಬ ಈ ಎರಡು ಪದಾರ್ಥಗಳೂ ಸೇರಿಕೊಂಡಿರುವುವು. ಈಶ್ವರನು ವ್ಯಕ್ತಾವ್ಯಕ್ತರೂಪವಾದ ಈ ಪ್ರಪಂಚವನ್ನು ತಾನೇ ಧರಿಸಿ ಪೋಷಿಸುತ್ತಿರುವನು. ಮತ್ತು ಕಾಲಬಂದೊಡನೆಯೇ ಮುಕ್ತಿಯನ್ನೈದಿಸುವನು.

೧೦. ಭೋಕ್ತೃ ಎಂದರೆ ಭೋಗಪಡುವವನು, ಭೋಗ್ಯಪದಾರ್ಥವು, ಮತ್ತು ಭೋಗ್ಯಪದಾರ್ಥವನ್ನು ಭೋಕ್ತೃವು ಭೋಗಿಸುವಂತೆ ಪ್ರೇರಿಸುವವನು ಎಂದು ಮೂರು ಪದಾರ್ಥಗಳಿರುವವು. ಇದಕ್ಕಿಂತಲೂ ಬೇರೆಯಾದ ಪದಾರ್ಥವು ಈ ಪ್ರಪಂಚದಲ್ಲಿಲ್ಲ, ಎಂದು ತಿಳಿಯಬೇಕು.

೧೧-೧೨. ಎಳ್ಳಿನಲ್ಲಿ ಎಣ್ಣೆಯು ಇರುವಂತೆಯೂ, ಮೊಸರಿನಲ್ಲಿ ತುಪ್ಪವಿರುವ ಹಾಗೆಯೂ, ಪ್ರವಾಹದಲ್ಲಿ ನೀರು ತುಂಬಿರುವಂತೆಯೂ, ಅರಣಿಯಲ್ಲಿ ಬೆಂಕಿಯು

**ಏವಮೇವ ಮಹಾತ್ಮಾನಮಾತ್ಮನ್ಯಾತ್ಮವಿಲಕ್ಷಣಂ ।**
**ಸತ್ಯೇನ ತಪಸಾ ಚೈವ ನಿತ್ಯಯುಕ್ತೋಽನುಪಶ್ಯತಿ　　॥ ೧೨ ॥**

**ಯ ಏಕೋ ಜಾಲವಾನೀಶ ಈಶಾನೀಭಿಸ್ಸ್ವಶಕ್ತಿಭಿಃ ।**
**ಸರ್ವಾಂಲ್ಲೋಕಾನಿಮಾನ್ಕೃತ್ವಾ ಏಕ ಏವ ಸ ಈಶತೇ　　॥ ೧೩ ॥**

**ಏಕ ಏವ ತದಾ ರುದ್ರೋ ನ ದ್ವಿತೀಯೋಽಸ್ತಿ ಕಶ್ಚನ ।**
**ಸಂಸೃಜ್ಯ ವಿಶ್ವಭುವನಂ ಗೋಪ್ತಾ ತೇ ಸಂಚುಕೋಚ ಯಃ　　॥ ೧೪ ॥**

**ವಿಶ್ವತಶ್ಚಕ್ಷುರೇವಾಯಮುತಾಯಂ ವಿಶ್ವತೋಮುಖಃ ।**
**ತಥೈವ ವಿಶ್ವತೋಬಾಹುರ್ವಿಶ್ವತಃ ಪಾದಸಂಯುತಃ　　॥ ೧೫ ॥**

ಇರುವಂತೆ, ತನ್ನಲ್ಲಿ ತನಗಿಂತಲೂ ಬೇರೆಯಾಗಿರುವ ಮಹಾಮಹಿಮನಾದ ಆತ್ಮನು ಇರುವನೆಂದು ಯಾವಾಗಲೂ ಧ್ಯಾನಮಾಡುವವನು ತನ್ನ ಸತ್ಯ ತಪಸ್ಸಿನ ಮಹಿಮೆಯಿಂದ ಪರವಸ್ತುವನ್ನು ಸಾಕ್ಷಾತ್ಕರಿಸಿಕೊಳ್ಳುವನು.

೧೩. ಇಂದ್ರಜಾಲಿಕನು ತನ್ನ ಮಾಯಾಶಕ್ತಿಯಿಂದ ಇತರರನ್ನು ತನ್ನ ಅಧೀನಕ್ಕೆ ಸೆಳೆಯುವಂತೆ ಈಶ್ವರನು ತನ್ನ ಅಪಾರವಾದ ಶಕ್ತಿಯಿಂದ ಎಲ್ಲಾ ಲೋಕಗಳನ್ನೂ ತನ್ನ ಅಧೀನದಲ್ಲಿರಿಸಿಕೊಂಡು ತಾನು ಒಬ್ಬನೇ ಪ್ರಭುವಾಗಿರುವನು.

೧೪. ರುದ್ರನೆಂಬ ಮಹೇಶ್ವರನು ಒಬ್ಬನೇ ಇರುವನು. ಇಬ್ಬರು ಯಾವಾಗಲೂ ಇರುವುದಿಲ್ಲ. ಎಂದರೆ ಇವನ ಸಾಟಿಯಾದವನು ಮತ್ತೊಬ್ಬನಿಲ್ಲ. ಅವನು ಪ್ರಪಂಚವೆಲ್ಲವನ್ನೂ ಸೃಷ್ಟಿಮಾಡಿ, ಅದನ್ನು ರಕ್ಷಿಸಿ ಕೊನೆಯಲ್ಲಿ ಉಪಸಂಹರಿಸುವನು.

೧೫. ಇವನ ದೃಷ್ಟಿಯು ಎಲ್ಲ ಕಡೆಯಲ್ಲಿಯೂ ಪ್ರಸರಿಸಿರುವುದು. ಎಂದರೆ ಎಲ್ಲವನ್ನು ಏಕಕಾಲದಲ್ಲಿ ನೋಡಲು ಸಮರ್ಥನಾಗಿರುವವನು. ಅದರಂತೆಯೇ ಇವನ ಮುಖವೂ, ತೋಳುಗಳೂ, ಕಾಲುಗಳೂ ಎಲ್ಲೆಲ್ಲಿಯೂ ವ್ಯಾಪಿಸಿರುವವು. ಎಂದರೆ ಇವನು ಸರ್ವಶಕ್ತನಾಗಿ ಎಲ್ಲೆಲ್ಲಿಯೂ ವ್ಯಾಪಿಸಿರುವನು. ಇವನಿಲ್ಲದ ಸ್ಥಳವಾಗಲಿ, ಕಾಲವಾಗಲಿ ಇಲ್ಲ.

ದ್ಯಾವಾಭೂಮೀ ಚ ಜನಯನ್ದೇವ ಏಕೋ ಮಹೇಶ್ವರಃ ।
ಸ ಏವ ಸರ್ವದೇವಾನಾಂ ಪ್ರಭವಶ್ಚೋದ್ಭವಸ್ತಥಾ ॥ ೧೬ ॥

ಹಿರಣ್ಯಗರ್ಭಂ ದೇವಾನಾಂ ಪ್ರಥಮಂ ಜನಯೇದಯಂ ।
ವಿಶ್ವಸ್ಮಾದಧಿಕೋ ರುದ್ರೋ ಮಹರ್ಷಿರಿತಿ ಹಿ ಶ್ರುತಿಃ ॥ ೧೭ ॥

ವೇದಾಹಮೇತಂ ಪುರುಷಂ ಮಹಾಂತಮಮೃತಂ ಧ್ರುವಂ ।
ಆದಿತ್ಯವರ್ಣಂ ತಮಸಃ ಪರಸ್ತಾತ್ಸಂಸ್ಥಿತಂ ಪ್ರಭುಂ ॥ ೧೮ ॥

ಅಸ್ಮಾನ್ನಾಸ್ತಿ ಪರಂ ಕಿಂಚಿದಪರಂ ಪರಮಾತ್ಮನಃ ।
ನಾಣೀಯೋಽಸ್ತಿ ನ ಚ ಜ್ಯಾಯಸ್ತೇನ ಪೂರ್ಣಮಿದಂ ಜಗತ್ ॥ ೧೯ ॥

೧೬. ಮಹೇಶ್ವರನಾದ ಈ ದೇವನೊಬ್ಬನೇ ಭೂಮ್ಯಾಕಾಶಗಳನ್ನು ಸೃಷ್ಟಿ ಮಾಡಿರುವನು. ಇವನೊಬ್ಬನೇ ಎಲ್ಲಾ ದೇವತೆಗಳಿಗೂ ಕಾರಣನು. ಮತ್ತು ಎಲ್ಲರಿಗಿಂತಲೂ ಹೆಚ್ಚಾದ ಮಹಿಮೆಯುಳ್ಳವನು.

೧೭. ಇವನು ದೇವತೆಗಳೆಲ್ಲರಿಗೂ ಮೊದಲನೆಯವನಾದ ಹಿರಣ್ಯಗರ್ಭನನ್ನು ಸೃಷ್ಟಿಮಾಡಿರುವನು, ಮತ್ತು ಪ್ರಪಂಚದಲ್ಲಿರುವವರಿಗೆಲ್ಲರಿಗಿಂತಲೂ ( ಹೆಚ್ಚಾದವನು) ದೊಡ್ಡವನು ಮತ್ತು ಮಹರ್ಷಿಯು ಎಂಬುದಾಗಿ ವೇದವು ಹೇಳುತ್ತಿರುವುದು.

೧೮. ಈ ಮಹೇಶ್ವರನು ಸೂರ್ಯನಂತೆ ತೇಜಶ್ಶಾಲಿಯಾಗಿರುವನು ಅಜ್ಞಾನಕ್ಕಿಂತ ಬೇರೆಯಾಗಿರುವನು, ಎಲ್ಲಕ್ಕೂ ಪ್ರಭುವಾಗಿರುವನು, ದೇವತೆಗಳಿಗೂ ದೊಡ್ಡವನಾಗಿ, ನಿತ್ಯಮುಕ್ತನಾಗಿರುವ ಈ ಪುರುಷನನ್ನು ನಾನು ತಿಳಿದಿರುವೆನು.

೧೯. ಪರಮಾತ್ಮನಾದ ಇವನಿಗಿಂತ ಉತ್ಕೃಷ್ಟವಾದ ಅಥವಾ ದೊಡ್ಡದಾದ ಪದಾರ್ಥವಾಗಲಿ, ಚಿಕ್ಕದಾಗಿರುವುದಾಗಲಿ ಯಾವುದೂ ಬೇರೆಯ ಪದಾರ್ಥವಿಲ್ಲ. ಇವನಿಗಿಂತ ದೊಡ್ಡ ಪದಾರ್ಥವು ಇಲ್ಲದಿರುವುದರಿಂದ, ಇವನು ಎಲ್ಲಾ ಜಗತ್ತುಗಳಲ್ಲಿಯೂ ತಾನೇತಾನಾಗಿ ವ್ಯಾಪಿಸಿ ಪೂರ್ಣನಾಗಿರುವನು. ಎಂದರೆ ಈ ಜಗತ್ತೆಲ್ಲವೂ ಅವನ ಸ್ವರೂಪವೇ ಆಗಿರುವುದು

**ಸರ್ವಾನನಶಿರೋಗ್ರೀವಃ ಸರ್ವಭೂತಗುಹಾಶಯಃ ।**
**ಸರ್ವವ್ಯಾಪೀ ಚ ಭಗವಾಂಸ್ತಸ್ಮಾತ್ಸರ್ವಗತಶ್ಶಿವಃ ॥ ೨೦ ॥**

**ಸರ್ವತಃ ಪಾಣಿಪಾದೋಽಯಂ ಸರ್ವತೋಽಕ್ಷಿಶಿರೋಮುಖಃ ।**
**ಸರ್ವತಃ ಶ್ರುತಿಮಾಂಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೨೧ ॥**

**ಸರ್ವೇಂದ್ರಿಯಗುಣಾಭಾಸಸ್ಸರ್ವೇಂದ್ರಿಯವಿವರ್ಜಿತಃ ।**
**ಸರ್ವಸ್ಯ ಪ್ರಭುರೀಶಾನಃ ಸರ್ವಸ್ಯ ಶರಣಂ ಸುಹೃತ್ ॥ ೨೨ ॥**

**ಅಚಕ್ಷುರಪಿ ಯಃ ಪಶ್ಯತ್ಯಕರ್ಣೋಽಪಿ ಶೃಣೋತಿ ಯಃ ।**
**ಸರ್ವಂ ವೇತ್ತಿ ನ ವೇತ್ತಾಸ್ಯ ತಮಾಹುಃ ಪುರುಷಂ ಪರಂ ॥ ೨೩ ॥**

---

೨೦. ಇವನು ಎಲ್ಲ ಪ್ರಾಣಿಗಳ ಮುಖ, ಶಿರಸ್ಸು, ಕತ್ತು, ಹೃದಯ ಮೊದಲಾದ ಅವಯವಗಳಲ್ಲಿಯೂ ಎಲ್ಲರ ಬುದ್ಧಿಯಲ್ಲಿಯೂ, ಅಂತರ್ಯಾಮಿಯಾಗಿ ವಾಸ ಮಾಡುತ್ತಿರುವನು. ಷಡ್ಗುಣೈಶ್ವರ್ಯ ಸಂಪನ್ನನಾದ ಈ ಶಿವನು ಎಲ್ಲವನ್ನೂ ವ್ಯಾಪಿಸಿಕೊಂಡು ಎಲ್ಲರಲ್ಲಿಯೂ ಇರುವನು.

೨೧. ಇವನ ಕಾಲು, ಕೈ, ಕಣ್ಣು, ಮುಖ, ಕಿವಿ, ಇವೇ ಮೊದಲಾದ ಇಂದ್ರಿಯಗಳೂ, ಅಂಗಗಳೂ ಪ್ರಪಂಚದಲ್ಲಿ ಯಾವ ತಡೆಯೂ ಇಲ್ಲದೆ ಎಲ್ಲಾ ಕಡೆಯಲ್ಲಿಯೂ ತಮ್ಮ ತಮ್ಮ ಕಾರ್ಯಗಳನ್ನು ಮಾಡುವುದರಿಂದ ಇವನು ಎಲ್ಲವನ್ನೂ ಆವರಿಸಿಕೊಂಡು ಇರುವನು.

೨೨. ಇವನಿಗೆ ಯಾವ ವಿಧವಾದ ಇಂದ್ರಿಯವೂ ಇಲ್ಲದಿದ್ದಾಗ್ಯೂ ಎಲ್ಲರ ಇಂದ್ರಿಯಗಳೂ, ತಮ್ಮ ತಮ್ಮ ಕಾರ್ಯಗಳನ್ನು ಮಾಡುವಂತೆ ಪ್ರೇರಿಸುವವನಾಗಿರುವನು. ಇವನು ಎಲ್ಲರಿಗೂ ಅಧಿಪತಿಯು. ಎಲ್ಲರಿಗೂ ರಕ್ಷಕನು. ಎಲ್ಲರಿಗೂ ಸ್ನೇಹಿತನಾಗಿರುವನು.

೨೩. ತನಗೆ ಕಣ್ಣುಗಳಿಲ್ಲದಿದ್ದರೂ ನೋಡಬಲ್ಲನು. ಕಿವಿಯಿಲ್ಲದಿದ್ದರೂ ಕೇಳಬಲ್ಲನು. ಸಮಸ್ತವನ್ನೂ ತಿಳಿಯಲು ಸಮರ್ಥನು. ಇವನನ್ನು ತಿಳಿಯುವವರು ಮಾತ್ರ ಯಾರೂ ಇಲ್ಲ. ಆದುದರಿಂದ ಇವನನ್ನು ಪರಮಪುರುಷನೆಂದು ಹೇಳುವರು.

**ಅಣೋರಣೀಯಾನ್ಮಹತೋ ಮಹೀಯಾನಯಮವ್ಯಯಃ ।**
**ಗುಹಾಯಾಂ ನಿಹಿತಶ್ಚಾಪಿ ಜಂತೋರಸ್ಯ ಮಹೇಶ್ವರಃ ॥ ೨೪ ॥**

**ತಮಕ್ರತುಂ ಕ್ರತುಪ್ರಾಯಂ ಮಹಿಮಾತಿಶಯಾನ್ವಿತಂ।**
**ಧಾತುಃ ಪ್ರಸಾದಾದೀಶಾನಂ ವೀತಶೋಕಃ ಪ್ರಪಶ್ಯತಿ ॥ ೨೫ ॥**

**ವೇದಾಹಮೇನಮಜರಂ ಪುರಾಣಂ ಸರ್ವಗಂ ವಿಭುಂ ।**
**ನಿರೋಧಂ ಜನ್ಮನೋ ಯಸ್ಯ ವದಂತಿ ಬ್ರಹ್ಮವಾದಿನಃ ॥ ೨೬ ॥**

**ಏಕೋಽಪಿ ತ್ರೀನಿಮಾಂಲ್ಲೋಕಾನ್ಬಹುಧಾ ಶಕ್ತಿಯೋಗತಃ ।**
**ವಿದಧಾತಿ ವಿಚೇತ್ಯಂತೇ ವಿಶ್ವಮಾದೌ ಮಹೇಶ್ವರಃ ॥ ೨೭ ॥**

೨೪. ಪರಿಪೂರ್ಣನಾದ ಇವನು ಸಣ್ಣ ಪದಾರ್ಥಗಳಿಗಿಂತಲೂ ಸಣ್ಣವನು. ದೊಡ್ಡ ಪದಾರ್ಥಗಳಿಗಿಂತಲೂ ದೊಡ್ಡವನಾಗಿರುವನು. ಈ ಮಹೇಶ್ವರನು ಪ್ರಾಣಿಗಳ ಬುದ್ಧಿಯಲ್ಲಿ ಅಂತರ್ಯಾಮಿಯಾಗಿರುವನು.

೨೫. ಭಕ್ತನಾದವನು ಯಜ್ಞಮಾಡದಿರುವವನಾದರೂ ಯಜ್ಞರೂಪದಿಂದ ಇರುವ, ಮಹಾಮಹಿಮನಾದ ಈ ಈಶ್ವರನನ್ನು ಇವನ ಅನುಗ್ರಹದಿಂದಲೇ ತಿಳಿದು ತನ್ನ ದುಃಖವನ್ನು ಕಳೆದುಕೊಳ್ಳುವನು.

೨೬. ಈ ಶಿವನಿಗೆ ಮುಪ್ಪೆಂಬುದಿಲ್ಲ. ಆದಿಮಧ್ಯಾಂತಗಳಿಲ್ಲ. ಪುರಾತನನು. ಎಲ್ಲರಲ್ಲಿಯೂ ವ್ಯಾಪಿಸಿಕೊಂಡಿರುವನು. ಇಂತಹ ಈ ಶಿವನನ್ನು ನಾನು ತಿಳಿದಿರುವೆನು. ಇವನನ್ನು ಪ್ರತ್ಯಕ್ಷವಾಗಿ ಕಾಣುವವರಿಗೆ ಪುನರ್ಜನ್ಮವಿಲ್ಲವೆಂದು ಬ್ರಹ್ಮವಾದಿಗಳು ಹೇಳುವರು.

೨೭. ಈ ಮಹೇಶ್ವರನು ತಾನು ಒಬ್ಬನೇ ಆದಾಗ್ಯೂ ತನ್ನ ಶಕ್ತಿಸಾಮರ್ಥ್ಯಗಳಿಂದ ಈ ಮೂರು ಲೋಕಗಳನ್ನೂ ಅನೇಕ ಪ್ರಕಾರವಾಗಿ ಸೃಷ್ಟಿಮಾಡಿ, ಕೊನೆಯಲ್ಲಿ ಅದನ್ನು ನಾಶಮಾಡುವನು.

೨೮. ಈ ಶಿವನ ಶಕ್ತಿಯು ಪ್ರಪಂಚವನ್ನು ಧರಿಸಿರುವುದಾಗಿಯೂ, ನಿತ್ಯವಾಗಿಯೂ, ಅನೇಕ ಪ್ರಕಾರವಾಗಿದ್ದು ಎಲ್ಲಕ್ಕಿಂತಲೂ ಹೆಚ್ಚೆನಿಸಿಕೊಂಡಿರುವುದು.

**ವಿಶ್ವಧಾತ್ರೀತ್ಯಜಾಖ್ಯಾ ಚ ಶೈವೀ ಚಿತ್ರಾ ಕೃತಿಃ ಪರಾ ।**
**ತಾಮಜಾಂ ಲೋಹಿತಾಂ ಶುಕ್ಲಾಂ ಕೃಷ್ಣಾಮೇಕಾಂ ತ್ವಜಃ ಪ್ರಜಾಃ ॥ ೨೮ ॥**

**ಜನಿತ್ರೀಮನುಶೇತೇಽನ್ಯೋ ಜುಷಮಾಣಸ್ಸ್ವರೂಪಿಣಾಂ ।**
**ತಾಮೇವಾಜಾಮಜೋಽನ್ಯಸ್ತು ಭುಕ್ತಭೋಗಾಂ ಜಹಾತಿ ಚ ॥ ೨೯ ॥**

ಈ ಶಕ್ತಿಯು ಎಂದರೆ ಪ್ರಕೃತಿಯು ಒಂದೇ ಆದರೂ ಸತ್ತ್ವರಜಸ್ತಮೋಗುಣಗಳಿಂದ ಕೂಡಿರುವುದರಿಂದ ಸತ್ವಗುಣವನ್ನಾಶ್ರಯಿಸಿದ ಜೀವರು ಸುಖಸಂತೋಷಾದಿಗಳಿಂದಲೂ ರಜೋಗುಣವನ್ನಾಶ್ರಯಿಸಿದವರು ಸುಖದುಃಖಗಳೆರಡನ್ನು ಅನುಭವಿಸುವವರಾಗಿಯೂ, ತಮೋಗುಣವನ್ನಾಶ್ರಯಿಸಿದವರು ದುಃಖವನ್ನು ಅನುಭವಿಸುವವರಾಗಿಯೂ ಇರುವರು. ಈ ವಿಚಾರದಲ್ಲಿ " ಅಜಾಮೇಕಾಂ ಲೋಹಿತ ಶುಕ್ಲ ಕೃಷ್ಣಾಂ ಬಹ್ವೀಂ ಪ್ರಜಾಂ ಜನಯಂತೀಗ್ಂ ಸರೂಪಾಂ" ಎಂದು ಶ್ರುತಿ ಇರುವುದು. ಎಂದರೆ ಪ್ರಕೃತಿಯು ಅನಾದಿಯು, ಇದು ಸತ್ತ್ವರಜಸ್ತಮೋಗುಣಗಳಿಂದ ಕೂಡಿರುವುದು. ಇದರಿಂದ ಉತ್ಪನ್ನರಾದ ಪ್ರಾಣಿಗಳು ಸತ್ವರಜಸ್ತಮೋಗುಣಗಳಿಂದ ಕೂಡಿಯೇ ಇರುವರು. ಎಂದರೆ ಈ ಮೂರು ಗುಣಗಳೂ ಪ್ರತಿಯೊಬ್ಬರಲ್ಲಿಯೂ ಇದ್ದೇ ಇರುವವು. ಆದರೆ ಸತ್ವಗುಣವು ಅಧಿಕವಾಗಿ ರಜಸ್ತಮೋಗುಣಗಳು ಕಮ್ಮಿಯಾಗಿರುವವನು ಸತ್ವಗುಣಯುಕ್ತ ಅಥವಾ ಸಾತ್ವಿಕನೆಂದೂ, ರಜೋಗುಣ ಅಧಿಕವಾಗಿ ಉಳಿದೆರಡು ಗುಣಗಳು ಕಮ್ಮಿಯಾಗಿದ್ದರೆ ರಜೋಗುಣಾನ್ವಿತನೆಂದೂ, ತಮೋಗುಣವು ಅಧಿಕವಾಗಿದ್ದು ಸತ್ವರಜೋಗುಣಗಳು ಕಮ್ಮಿಯಾಗಿದ್ದರೆ ತಮೋಗುಣಾನ್ವಿತನೆಂದೂ ಹೇಳಲ್ಪಡುವನು. ಈ ಗುಣಗಳಿಗನುಸಾರವಾಗಿ ಆಯಾ ಪ್ರಾಣಿಗಳ ಸುಖದುಃಖಾದಿಗಳು ಇರುವವು. ಅಲ್ಲದೆ ಒಂದೇ ಪ್ರಾಣಿಯು ಕೆಲವು ಸಮಯದಲ್ಲಿ ಸತ್ವಗುಣಾಧಿಕನಾಗಿಯೂ ಕೆಲವು ಸಮಯ ರಜೋಗುಣ ಕೆಲವು ಸಮಯ ತಮೋಗುಣಾಧಿಕನಾಗಿಯೂ ಇರುವುದುಂಟು. ಅವನ ಕರ್ಮಗಳೂ ಸುಖದುಃಖಗಳೂ ಅದಕ್ಕನುಸಾರವಾಗಿಯೇ ಇರುವವು.

೨೯-೩೦. ಒಂದೇ ವಿಧವಾದ ವಾಸಸ್ಥಳವನ್ನು ಹೊಂದಿರುವ ಎರಡು ಹಕ್ಕಿಗಳು, ಒಂದೇ ಮರದಲ್ಲಿರುವುವು. ಅವುಗಳಲ್ಲಿ ಒಂದು ಹಕ್ಕಿಯು ಮಾತ್ರ ಹಣ್ಣನ್ನು ಚೆನ್ನಾಗಿದೆ ಎಂದು ಹೇಳುತ್ತಾ ತಿನ್ನುತ್ತಿರುವುದು. ಇನ್ನೊಂದು ಮಾತ್ರ ಆ ಹಕ್ಕಿಯು ತಿನ್ನುವುದನ್ನು ನೋಡುತ್ತಾ, ತಾನೂ ಹಣ್ಣನ್ನು ತಿನ್ನದೆ ಸುಮ್ಮನಿರುವುದು. ಅದರಂತೆ ಒಂದೇ ಶರೀರದಲ್ಲಿರುವ ಜೀವೇಶ್ವರರಿಬ್ಬರ ಪೈಕಿ ಜೀವನು ಕರ್ಮಫಲವನ್ನು ಅನುಭವಿಸುತ್ತಿರುವನು. ಈಶ್ವರನು ಕರ್ಮಸಂಬಂಧವಿಲ್ಲದಕಾರಣ ಸಾಕ್ಷಿಯಾಗಿರುವನು.

ದ್ವಾ ಸುಪರ್ಣೌ ಚ ಸಯುಜೌ ಸಮಾನಂ ವೃಕ್ಷಮಾಸ್ಥಿತೌ ।
ಏಕೋಽತ್ತಿ ಪಿಪ್ಪಲಂ ಸ್ವಾದು ಪರೋಽನಶ್ನನ್ಪ್ರಪಶ್ಯತಿ ॥ ೩೦ ॥

ವೃಕ್ಷೇಽಸ್ಮಿನ್ಪುರುಷೋ ಮಗ್ನೋ ಮುಹ್ಯಮಾನಶ್ಚ ಶೋಚತಿ ।
ಜುಷ್ಟಮನ್ಯಂ ಯದಾ ಪಶ್ಯೇದೀಶಂ ಪರಮಕಾರಣಂ ॥ ೩೧ ॥

ತದಾಸ್ಯ ಮಹಿಮಾನಂ ಚ ವೀತಶೋಕಸ್ಸುಖೀ ಭವೇತ್ ।
ಛಂದಾಂಸಿ ಯಜ್ಞಾಃ ಕ್ರತವೋ ಯದ್ಭೂತಂ ಭವ್ಯಮೇವ ಚ ॥ ೩೨ ॥

ಮಾಯೀ ವಿಶ್ವಂ ಸೃಜತ್ಯಸ್ಮಿನ್ನಿವಿಷ್ಟೋ ಮಾಯಯಾ ಪರಃ ।
ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ ॥ ೩೩ ॥

ತಸ್ಯಾಸ್ತ್ವವಯವೈರೇವ ವ್ಯಾಪ್ತಂ ಸರ್ವಮಿದಂ ಜಗತ್ ।
ಸೂಕ್ಷ್ಮಾತಿಸೂಕ್ಷ್ಮಮೀಶಾನಂ ಕಲಲಸ್ಯಾಪಿ ಮಧ್ಯತಃ ॥ ೩೪ ॥

೩೧. (ಪುರುಷನು) ಜೀವನು ಪ್ರಕೃತಿಯ ಸಂಬಂಧದಲ್ಲಿರುತ್ತಾ ಅದರಲ್ಲಿಯೇ ಮುಳುಗಿ ಭ್ರಾಂತಿಗೊಳ್ಳುತ್ತಾ ವ್ಯಸನವನ್ನು ಹೊಂದುವನು. ಇವನು ಯಾವಾಗ ಎಲ್ಲಕ್ಕೂ ಕಾರಣನಾಗಿರುವ ಈಶ್ವರನು, ತನಗೆ ಸಂತೋಷ ಉಂಟುಮಾಡುವವನೆಂದು ಅವನ ಮಹಿಮೆಯನ್ನು ತಿಳಿದು, ಅವನನ್ನು ಆಶ್ರಯಿಸುವನೋ ಆಗ ದುಃಖವೆಲ್ಲ ವನ್ನೂ ಕಳೆದುಕೊಂಡು ಸುಖವನ್ನು ಹೊಂದುವನು.

೩೨-೩೩. ಎಲ್ಲಕ್ಕಿಂತಲೂ ಉತ್ಕೃಷ್ಟನಾದ ಪರಮೇಶ್ವರನು ತನ್ನ ಮಾಯೆ ಯಿಂದ ಕೂಡಿ ಛಂದಸ್ಸುಗಳು, ಯಜ್ಞಗಳು, ಯಾಗಗಳು, ಸಂಸ್ಕಾರಗಳು, ಭೂತ ಭವಿಷ್ಯದ್ಜ್ಞಾನ ಇವೆಲ್ಲವನ್ನೂ ಇವನಿಗೆ ತೋರುವಂತೆ ಅನುಗ್ರಹಿಸುವನು.
ಮಾಯೆಯೆಂದರೆ ಪ್ರಕೃತಿಯೆಂತಲೂ. ಈ ಮಾಯೆಯನ್ನು ಅಧೀನದಲ್ಲಿರಿಸಿ ಕೊಂಡಿರುವವನೇ ಪರಮೇಶ್ವರನೆಂತಲೂ ತಿಳಿಯತಕ್ಕದ್ದು.

೩೪-೩೫. ಆ ಪ್ರಕೃತಿಯ ಸಂಬಂಧವಾದ ವಿಕಾರ ಪದಾರ್ಥಗಳಿಂದ ಈ ಪ್ರಪಂಚವೆಲ್ಲವೂ ತುಂಬಿರುವುದು. ಈಶ್ವರನು ಸೂಕ್ಷ್ಮವಾಗಿರುವ ಗರ್ಭಪಿಂಡದ ಮಧ್ಯದಲ್ಲಿಯೂ ಅತಿ ಸೂಕ್ಷ್ಮರೂಪದಿಂದಿರುವನು. ಪ್ರಪಂಚವೆಲ್ಲವನ್ನೂ ಸೃಷ್ಟಿ

**ಸ್ರಷ್ಟಾರಮಪಿ ವಿಶ್ವಸ್ಯ ವೇಷ್ಟಿತಾರಂ ಚ ತಸ್ಯ ತು ।**
**ಶಿವಮೇವೇಶ್ವರಂ ಜ್ಞಾತ್ವಾ ಶಾಂತಿಮತ್ಯಂತಮೃಚ್ಛತಿ ॥ ೩೫ ॥**

**ಸ ಏವ ಕಾಲೋ ಗೋಪ್ತಾ ಚ ವಿಶ್ವಸ್ಯಾಧಿಪತಿಃ ಪ್ರಭುಃ ।**
**ತಂ ವಿಶ್ವಾಧಿಪತಿಂ ಜ್ಞಾತ್ವಾ ಮೃತ್ಯುಪಾಶಾತ್ಪ್ರಮುಚ್ಯತೇ ॥ ೩೬ ॥**

**ಘೃತಾತ್ಪರಂ ಮಂಡಮಿವ ಸೂಕ್ಷ್ಮಂ ಜ್ಞಾತ್ವಾ ಸ್ಥಿತಂ ಪ್ರಭುಂ ।**
**ಸರ್ವಭೂತೇಷು ಗೂಢಂ ಚ ಸರ್ವಪಾಪೈಃ ಪ್ರಮುಚ್ಯತೇ ॥ ೩೭ ॥**

**ಏಷ ಏವ ಪರೋ ದೇವೋ ವಿಶ್ವಕರ್ಮಾ ಮಹೇಶ್ವರಃ ।**
**ಹೃದಯೇ ಸನ್ನಿವಿಷ್ಟಂ ತಂ ಜ್ಞಾತ್ವೈವಾಮೃತಮಶ್ನುತೇ ॥ ೩೮ ॥**

ಮಾಡುವವನಾದಾಗ್ಯೂ ಪ್ರಪಂಚವೆಲ್ಲವನ್ನೂ ವ್ಯಾಪಿಸಿಕೊಂಡಿರುವನು. ಇಂತಹ ಈಶ್ವರನು ಶಿವನೇ ಆಗಿರುವನೆಂದು ತಿಳಿದು, ಅವನನ್ನು ಪ್ರತ್ಯಕ್ಷವಾಗಿ ಕಾಣುವವನು ಎಲ್ಲಕ್ಕಿಂತಲೂ ಶ್ರೇಷ್ಠವಾದ ಶಾಂತಿಯನ್ನು (ವಿವೇಕಜ್ಞಾನದಿಂದುಂಟಾದ ಮನಸ್ಸ ಮಾಧಾನ) ಹೊಂದುವನು.

೩೬. ಆ ಶಿವನೇ ಕಾಲರೂಪದಿಂದಿರುವನು. ಅವನೇ ರಕ್ಷಕನು, ಪ್ರಪಂಚಕ್ಕೆಲ್ಲಕ್ಕೂ ಒಡೆಯನು ಮತ್ತು ಮಹಾಮಹಿಮೆಯುಳ್ಳವನು. ಪ್ರಪಂಚಕ್ಕೆಲ್ಲಕ್ಕೂ ಅಧಿಪತಿಯಾದವನು. ಹೀಗೆಂದು ಅವನನ್ನು ತಿಳಿದು ಪ್ರತ್ಯಕ್ಷವಾಗಿ ಕಂಡವನಿಗೆ ಮೃತ್ಯುವಿನ ಪಾಶವು ಇರುವುದಿಲ್ಲ. ಎಂದರೆ ಜನನಮರಣಗಳಿಂದ ಅವನು ಮುಕ್ತನಾಗುವನು.

೩೭. ಮೊಸರಿನ ಕೆನೆಯು ತುಪ್ಪಕ್ಕಿಂತಲೂ ಬೇರೆಯಾದದ್ದು. ಅದರಂತೆ ಪ್ರಕೃತಿಗೆ ಶಕ್ತಿಯನ್ನುಂಟುಮಾಡುತ್ತಾ ತನ್ನ ಮಹಿಮೆಯಿಂದ ಸೂಕ್ಷ್ಮರೂಪದಿಂದ ಎಲ್ಲಾ ಪ್ರಾಣಿಗಳ ಬುದ್ಧಿಯಲ್ಲಿಯೂ ಗುಟ್ಟಾಗಿರುವವನು ಇವನೇ ಎಂದು ಈ ಶಿವನನ್ನು ಸಾಕ್ಷಾತ್ಕಾರ ಮಾಡಿದವನಿಗೆ ಯಾವ ವಿಧವಾದ ಪಾಪದ ಸಂಬಂಧವೂ ಉಂಟಾಗುವುದಿಲ್ಲ.

೩೮. ಈ ಮಹೇಶ್ವರನು ಪ್ರಪಂಚವೆಲ್ಲವನ್ನೂ ಸೃಷ್ಟಿಮಾಡುವವನು. ಇದಕ್ಕೆ ಸಂಬಂಧಪಟ್ಟ ಕೆಲಸಗಳೆಲ್ಲವನ್ನೂ ಮಾಡುವವನು. ಇವನು ಎಲ್ಲಾ ದೇವತೆಗಳಿಗಿಂತಲೂ ಹೆಚ್ಚಾದವನು. ಇವನೇ ಎಲ್ಲಾ ಪ್ರಾಣಿಗಳ ಹೃದಯಕಮಲದಲ್ಲಿರುವವನು ಎಂದು ತಿಳಿದವನು ಮುಕ್ತಿಯನ್ನು ಹೊಂದುವನು.

**ಯದಾ ಸಮಸ್ತಂ ನ ದಿವಾ ನ ರಾತ್ರಿರ್ನ ಸದಪ್ಯಸತ್ ।**
**ಕೇವಲಶ್ಶಿವ ಏವೈಕೋ ಯತಃ ಪ್ರಜ್ಞಾ ಪುರಾತನೀ ॥ ೩೯ ॥**

**ನೈನಮೂರ್ಧ್ವಂ ನ ತಿರ್ಯಕ್ಚ ನ ಮಧ್ಯಂ ಪರ್ಯಜಿಗ್ರಹತ್ ।**
**ನ ತಸ್ಯ ಪ್ರತಿಮಾ ಚಾಸ್ತಿ ಯಸ್ಯ ನಾಮ ಮಹದ್ಯಶಃ ॥ ೪೦ ॥**

**ಅಜಾತಮಿಮಮೇವೈಕೇ ಬುಧ್ವಾ ಜನ್ಮನಿ ಭೀರವಃ ।**
**ರುದ್ರಸ್ಯಾಸ್ಯ ಪ್ರಪದ್ಯಂತೇ ರಕ್ಷಾರ್ಥಂ ದಕ್ಷಿಣಂ ಮುಖಂ ॥ ೪೧ ॥**

**ದ್ವೇ ಅಕ್ಷರೇ ಬ್ರಹ್ಮಪರೇ ತ್ವನಂತೇ ಸಮುದಾಹೃತೇ ।**
**ವಿದ್ಯಾವಿದ್ಯೇ ಸಮಾಖ್ಯಾತೇ ನಿಹಿತೇ ಯತ್ರ ಗೂಢವತ್ ॥ ೪೨ ॥**

**ಕ್ಷರಂ ತ್ವವಿದ್ಯಾ ಹ್ಯಮೃತಂ ವಿದ್ಯೇತಿ ಪರಿಗೀಯತೇ ।**
**ತೇ ಉಭೇ ಈಶತೇ ಯಸ್ತು ಸೋಽನ್ಯಃ ಖಲು ಮಹೇಶ್ವರಃ ॥ ೪೩**

೩೯ ಇವನಿಂದಲೇ ಎಲ್ಲವೂ ಪ್ರಳಯವನ್ನು ಹೊಂದುವುದು ಇವನ ಹೊರತು ಹಗಲೂ, ರಾತ್ರಿಯೂ ಸದಸತ್ಪದಾರ್ಥಗಳೂ ಕೂಡ ಬೇರೆಯಾಗಿಲ್ಲ. ಇವನೊಬ್ಬನೇ ಪ್ರಕೃತಿ ಸಂಬಂಧವಿಲ್ಲದವನಾಗಿ ಯಾವಾಗಲೂ ಶಿವಸ್ವರೂಪದಿಂದಿರುವನು. ಇವನಿಂದಲೇ ಹಿಂದಿನ ಜನ್ಮಾಂತರಗಳ ಜ್ಞಾನವೂ ಉಂಟಾಗುವುದು

೪೦ ಇವನು ಪ್ರಪಂಚದ ಮೇಲೆ, ಕೆಳಗೆ, ಅಡ್ಡಲಾಗಿ, ಮಧ್ಯದಲ್ಲಿ ಎಲ್ಲಿ ಹೇಗೆ ಇರುವನೆಂದು ತಿಳಿಯಲು ಸಾಧ್ಯವಿಲ್ಲ. ಇವನಿಗೆ ಸರಿಯಾದವನು ಯಾರೂ ಇಲ್ಲವಾದ್ದರಿಂದ ಇವನಿಗೆ ಹೋಲಿಕೆಯೇ ಇಲ್ಲ. ಇವನ ನಾಮೋಚ್ಚಾರಣೆ ಸಹ ಬಹಳ ಕೀರ್ತಿಯನ್ನುಂಟುಮಾಡುವುದಾಗಿರುವುದು.

೪೧. ಜನ್ಮಮರಣಗಳಿಂದ ಹೆದರುವವರು, ಇವನು ರುದ್ರನೆಂತಲೂ, ಇವನು ನಿತ್ಯನಾಗಿರುವನೆಂತಲೂ ತಿಳಿದು ತಮ್ಮ ರಕ್ಷಣೆಗಾಗಿ ಇವನ ದಕ್ಷಿಣದಿಕ್ಕಿನ ಮುಖವನ್ನು ಶರಣುಹೊಂದುವರು.

೪೨–೪೩. ಕ್ಷರ, ಅಕ್ಷರ ಎಂಬ ಎರಡು ಪದಾರ್ಥಗಳು ವಿದ್ಯಾ, ಅವಿದ್ಯೆ ಎಂದು ಪ್ರಸಿದ್ಧಿಯನ್ನು ಹೊಂದಿ ನಾಶವಿಲ್ಲದ ಬ್ರಹ್ಮನಲ್ಲಿ ಗೂಢವಾಗಿರುವುವು. ಕ್ಷರವೆಂಬುದು ಅವಿದ್ಯೆಯೆಂತಲೂ, ಅಕ್ಷರವೆಂಬುದು ವಿದ್ಯೆಯೆಂತಲೂ ಹೇಳಲ್ಪಡುವವು ಇವೆರಡನ್ನೂ ತನ್ನ ಅಧೀನದಲ್ಲಿರಿಸಿಕೊಂಡು ಎಲ್ಲಕ್ಕೂ ಈ ಶಿವನು ಪ್ರಭುವಾಗಿ ಮಹೇಶ್ವರನಾಗಿರುವನು.

**ಏಕೈಕಂ ಬಹುಧಾ ಜಾಲಂ ವಿಕುರ್ವನ್ನೇಕವಚ್ಚ ಯಃ ।**
**ಸರ್ವಾಧಿಪತ್ಯಂ ಕುರುತೇ ಸೃಷ್ಟ್ವಾ ಸರ್ವಾನ್ಪ್ರತಾಪವಾನ್ ॥ ೪೪ ॥**

**ದಿಶಿ ಊರ್ಧ್ವಮಧಸ್ತಿರ್ಯಕ್ಛಾಸಯನ್ಭ್ರಾಜತೇ ಸ್ವಯಂ ।**
**ಯೋ ನಿಃಸ್ವಭಾವಾದಪ್ಯೇಕೋ ವರೇಣ್ಯಸ್ತ್ವಧಿತಿಷ್ಠತಿ ॥ ೪೫ ॥**

**ಸ್ವಭಾವವಾಚಕಾನ್ಸರ್ವಾನ್ವಾಚ್ಯಾಂಶ್ಚ ಪರಿಣಾಮಯನ್ ।**
**ಗುಣಾಂಶ್ಚ ಭೋಗ್ಯಭೋಕ್ತೃತ್ವೇ ತದ್ವಿಶ್ವಮಧಿತಿಷ್ಠತಿ ॥ ೪೬ ॥**

**ತೇ ವೈ ಗುಹ್ಯೋಪನಿಷದಿ ಗೂಢಂ ಬ್ರಹ್ಮ ಪರಾತ್ಪರಂ ।**
**ಬ್ರಹ್ಮಯೋನಿಂ ಜಗತ್ಪೂರ್ವಂ ವಿದುರ್ದೇವಾ ಮಹರ್ಷಯಃ ॥ ೪೭ ॥**

೪೪. ಇವನು ಪ್ರತಿಯೊಂದರಲ್ಲಿಯೂ ಅನೇಕ ವಿಧವಾಗಿಯೂ, ಎಲ್ಲವೂ ಒಂದೇ ಎಂಬುವ ಹಾಗೆಯೂ ವಿನೋದವನ್ನು ಮಾಡುತ್ತಾ ಎಲ್ಲವನ್ನೂ ಸೃಷ್ಟಿಮಾಡಿ ತನ್ನ ಪರಾಕ್ರಮದಿಂದ ಎಲ್ಲಕ್ಕೂ ಅಧಿಪತಿಯಾಗಿರುವನು.

೪೫. ಇವನು ದಿಕ್ಕುಗಳ ಮೇಲುಗಡೆಯಲ್ಲಿಯೂ, ದಿಕ್ಕುಗಳ ಕೆಳಗಡೆಯಲ್ಲಿಯೂ, ದಿಕ್ಕುಗಳಿಗೆ ಅಡ್ಡಲಾಗಿಯೂ. ತಾನೇ ಅವುಗಳನ್ನು ಪ್ರಕಾಶಗೊಳಿಸುವವನಾಗಿ ತಾನೂ ಪ್ರಕಾಶಿಸುತ್ತಿರುವನು. ಇವನಿಗೆ ಯಾವ ವಿಧವಾದ ಹುಟ್ಟುಗುಣವು ಇಲ್ಲದಿದ್ದರೂ, ತಾನು ಒಬ್ಬನೇ ಎಲ್ಲಕ್ಕಿಂತಲೂ ಶ್ರೇಷ್ಠನಾಗಿ ಎಲ್ಲದರಲ್ಲಿಯೂ ಇರುವನು.

೪೬. ಸ್ವಭಾವವನ್ನು ತಿಳಿಸುವ ಶಬ್ದಗಳನ್ನೂ ಅರ್ಥಗಳನ್ನೂ ಎಂದರೆ ವಾಚ್ಯವಾಚಕಗಳೆಂದು ಬೇರೆಯ ರೀತಿಯಲ್ಲಿ ಅರ್ಥಕೊಡುವಂತೆ ಮಾಡುವವನಾಗಿಯೂ, ಗುಣಗಳನ್ನು ಭೋಕ್ತೃ, ಭೋಗ್ಯಗಳ ರೀತಿಯಲ್ಲಿರುವಂತೆ ಮಾಡುವನಾಗಿ ಪ್ರಪಂಚವೆಲ್ಲವನ್ನೂ ಆಳುತ್ತಿರುವನು. ಎಂದರೆ ಒಂದೇ ವಸ್ತುವನ್ನು ಭೋಕ್ತೃ. ಭೋಗ್ಯಗಳೆಂದು ವಿಭಾಗಿಸಿ ಭೋಕ್ತೃವು ಭೋಗ್ಯವಸ್ತುವನ್ನು ಅನುಭವಿಸುವಂತೆ ಮಾಡುವನು.

೪೭. ಪ್ರಸಿದ್ಧರಾದ ದೇವತೆಗಳೂ ಮಹರ್ಷಿಗಳೂ ಕೂಡ ಗುಹ್ಯೋಪನಿಷತ್ತಿನಲ್ಲಿ ಹೇಳಿರುವಂತೆ ಇವನು ಪ್ರಾಣಿಗಳ ಬುದ್ಧಿಯಲ್ಲಿ ಅಂತರ್ಯಾಮಿಯಾಗಿರುವವನೆಂತಲೂ, ಬ್ರಹ್ಮಸ್ವರೂಪವುಳ್ಳವನೆಂತಲೂ, ಎಲ್ಲಕ್ಕಿಂತಲೂ ಹೆಚ್ಚಾದವನೆಂತಲೂ, ಜಗತ್ತಿಗೆಲ್ಲಕ್ಕೂ ಕಾರಣನಾಗಿರುವ ಬ್ರಹ್ಮನಿಗೂ ಕಾರಣನೆಂತಲೂ ತಿಳಿದಿರುವರು.

ಭಾವಗ್ರಾಹ್ಯಮನೀಹಾಖ್ಯಂ ಭಾವಾಭಾವಕರಂ ಶಿವಂ ।
ಕಲಾಸರ್ಗಕರಂ ದೇವಂ ಯೇ ವಿದುಸ್ತೇ ಜಹುಸ್ತನುಂ ॥ ೪೮ ॥

ಸ್ವಭಾವಮೇಕೇ ಮನ್ಯಂತೇ ಕಾಲಮೇಕೇ ವಿಮೋಹಿತಾಃ ।
ದೇವಸ್ಯ ಮಹಿಮಾ ಹ್ಯೇಷ ಯೇನೇದಂ ಭ್ರಾಮ್ಯತೇ ಜಗತ್ ॥ ೪೯ ॥

ಯೇನೇದಮಾವೃತಂ ನಿತ್ಯಂ ಕಾಲಕಾಲಾತ್ಮನಾ ಯತಃ ।
ತೇನೇರಿತಮಿದಂ ಕರ್ಮ ಭೂತೈಃ ಸಹ ವಿವರ್ತತೇ ॥ ೫೦ ॥

ತತ್ಕರ್ಮ ಭೂಯಶಃ ಕೃತ್ವಾ ವಿನಿವೃತ್ಯ ಚ ಭೂಯಶಃ ।
ತತ್ತ್ವಸ್ಯ ಸಹ ತತ್ತ್ವೇನ ಯೋಗಂ ಚಾಪಿ ಸಮೇತ್ಯ ವೈ ॥ ೫೧ ॥

---

೪೮. ಈ ಶಿವನು ಯಾವ ವಿಧವಾದ ಅಪೇಕ್ಷೆಯೂ ಇಲ್ಲದವನು. ಪ್ರಪಂಚದ ಸೃಷ್ಟಿ, ಪ್ರಳಯಗಳನ್ನು ಮಾಡುವವನು. ಕಲೆಗಳನ್ನು ಸೃಷ್ಟಿಮಾಡಿದವನು. ಇಂತಹ ದೇವದೇವನಾದ ಶಿವನು ಇವನೇ ಎಂದು ತಿಳಿದವರು ತಮ್ಮ ಜನನಮರಣಗಳನ್ನು ಎಂದರೆ ಸಂಸಾರ ಬಂಧವನ್ನು ನಾಶಪಡಿಸಿಕೊಳ್ಳುವರು.

೪೯. ಕೆಲವರು ಪ್ರಪಂಚದ ಸ್ವಭಾವವೆಂದೂ, ಕೆಲವರು ಕಾಲನೆಂತಲೂ ಬ್ರಹ್ಮಸ್ವರೂಪವನ್ನು ತಿಳಿದಿರುವರು. ಇವರೆಲ್ಲರಿಗೂ ಹೀಗೆ ಭ್ರಾಂತಿಯುಂಟಾಗು ವಂತೆ ಮಾಡುವುದೇ ಈ ದೇವನ ಮಹಿಮೆಯು. ಇವನು ಹೀಗೆಯೇ ಜಗತ್ತೆಲ್ಲ ವನ್ನೂ ಭ್ರಮೆಗೊಳಿಸುತ್ತಿರುವನು.

೫೦. ಈ ದೇವನು ಕಾಲಸ್ವರೂಪದಿಂದ ಇರುವವನಾಗಿ ಭೂತ, ಭವಿಷ್ಯತ್, ವರ್ತಮಾನಕಾಲಗಳಿಂದ ಈ ಪ್ರಪಂಚವೆಲ್ಲವನ್ನೂ ಯಾವಾಗಲೂ ಆವರಿಸಿಕೊಂಡಿ ರುವನು. ಇವನಿಂದ ಪ್ರೇರಿತವಾದ ಈ ಕೆಲಸಗಳೆಲ್ಲವೂ ಪಂಚಮಹಾಭೂತಗಳೊಡನೆ ಬದಲಾವಣೆಯನ್ನು ಹೊಂದುತ್ತಲೇ ಇರುತ್ತವೆ.

೫೧-೫೩. ಈ ಜಗತ್ತೆಲ್ಲವೂ ತಾನಾಗಿಯೇ ಬಹಳವಾಗಿ ಕರ್ಮಗಳನ್ನು ಮಾಡಿ, ಅನೇಕವೇಳೆ ಸುತ್ತಿದ ನಂತರ ಒಂದು ತತ್ವದೊಡನೆ ಮತ್ತೊಂದು ತತ್ವ ಸಂಬಂಧವನ್ನು ಹೊಂದಿ ಕಲಾದ್ಯಷ್ಟಕ, ತ್ರಿಗುಣ, ವಿದ್ಯಾವಿದ್ಯೆ, ಆತ್ಮ ಇವರ ಸಂಬಂಧ ವನ್ನು ಹೊಂದಿ ನಂತರ ಕಾಲದಿಂದಲೂ, ಆತ್ಮನ ಗುಣಗಳಿಂದಲೂ ಸಂಬಂಧವನ್ನು

**ಅಷ್ಟಾಭಿಶ್ಚ ತ್ರಿಭಿಶ್ಚೈವಂ ದ್ವಾಭ್ಯಾಂ ಚೈಕೇನ ನಾ ಪುನಃ ।**
**ಕಾಲೇನಾತ್ಮಗುಣೈಶ್ಚಾಪಿ ಕೃತ್ಸ್ನಮೇವ ಜಗತ್ಸ್ವಯಂ ॥ ೫೨ ॥**

**ಗುಣೈರಾರಭ್ಯ ಕರ್ಮಾಣಿ ಸ್ವಭಾವಾದೀನಿ ಯೋಜಯೇತ್ ।**
**ತೇಷಾಮಭಾವೇ ನಾಶಃ ಸ್ಯಾತ್ಕೃತಸ್ಯಾಪಿ ಚ ಕರ್ಮಣಃ ॥ ೫೩ ॥**

**ಕರ್ಮಕ್ಷಯೇ ಪುನಶ್ಚಾನ್ಯತ್ತತೋ ಯಾತಿ ಸ ತತ್ತ್ವತಃ ।**
**ಸ ಏವಾದಿಸ್ಸ್ವಯಂ ಯೋಗನಿಮಿತ್ತಂ ಭೋಕ್ತೃಭೋಗಯೋಃ ॥ ೫೪ ॥**

**ಪರಸ್ತ್ರಿಕಾಲಾದಕಲಸ್ಸ ಏವ ಪರಮೇಶ್ವರಃ ।**
**ಸರ್ವವಿತ್ತ್ರಿಗುಣಾಧೀಶೋ ಬ್ರಹ್ಮ ಸಾಕ್ಷಾತ್ಪರಾತ್ಪರಃ ॥ ೫೫ ॥**

**ತಂ ವಿಶ್ವರೂಪಮಭವಂ ಭವಮೀಡ್ಯಂ ಪ್ರಜಾಪತಿಂ ।**
**ದೇವದೇವಂ ಜಗತ್ಪೂಜ್ಯಂ ಸ್ವಚಿತ್ತಸ್ಥಮುಪಾಸ್ಮಹೇ ॥ ೫೬ ॥**

ಹೊಂದುವುದಲ್ಲದೆ ಆಯಾಯ ಗುಣಗಳಿಗೆ ಅನುರೂಪವಾದ ಕರ್ಮಗಳನ್ನೂ ಸ್ವಭಾವಗಳನ್ನೂ ಹೊಂದುವುದು. ಇವುಗಳು ಹೀಗಿಲ್ಲದಿದ್ದರೆ ಮಾಡಿದ ಕರ್ಮಗಳೆಲ್ಲಕ್ಕೂ ನಾಶವನ್ನು ಹೇಳಬೇಕಾದೀತು.

೫೪. ಕರ್ಮವು ನಾಶವನ್ನು ಹೊಂದಿದರೆ ಬೇರೆ ವಿಧವಾದ ಅವಸ್ಥೆಯು ಉಂಟಾಗುವುದು. ಈ ಅವಸ್ಥೆಯೇ ಜೀವನಿಗೆ ಭೋಕ್ತೃತ್ವವನ್ನೂ ಭೋಗವನ್ನೂ ಉಂಟುಮಾಡಲು ಕಾರಣವೆನಿಸುವುದು.

೫೫. ಈ ಅವಸ್ಥೆಯು ಕಲಾಸಂಬಂಧವಿಲ್ಲದಿರುವ, ಭೂತಭವಿಷ್ಯದ್ವರ್ತಮಾನಗಳಿಗಿಂತಲೂ ಬೇರೆಯಾಗಿರುವ ಆ ಪರಮೇಶ್ವರನ ರೂಪವಾಗಿರುವುದು. ಆ ಪರಮೇಶ್ವರನು ಸರ್ವಜ್ಞನಾಗಿಯೂ, ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿಗೂ ಅಧಿಪತಿಯಾಗಿಯೂ, ಇರುವನು. ಎಲ್ಲಾ ಪದಾರ್ಥಗಳಿಗಿಂತಲೂ ಉತ್ಕೃಷ್ಟನಾಗಿ ಸಾಕ್ಷಾತ್ ಬ್ರಹ್ಮಸ್ವರೂಪದಿಂದ ಪ್ರಕಾಶಿಸುತ್ತಿರುವನು.

೫೬. ಈ ದೇವನು ಪ್ರಪಂಚದ ಸ್ವರೂಪದಿಂದ ಇರುವನು. ಇವನಿಗೆ ಜನ್ಮಾದಿ ವಿಕಾರಗಳಿಲ್ಲ. ಇವನಿಗೆ ಭವನೆಂದು ಹೆಸರು. ಸ್ತುತಿಸಲು ಯೋಗ್ಯನಾಗಿಯೂ, ಪ್ರಜೆಗಳೆಲ್ಲಕ್ಕೂ ಅಧಿಪನಾಗಿಯೂ, ಜಗತ್ತಿಗೆಲ್ಲಕ್ಕೂ ಪೂಜ್ಯನಾಗಿಯೂ. ದೇವತೆಗಳಿಗೂ ದೇವನಾಗಿ ಆಯಾಯ ಪ್ರಾಣಿಗಳ ಮನಸ್ಸಿನಲ್ಲಿರುವ ಈ ದೇವನನ್ನು ಧ್ಯಾನಮಾಡುವೆನು.

**ಕಾಲಾದಿಭಿಃ ಪರೋ ಯಸ್ಮಾತ್ಪ್ರಪಂಚಃ ಪರಿವರ್ತತೇ ।**
**ಧರ್ಮಾವಹಂ ಪಾಪನುದಂ ಭೋಗೇಶಂ ವಿಶ್ವಧಾಮ ಚ ॥ ೫೭ ॥**

**ತಮೀಶ್ವರಾಣಾಂ ಪರಮಂ ಮಹೇಶ್ವರಂ**
**ತಂ ದೇವತಾನಾಂ ಪರಮಂ ಚ ದೈವತಂ ।**
**ಪತಿಂ ಪತೀನಾಂ ಪರಮಂ ಪರಸ್ತಾ-**
**ದ್ವಿದಾಮ ದೇವಂ ಭುವನೇಶ್ವರೇಶ್ವರಂ ॥ ೫೮ ॥**

**ನ ತಸ್ಯ ವಿದ್ಯತೇ ಕಾರ್ಯಂ ಕರಣಂ ಚ ನ ವಿದ್ಯತೇ ।**
**ನ ತತ್ಸಮೋಽಧಿಕಶ್ಚಾಪಿ ಕ್ವಚಿಜ್ಜಗತಿ ದೃಶ್ಯತೇ ॥ ೫೯ ॥**

೫೭. ಇವನು ಕಾಲವೇ ಮೊದಲಾದವುಗಳಿಂತ ಬೇರೆಯಾದವನು ಮತ್ತು ಉತ್ಕೃಷ್ಟನಾದವನು. ಇವನಿಂದಲೇ ಪ್ರಪಂಚವು ನಡೆಯುತ್ತಿರುವುದು. ಇವನು ಪಾಪವನ್ನು ನಾಶಮಾಡಿ ಧರ್ಮವನ್ನುಂಟುಮಾಡುವನು. ಭೋಗಗಳೆಲ್ಲಕ್ಕೂ ಒಡೆಯನು. ಪ್ರಪಂಚಕ್ಕೆಲ್ಲಕ್ಕೂ ಆಶ್ರಯನು. "ನ ವೃಕ್ಷಕಾಲಾಕೃತಿಭಿಃ ಪರೋಽನ್ಯೋ ಯಸ್ಮಾತ್ಪ್ರಪಂಚಃ ಪರಿವರ್ತತೇ ಯಂ । ಧರ್ಮಾವಹಂ ಪಾಪನುದಂ ಭಗೇಶಂ ಜ್ಞಾತ್ವಾತ್ಮಸ್ಥಮಮೃತಂ ವಿಶ್ವಧಾಮ ॥ (ಶ್ವೇ. ಉ. ೬-೬) ಎಂದು ಶ್ವೇತಾಶ್ವತರೋಪನಿಷತ್ತಿನಲ್ಲಿ ಹೇಳಿರುವುದು. ಆದ್ದರಿಂದ ಇವನನ್ನು ಧ್ಯಾನಮಾಡುವೆನು.

೫೮. ಅಧಿಪತಿಗಳೆನಿಸಿದವರಿಗೂ ಅಧಿಪತಿಯಾದವನು. ದೇವತೆಗಳೆಲ್ಲರಿಗೂ ಉತ್ತಮ ದೇವತೆಯು. ಅಧಿಪತಿಯಾಗಿರುವವರಿಗೆಲ್ಲರಿಗೂ ಶ್ರೇಷ್ಠನು. ಲೋಕಾಧಿಪತಿಗಳಿಗೂ ಅಧಿಪತಿಯಾಗಿರುವನು. ಇಂತಹ ಶಿವನನ್ನು ಧ್ಯಾನಮಾಡೋಣ. ಈ ಅರ್ಥದಲ್ಲಿ ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರಮಂ ಚ ದೈವತಂ । ಪತಿಂ ಪತೀನಾಂ ಪರಮಂ ಪರಸ್ತಾದ್ವಿದಾಮ ದೇವಂ ಭುವನೇಶಮೀಡ್ಯಂ ॥ (ಶ್ವೇ. ಉ. ೬-೭) ಎಂದು ಉಪನಿಷದ್ವಾಕ್ಯವಿರುವುದು.

೫೯. ಆ ಶಿವನಿಗೆ ಮಾಡಬೇಕಾಗಿರುವ ಕಾರ್ಯವು ಎಂದರೆ ಕರ್ತವ್ಯವು ಯಾವುದೂ ಇಲ್ಲ. ಇವನಿಗೆ ಕಾರಣವಾದ ಮತ್ತೊಂದು ವಸ್ತುವಿಲ್ಲ. ಇವನೇ ಎಲ್ಲಕ್ಕೂ ಕಾರಣನು. ಈ ಜಗತ್ತಿನಲ್ಲಿ ಇವನಿಗೆ ಸಮನಾದವನೂ, ಇವನಿಗಿಂತ ಹೆಚ್ಚಾದವನೂ ಕೂಡ ಯಾರೂ ಇಲ್ಲ. ಈ ಅರ್ಥದಲ್ಲಿ ಶ್ವೇತಾಶ್ವತರೋಪನಿಷತ್ತು ಹೀಗೆ ಹೇಳುವುದು—"ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ" (ಶ್ವೇ. ಉ ೬-೮).

**ಪರಾಸ್ಯ ವಿವಿಧಾ ಶಕ್ತಿಃ ಶ್ರುತೌ ಸ್ವಾಭಾವಿಕೀ ಶ್ರುತಾ ।**
**ಜ್ಞಾನಂ ಬಲಂ ಕ್ರಿಯಾ ಚೈವ ಯಾಭ್ಯೋ ವಿಶ್ವಮಿದಂ ಕೃತಂ ॥ ೬೦ ॥**

**ನ ತಸ್ಯಾಸ್ತಿ ಪತಿಃ ಕಶ್ಚಿನ್ನೈವ ಲಿಂಗಂ ನ ಚೇಶಿತಾ ।**
**ಕಾರಣಂ ಕಾರಣಾನಾಂ ಚ ಸ ತೇಷಾಮಧಿಪಾಧಿಪಃ ॥ ೬೧ ॥**

**ನ ಚಾಸ್ಯ ಜನಿತಾ ಕಶ್ಚಿನ್ನ ಚ ಜನ್ಮ ಕುತಶ್ಚನ ।**
**ನ ಜನ್ಮಹೇತವಸ್ತದ್ವನ್ಮಲಮಾಯಾದಿಸಂಜ್ಞಿಕಾಃ ॥ ೬೨ ॥**

**ಸ ಏಕಸ್ಸರ್ವಭೂತೇಷು ಗೂಢೋ ವ್ಯಾಪ್ತಶ್ಚ ವಿಶ್ವತಃ ।**
**ಸರ್ವಭೂತಾಂತರಾತ್ಮಾ ಚ ಧರ್ಮಾಧ್ಯಕ್ಷಸ್ಸ ಕಥ್ಯತೇ ॥ ೬೩ ॥**

೬೦-೬೧. ಈ ಈಶ್ವರನ ಶಕ್ತಿಯು ಅನೇಕ ಪ್ರಕಾರವಾಗಿರುವುದು. ಮತ್ತು ಈ ಶಕ್ತಿಯು ಇವನಿಗೆ ಸ್ವಭಾವಗುಣವಾಗಿರುವುದು. ಜ್ಞಾನ, ಬಲಾ ಕ್ರಿಯಾ ಎಂಬ ಈ ಮೂರು ಶಕ್ತಿಗಳಿಂದಲೇ ಈ ಪ್ರಪಂಚವು ಸೃಷ್ಟಿಸಲ್ಪಟ್ಟಿರುವುದು. ಇಂತಹ ಮಹೇಶ್ವರನಿಗೆ ಸ್ವಾಮಿಯಾದ ಮತ್ತೊಬ್ಬ ಪುರುಷನಿಲ್ಲ. ಇವನೇ ಎಲ್ಲರಿಗೂ ಸ್ವಾಮಿಯು. ಇವನಿಗೆ ಲಿಂಗಭೇದವಿಲ್ಲ ಎಂದರೆ ಪರಬ್ರಹ್ಮಸ್ವರೂಪನಾದ ಪರಮೇಶ್ವರನು ಗಂಡೂ ಅಲ್ಲ, ಹೆಣ್ಣೂ ಅಲ್ಲ, ನಪುಂಸಕಲಿಂಗವಸ್ತುವೂ ಅಲ್ಲ. ಇವುಗಳೆಲ್ಲಕ್ಕಿಂತಲೂ ಬೇರೆಯಾಗಿರುವನು. ಕಾರ್ಯರೂಪದಿಂದಿರುವ ಸಮಸ್ತ ಪದಾರ್ಥಗಳಿಗೂ ಯಾವುದು ಕಾರಣವೋ ಅಂತಹ ಕಾರಣವಸ್ತುವಿಗೂ ಕಾರಣನಾಗಿರುವನು. ಎಂದರೆ ಪ್ರಪಂಚದಲ್ಲಿರುವದೃಶ್ಯಾದೃಶ್ಯ, ಚರಾಚರ ಪದಾರ್ಥಗಳೆಲ್ಲಕ್ಕೂ ಇವನೇ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಕಾರಣನು. ಶ್ವೇತಾಶ್ವತರೋಪನಿಷತ್ತಿನಲ್ಲಿ ಈಶ್ವರನ ಶಕ್ತಿಯ ವಿಷಯವಾಗಿ ಹೀಗೆ ಹೇಳಿರುವುದು—“ ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ । ನ ತಸ್ಯ ಕಶ್ಚಿತ್ಪತಿರಸ್ತಿ ಲೋಕೇನ ಚೇಶಿತಾ ನೈವ ಚ ತಸ್ಯ ಲಿಂಗಂ । ಸ ಕಾರಣಂ ಕರಣಾಧಿಪಾಧಿಪೋ ನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ ॥” (ಶ್ವೇ ಉ ೬-೯).

೬೨. ಇವನನ್ನು ಹೆತ್ತವರು ಯಾರೂ ಇಲ್ಲ. ಇವನು ಹುಟ್ಟುವುದಕ್ಕೆ ಅವಕಾಶವೂ ಇಲ್ಲ ಇನ್ನೊಬ್ಬರು ಹುಟ್ಟಲು ಕಾರಣವಾಗಿರುವ ಮಲ, ಮಾಯಾ ಇವೇ ಮೊದಲಾದುವುಗಳು ಯಾವುದೂ ಇವನು ಹುಟ್ಟುವುದಕ್ಕೆ ಕಾರಣವಾಗಿಲ್ಲ.

೬೩-೬೪. ಅವನು ಒಬ್ಬನೇ ಎಲ್ಲಾ ಪ್ರಾಣಿಗಳಲ್ಲಿಯೂ ಬುದ್ಧಿಯಲ್ಲಿದ್ದುಕೊಂಡು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡಿರುವನು. ಅವನು ಎಲ್ಲಾ ಪ್ರಾಣಿ

**ಸರ್ವಭೂತಾಧಿವಾಸಶ್ಚ ಸಾಕ್ಷೀ ಚೇತಾ ಚ ನಿರ್ಗುಣಃ ।**
**ಏಕೋವಶೀ ನಿಷ್ಕ್ರಿಯಾಣಾಂ ಬಹೂನಾಂ ವಿವಶಾತ್ಮನಾಂ ॥ ೬೪ ॥**

**ನಿತ್ಯಾನಾಮಪ್ಯಸೌ ನಿತ್ಯಶ್ಚೇತನಾನಾಂ ಚ ಚೇತನಃ ।**
**ಏಕೋ ಬಹೂನಾಂ ಚಾಕಾಮಃ ಕಾಮಾನೀಶಃ ಪ್ರಯಚ್ಛತಿ ॥ ೬೫ ॥**

**ಸಾಂಖ್ಯಯೋಗಾಧಿಗಮ್ಯಂ ಯತ್ಕಾರಣಂ ಜಗತಾಂ ಪತಿಂ ।**
**ಜ್ಞಾತ್ವಾ ದೇವಂ ಪಶುಃ ಪಾಶೈಸ್ಸರ್ವೈರೇವ ವಿಮುಚ್ಯತೇ ॥ ೬೬ ॥**

---

ಗಳಿಗೂ ಅಂತರಾತ್ಮನಾಗಿ ಧರ್ಮಗಳೆಲ್ಲಕ್ಕೂ ಅಧ್ಯಕ್ಷನಾಗಿರುವನೆಂದು ಹೇಳಲ್ಪಟ್ಟಿರುವುದು. ಆವನು ಎಲ್ಲಾ ಪ್ರಾಣಿಗಳಿಗೂ ಆಶ್ರಯನಾಗಿ, ತಾನು ಜ್ಞಾನರೂಪದಿಂದ ಇರುತ್ತಾ, ಯಾವ ಗುಣಸಂಬಂಧವೂ ಇಲ್ಲದವನಾಗಿ, ಎಲ್ಲಾ ಕಾರ್ಯಗಳಿಗೂ ಸಾಕ್ಷಿಯಾಗಿಯೂ ಇರುವನು. ಇನ್ನೊಬ್ಬರ ಅಧೀನದಲ್ಲಿದ್ದುಕೊಂಡು ಸ್ವತಂತ್ರವಾಗಿ ಯಾವ ಕೆಲಸವನ್ನೂ ಮಾಡದೆ ಇರುವ ಜನಗಳಂತೆ ಇವನು ಇರುವವನಲ್ಲ. ಇವನೇ ಎಲ್ಲವನ್ನೂ ತನ್ನ ಅಧೀನದಲ್ಲಿರಿಸಿಕೊಂಡು ಇವನೊಬ್ಬನೇ ತಾನೇ ತಾನಾಗಿರುವನು. ಈ ವಿಷಯದಲ್ಲಿ—"ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ । ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥" ಎಂದು ಶ್ರುತಿಯಿರುವುದು.

೬೫-೬೬. ಇವನು ನಿತ್ಯರಾದವರಿಗೆಲ್ಲರಿಗಿಂತಲೂ ನಿತ್ಯನಾಗಿರುವನು. ಜ್ಞಾನವುಳ್ಳವರಿಗೆ ಜ್ಞಾನವನ್ನುಂಟುಮಾಡುವವನು. ತಾನು ಯಾವ ವಿಧವಾದ ಇಚ್ಛೆಯಿಲ್ಲದವನಾಗಿದ್ದರೂ ಅನೇಕರಿಗೆ ಅವರವರಿಗೆ ಬೇಕಾದ ಇಚ್ಛೆಯೆಲ್ಲವನ್ನೂ ಸಲ್ಲಿಸುವಷ್ಟು ಶಕ್ತಿಸಾಮರ್ಥ್ಯವುಳ್ಳವನಾಗಿಯೂ ಅವರವರ ಇಚ್ಛೆಯೆಲ್ಲವನ್ನೂ ನಡೆಯಿಸಿಕೊಡುವನು ಜಗತ್ತಿಗೆಲ್ಲಕ್ಕೂ ಅಧಿಪತಿಯಾಗಿಯೂ ಎಲ್ಲಕ್ಕೂ ಕಾರಣನಾಗಿಯೂ, ಸಾಂಖ್ಯ ಮತ್ತು ಯೋಗ ಇವುಗಳಿಂದ ತಿಳಿಯಲು ಯೋಗ್ಯನಾಗಿಯೂ ಇರುವ ಇವನನ್ನು ತಿಳಿದವರೆಲ್ಲರೂ ತಮ್ಮ ತಮ್ಮ ಕರ್ಮಗಳಿಂದ ಬಿಡುಗಡೆಯನ್ನು ಹೊಂದಿ ಮುಕ್ತಿಯನ್ನು ಪಡೆಯುವರು. ಈ ವಿಚಾರದಲ್ಲಿ—"ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್ । ತತ್ಕಾರಣಂ ಸಾಂಖ್ಯಯೋಗಾಧಿಗಮ್ಯಂ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ ॥" (ಶ್ವೇ. ಉ. ೬-೧೩) ಎಂದು ಶ್ವೇತಾಶ್ವತರೋಪನಿಷತ್ತು ಹೇಳುತ್ತಿರುವುದು.

ವಿಶ್ವಕೃದ್ವಿವಿಶ್ವತ್ಸ್ವಾತ್ಮಯೋನಿಜ್ಞಃ ಕಾಲಕೃದ್ಗುಣೀ ।
ಪ್ರಧಾನಃ ಕ್ಷೇತ್ರಜ್ಞಪತಿರ್ಗುಣೇಶಃ ಪಾಶಮೋಚಕಃ ॥ ೬೭ ॥

ಬ್ರಹ್ಮಾಣಂ ವಿದಧೇ ಪೂರ್ವಂ ವೇದಾಂಶ್ಚೋಪಾದಿಶತ್ಸ್ವಯಂ ।
ಯೋ ದೇವಸ್ತಮಹಂ ಬುದ್ಧ್ವಾ ಸ್ವಾತ್ಮಬುದ್ಧಿಪ್ರಸಾದತಃ ॥ ೬೮ ॥

ಮುಮುಕ್ಷುರಸ್ಮಾತ್ಸಂಸಾರಾತ್ಪ್ರಪದ್ಯೇ ಶರಣಂ ಶಿವಂ ।
ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಂ ॥ ೬೯ ॥

೬೭. ಇವನು ಪ್ರಪಂಚವನ್ನು ನಿರ್ಮಿಸಿದವನು; ಪ್ರಪಂಚವನ್ನು ತಿಳಿದವನು; ಕಾಲವನ್ನು ನಿರ್ಮಿಸಿದವನು; ಬಹಳ ಗುಣವುಳ್ಳವನು; ಪ್ರಕೃತಿ, ಕ್ಷೇತ್ರಜ್ಞ ಇವರಿಗೆ ಅಧಿಪತಿಯಾಗಿರುವವನು; ಪಶುವಿನ (ಜೀವರ) ಪಾಶವನ್ನು ಬಿಡಿಸುವವನು. ಈ ವಿಚಾರದಲ್ಲಿ ಉಪನಿಷದ್ವಾಕ್ಯವು— "ಸ ವಿಶ್ವಕೃದ್ವಿಶ್ವವಿದಾತ್ಮಯೋನಿಜ್ಞಃ ಕಾಲಕಾಲೋ ಗುಣೀ ಸರ್ವವಿದ್ಯಃ । ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ ಸಂಸಾರಮೋಕ್ಷಸ್ಥಿತಿಬಂಧಹೇತುಃ ॥" (ಶ್ವೇ. ಉ. ೬-೧೬).

೬೮. ಇವನು ಬ್ರಹ್ಮನನ್ನು ಮೊದಲು ನಿರ್ಮಿಸಿ ಅವನಿಗೆ ತಾನೇ ವೇದಗಳನ್ನು ಉಪದೇಶಮಾಡಿದನು. ನಾನು ಈ ಜನ್ಮಮರಣ ಪ್ರವಾಹರೂಪವಾದ ಸಂಸಾರದಿಂದ ಬಿಡುಗಡೆಯನ್ನು ಹೊಂದಲಿಚ್ಛೆಯುಳ್ಳವನಾಗಿ ನನ್ನ ಬುದ್ಧಿಯ ಮತ್ತು ಮನಸ್ಸಿನ ಪರಿಶುದ್ಧತೆಯಿಂದ ಇವನನ್ನು ತಿಳಿದುಕೊಂಡು ಈ ಶಿವನನ್ನು ಶರಣು ಹೊಂದುವೆನು. ಈ ವಿಷಯದಲ್ಲಿ ಉಪನಿಷದ್ವಾಕ್ಯವು—"ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ । ತಗ್ಂ ಹ ದೇವಮಾತ್ಮಬುದ್ಧಿಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ ॥" (ಶ್ವೇ. ಉ. ೬-೧೮).

೬೯-೭೦. ಇವನಿಗೆ ಯಾವ ವಿಧ ಕಾರ್ಯದ ಸಂಬಂಧವೂ ಇಲ್ಲ, ಕಲಾಸಂಬಂಧವಿಲ್ಲ. ಇವನನ್ನು ಉಪಶಾಂತನನ್ನಾಗಿಯೂ, ಯಾವ ದೋಷವೂ ಇಲ್ಲದವನನ್ನಾಗಿಯೂ, ಮುಕ್ತಿಯನ್ನು ಹೊಂದಲು ಉತ್ತಮವಾದ ಉಪಾಯವನ್ನಾಗಿಯೂ, ಉರಿಯಿಲ್ಲದಿರುವ ಬೆಂಕಿಯಂತೆ ಇರುವವನನ್ನಾಗಿಯೂ ತಿಳಿದು, ಇವನನ್ನು ಶರಣು ಹೊಂದುವೆನು. ಉಪನಿಷದ್ವಾಕ್ಯವು— ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ

**ಅಮೃತಸ್ಯ ಪರಂ ಸೇತುಂ ದಗ್ಧೇಂಧನಮಿವಾನಿಲಂ ।**
**ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ ॥ ೭೦ ॥**

**ತದಾ ಶಿವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥ ೭೧ ॥**

**ತಪಃ ಪ್ರಭಾವಾದ್ದೇವಸ್ಯ ಪ್ರಸಾದಾಚ್ಚ ಮಹರ್ಷಯಃ ।**
**ಅತ್ಯಾಶ್ರಮೋಚಿತಜ್ಞಾನಂ ಪವಿತ್ರಂ ಪಾಪನಾಶನಂ ॥ ೭೨ ॥**

**ವೇದಾಂತೇ ಪರಮಂ ಗುಹ್ಯಂ ಪುರಾಕಲ್ಪಪ್ರಚೋದಿತಂ ।**
**ಬ್ರಹ್ಮಣೋ ವದನಾಲ್ಲಬ್ಧಂ ಮಯೇದಂ ಭಾಗ್ಯಗೌರವಾತ್ ॥ ೭೩ ॥**

---

ನಿರಂಜನಂ । ಅಮೃತಸ್ಯ ಪರಂ ಸೇತುಂ ದಗ್ಧೇಂಧನಮಿವಾನಲಂ ॥" (ಶ್ವೇ. ಉ. ೬-೧೯).

೭೧. ಶರೀರದ ಸುತ್ತಲೂ ಚರ್ಮವಿರುವಂತೆ ಮನುಷ್ಯರ ಸುತ್ತಲೂ ಆಕಾಶಾದಿ ಪಂಚಭೂತಾತ್ಮಕವಾದ ಮಾಯೆಯು ಆವರಿಸಿಕೊಂಡಾಗ ಜೀವರು ಶಿವನನ್ನು ಕೊಂಚವಷ್ಟೂ ತಿಳಿಯದವರಾಗಿ ದುಃಖಸಮುದ್ರದಲ್ಲಿ ಮುಳುಗಿರುವರು. ಉಪನಿಷದ್ವಾಕ್ಯವು—"ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ । ತದಾ ದೇವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥" (ಶ್ವೇ. ಉ. ೬-೨೦).

೭೨-೭೩. ಎಲೈ ಮಹರ್ಷಿಗಳಿರಾ ! ಕೇಳಿರಿ. ಈಗ ನಾನು ನಿಮಗೆ ಉಪದೇಶಮಾಡಿರುವ ಈ ಜ್ಞಾನವನ್ನು ದೇವದೇವನಾದ ಪರಮೇಶ್ವರನೇ ಉಪದೇಶಮಾಡಿರುವನು. ಈ ಜ್ಞಾನವು ವರ್ಣಧರ್ಮಾಶ್ರಮಗಳ ನಿಯಮನಿಷ್ಠೆಗಳನ್ನು ಮೀರಿರುವ ಯತಿಗಳೇ ಮೊದಲಾದ ಬ್ರಹ್ಮಜ್ಞಾನಿಗಳಿಗೆ ತಿಳಿದುಕೊಳ್ಳಲು ಯೋಗ್ಯವಾಗಿರುವುದು. ಇದು ಅತ್ಯಂತ ಪವಿತ್ರವಾಗಿರುವುದು. ಸಮಸ್ತ ಪಾಪಗಳನ್ನೂ ನಾಶಮಾಡುವುದು. ಬ್ರಹ್ಮನು ಬಹಳ ತಪಸ್ಸನ್ನು ಮಾಡಿ ಈ ಜ್ಞಾನವನ್ನು ಮಹೇಶ್ವರನಿಂದ ಹೊಂದಿರುವನು. ಈ ಜ್ಞಾನವು ವೇದಾಂತಶಾಸ್ತ್ರದಲ್ಲಿ ಬಹಳ ರಹಸ್ಯವೆಂದು ಹೇಳಿರುವುದು. ಇದು ಹಿಂದಿನ ಕಲ್ಪದಲ್ಲಿ ಹೇಳಿರತಕ್ಕದ್ದು. ನನ್ನ ಅದೃಷ್ಟವಶದಿಂದ ಬ್ರಹ್ಮನು ನನಗೆ ಇದನ್ನು ಉಪದೇಶಮಾಡಿರುವನು.

೭೪. ಇದನ್ನು ಉಪಶಾಂತಿಯಿಲ್ಲದಿರುವವನಿಗೆ ಹೇಳಬಾರದು. ಶ್ರೇಷ್ಠವಾದ ಈ ಜ್ಞಾನವನ್ನು ಸ್ಥಿರಬುದ್ಧಿಯಿಲ್ಲದ ಮಗನಿಗೂ ಹೇಳಕೂಡದು. ಶಿಷ್ಯನಲ್ಲದಿರುವವ

**ನಾಪ್ರಶಾಂತಾಯ ದಾತವ್ಯಮೇತಜ್ಜ್ಞಾನಮನುತ್ತಮಂ ।**
**ನ ಪುತ್ರಾಯ ಸುವೃತ್ತಾಯ ನಾಶಿಷ್ಯಾಯ ಚ ಸರ್ವಥಾ ॥ ೭೪ ॥**

**ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥ ೭೫ ॥**

**ಅತಶ್ಚ ಸಂಕ್ಷೇಪಮಿದಂ ಶೃಣುಧ್ವಂ**
**ಶಿವಃ ಪರಸ್ಮಾತ್ಪ್ರಕೃತೇಶ್ಚ ಪುಂಸಃ ।**
**ಸ ಸರ್ಗಕಾಲೇ ಚ ಕರೋತಿ ಸರ್ವಂ**
**ಸಂಹಾರಕಾಲೇ ಪುನರಾದದಾತಿ ॥ ೭೬ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ಶಿವತತ್ತ್ವಜ್ಞಾನವರ್ಣನಂ ನಾಮ ಷಷ್ಠೋಽಧ್ಯಾಯಃ**

---

ನಿಗೆ ಸರ್ವಥಾ ಹೇಳಲೇಕೂಡದು. ಉಪನಿಷದ್ವಾಕ್ಯವು—ವೇದಾಂತೇ ಪರಮಂ ಗುಹ್ಯಂ ಪುರಾ ಕಲ್ಪೇ ಪ್ರಚೋದಿತಂ । ನಾಪ್ರಶಾಂತಾಯ ದಾತವ್ಯಂ ನಾಪುತ್ರಾಯಾಶಿಷ್ಯಾಯ ವಾ ಪುನಃ ॥ (ಶ್ವೇ. ಉ. ೬-೨೨).

೭೫. ಈ ನಾನು ನಿಮಗೆ ಉಪದೇಶಮಾಡಿರುವ ಜ್ಞಾನದ ರಹಸ್ಯಗಳೆಲ್ಲವೂ ತಾನು ಪೂಜಿಸುವ ದೇವತೆಯಲ್ಲಿರಿಸಿರುವಂತಹ ಭಕ್ತಿಯನ್ನು ಗುರುವಿನಲ್ಲಿಯೂ ಇರಿಸಿಕೊಂಡಿರುವ ಮಹಾಮಹಿಮನಾದವನಿಗೆ ಗೋಚರವಾಗುವುದೇ ಹೊರತು ಇತರರಿಗೆ ಇದನ್ನು ಕೇಳಿದ ಮಾತ್ರದಿಂದ ತಿಳಿಯುವುದಿಲ್ಲವು. ಉಪನಿಷದ್ವಾಕ್ಯವು— " ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ । ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥ " (ಶ್ವೇ. ಉ ೬-೨೩).

೭೬. ಆದುದರಿಂದ ಈಗ ಹೇಳಿರುವ ವಿಷಯವನ್ನು ಸಂಕ್ಷೇಪವಾಗಿ ಒಟ್ಟುಗೂಡಿಸಿ ಹೇಳುವೆನು. ಶಿವನು ಪ್ರಕೃತಿಗಿಂತಲೂ, ಪುರುಷನಿಗಿಂತಲೂ ಬೇರೆಯಾಗಿ ಉತ್ಕೃಷ್ಟನಾಗಿರುವನು. ಅವನು ಸೃಷ್ಟಿಮಾಡುವಾಗ ಪ್ರಪಂಚವೆಲ್ಲವನ್ನೂ ಸೃಷ್ಟಿಮಾಡಿ, ಎಲ್ಲವನ್ನೂ ಸಂಹಾರಮಾಡುವ ಕಾಲದಲ್ಲಿ ಅದನ್ನು ತನ್ನಲ್ಲಿಯೇ ಹಿಂದಕ್ಕೆ ಉಪಸಂಹಾರ ಮಾಡುವನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಪೂರ್ವಭಾಗದಲ್ಲಿ ಶಿವತತ್ವಜ್ಞಾನವರ್ಣನವೆಂಬ ಆರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ
## ವಾಯವೀಯಸಂಹಿತಾಯಾಂ ಪೂರ್ವಭಾಗೇ
## ಸಪ್ತಮೋಽಧ್ಯಾಯಃ

---

॥ ಋಷಯ ಊಚುಃ ॥

ಕಾಲಾದುತ್ಪದ್ಯತೇ ಸರ್ವಂ ಕಾಲಾದೇವ ವಿಪದ್ಯತೇ
ನ ಕಾಲನಿರಪೇಕ್ಷಂ ಹಿ ಕ್ವಚಿತ್ಕಿಂಚಿನ್ನ ವಿದ್ಯತೇ ॥ ೧ ॥

ಯದಾಸ್ಯಾಂತರ್ಗತಂ ವಿಶ್ವಂ ಶಶ್ವತ್ಸಂಸಾರಮಂಡಲಂ ।
ಸರ್ಗಸಂಹೃತಿಮುದ್ರಾಭ್ಯಾಂ ಚಕ್ರವತ್ಪರಿವರ್ತತೇ ॥ ೨ ॥

ಬ್ರಹ್ಮಾ ಹರಿಶ್ಚ ರುದ್ರಶ್ಚ ತಥಾನ್ಯೇ ಚ ಸುರಾಸುರಾಃ ।
ಯತ್ಕೃತಾಂ ನಿಯತಿಂ ಪ್ರಾಪ್ಯ ಪ್ರಭವೋ ನಾತಿವರ್ತಿತುಂ ॥ ೩ ॥

---

### ಏಳನೆಯ ಅಧ್ಯಾಯವು.

೧-೨. ಋಷಿಗಳು ಕೇಳಿದರು:—ಕಾಲದಿಂದಲೇ ಎಲ್ಲವೂ ಉಂಟಾಗುವುದು. ಕಾಲದಿಂದಲೇ ನಾಶವನ್ನು ಹೊಂದುವುದು. ಯಾವ ಕೆಲಸವೇ ಆದರೂ ಕಾಲದ ಅಪೇಕ್ಷೆ ಇಲ್ಲದೆ ಇರುವುದು ಎಲ್ಲಿಯೂ ಯಾವಾಗಲೂ ಇಲ್ಲ. ಈ ಕಾಲಕ್ಕೆ ಅಧೀನವಾಗಿ ಈ ಪ್ರಪಂಚದಲ್ಲಿ ಪ್ರಾಣಿಗಳೆಲ್ಲವೂ ಹುಟ್ಟುತ್ತಲೂ, ಸಾಯುತ್ತಲೂ ಇರುವವು. ಈ ವಿಧವಾದ ಕಾರ್ಯವು ಚಕ್ರದಂತೆ ಯಾವಾಗಲೂ ಸುತ್ತುತ್ತಿರುವುದು.

೩. ಬ್ರಹ್ಮ, ವಿಷ್ಣು, ರುದ್ರ, ದೇವತೆಗಳು, ರಾಕ್ಷಸರು ಇವರೆಲ್ಲರೂ ಕಾಲದ ಕ್ಲೃಪ್ತವಾದ ನಿಯಮವನ್ನು ಉಲ್ಲಂಘಿಸಿ ನಡೆಯಲು ಸಾಧ್ಯವಿಲ್ಲ.

ಭೂತಭವ್ಯಭವಿಷ್ಯಾದ್ಯೈರ್ವಿಭಜ್ಯ ಜರಯನ್ಪ್ರಜಾಃ ।
ಅತಿಪ್ರಭುರಿತಿ ಸ್ವೈರಂ ವರ್ತತೇಽತಿಭಯಂಕರಃ　　॥ ೪ ॥

ಕ ಏಷ ಭಗವಾನ್ಕಾಲಃ ಕಸ್ಯ ವಾ ವಶವರ್ತ್ಯಯಂ ।
ಕ ಏವಾಸ್ಯ ವಶೇನ ಸ್ಯಾತ್ಕಥಯೈತದ್ವಿಚಕ್ಷಣ　　॥ ೫ ॥

॥ ವಾಯುರುವಾಚ ॥

ಕಲಾಕಾಷ್ಠಾನಿಮೇಷಾದಿಕಲಾಕಲಿತವಿಗ್ರಹಂ ।
ಕಾಲಾತ್ಮೇತಿ ಸಮಾಖ್ಯಾತಂ ತೇಜೋ ಮಾಹೇಶ್ವರಂ ಪರಂ　　॥ ೬ ॥

ಯದಲಂಘ್ಯಮಶೇಷಸ್ಯ ಸ್ಥಾವರಸ್ಯ ಚರಸ್ಯ ಚ ।
ನಿಯೋಗರೂಪಮೀಶಸ್ಯ ಬಲಂ ವಿಶ್ವನಿಯಾಮಕಂ　　॥ ೭ ॥

---

೪. ಈ ಕಾಲವು ಭೂತ, ವರ್ತಮಾನ, ಭವಿಷ್ಯತ್ತೆಂಬುದಾಗಿ ಮೂರು ವಿಧವಾಗಿದ್ದುಕೊಂಡು ಆಯಾಯ ಪ್ರಾಣಿಗಳನ್ನು ಉತ್ಪತ್ತಿಯಾಗುವಂತೆ ಮಾಡಿ ಎಲ್ಲರಿಗೂ ಭಯವನ್ನುಂಟುಮಾಡುತ್ತಾ ಪ್ರಭುವನ್ನೂ ಮೀರಿಸಿರುವುದೆಂದು ಹೇಳಿಸಿಕೊಂಡಿರುವುದು

೫. ಆದುದರಿಂದ ಷಡ್ಗುಣೈಶ್ವರ್ಯಸಂಪನ್ನನಾದ ಈ ಕಾಲವೆಂಬ ದೇವನು ಯಾರು ? ಇವನು ಯಾರ ಅಧೀನದಲ್ಲಿರುವನು ? ಇವನ ವಶಕ್ಕೆ ಸಿಕ್ಕದಿರುವವನು ಯಾರು ? ಇದೆಲ್ಲವನ್ನೂ ಬುದ್ಧಿವಂತನಾದ ನೀನು ನಮಗೆ ತಿಳಿಸು ಎನ್ನಲು,

೬. ವಾಯುದೇವನು ಹೇಳಿದನು:—ಮಹೇಶ್ವರನ ಉತ್ತಮವಾದ ತೇಜಸ್ಸು, ಕಲಾ, ಕಾಷ್ಠಾ, ನಿಮೇಷಾ ಇವೇ ಮೊದಲಾದ ರೂಪಾಂತರವನ್ನು ಹೊಂದಿರುವುದು. ಇದನ್ನು ಕಾಲವೆಂದು ಹೇಳುವರು.

೭. ಈ ಕಾಲರೂಪದಿಂದಿರುವ ಶಿವನ ತೇಜಸ್ಸು ಸ್ಥಿರಜಂಗಮರೂಪವಾದ ಪ್ರಪಂಚವೆಲ್ಲಕ್ಕೂ ಮೀರಲಸಾಧ್ಯವಾಗಿದ್ದುಕೊಂಡು, ಪ್ರಪಂಚವೆಲ್ಲವನ್ನೂ ಈಶ್ವರನ ಹತೋಟಿಯಲ್ಲಿ ಇಡುವುದಕ್ಕೆ ಬಲವಾದ ಅಪ್ಪಣೆಯಾಗಿರುವುದು.

ತಸ್ಯಾಂಶಾಂಶಮಯೀ ಶಕ್ತಿಃ ಕಾಲಾತ್ಮನಿ ಮಹಾತ್ಮನಿ ।
ತತೋ ನಿಷ್ಕ್ರಮ್ಯ ಸಂಕ್ರಾಂತಾ ವಿಸ್ಫುಷ್ಟಾಗ್ನೇರಿವಾಯಸೀ ॥ ೮ ॥

ತಸ್ಮಾತ್ಕಾಲವಶೇ ವಿಶ್ವಂ ನ ಸ ವಿಶ್ವವಶೇ ಸ್ಥಿತಃ ।
ಶಿವಸ್ಯ ತು ವಶೇ ಕಾಲೋ ನ ಕಾಲಸ್ಯ ವಶೇ ಶಿವಃ ॥ ೯ ॥

ಯತೋಽಪ್ರತಿಹತಂ ಶಾರ್ವಂ ತೇಜಃ ಕಾಲೇ ಪ್ರತಿಷ್ಠಿತಂ ।
ಮಹತೀ ತೇನ ಕಾಲಸ್ಯ ಮರ್ಯಾದಾ ಹಿ ದುರತ್ಯಯಾ ॥ ೧೦ ॥

ಕಾಲಂ ಪ್ರಜ್ಞಾವಿಶೇಷೇಣ ಕೋಽತಿವರ್ತಿತುಮರ್ಹತಿ ।
ಕಾಲೇನ ತು ಕೃತಂ ಕರ್ಮ ನ ಕಶ್ಚಿದತಿವರ್ತತೇ ॥ ೧೧ ॥

ಏಕಚ್ಛತ್ರಾಂ ಮಹೀಂ ಕೃತ್ಸ್ನಾಂ ಯೇ ಪರಾಕ್ರಮ್ಯ ಶಾಸತಿ ।
ತೇಽಪಿ ನೈವಾತಿವರ್ತಂತೇ ಕಾಲವೇಲಾಮಿವಾಬ್ಧಯಃ ॥ ೧೨ ॥

---

೮. ಶಿವನ ಶಕ್ತಿಯೇ ತನ್ನ ಅಂಶದಲ್ಲಿ ಒಂದು ಭಾಗದಿಂದ ಮಹಿಮೆಯುಳ್ಳ ಕಾಲಸ್ವರೂಪವಾಗಿರುವುದು. ಇದು ಶಿವನಿಂದ ಬೇರೆಯಾಗಿ ಬೆಂಕಿಯಿಂದ ಚೆನ್ನಾಗಿ ಕಾದಕಬ್ಬಿಣದ ಗುಂಡಿನಂತೆ ಇರುವುದು.

೯. ಆದ್ದರಿಂದಲೇ ಪ್ರಪಂಚವೆಲ್ಲವೂ ಈ ಕಾಲಕ್ಕೆ ಅಧೀನವಾಗಿರುವುದು. ಕಾಲವು ಪ್ರಪಂಚಕ್ಕೆ ಅಧೀನವಾಗಿಲ್ಲ. ಕಾಲವೆಂಬುವುದು ಶಿವನ ಅಧೀನದಲ್ಲಿ ಇರುವುದೇ ಹೊರತು ಶಿವನು ಇದಕ್ಕೆ ಅಧೀನನಾಗಿಲ್ಲ.

೧೦ ಶಿವನ ಸಂಬಂಧವಾದ, ತೇಜಸ್ಸು ಯಾರಿಂದಲೂ ತಡೆಯಲಸಾಧ್ಯವಾದ ಕಾಲರೂಪದಿಂದ ಇರುವಕಾರಣ ಈ ಕಾಲಕ್ಕೆ ಯಾರಿಂದಲೂ ಮೀರಲಾಗದಷ್ಟು ಸಾಮರ್ಥ್ಯವು ಇರುವುದು.

೧೧. ಯಾರೇ ಆಗಲಿ ತಮ್ಮ ಬುದ್ಧಿಯ ಬಲದಿಂದ ಕಾಲವನ್ನು ಮೀರಲಾಗುವುದಿಲ್ಲ. ಕಾಲವು ಮಾಡಿದ ಕೆಲಸವನ್ನು ಯಾರೂ ಬದಲಾಯಿಸಲಾರರು.

೧೨. ಏಕಚ್ಛತ್ರಾಧಿಪತ್ಯವನ್ನು ಮಾಡುತ್ತಾ ಪ್ರಪಂಚವೆಲ್ಲವನ್ನೂ ತಮ್ಮ ಹತೋಟಿಯಲ್ಲಿರಿಸಿಕೊಂಡಿರುವ ರಾಜರೂ ಕೂಡ ಕಾಲವನ್ನು ಅನುಸರಿಸಿಕೊಂಡು, ಸಮುದ್ರದ ಅಲೆಯು ದಡವನ್ನು ಮೀರದಿರುವಂತೆ ಇರುವರೇ ಹೊರತು ಕಾಲವನ್ನು ತಮ್ಮ ಅಧೀನದಲ್ಲಿರಿಸಿಕೊಳ್ಳಲಾಗುವುದಿಲ್ಲ.

**ಯೇ ನಿಗೃಹ್ಯೇಂದ್ರಿಯಗ್ರಾಮಂ ಜಯಂತಿ ಸಕಲಂ ಜಗತ್ ।**
**ನ ಜಯಂತ್ಯಪಿ ತೇ ಕಾಲಂ ಕಾಲೋ ಜಯತಿ ತಾನಪಿ ॥ ೧೩ ॥**

**ಆಯುರ್ವೇದವಿದೋ ವೈದ್ಯಾಸ್ತ್ವನುಷ್ಠಿತರಸಾಯನಾಃ ।**
**ನ ಮೃತ್ಯುಮತಿವರ್ತಂತೇ ಕಾಲೋ ಹಿ ದುರತಿಕ್ರಮಃ ॥ ೧೪ ॥**

**ಶ್ರಿಯಾರೂಪೇಣ ಶೀಲೇನ ಬಲೇನ ಚ ಕುಲೇನ ಚ ।**
**ಅನ್ಯಚ್ಚಿಂತಯತೇ ಜಂತುಃ ಕಾಲೋಽನ್ಯತ್ಕುರುತೇ ಬಲಾತ್ ॥ ೧೫ ॥**

**ಅಪ್ರಿಯೈಶ್ಚ ಪ್ರಿಯೈಶ್ಚೈವ ಹ್ಯಚಿಂತಿತಸಮಾಗಮೈಃ ।**
**ಸಂಯೋಜಯತಿ ಭೂತಾನಿ ವಿಯೋಜತಿ ಚೇಶ್ವರಃ ॥ ೧೬ ॥**

**ಯಥೈವ ದುಃಖಿತಃ ಕಶ್ಚಿತ್ತಥೈವ ಸುಖಿತಃ ಪರಃ ।**
**ದುರ್ವಿಜ್ಞೇಯಸ್ವಭಾವಸ್ಯ ಕಾಲಸ್ಯಾಹೋ ವಿಚಿತ್ರತಾ ॥ ೧೭ ॥**

---

೧೩. ಇಂದ್ರಿಯಗಳನ್ನು ನಿಗ್ರಹಮಾಡಿಕೊಂಡು ಪ್ರಪಂಚವೆಲ್ಲವನ್ನೂ ಜಯಿಸಿದವರೂ ಕೂಡ ಕಾಲವನ್ನು ಜಯಿಸಲಾರದೆ ಹೋದರು. ಕಾಲವು ಅವರನ್ನೂ ಸಹ ಗೆದ್ದಿರುವುದು.

೧೪. ಉತ್ತಮವಾದ ಬಲವನ್ನು ಕೊಡುವ ರಸಾಯನಗಳನ್ನು ಮಾಡುವ, ಆಯುರ್ವೇದಗಳನ್ನು ಬಲ್ಲವರಾದ ವೈದ್ಯರೂ ಸಹ ಮರಣವನ್ನು ಮೀರುವವರಾಗಿಲ್ಲ. ಆದ್ದರಿಂದ ಕಾಲವನ್ನು ಮೀರುವುದು ಅಸಾಧ್ಯವು.

೧೫. ಐಶ್ವರ್ಯ, ಸೌಂದರ್ಯ, ಒಳ್ಳೆಯ ಸ್ವಭಾವ, ಸಾಮರ್ಥ್ಯ, ಒಳ್ಳೆಯ ವಂಶ ಇವುಗಳಿಂದ ಕೂಡಿದವನು ಒಂದು ವಿಧವಾದ ಯೋಚನೆಯನ್ನು ಮಾಡಿದರೆ, ಕಾಲವು ಬಲಾತ್ಕರಿಸಿ ಮತ್ತೊಂದು ವಿಧವಾಗಿ ಮಾಡುವುದು.

೧೬. ಆಯಾಯ ಪ್ರಾಣಿಗಳಿಗೆ ಬೇಕಾದವರನ್ನು ಒಂದು ಕಡೆಯಲ್ಲಿ ಸೇರುವಂತೆ ಮಾಡುವುದು, ಮತ್ತು ಅವರನ್ನು ಅಗಲಿಸುವುದು ಮೊದಲಾದ ಸಾಮರ್ಥ್ಯವು ಈ ಕಾಲದಲ್ಲಿರುವುದು. ಇದರ ಸಾಮರ್ಥ್ಯವು ಇಷ್ಟೇ ಸರಿ ಎಂದು ಊಹಿಸಿ ತಿಳಿಯುವುದೂ ಅಸಾಧ್ಯವಾಗಿರುವುದು.

೧೭. ಕಾಲವು, ಒಬ್ಬನು ದುಃಖವುಳ್ಳವನಾಗಿಯೂ, ಇನ್ನೊಬ್ಬನು ಸುಖದಿಂದ ಇರುವಂತೆಯೂ ಮಾಡುವುದು. ಈ ಕಾಲದ ಸ್ವಭಾವವು ಹೀಗೇ ಸರಿ

**ಯೋ ಯುವಾ ಸ ಭವೇದ್ವೃದ್ಧೋ ಯೋ ಬಲೀಯಾನ್ಸ ದುರ್ಬಲಃ ।**
**ಯಃ ಶ್ರೀಮಾನ್ಸೋಽಪಿ ನಿಃಶ್ರೀಕಃ ಕಾಲಶ್ಚಿತ್ರಗತಿರ್ದ್ವಿಜಾಃ ॥ ೧೮ ॥**

**ನಾಭಿಜಾತ್ಯಂ ನ ವೈ ಶೀಲಂ ನ ಬಲಂ ನ ಚ ನೈಪುಣಂ ।**
**ಭವೇತ್ಕಾರ್ಯಾಯ ಪರ್ಯಾಪ್ತಂ ಕಾಲಶ್ಚ ಹ್ಯನಿರೋಧಕಃ ॥ ೧೯ ॥**

**ಯೇ ಸನಾಥಾಶ್ಚ ದಾತಾರೋ ಗೀತವಾದ್ಯೈರುಪಸ್ಥಿತಾಃ ।**
**ಯೇ ಚಾನಾಥಾಃ ಪರಾನ್ನಾದಾಃ ಕಾಲಸ್ತೇಷು ಸಮಕ್ರಿಯಃ ॥ ೨೦ ॥**

**ಫಲಂತ್ಯಕಾಲೇ ನ ರಸಾಯನಾನಿ**
**ಸಮ್ಯಕ್ಪ್ರಯುಕ್ತಾನ್ಯಪಿ ಚೌಷಧಾನಿ ।**

ಎಂದು ತಿಳಿಯಲು ಆಗದಿರುವ ಕಾರಣ, ಇದರ ಕೆಲಸಗಳೆಲ್ಲವೂ ಬಹಳ ಆಶ್ಚರ್ಯ ವನ್ನುಂಟುಮಾಡುವುದಾಗಿರುವುದು.

೧೮. ಎಲೈ ಋಷಿಗಳಿರಾ ! ಕೇಳಿರಿ. ಯೌವನಸ್ಥನು ಕ್ರಮೇಣ ಮುದುಕನಾಗುವನು. ಬಲವುಳ್ಳವನು ಬಲವಿಲ್ಲದವನಾಗುವನು. ಐಶ್ವರ್ಯವಂತನು ಬಡವನಾಗುವನು. ಆಶ್ಚರ್ಯಕರವಾದ ಈ ಕೆಲಸಗಳೆಲ್ಲವೂ ಕಾಲದ ಕೆಲಸವಾಗಿರುವುದು.

೧೯. ಒಳ್ಳೆಯ ಕುಲ, ಒಳ್ಳೆಯ ಸ್ವಭಾವ, ಸಾಮರ್ಥ್ಯ, ಬುದ್ಧಿವಂತಿಕೆ ಇವುಗಳಲ್ಲಿ ಯಾವುದರಿಂದಲೂ ಕಾಲವನ್ನು ತಡೆಯಲು ಆಗುವುದಿಲ್ಲ. ಆದ್ದರಿಂದ ಕಾಲವನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ.

೨೦. ಪೋಷಕರಿಂದ ಕೂಡಿ ಸುಖವನ್ನು ಅನುಭವಿಸುವ ಅನುಕೂಲಸ್ಥರು, ದಾನಮಾಡುವವರು, ಗೀತವಾದ್ಯ ಇವುಗಳಿಂದ ಸಂತೋಷವಾಗಿರುವವರು, ಇಂತವರ ವಿಷಯದಲ್ಲಿ ಕಾಲವು ಯಾವರೀತಿ ಇರುವುದೋ ದಿಕ್ಕಿಲ್ಲದವರು ಇನ್ನೊಬ್ಬರ ಮನೆಯಲ್ಲಿ ಅನ್ನವನ್ನು ತಿಂದುಕೊಂಡು ಇರುವವರು, ಮುಂತಾದ ತೊಂದರೆಗೀಡಾದವರಲ್ಲಿಯೂ ಕೂಡ ಕಾಲವು ಒಂದೇ ಸಮನಾಗಿರುವುದು.

೨೧. ರಸಾಯನಗಳೂ, ಒಳ್ಳೆಯ ಔಷಧಗಳೂ ಕೂಡ ಅವುಗಳನ್ನು ಶಾಸ್ತ್ರದಲ್ಲಿ ಹೇಳಿರುವ ಕ್ರಮದಿಂದ ಚೆನ್ನಾಗಿ ಮಾಡಿ ಉಪಯೋಗಿಸಿದರೆ, ಅವುಗಳು ಕಾಲವಲ್ಲದ ಕಾಲದಲ್ಲಿ ಫಲವನ್ನು ಕೊಡುವುದಿಲ್ಲ. ಅವುಗಳನ್ನೇ ಸರಿಯಾದ

ತಾನ್ಯೇವ ಕಾಲೇನ ಸಮಾಹೃತಾನಿ
ಸಿದ್ಧಿಂ ಪ್ರಯಾಂತ್ಯಾಶು ಸುಖಂ ದಿಶಂತಿ ॥ ೨೧ ॥

ನಾಕಾಲತೋऽಯಂ ಮ್ರಿಯತೇ ಜಾಯತೇ ವಾ
ನಾಕಾಲತಃ ಪುಷ್ಟಿಮುಗ್ರಾಮುಪೈತಿ ।
ನಾಕಾಲತಃ ಸುಖಿತಂ ದುಃಖಿತಂ ವಾ
ನಾಕಾಲಿಕಂ ವಸ್ತು ಸಮಸ್ತಿ ಕಿಂಚಿತ್ ॥ ೨೨ ॥

ಕಾಲೇನ ಶೀತಃ ಪ್ರತಿವಾತ ವಾತಃ
ಕಾಲೇನ ವೃಷ್ಟಿರ್ಜಲದಾನುಪೈತಿ ।
ಕಾಲೇನ ಚೋಷ್ಮಾ ಪ್ರಶಮಂ ಪ್ರಯಾತಿ
ಕಾಲೇನ ಸರ್ವಂ ಸಫಲತ್ವಮೇತಿ ॥ ೨೩ ॥

ಕಾಲಶ್ಚ ಸರ್ವಸ್ಯ ಭವಸ್ಯ ಹೇತುಃ ।
ಕಾಲೇನ ಸಸ್ಯಾನಿ ಭವಂತಿ ನಿತ್ಯಂ
ಕಾಲೇನ ಸಸ್ಯಾನಿ ಲಯಂ ಪ್ರಯಾಂತಿ
ಕಾಲೇನ ಸಂಜೀವತಿ ಜೀವಲೋಕಃ ॥ ೨೪ ॥

ಕಾಲದಲ್ಲಿ ಮಾಡಿ ಉಪಯೋಗಿಸಿದರೆ ಅವುಗಳು ಸರಿಯಾದ ಸಿದ್ಧಿಯನ್ನು ಕೊಟ್ಟು ಸುಖವನ್ನುಂಟುಮಾಡುತ್ತವೆ.

೨೨. ಮನುಷ್ಯನು ಕಾಲವಲ್ಲದ ಕಾಲದಲ್ಲಿ ಹುಟ್ಟುವುದಿಲ್ಲ. ಮರಣವನ್ನು ಹೊಂದುವುದಿಲ್ಲ. ಉತ್ತಮವಾದ ಪುಷ್ಟಿಯನ್ನೂ ಹೊಂದುವುದಿಲ್ಲ ಕಾಲವಲ್ಲದ ಕಾಲದಲ್ಲಿ ಸುಖವೂ ದುಃಖವೂ ಉಂಟಾಗುವುದಿಲ್ಲ. ಆದ್ದರಿಂದ ಸರಿಯಾದ ಕಾಲವಲ್ಲಿಯೇ ಆಯಾಯ ಕಾರ್ಯಗಳು ನಡೆಯುತ್ತವೆ.

೨೩. ಆಯಾಯ ಕಾಲದಲ್ಲಿ ಗಾಳಿಯು ತಣ್ಣಗೆ ಬೀಸುತ್ತದೆ. ಮಳೆಯು ಮೋಡಗಳ ಮೂಲಕ ಬೀಳುತ್ತದೆ. ಸೆಕೆಯೂ ಉಷ್ಣವೂ ಕಡಿಮೆಯಾಗುತ್ತದೆ. ಆಯಾಯ ಕಾಲದಲ್ಲಿ ಎಲ್ಲವೂ ಫಲವನ್ನು ಕೊಡುತ್ತವೆ.

೨೪. ಎಲ್ಲಾ ಪ್ರಾಣಿಗಳು ಹುಟ್ಟುವುದಕ್ಕೂ ಕಾಲವು ಕಾರಣವಾಗಿರುವುದು. ಕಾಲದಿಂದಲೇ ಪೈರುಗಳು ಯಾವಾಗಲೂ ಬೆಳೆಯುತ್ತವೆ. ಕಾಲದಿಂದಲೇ ಯಾವಾಗಲೂ ಪೈರುಗಳು ನಾಶವಾಗುತ್ತವೆ. ಮತ್ತು ಕಾಲದಿಂದಲೇ ಪ್ರಾಣಿಗಳೆಲ್ಲರೂ ಜೀವಿಸುತ್ತಾ ಸುಖದಿಂದಿರುವರು.

ಇತ್ಥಂ ಕಾಲಾತ್ಮನಸ್ತತ್ತ್ವಂ ಯೋವಿಜಾನಾತಿ ತತ್ತ್ವತಃ ।
ಕಾಲಾತ್ಮಾನಮತಿಕ್ರಮ್ಯ ಕಾಲಾತೀತಂ ಸ ಪಶ್ಯತಿ ॥ ೨೫ ॥

ನ ಯಸ್ಯ ಕಾಲೋ ನ ಚ ಬಂಧಮುಕ್ತೀ
ನ ಯಃ ಪುಮಾನ್ನ ಪ್ರಕೃತಿರ್ನ ವಿಶ್ವಂ ।
ವಿಚಿತ್ರರೂಪಾಯ ಶಿವಾಯ ತಸ್ಮೈ
ನಮಃ ಪರಸ್ಮೈ ಪರಮೇಶ್ವರಾಯ ॥ ೨೬ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾಂ ಪೂರ್ವಭಾಗೇ ಕಾಲಮಹಿಮಾವರ್ಣನಂ ನಾಮ ಸಪ್ತಮೋಽಧ್ಯಾಯಃ



೨೫. ಕಾಲರೂಪದಿಂದ ಇರುವ ಶಿವನ ತತ್ತ್ವವು ಹೀಗೆ ಇರುವುದೆಂದು ಚೆನ್ನಾಗಿ ತಿಳಿದವನು ಕಾಲಕ್ಕೆ ಅನುಗುಣವಾಗಿದ್ದುಕೊಂಡು, ಯಾವ ತೊಂದರೆಯನ್ನೂ ಹೊಂದದೆ ಕಾಲಕ್ಕೂ ಕಾರಣನಾದ ಶಿವನನ್ನು ಹೊಂದುವನು.

೨೬. ಈ ಶಿವನಿಗೆ ಸಂಸಾರಬಂಧ, ಮುಕ್ತಿ ಮೊದಲಾದವುಗಳಿಲ್ಲ. ಇವನು ಕಾಲಕ್ಕೆ ಅಧೀನನಲ್ಲ. ಪ್ರಕೃತಿನಿಯಮಕ್ಕೂ ಪ್ರಪಂಚನಿಯಮಕ್ಕೂ ಒಳಪಡುವವನಲ್ಲ. ಆ ನಿಯಮಗಳನ್ನು ಮೀರಿ ತನ್ನ ಮನಸ್ಸಿಗೆ ಬಂದಂತೆ ಪುರುಷನ ಆಕಾರವನ್ನಾಗಲಿ ಅಥವಾ ಯಾವ ಆಕಾರವನ್ನೇ ಆಗಲಿ ಹೊಂದಲು ಸಾಮರ್ಥ್ಯವುಳ್ಳವನು. ಚಿತ್ರವಿಚಿತ್ರರೂಪಗಳನ್ನು ಧರಿಸಬಲ್ಲನು. ಇಂತಹ ಎಲ್ಲಕ್ಕಿಂತಲೂ ಉತ್ಕೃಷ್ಟನಾದ ಶಿವನಿಗೆ ನಮಸ್ಕಾರವು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಪೂರ್ವಭಾಗದಲ್ಲಿ ಕಾಲದ ಮಹಿಮೆಯನ್ನು ವರ್ಣಿಸುವ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ

## ಅಷ್ಟಮೋಽಧ್ಯಾಯಃ

---

॥ ಋಷಯ ಊಚುಃ ॥

ಕೇನ ಮಾನೇನ ಕಾಲೇಽಸ್ಮಿನ್ನಾಯುಸ್ಸಂಖ್ಯಾ ಪ್ರಕಲ್ಪ್ಯತೇ ।
ಸಂಖ್ಯಾರೂಪಸ್ಯ ಕಾಲಸ್ಯ ಕಃ ಪುನಃ ಪರಮೋಽವಧಿಃ ॥ ೧ ॥

॥ ವಾಯುರುವಾಚ ॥

ಆಯುಷೋಽತ್ರ ನಿಮೇಷಾಖ್ಯಾಮಾದ್ಯಮಾನಂ ಪ್ರಚಕ್ಷತೇ ।
ಸಂಖ್ಯಾರೂಪಸ್ಯ ಕಾಲಸ್ಯ ಶಾಂತ್ಯತೀತಕಲಾವಧಿಃ ॥ ೨ ॥

---

## ಎಂಟನೆಯ ಅಧ್ಯಾಯವು

೧. ಋಷಿಗಳು ಕೇಳುವರು.—ಈ ಕಾಲದಲ್ಲಿ ಯಾವ ಕ್ರಮದಿಂದ ಆಯುಷ್ಯವನ್ನು ಲೆಕ್ಕಮಾಡಬೇಕು ? ಕಾಲವನ್ನು ಗಣನೆಮಾಡುವ ರೀತಿಯಾವುದು ?- ಇದರ ಕೊನೆಯಾವುದು ? ಇದನ್ನೆಲ್ಲಾ ವಿವರಿಸಿ ಹೇಳು ಎನ್ನಲು,

೨. ವಾಯುದೇವನು ಹೇಳುವನು :—ನಿಮೇಷವೆಂಬುದನ್ನು ಈ ಕಾಲದ ಭಾಗವನ್ನಾಗಿಯೂ, ಆಯುಸ್ಸಿನ ಗಣನೆಯಲ್ಲಿ ಮೊದಲನೆಯದನ್ನಾಗಿಯೂ ಹೇಳುವರು. ಎಣಿಕೆಗೆ ಸಿಕ್ಕುವ ಕಾಲಕ್ಕೆ ಶಾಂತ್ಯತೀತಕಲಾ ಎಂಬುವುದು ಕೊನೆಯಾಗಿರುವುದು.

ಅಕ್ಷಿಪಕ್ಷ್ಮಪರಿಕ್ಷೇಪೋ ನಿಮೇಷಃ ಪರಿಕಲ್ಪಿತಃ ।
ತಾದೃಶಾನಾಂ ನಿಮೇಷಾಣಾಂ ಕಾಷ್ಠಾ ದಶ ಚ ಪಂಚ ಚ ॥ ೩ ॥

ಕಾಷ್ಠಾಸ್ತ್ರಿಂಶತ್ಕಲಾ ನಾಮ ಕಲಾಸ್ತ್ರಿಂಶನ್ಮುಹೂರ್ತಕಃ ।
ಮುಹೂರ್ತಾನಾಮಪಿ ತ್ರಿಂಶದಹೋರಾತ್ರಂ ಪ್ರಚಕ್ಷತೇ ॥ ೪ ॥

ತ್ರಿಂಶತ್ಸಂಖ್ಯೈರಹೋರಾತ್ರೈರ್ಮಾಸಃ ಪಕ್ಷದ್ವಯಾತ್ಮಕಃ
ಜ್ಞೇಯಂ ಪಿತ್ರ್ಯಮಹೋರಾತ್ರಂ ಮಾಸಃ ಕೃಷ್ಣಸಿತಾತ್ಮಕಃ ॥ ೫ ॥

ಮಾಸೈಸ್ತೈರಯನಂ ಷಡ್ಭಿರ್ವರ್ಷಂ ದ್ವೇ ಚಾಯನಂ ಮತಂ ।
ಲೌಕಿಕೇನೈವ ಮಾನೇನ ಅಬ್ದೋ ಯೋ ಮಾನುಷಃ ಸ್ಮೃತಃ ॥ ೬ ॥

ಏತದ್ದಿವ್ಯಮಹೋರಾತ್ರಮಿತಿ ಶಾಸ್ತ್ರಸ್ಯ ನಿಶ್ಚಯಃ ।
ದಕ್ಷಿಣಂ ಚಾಯನಂ ರಾತ್ರಿಸ್ತಥೋದಗಯನಂ ದಿನಂ ॥ ೭ ॥

೩-೪. ಕಣ್ಣಿನ ರೆಪ್ಪೆ ಹೊಡೆಯುವ ಕಾಲವು ನಿಮೇಷವೆನಿಸಿಕೊಳ್ಳುವುದು. ಆ ನಿಮೇಷಗಳು ಹದಿನೈದಕ್ಕೆ ಕಾಷ್ಠಾ ಎಂದು ಹೆಸರು. ಮೂವತ್ತು ಕಾಷ್ಠಗಳು ಕಲಾ ಎನಿಸಿಕೊಳ್ಳುವುದು. ಕಲೆಗಳು ಮೂವತ್ತಕ್ಕೆ ಮುಹೂರ್ತವೆಂದು ಹೆಸರು. ಮೂವತ್ತು ಮುಹೂರ್ತಗಳಿಗೆ ಹಗಲು, ರಾತ್ರಿ ಇವೆರಡೂ ಸೇರಿದ ಒಂದು ದಿನವೆಂದು ಹೆಸರು.

೫. ಮೂವತ್ತು ದಿನಗಳಿಗೆ ಎರಡು ಪಕ್ಷಗಳಿಂದ ಕೂಡಿದ ತಿಂಗಳೆಂದು ಹೆಸರು. ಮನುಷ್ಯರ ಮಾನದಿಂದ ಇರುವ ಒಂದು ತಿಂಗಳು ಪಿತೃಗಳಿಗೆ ಒಂದು ದಿನವಾಗುವುದು. ಹೀಗೆಯೇ ಶುಕ್ಲಪಕ್ಷ, ಕೃಷ್ಣಪಕ್ಷವೆಂಬ ಎರಡು ಪಕ್ಷಗಳೂ ಸೇರಿ ಒಂದು ತಿಂಗಳಾಗುವುದು.

೬-೭. ಈ ತಿಂಗಳುಗಳು ಆರು ಆದರೆ ಅಯನವೆಂತಲೂ, ಎರಡು ಅಯನಗಳಿಗೆ ವರ್ಷವೆಂತಲೂ ಹೆಸರು. ಲೋಕವ್ಯವಹಾರವನ್ನು ಅನುಸರಿಸಿದ ಮನುಷ್ಯಮಾನದ ಒಂದು ವರ್ಷವು ದೇವಮಾನದಿಂದ ಹಗಲೂ, ರಾತ್ರಿಯೂ ಸೇರಿದ ಒಂದು ದಿನವಾಗುವುದು ಎಂದು ಶಾಸ್ತ್ರದಲ್ಲಿ ನಿಶ್ಚಯಿಸಿ ಹೇಳಿರುವರು. ಇದರಲ್ಲಿ ದಕ್ಷಿಣಾಯನವು ದೇವತೆಗಳಿಗೆ ರಾತ್ರಿಯಾಗಿಯೂ, ಉತ್ತರಾಯಣವು ದೇವತೆಗಳಿಗೆ ಹಗಲಾಗಿಯೂ ಇರುವುದು.

ಮಾಸಸ್ತ್ರಿಂಶದಹೋರಾತ್ರೈರ್ದಿವ್ಯೋ ಮಾನುಷವತ್ಸ್ಮೃತಃ ।
ಸಂವತ್ಸರೋಽಪಿ ದೇವಾನಾಂ ಮಾಸೈರ್ದ್ವಾದಶಭಿಸ್ತಥಾ ॥ ೮ ॥

ತ್ರೀಣಿ ವರ್ಷಶತಾನ್ಯೇವ ಷಷ್ಟಿವರ್ಷಯುತಾನ್ಯಪಿ ।
ದಿವ್ಯಸ್ಸಂವತ್ಸರೋ ಜ್ಞೇಯೋ ಮಾನುಷೇಣ ಪ್ರಕೀರ್ತಿತಃ ॥ ೯ ॥

ದಿವ್ಯೇನೈವ ಪ್ರಮಾಣೇನ ಯುಗಸಂಖ್ಯಾ ಪ್ರವರ್ತತೇ ।
ಚತ್ವಾರಿ ಭಾರತೇ ವರ್ಷೇ ಯುಗಾದಿ ಕವಯೋ ವಿದುಃ ॥ ೧೦ ॥

ಪೂರ್ವಂ ಕೃತಯುಗಂ ನಾಮ ತತಸ್ತ್ರೇತಾ ವಿಧೀಯತೇ ।
ದ್ವಾಪರಂ ಚ ಕಲಿಶ್ಚೈವ ಯುಗಾನ್ಯೇತಾನಿ ಕೃತ್ಸ್ನಶಃ ॥ ೧೧ ॥

ಚತ್ವಾರಿ ತು ಸಹಸ್ರಾಣಿ ವರ್ಷಾಣಾಂ ತತ್ಕೃತಂ ಯುಗಂ ।
ತಸ್ಯ ತಾವಚ್ಛತೀಸಂಧ್ಯಾ ಸಂಧ್ಯಾಂಶಶ್ಚ ತಥಾವಿಧಃ ॥ ೧೨ ॥

---

೯. ಮನುಷ್ಯರಿಗೆ ಇರುವಂತೆಯೇ ದೇವತೆಗಳಿಗೂ ಕೂಡ ಮೂವತ್ತು ದಿನಗಳಿಗೆ ಒಂದು ತಿಂಗಳಾಗುವುದು. ಹಾಗೆಯೇ ಹನ್ನೆರಡು ತಿಂಗಳಿಗೆ ಒಂದು ವರ್ಷವು ದೇವಮಾನದಲ್ಲಿಯೂ ಆಗುವುದು.

೧೦-೧೧. ಮನುಷ್ಯರ ಮಾನದಿಂದ ಅರುವತ್ತು ವರ್ಷಗಳು ದೇವಮಾನದಿಂದ ಒಂದುವರ್ಷವೆನಿಸಿಕೊಳ್ಳುವುದು. ದೇವಮಾನದಿಂದಲೇ ಯುಗಗಳಿಗೆ ವರ್ಷಗಳನ್ನು ಲೆಕ್ಕಹಾಕುವರು. ಭಾರತ ವರ್ಷದಲ್ಲಿ ನಾಲ್ಕು ಯುಗಗಳುಂಟೆಂದು ತಿಳಿದವರು ಹೇಳುವರು.

೧೨. ಈ ನಾಲ್ಕರಲ್ಲಿ ಮೊದಲನೆಯದು ಕೃತಯುಗವು. ಎರಡನೆಯದು ತ್ರೇತಾಯುಗವು. ಮೂರನೆಯದು ದ್ವಾಪರಯುಗವು ನಾಲ್ಕನೆಯದು ಕಲಿಯುಗವು ಎಂದು ಹೇಳುವರು

೧೩. ನಾಲ್ಕುಸಾವಿರ ದೇವಮಾನವರ್ಷಗಳು ಕೃತಯುಗದ ಕಾಲವೆಂದು ಹೇಳುವರು. ಕೃತಯುಗಕ್ಕೂ ತ್ರೇತಾಯುಗಕ್ಕೂ ಮಧ್ಯೆ ಇರುವ ಸಂಧಿಕಾಲವೂ, ಸಂಧಿಯ ಅಂಶಕಾಲವೂ ನಾನೂರು ವರ್ಷಗಳೆಂದು ಪರಿಗಣಿಸಲ್ಪಟ್ಟಿರುವುದು.

**ಇತರೇಷು ಸಸಂಧ್ಯೇಷು ಸಸಂಧ್ಯಾಂಶೇಷು ಚ ತ್ರಿಷು ।**
**ಏಕಪಾಯೇನ ವರ್ತಂತೇ ಸಹಸ್ರಾಣಿ ಶತಾನಿ ಚ ॥ ೧೩ ॥**

**ಏತದ್ದ್ವಾದಶಸಾಹಸ್ರಂ ಸಾಧಿಕಂ ಚ ಚತುರ್ಯುಗಂ ।**
**ಚತುರ್ಯುಗಸಹಸ್ರಂ ಯತ್ಸಂಕಲ್ಪ ಇತಿ ಕಥ್ಯತೇ ॥ ೧೪ ॥**

**ಚತುರ್ಯುಗೈಕಸಪ್ತತ್ಯಾ ಮನೋರಂತರಮುಚ್ಯತೇ ।**
**ಕಲ್ಪೇ ಚತುರ್ದಶೈಕಸ್ಮಿನ್ಮನೂನಾಂ ಪರಿವೃತ್ತಯಃ ॥ ೧೫ ॥**

**ಏತೇನ ಕ್ರಮಯೋಗೇನ ಕಲ್ಪಮನ್ವಂತರಾಣಿ ಚ ।**
**ಸಪ್ರಜಾನಿ ವ್ಯತೀತಾನಿ ಶತಶೋಽಥ ಸಹಸ್ರಶಃ ॥ ೧೬ ॥**

೧೪. ತ್ರೇತಾ, ದ್ವಾಪರ, ಕಲಿ ಎಂಬ ಈ ಮೂರು ಯುಗಗಳಿಗೂ ಅವುಗಳ ಸಂಧ್ಯಾಕಾಲವೂ ಸಂಧ್ಯಾಂಶಕಾಲವೂ ಕೂಡ ಸೇರಿ ಕ್ರಮವಾಗಿ ಯುಗಗಳಿಗೆ ಒಂದು ಸಾವಿರ ವರ್ಷಗಳಂತೆಯೂ ಸಂಧಿ, ಸಂಧ್ಯಾಂಶಗಳಿಗೆ ಒಂದೊಂದುನೂರು ವರ್ಷಗಳಂತೆಯೂ ಕಡಿಮೆಯಾಗುತ್ತಾ ಹೋಗುವುದು ಎಂದರೆ ತ್ರೇತಾಯುಗಕ್ಕೆ ಮೂರು ಸಾವಿರ ವರ್ಷಪರಿಮಾಣವೂ ಮುನ್ನೂರುವರ್ಷ ಸಂಧ್ಯಾಕಾಲವೂ ಆಗುವುದು. ಇದರಂತೆಯೇ ದ್ವಾಪರಯುಗಕ್ಕೆ ಎರಡುಸಾವಿರ ವರ್ಷಮಾನವೂ ಇನ್ನೂರು ವರ್ಷ ಸಂಧಿಕಾಲವೂ, ಕಲಿಯುಗಕ್ಕೆ ಒಂದುಸಾವಿರ ವರ್ಷಮಾನವೂ ನೂರುವರ್ಷ ಸಂಧಿಕಾಲವೂ ಇರುವುದು.

೧೫. ಸಂಧ್ಯಾ ಮತ್ತು ಸಂಧ್ಯಾಂಶ ಇವುಗಳೂ ಸೇರಿ ಹನ್ನೆರಡು ಸಾವಿರ ವರ್ಷಗಳಾದರೆ ಸಂಧ್ಯಾಂಶ ಮತ್ತು ಸಂಧಿಕಾಲಗಳಿಂದ ಕೂಡಿದ ನಾಲ್ಕು ಯುಗಗಳಾಗುತ್ತವೆ. ನಾಲ್ಕು ಯುಗಗಳು ಒಂದುಸಾವಿರ ಸಾರಿ ಕಳೆದರೆ ಆಗ ಕಲ್ಪವೆನಿಸುವುದು.

೧೬. ಎಪ್ಪತ್ತೊಂದು ಚತುರ್ಯುಗಗಳಿಗೆ ಒಂದು ಮನುವಿನ ಕಾಲ ಅಥವಾ ಮನ್ವಂತರವೆಂದು ಹೇಳುವರು. ಒಂದು ಕಲ್ಪದ ಕಾಲದಲ್ಲಿ ಹದಿನಾಲ್ಕು ಮನುಗಳು ಕ್ರಮವಾಗಿ ಇರುವರು.

೧೭. ಈ ಕ್ರಮದಿಂದಲೇನೇ ಅನೇಕ ಕಲ್ಪಗಳೂ, ಮನ್ವಂತರಗಳೂ ಕೂಡ ಆಯಾಯ ಕಾಲದ ಪ್ರಜೆಗಳೊಡನೆ ನೂರರಗಟ್ಟಲೆ ಅಥವಾ ಸಾವಿರಗಳ ಗಟ್ಟಲೆಯಾಗಿ ಹಿಂದೆ ಕಳೆದುಹೋಗಿರುವವು.

**ಅಜ್ಞೇಯತ್ವಾಚ್ಚ ಸರ್ವೇಷಾಮಸಂಖ್ಯೇಯತಯಾ ಪುನಃ ।**
**ಶಕ್ಯೋ ನೈವಾನುಪೂರ್ವ್ಯಾದ್ವೈ ತೇಷಾಂ ವಕ್ತುಂ ಸುವಿಸ್ತರಃ ॥ ೧೭ ॥**

**ಕಲ್ಪೋ ನಾಮ ದಿವಾ ಪ್ರೋಕ್ತೋ ಬ್ರಹ್ಮಣೋಽವ್ಯಕ್ತಜನ್ಮನಃ ।**
**ಕಲ್ಪಾನಾಂ ವೈ ಸಹಸ್ರಂ ಚ ಬ್ರಾಹ್ಮಂ ವರ್ಷಮಿಹೋಚ್ಯತೇ ॥ ೧೮ ॥**

**ವರ್ಷಾಣಾಮಷ್ಟಸಾಹಸ್ರಂ ಯಚ್ಚ ತದ್ಬ್ರಹ್ಮಣೋ ಯುಗಂ ।**
**ಸವನಂ ಯುಗಸಾಹಸ್ರಂ ಬ್ರಹ್ಮಣಃ ಪದ್ಮಜನ್ಮನಃ ॥ ೧೯ ॥**

**ಸವನಾನಾಂ ಸಹಸ್ರಂ ಚ ತ್ರಿಗುಣಂ ತ್ರಿವೃತಂ ತಥಾ ।**
**ಕಲ್ಪ್ಯತೇ ಸಕಲಃ ಕಾಲೋ ಬ್ರಹ್ಮಣಃ ಪರಮೇಷ್ಠಿನಃ ॥ ೨೦ ॥**

**ತಸ್ಯ ವೈ ದಿವಸೇ ಯಾಂತಿ ಚತುರ್ದಶ ಪುರಂದರಾಃ ।**
**ಶತಾನಿ ಮಾಸೇ ಚತ್ವಾರಿ ವಿಂಶತ್ಯಾ ಸಹಿತಾನಿ ಚ ॥ ೨೧ ॥**

**ಅಬ್ದೇ ಪಂಚ ಸಹಸ್ರಾಣಿ ಚತ್ವಾರಿಂಶದ್ಯುತಾನಿ ಚ ।**
**ಚತ್ವಾರಿಂಶತ್ಸಹಸ್ರಾಣಿ ಪಂಚಲಕ್ಷಾಣಿ ಚಾಯುಷಿ ॥ ೨೨ ॥**

---

೧೭. ಇವುಗಳೆಲ್ಲವನ್ನೂ ತಿಳಿಯಲಾಗದಿರುವುದರಿಂದಲೂ, ಎಣಿಕೆಮಾಡುವುದು ಬಹಳ ಕಷ್ಟವಾದದ್ದರಿಂದಲೂ ಅವುಗಳನ್ನು ವಿಸ್ತಾರವಾಗಿ ಹೇಳುವುದಕ್ಕೆ ಸಾಧ್ಯವಿಲ್ಲ.

೧೯–೨೦. ಅವ್ಯಕ್ತದಿಂದ ಹುಟ್ಟುವ ಬ್ರಹ್ಮನಿಗೆ ಕಲ್ಪವೆಂಬುವುದು ಹಗಲಾಗಿರುವುದು. ಸಾವಿರ ಕಲ್ಪಗಳು ಬ್ರಹ್ಮನಿಗೆ ಒಂದು ವರ್ಷಕಾಲವಾಗುವುದು. ಈ ಮಾನದಿಂದ ಎಂಟುಸಾವಿರ ವರ್ಷಗಳು ಬ್ರಹ್ಮನ ಯುಗವೆನಿಸುವುದು. ಪದ್ಮದಿಂದ ಹುಟ್ಟಿರುವ ಈ ಬ್ರಹ್ಮನಿಗೆ ಈ ಮಾನದಿಂದ ಸಾವಿರಯುಗಗಳು ಒಂದು ಸವನವೆನಿಸಿಕೊಳ್ಳುವುವು.

೨೧-೨೪. ಒಂಭತ್ತುಸಾವಿರ ಸವನಗಳು ಪರಮೇಷ್ಠಿಯಾದ ಬ್ರಹ್ಮನ ಸಂಪೂರ್ಣವಾದ ಆಯುಸ್ಸಿನ ಕಾಲವಾಗಿ ಇರುವುದು ಆ ಬ್ರಹ್ಮನ ಒಂದು ಹಗಲಿನಲ್ಲಿ ಹದಿನಾಲ್ಕುಜನ ಇಂದ್ರರು ಆಳುವರು. ನಲವತ್ತೈದುಲಕ್ಷದ ನಲವತ್ತೈದುಸಾವಿರ ವರ್ಷಗಳೂ ನಾನೂರು ಇಪ್ಪತ್ತು ತಿಂಗಳುಗಳೂ ಸೇರಿದ ಕಾಲವು ಬ್ರಹ್ಮನ ಆಯುಷ್ಯ

ಬ್ರಹ್ಮಾ ವಿಷ್ಣೋರ್ದಿನೇ ಚೈಕೋ ವಿಷ್ಣೂರುದ್ರದಿನೇ ತಥಾ ।
ಈಶ್ವರಸ್ಯ ದಿನೇ ರುದ್ರಸ್ಸದಾಖ್ಯಸ್ಯ ತಥೇಶ್ವರಃ ॥ ೨೩ ॥

ಸಾಕ್ಷಾಚ್ಛಿವಸ್ಯ ತತ್ಸಂಖ್ಯಸ್ತಥಾ ಸೋಽಪಿ ಸದಾಶಿವಃ ।
ಚತ್ವಾರಿಂಶತ್ಸಹಸ್ರಾಣಿ ಪಂಚಲಕ್ಷಾಣಿ ಚಾಯುಷಿ ॥ ೨೪ ॥

ತಸ್ಮಿನ್ಸಾಕ್ಷಾಚ್ಛಿವೇನೈಷ ಕಾಲಾತ್ಮಾ ಸಂಪ್ರವರ್ತತೇ ।
ಯತ್ತತ್ಸೃಷ್ಟೇಸ್ಸಮಾಖ್ಯಾತಂ ಕಾಲಾಂತರಮಿಹ ದ್ವಿಜಾಃ ॥ ೨೫ ॥

ಏತತ್ಕಾಲಾಂತರಂ ಜ್ಞೇಯಮಹರ್ವೈ ಪಾರಮೇಶ್ವರಂ ।
ರಾತ್ರಿಶ್ಚ ತಾವತೀ ಜ್ಞೇಯಾ ಪರಮೇಶಸ್ಯ ಕೃತ್ಸ್ನಶಃ ॥ ೨೬ ॥

ಅಹಸ್ತಸ್ಯ ತು ಯಾ ಸೃಷ್ಟೀ ರಾತ್ರಿಶ್ಚ ಪ್ರಲಯಃ ಸ್ಮೃತಃ ।
ಅಹರ್ನ ವಿದ್ಯತೇ ತಸ್ಯ ನ ರಾತ್ರಿರಿತಿ ಧಾರಯೇತ್ ॥ ೨೭ ॥

---

ವಾಗಿರುವುದು. ಈ ಕಾಲವು ವಿಷ್ಣುವಿಗೆ ಒಂದು ದಿನವಾಗಿಯೂ, ವಿಷ್ಣುವಿನ ಮಾನದಿಂದ ಅಷ್ಟು ವರ್ಷಗಳು ರುದ್ರನಿಗೆ ಒಂದು ದಿನವಾಗಿಯೂ, ಈ ರೀತಿಯಾದ ರುದ್ರನ ವರ್ಷಗಳು ಈಶ್ವರನಿಗೆ ಒಂದು ದಿನವಾಗಿಯೂ, ಈಶ್ವರನ ಈ ವರ್ಷಗಳು ಸದಾಶಿವನಿಗೆ ಒಂದು ದಿನವಾಗಿಯೂ ಇರುವುದು.

೨೫. ಶಿವನಿಗೂ, ಸದಾಶಿವನಿಗೂ ಕೂಡ ಇದೇ ರೀತಿಯಾಗಿ ಆಯುಷ್ಯವನ್ನು ಲೆಕ್ಕಹಾಕಿರುವರು. ಕಾಲರೂಪದಿಂದ ಇರುವವನು ಶಿವನ ಜೊತೆಯಲ್ಲಿಯೇ ಐದುಲಕ್ಷದ ನಲವತ್ತುಸಾವಿರ ವರ್ಷಗಳು ಇರುವನು.

೨೬. ಎಲೈ ಋಷಿಗಳಿರಾ! ಕೇಳಿರಿ. ಈಗ ನಾನು ಹೇಳಿರುವ ಸೃಷ್ಟಿಗೆ ಸಂಬಂಧಪಟ್ಟ ಕಾಲವೆಂಬುವುದು ಪರಮೇಶ್ವರನಿಗೆ ಒಂದು ಹಗಲಿನ ಕಾಲವಾಗಿರುವುದು. ಪರಮೇಶ್ವರನಿಗೆ ರಾತ್ರಿಯು ಕಾಲವೂ ಇಷ್ಟೇ ಆಗಿರುವುದು.

೨೭. ಸೃಷ್ಟಿಯು ಹಗಲಿನಲ್ಲಿಯೂ, ಪ್ರಳಯವು ರಾತ್ರಿಯಲ್ಲಿಯೂ ನಡೆಯುವುದು. ಸೆಸ್ತುತಃ, ಅವನಿಗೆ ಹಗಲೂ, ರಾತ್ರಿಯೂ ಇರುವುದಿಲ್ಲವೆಂದು ನಿರ್ಧರಿಸಿರುವರು. ಇವನು ಲೋಕಗಳಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ ಕಾಲಕ್ಕೆ ಸೇರಿದವನೆಂದು (ಉಪಚಾರ) ರೂಢಿಯಿಂದ ವ್ಯವಹಾರಕ್ಕೆ ಆಸ್ಪದನಾಗಿರುವನು.

ಏಷೋಽಪಚಾರಃ ಕ್ರಿಯತೇ ಲೋಕಾನಾಂ ಹಿತಕಾಮ್ಯಯಾ ।
ಪ್ರಜಾಃ ಪ್ರಜಾನಾಂ ಪತಯೋ ಮೂರ್ತಯಶ್ಚ ಸುರಾಸುರಾಃ ॥ ೨೮ ॥
ಇಂದ್ರಿಯಾಣೀಂದ್ರಿಯಾರ್ಥಾಶ್ಚ ಮಹಾಭೂತಾನಿ ಪಂಚ ಚ ।
ತನ್ಮಾತ್ರಾಣ್ಯಥ ಭೂತಾದಿರ್ಬುದ್ಧಿಶ್ಚ ಸಹದೈವತೈಃ ॥ ೨೯ ॥
ಅಹಸ್ತಿಷ್ಠಂತಿ ಸರ್ವಾಣಿ ಪರಮೇಶಸ್ಯ ಧೀಮತಃ ।
ಅಹರಂತೇ ಪ್ರಲೀಯಂತೇ ರಾತ್ರ್ಯಂತೇ ವಿಶ್ವಸಂಭವಃ ॥ ೩೦ ॥

ಯೋ ವಿಶ್ವಾತ್ಮಾ ಕರ್ಮಕಾಲಸ್ವಭಾವಾ
ದ್ಯರ್ಥೇ ಶಕ್ತಿರ್ಯಸ್ಯ ನೋಲ್ಲಂಘನೀಯಾ ।
ಯಸ್ಯೈವಾಜ್ಞಾಧೀನಮೇತತ್ಸಮಸ್ತಂ
ನಮಸ್ತಸ್ಮೈ ಮಹತೇ ಶಂಕರಾಯ ॥ ೩೧ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ಕಾಲಕೇಪ್ರಭಾವೇ ತ್ರಿದೇವಾಯುರ್ವರ್ಣನಂ ನಾಮ ಅಷ್ಟಮೋಽಧ್ಯಾಯಃ

೨೮-೩೦. ಪ್ರಜೆಗಳೂ, ಪ್ರಜಾಪತಿಗಳೂ, ಅವರ ಆಕಾರಗಳು, ದೇವತೆಗಳು, ರಾಕ್ಷಸರು, ಇಂದ್ರಿಯಗಳು, ಆಯಾಯ ಇಂದ್ರಿಯಗಳಿಗೆ ಬೇಕಾದ ವಿಷಯಗಳು, ಪಂಚಮಹಾಭೂತಗಳು, ಪಂಚಮಹಾಭೂತಗಳು ಹುಟ್ಟಲು ಕಾರಣವಾದ ತನ್ಮಾತ್ರಗಳು, ಬುದ್ಧಿಯು, ಇದಕ್ಕೆ ಅಭಿಮಾನಿಯಾದ ದೇವತೆಗಳು, ಇವರೆಲ್ಲರೂ ಪರಮೇಶ್ವರನ ಹಗಲಿನಲ್ಲಿ ಮಾತ್ರ ಇರುವರು. ಹಗಲಿನ ಕೊನೆಯಲ್ಲಿ ಇವೆಲ್ಲವೂ ನಾಶವನ್ನು ಹೊಂದುವುವು. ರಾತ್ರಿಯ ಕೊನೆಯಲ್ಲಿ ಇವೆಲ್ಲವೂ ಮತ್ತೆ ಸೃಷ್ಟಿಯಾಗಿ ಹಿಂದಿನಂತೆಯೇ ಆಗುವುವು.

೩೧. ಕರ್ಮ, ಕಾಲ, ಸ್ವಭಾವ ಇವೇ ಮೊದಲಾದವುಗಳಲ್ಲಿರುವ ಸಾಮರ್ಥ್ಯವು ಈಶ್ವರನ ಶಕ್ತಿಯಾಗಿರುವುದರಿಂದ ಯಾರೂ ಮೀರಲಾಗುವುದಿಲ್ಲ. ಪ್ರಪಂಚದ ರೂಪದಿಂದ ಇದ್ದುಕೊಂಡು ತನ್ನ ಜ್ಞಾನಮಹಿಮೆಯಿಂದ ಎಲ್ಲವನ್ನೂ ತನ್ನ ಹತೋಟಿಯಲ್ಲಿರಿಸಿಕೊಂಡಿರುವ ಮಹಾಮಹಿಮನಾದ ಆ ಶಿವನಿಗೆ ನಮಸ್ಕಾರವನ್ನು ಮಾಡುವೆನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಪೂರ್ವಭಾಗದಲ್ಲಿ ಕಾಲದ ಮಹಿಮೆಯನ್ನು ತಿಳಿಸುವ ತ್ರಿದೇವಾಯುರ್ವರ್ಣನವೆಂಬ ಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ

# ನವಮೋಽಧ್ಯಾಯಃ

---

॥ ಮುನಯ ಊಚುಃ ॥

**ಕಥಂ ಜಗದಿದಂ ಕೃತ್ಸ್ನಂ ವಿಧಾಯ ಚ ನಿಧಾಯ ಚ ॥**
**ಆಜ್ಞಯಾ ಪರಮಾಂ ಕ್ರೀಡಾಂ ಕರೋತಿ ಪರಮೇಶ್ವರಃ ॥ ೧ ॥**

**ಕಿಂ ತತ್ಪ್ರಥಮಸಂಭೂತಂ ಕೇನೇದಮಖಿಲಂ ತತಂ ।**
**ಕೇನ ವಾ ಪುನರೇವೇದಂ ಗ್ರಸ್ಯತೇ ಪೃಥುಕುಕ್ಷಿಣಾ ॥ ೨ ॥**

---

## ಒಂಭತ್ತನೆಯ ಅಧ್ಯಾಯವು

೧. ಋಷಿಗಳು ಕೇಳುವರು :—ಪರಮೇಶ್ವರನು ಈ ಜಗತ್ತೆಲ್ಲವನ್ನೂ ಸೃಷ್ಟಿ ಮಾಡಿ, ಅದು ಸರಿಯಾಗಿರುವಂತೆ ತನ್ನ ಅಪ್ಪಣೆಯಿಂದ ನಿಲ್ಲಿಸಿ, ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುವಂತೆ ಹೇಗೆ ಕ್ರೀಡಿಸುತ್ತಿರುವನು ?

೨. ಮೊದಲು ಹುಟ್ಟಿದ್ದು ಯಾವುದು ? ಆಮೇಲೆ ಅದು ಹೇಗೆ ಎಲ್ಲವನ್ನೂ ವ್ಯಾಪಿಸಿತು ? ಕೊನೆಯಲ್ಲಿ ಇದನ್ನೆಲ್ಲವನ್ನೂ ಯಾವ ಮಹಾಪುರುಷನು ನುಂಗಿ ತನ್ನ ಮಹೋದರದಲ್ಲಿ ಸೇರಿಸಿಕೊಳ್ಳುವನು ? ಇದೆಲ್ಲವನ್ನು ನನಗೆ ವಿವರಿಸಬೇಕೆನ್ನಲು,

॥ ವಾಯುರುವಾಚ ॥

ಶಕ್ತಿಃ ಪ್ರಥಮಸಂಭೂತಾ ಶಾಂತ್ಯತೀತಪದೋತ್ತರಾ ।
ತತೋ ಮಾಯಾ ತತೋಽವ್ಯಕ್ತಂ ಶಿವಾಚ್ಛಕ್ತಿಮತಃ ಪ್ರಭೋಃ ॥ ೩ ॥

ಶಾಂತ್ಯತೀದಪದಂ ಶಕ್ತೇಸ್ತತಃ ಶಾಂತಿಪದಂ ಕ್ರಮಾತ್ ।
ತತೋ ವಿದ್ಯಾಪದಂ ತಸ್ಮಾತ್ಪ್ರತಿಷ್ಠಾಪದಸಂಭವಃ ॥ ೪ ॥

ನಿವೃತ್ತಿಪದಮುತ್ಪನ್ನಂ ಪ್ರತಿಷ್ಠಾಪದತಃ ಕ್ರಮಾತ್ ।
ಏವಮುಕ್ತಾ ಸಮಾಸೇನ ಸೃಷ್ಟಿರೀಶ್ವರಚೋದಿತಾ ॥ ೫ ॥

ಆನುಲೋಮ್ಯಾತ್ತಥೈತೇಷಾಂ ಪ್ರಾತಿಲೋಮ್ಯೇನ ಸಂಹೃತಿಃ ।
ಅಸ್ಮಾತ್ಪಂಚಪದೋದ್ದಿಷ್ಟಾತ್ಪರಸ್ರಷ್ಟಾ ಸಮಿಷ್ಯತೇ ॥ ೬ ॥

ಕಲಾಭಿಃ ಪಂಚಭಿರ್ವ್ಯಾಪ್ತಂ ತಸ್ಮಾದ್ವಿಶ್ವಮಿದಂ ಜಗತ್ ।
ಅವ್ಯಕ್ತಂ ಕಾರಣಂ ಯತ್ತದಾತ್ಮನಾ ಸಮನುಷ್ಠಿತಂ ॥ ೭ ॥

೩. ವಾಯುದೇವನು ಹೇಳುವನು:—ಶಾಂತ್ಯತೀತಪದಾ ಎಂಬ ಹೆಸರುಳ್ಳ ಶಕ್ತಿಯು ಮೊದಲು ಶಿವನಿಂದ ಹುಟ್ಟಿತು. ಅದರಿಂದ ಮಾಯೆಯೂ, ಅದರಿಂದ ಅವ್ಯಕ್ತವೂ ಹುಟ್ಟಿದುವು.

೪-೫. ಶಕ್ತಿಯಿಂದ ಶಾಂತ್ಯತೀತಪದವೂ ಅದರಿಂದ ಶಾಂತಿಪದವೂ, ಅದರಿಂದ ವಿದ್ಯಾಪದವೂ, ಅದರಿಂದ ಪ್ರತಿಷ್ಠಾಪದವೂ, ಪ್ರತಿಷ್ಠಾಪದದಿಂದ ನಿವೃತ್ತಿಪದವೆಂಬುವುದೂ ಹುಟ್ಟಿತು. ಈಶ್ವರನಿಂದ ಪ್ರೇರಿತವಾದ ಈ ಸೃಷ್ಟಿಯ ಕ್ರಮವನ್ನು ಸಂಕ್ಷೇಪವಾಗಿ ಹೇಳಿರುವೆನು.

೬. ಇವೆಲ್ಲವೂ ಅನುಲೋಮದಿಂದ ಸೃಷ್ಟಿಮಾಡಲ್ಪಟ್ಟು ಪ್ರತಿಲೋಮಕ್ರಮದಿಂದ ನಾಶವನ್ನು ಹೊಂದುವುವು. ಎಂದರೆ ಯಾವ ಒಂದು ವಸ್ತುವು ಯಾವ ವಸ್ತುವಿನಿಂದ ಹುಟ್ಟಿರುವುದೋ ಅದೇ ವಸ್ತುವಿನಲ್ಲಿಯೇ ಲಯವನ್ನು ಹೊಂದುವುದು. ಆದ್ದರಿಂದ ಈ ಐದುಪದಗಳಿಗಿಂತಲೂ ಬೇರೆಯಾದವನು ಇದನ್ನು ಸೃಷ್ಟಿಮಾಡಿರಬೇಕೆಂದು ತಿಳಿಯತಕ್ಕದ್ದು.

೭-೧೦. ಪ್ರಪಂಚವೆಲ್ಲವೂ ಈ ಐದು ಕಲೆಗಳಿಂದ ತುಂಬಿರುವುದು. ಅವ್ಯಕ್ತವು ಐದುಕಲೆಗಳ ರೂಪದಿಂದ ಮಹತ್ತತ್ವವೇ ಮೊದಲಾಗಿಯೂ, ವಿಶೇಷವೇ

**ಮಹದಾದಿವಿಶೇಷಾಂತಂ ಸೃಜತೀತ್ಯಪಿ ಸಂಮತಂ ।**
**ಕಿಂತು ತತ್ರಾಪಿ ಕರ್ತೃತ್ವಂ ನಾವ್ಯಕ್ತಸ್ಯ ನ ಚಾತ್ಮನಃ ॥ ೮ ॥**

**ಅಚೇತನತ್ವಾತ್ಪ್ರಕೃತೇರಜ್ಞತ್ವಾತ್ಪುರುಷಸ್ಯ ಚ ।**
**ಪ್ರಧಾನಪರಮಾಣ್ವಾದಿ ಯಾವತ್ಕಿಂಚಿದಚೇತನಂ ॥ ೯ ॥**

**ತತ್ಕರ್ತೃಕಂ ಸ್ವಯಂ ದೃಷ್ಟಂ ಬುದ್ಧಿಮತ್ಕಾರಣಂ ವಿನಾ ।**
**ಜಗಚ್ಚ ಕರ್ತೃಸಾಪೇಕ್ಷಂ ಕಾರ್ಯಂ ಸಾವಯವಂ ಯತಃ ॥ ೧೦ ॥**

**ತಸ್ಮಾಚ್ಛಕ್ತಸ್ಸ್ವತಂತ್ರೋ ಯಃ ಸರ್ವಶಕ್ತಿಶ್ಚ ಸರ್ವವಿತ್ ।**
**ಅನಾದಿನಿಧನಶ್ಚಾಯಂ ಮಹದೈಶ್ವರ್ಯಸಂಯುತಃ ॥ ೧೧ ॥**

**ಸ ಏವ ಜಗತಃ ಕರ್ತಾ ಮಹಾದೇವೋ ಮಹೇಶ್ವರಃ ।**
**ಪಾತಾ ಹರ್ತಾ ಚ ಸರ್ವಸ್ಯ ತತಃ ಪೃಥಗನನ್ವಯಃ ॥ ೧೨ ॥**

---

ಕೊನೆಯಾಗಿಯೂ ಇರುವ ತತ್ವಗಳಿಗೆ ಕಾರಣವಾಗಿ ಅವುಗಳನ್ನು ಸೃಷ್ಟಿಮಾಡು ವುದೆಂದು ಶಾಸ್ತ್ರಸಮ್ಮತವು. ಆದರೆ ಆ ತತ್ವಗಳನ್ನು ಸೃಷ್ಟಿಮಾಡುವ ವಿಷಯದಲ್ಲಿ ಅವ್ಯಕ್ತಕ್ಕೂ ಆತ್ಮನಿಗೂ ಕೂಡ ಕರ್ತೃತ್ವವಿಲ್ಲ. ಪ್ರಕೃತಿಗೆ ಜ್ಞಾನಸಂಬಂಧವು ಇಲ್ಲದೆ ಅದು ಜಡವಾಗಿರುವುದರಿಂದೂಲ, ಪುರುಷನಿಗೆ ಏನೂ ತಿಳಿಯದ್ದರಿಂದಲೂ ಇವರಿಬ್ಬರಿಗೂ ಕರ್ತೃತ್ವವಿಲ್ಲ ಅವಯವಗಳಿಂದ ಕೂಡಿದ ಪದಾರ್ಥವು ಕಾರ್ಯವಾದ್ದರಿಂದ ಈ ಜಗತ್ತಿನ ಸೃಷ್ಟಿಗೆ ಕರ್ತೃವಾದವನೊಬ್ಬನು ಜಗತ್ತಿಗಿಂತಲೂ ಬೇರೆಯಾಗಿರುವನೆಂದು ತಿಳಿಯಬೇಕು ಪ್ರಕೃತಿ ಮತ್ತು ಪರಮಾಣುಗಳೇ ಮೊದಲಾದುವುಗಳೆಲ್ಲವೂ ಜಡವಾಗಿರುವುದರಿಂದ ಇವುಗಳ ಸೃಷ್ಟಿಯಾಗುವುದಕ್ಕೆ ಜ್ಞಾನಸಂಬಂಧವಿಲ್ಲದ ವಸ್ತುವು ಕಾರಣವಾಗಲಾರದು. ಇವುಗಳು ತಮ್ಮಷ್ಟಕ್ಕೆ ತಾವೇ ಹುಟ್ಟಿದವೆಂದು ಹೇಳುವುದು ಸಮಂಜಸವಾಗುವುದಿಲ್ಲ. ಆದುದರಿಂದ ಸ್ವತಂತ್ರನೂ ಸರ್ವಶಕ್ತನೂ, ಸರ್ವಜ್ಞನೂ ಆದವನೊಬ್ಬನಿರಲೇಬೇಕೆಂದು ಸ್ಪಷ್ಟವಾಗಿ ತಿಳಿದುಬರುವುದು.

೧೧-೧೨. ಪ್ರಕೃತಿಯೇ ಮೊದಲಾದುವುಗಳು ಇನ್ನೊಬ್ಬರಿಂದ ಸೃಷ್ಟಿಮಾಡಲ್ಪಡದೆ, ಪ್ರಪಂಚವು ಮಾತ್ರ ಇನ್ನೊಬ್ಬರಿಂದ ಸೃಷ್ಟಿಯಾಗಿರುವುದರಿಂದ ಸೃಷ್ಟಿಕರ್ತನು ಮಹಾದೇವನೇ ಆಗಿರುವನು. ಇವನಿಗೆ ಇದನ್ನು ಸೃಷ್ಟಿಮಾಡುವಷ್ಟು ಸಾಮರ್ಥ್ಯವೂ, ಸ್ವತಂತ್ರತೆಯೂ, ಎಲ್ಲಾ ಶಕ್ತಿಗಳೂ, ಎಲ್ಲಾ ವಿಧವಾದ ತಿಳುವಳಿಕೆಯೂ ಇರುವುದು. ಇವನು ಹುಟ್ಟು, ಸಾವು ಇಲ್ಲದವನಾಗಿರುವನು. ಷಡ್ಗುಣೈ

**ಪರಿಣಾಮಃ ಪ್ರಧಾನಸ್ಯ ಪ್ರವೃತ್ತಿಃ ಪುರುಷಸ್ಯ ಚ ।**
**ಸರ್ವಂ ಸತ್ಯವ್ರತಸ್ಯೈವ ಶಾಸನೇನ ಪ್ರವರ್ತತೇ ॥ ೧೩ ॥**

**ಇತೀಯಂ ಶಾಶ್ವತೀ ನಿಷ್ಠಾ ಸತಾಂ ಮನಸಿ ವರ್ತತೇ ।**
**ನಚೈನಂ ಪಕ್ಷಮಾಶ್ರಿತ್ಯ ವರ್ತತೇ ಸ್ವಲ್ಪಚೇತನಃ ॥ ೧೪ ॥**

**ಯಾವದಾದಿಸಮಾರಂಭೋ ಯಾವದ್ಯಃ ಪ್ರಲಯೋ ಮಹಾನ್ ।**
**ತಾವದಪ್ಯೇತಿ ಸಕಲಂ ಬ್ರಹ್ಮಣಃ ಶರದಾಂ ಶತಂ ॥ ೧೫ ॥**

**ಪರಮಿತ್ಯಾಯುಷೋ ನಾಮ ಬ್ರಹ್ಮಣೋಽವ್ಯಕ್ತಜನ್ಮನಃ ।**
**ತತ್ಪರಾಖ್ಯಂ ತದರ್ಧಂ ಚ ಪರಾರ್ಧಮಭಿಧೀಯತೇ ॥ ೧೬ ॥**

**ಪರಾರ್ಧದ್ವಯಕಾಲಾಂತೇ ಪ್ರಲಯೋ ಸಮುಪಸ್ಥಿತೇ ।**
**ಅವ್ಯಕ್ತಮಾತ್ಮನಃ ಕಾರ್ಯಮಾದಾಯಾತ್ಮನಿ ತಿಷ್ಠತಿ ॥ ೧೭ ॥**

---

ಶ್ವರ್ಯಸಂಪನ್ನನಾಗಿರುವನು. ಇವನೇ ಈ ಜಗತ್ತನ್ನು ಸೃಷ್ಟಿಮಾಡಿ, ಇದನ್ನು ರಕ್ಷಿಸಿ, ಕೊನೆಯಲ್ಲಿ ಅದನ್ನು ನಾಶಮಾಡುವನು. ಇವನಿಗಿಂತಲೂ ಬೇರೆಯಾಗಿರುವವನು ಇನ್ನೊಬ್ಬನು ಇರುವನೆಂಬುವುದು ಸರಿಯಾದ ಮಾತಾಗಿಲ್ಲ.

೧೩. ಪ್ರಧಾನವು (ಪ್ರಕೃತಿಯು) ಮಹದಾದಿ ಪರಿಣಾಮವನ್ನು ಮಾಡುವುದು. ಈ ಪರಿಣಾಮರೂಪವಾದ ಕಾರ್ಯವು ಪುರುಷನ ಶಕ್ತಿಯಿಂದಲೇ ನಡೆಯುವುದು. ಆದುದರಿಂದ ಈ ಶಿವನ ಸಂಕಲ್ಪದಿಂದಲೇ ಸಕಲಚರಾಚರ ಪ್ರಪಂಚವೂ ನಡೆಯುತ್ತಿರುವುದು.

೧೪. ಈ ಪ್ರಕಾರದಿಂದ ಯಾವಾಗಲೂ ಕ್ರಮವಾಗಿ ನಡೆಯುತ್ತಿರುವ ಪ್ರಪಂಚದ ಸ್ಥಿತಿಯು ಹೀಗೆಯೇ ಸರಿ ಎಂದು ಸತ್ಪುರುಷರು ಹೇಳುವರು. ಅಲ್ಪಜ್ಞನಾದ ಮೂಢನು ಈ ಶಾಸ್ತ್ರಾರ್ಥವನ್ನು ಒಪ್ಪುವುದಿಲ್ಲ.

೧೫. ಪ್ರಕೃತಿಯಿಂದ ಎಲ್ಲವೂ ಉಂಟಾಗಿ ಪ್ರಳಯವು ಆಗುವವರಿಗೂ ಬೇಕಾಗುವ ಕಾಲವು ಬ್ರಹ್ಮನ ಒಂದುನೂರು ವರ್ಷಗಳಾಗುವವು.

೧೬–೧೭. ಅವ್ಯಕ್ತದಿಂದ ಉತ್ಪನ್ನನಾದ ಬ್ರಹ್ಮನ ಆಯುಸ್ಸಿಗೆ ಪರವೆಂದು ಹೆಸರು. ಆ ಪರವೆಂಬುದೂ, ಅದರ ಅರ್ಧವೂ ಸೇರಿ ಪರಾರ್ಧವೆನಿಸುವುದು. ಎರಡು ಪರಾರ್ಧಕಾಲವು ಮುಗಿಯುವ ಕಾಲಕ್ಕೆ ಪ್ರಳಯಕಾಲವೆಂದು ಹೆಸರು. ಆ ಕಾಲವು

ಆತ್ಮನ್ಯವಸ್ಥಿತೇಽವ್ಯಕ್ತೇ ವಿಕಾರೇ ಪ್ರತಿಸಂಹೃತೇ ।
ಸಾಧರ್ಮ್ಯೇಣಾಧಿತಿಷ್ಠೇತೇ ಪ್ರಧಾನಪುರುಷಾವುಭೌ ॥ ೧೮ ॥

ತತಃ ಸತ್ತ್ವಗುಣಾವೇತೌ ಸಮತ್ವೇನ ವ್ಯವಸ್ಥಿತೌ ।
ಅನುದ್ರಿಕ್ತಾವನಂತೌ ತಾವೋತಪ್ರೋತೌ ಪರಸ್ಪರಂ ॥ ೧೯ ॥

ಗುಣಸಾಮ್ಯೇ ತದಾ ತಸ್ಮಿನ್ನವಿಭಾಗೇ ತಮೋದಯೇ ।
ಶಾಂತವಾತೈಕನೀರೇ ಚ ನ ಪ್ರಾಜ್ಞಾಯತ ಕಿಂಚನ ॥ ೨೦ ॥

ಅಪ್ರಜ್ಞಾತೇ ಜಗತ್ಯಸ್ಮಿನ್ನೇಕ ಏವ ಮಹೇಶ್ವರಃ ।
ಉಪಾಸ್ಯ ರಜನೀಂ ಕೃತ್ಸ್ನಾಂ ಪರಾಂ ಮಹೇಶ್ವರೀಂ ತತಃ ॥ ೨೧ ॥

ಪ್ರಭಾತಾಯಾಂ ತು ಶರ್ವರ್ಯಾಂ ಪ್ರಧಾನಪುರುಷಾವುಭೌ ।
ಪ್ರವಿಶ್ಯ ಕ್ಷೋಭಯಾಮಾಸ ಮಾಯಾಯೋಗಾನ್ಮಹೇಶ್ವರಃ ॥ ೨೨ ॥

---

ಒದಗಿದಾಗ ಅವ್ಯಕ್ತವು ತನ್ನ ಕಾರ್ಯಗಳೆಲ್ಲವನ್ನೂ ಉಪಸಂಹಾರಮಾಡಿಕೊಂಡು ಶಾಂತವಾಗುವುದು. ಆಗ ಪುರುಷನೂ ಪ್ರಕೃತಿಯೂ ಸಮನಾದ ರೀತಿಯಿಂದಿರುವರು. ಎಂದರೆ ಸಾಮ್ಯಾವಸ್ಥೆಯಲ್ಲಿರುವರು.

೧೯-೨೦. ಪ್ರಕೃತಿ, ಪುರುಷರಿಬ್ಬರೂ ಸತ್ವ ಮತ್ತು ತಮೋಗಣಗಳಿಂದ ಒಂದರಲ್ಲೊಂದು ಸೇರಿ ಸಮವಾದ ಸ್ಥಿತಿಯಲ್ಲಿರುವರು. ಯಾರಲ್ಲಿಯೂ ಯಾವ ಹೆಚ್ಚು ಕಡಿಮೆಯೂ ಇಲ್ಲದಿರುವಾಗ ಇವರಿಬ್ಬರೂ ಅನ್ಯೋನ್ಯವಾಗಿ ಭೇದವು ತಿಳಿಯದೇ ಇರುವಂತೆ ಸೇರಿಹೋಗುವರು. ಹೀಗೆ ಇವರಿಬ್ಬರಿಗೂ ಯಾವ ವಿಧವಾದ ಭೇದವೂ ತಿಳಿಯದಂತೆ ಇರುವಮಟ್ಟಿಗೆ ಸೇರಿದಾಗ ಸತ್ವ, ರಜಸ್ಸು, ತಮಸ್ಸೆಂಬ ಮೂರು ಗುಣಗಳೂ ಸಮನಾಗಿರುವುವು. ಆಗ ಸೃಷ್ಟ್ಯಾದಿವ್ಯಾಪಾರಗಳಿಲ್ಲದೆ ಬಹಳ ಕತ್ತಲೆಯು ಮುಚ್ಚಿಕೊಂಡು, ಗಾಳಿ ಎಲ್ಲವೂ ಅಡಗಿಹೋಗಿ ಒಂದೂ ತಿಳಿಯದಂತಾಗುವುದು. ಎಲ್ಲೆಲ್ಲಿಯೂ ಬರೀ ನೀರು ಮಾತ್ರ ತುಂಬಿಕೊಂಡಿರುವುದು.

೨೧. ಈ ಜಗತ್ತಿನಲ್ಲಿ ಬರೀ ನೀರು ತುಂಬಿಕೊಂಡು ಯಾವುದೂ ಕಾಣದಂತಿರುವಾಗ ಮಹೇಶ್ವರನೊಬ್ಬನು ಮಾತ್ರ ತನ್ನಿಂದಲೇ ಉಂಟಾದ ಆ ಮಹಾರಾತ್ರಿಯೆಲ್ಲವನ್ನೂ ಆ ನೀರಿನಲ್ಲಿದ್ದುಕೊಂಡು ಕಳೆಯುವನು.

೨೨. ಬೆಳಗಾದ ಕೂಡಲೆ ಅವನು ತನ್ನ ಉತ್ತಮವಾದ ಯೋಗಸಾಮರ್ಥ್ಯದಿಂದ ಪ್ರಕೃತಿ, ಪುರುಷರಿಬ್ಬರಲ್ಲಿಯೂ ಕಾರ್ಯವು ಉಂಟಾಗುವಂತೆ ಅವರನ್ನು ಪ್ರೇರಿಸುವನು.

**ತತಃ ಪುನರಶೇಷಾಣಾಂ ಭೂತಾನಾಂ ಪ್ರಭವಾಪ್ಯಯಾತ್ ।**
**ಅವ್ಯಕ್ತಾದಭವತ್ಸೃಷ್ಟಿರಾಜ್ಞಯಾ ಪರಮೇಷ್ಠಿನಃ ॥ ೨೩ ॥**

**ವಿಶ್ವೋತ್ತರೋತ್ತರ ವಿಚಿತ್ರಮನೋರಥಸ್ಯ ।**
**ಯಸ್ಯೈಕಶಕ್ತಿಶಕಲೇ ಸಕಲಸ್ಸಮಾಪ್ತಃ ।**
**ಆತ್ಮಾನಮಧ್ವಪತಿಮಧ್ವವಿದೋ ವದಂತಿ ।**
**ತಸ್ಮೈ ನಮಃ ಸಕಲಲೋಕವಿಲಕ್ಷಣಾಯ ॥ ೨೪ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ಸೃಷ್ಟಿಪಾಲನಪ್ರಲಯಕರ್ತೃತ್ವವರ್ಣನಂ ನಾಮ ನವಮೋಽಧ್ಯಾಯಃ**



೨೩. ಅನಂತರದಲ್ಲಿ ಬ್ರಹ್ಮನು ಹುಟ್ಟಿ ಎಲ್ಲಾ ಪ್ರಾಣಿಗಳ ಉತ್ಪತ್ತಿ, ನಾಶ ಇವುಗಳಿಗೆ ಕಾರಣವಾದ ಅವ್ಯಕ್ತದಿಂದ ಪ್ರಪಂಚವೆಲ್ಲವೂ ಹಿಂದಿನಂತೆ ಸೃಷ್ಟಿಯಾಗುವಂತೆ ಮಾಡುವನು.

೨೪. ಮಹೇಶ್ವರನ ಶಕ್ತಿಯು ಅಪಾರವಾದುದು. ಆ ಮಹಾಶಕ್ತಿಯ ಎಲ್ಲೋ ಒಂದು ಸಣ್ಣ ಅಂಶದಿಂದಲೇ ಈ ಪ್ರಪಂಚ ಸೃಷ್ಟ್ಯಾದಿ ಕಾರ್ಯಗಳೆಲ್ಲವೂ ನಡೆಯುತ್ತಿರುವುವು. ಇಂತಹ ತನ್ನ ಶಕ್ತಿಯಿಂದ ಚಿತ್ರವಿಚಿತ್ರಗಳಾದ ಬಗೆಬಗೆಯ ಸೃಷ್ಟಿಗಳನ್ನು ಮಾಡುವ ಸಾಮರ್ಥ್ಯವುಳ್ಳ ಪರಮೇಶ್ವರನು ಸಮಸ್ತವನ್ನೂ ವ್ಯಾಪಿಸಿರುವ ಆತ್ಮನೆಂದೂ ಅಧ್ವಪತಿಯೆಂದೂ ಷಡಧ್ವಜ್ಞಾನಿಗಳು ಹೇಳುವರು. ಸಕಲ ಪ್ರಪಂಚಕ್ಕಿಂತಲೂ ಬೇರೆಯಾದವನೂ ಅಪಾರಮಹಿಮಾವಂತನೂ ಆದ ಇಂತಹ ಪರಮೇಶ್ವರನಿಗೆ ನಮಸ್ಕಾರವು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಪೂರ್ವಭಾಗದಲ್ಲಿ ಸೃಷ್ಟಿಪಾಲನಪ್ರಲಯಕರ್ತೃತ್ವವರ್ಣನವೆಂಬ ಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಾಯುವೀಯಸಂಹಿತಾಯಾಂ ಪೂರ್ವಭಾಗೇ

## ದಶಮೋಽಧ್ಯಾಯಃ

---

॥ ವಾಯುರುವಾಚ ॥

ಪುರುಷಾಧಿಷ್ಠಿತಾತ್ಪೂರ್ವಮವ್ಯಕ್ತಾದೀಶ್ವರಾಜ್ಞಯಾ ।
ಬುಧ್ಯಾದಯೋ ವಿಶೇಷಾಂತಾ ವಿಕಾರಾಶ್ಚಾಭವನ್ಕ್ರಮಾತ್ ॥ ೧ ॥

ತತಸ್ತೇಭ್ಯೋ ವಿಕಾರೇಭ್ಯೋ ರುದ್ರೋ ವಿಷ್ಣುಃ ಪಿತಾಮಹಃ ।
ಕಾರಣತ್ವೇನ ಸರ್ವೇಷಾಂ ತ್ರಯೋ ದೇವಾಃ ಪ್ರಜಜ್ಞಿರೇ ॥ ೨ ॥

---

### ಹತ್ತನೆಯ ಅಧ್ಯಾಯವು

೧. ವಾಯುದೇವನಿಂತೆಂದನು :—ಸೃಷ್ಟಿಗೆ ಪೂರ್ವದಲ್ಲಿ ಈಶ್ವರನ ಅಪ್ಪಣೆ ಮೇರಿಗೆ ಪುರುಷಾಧಿಷ್ಠಿತವಾದ ಅವ್ಯಕ್ತದಿಂದ ಪ್ರಕೃತಿಯು ಉತ್ಪನ್ನವಾಯಿತು. ಬಳಿಕ ಕ್ರಮವಾಗಿ ಪ್ರಕೃತಿಯ ವಿಕಾರರೂಪಗಳಾದ ಬುದ್ಧಿ ಮೊದಲಾದ ಇಂದ್ರಿಯಗಳೂ ವಸ್ತುವಿಶೇಷಗಳೂ ಹುಟ್ಟಿದವು. ಇವುಗಳೆಲ್ಲವೂ ಪರಿಣಾಮವನ್ನು ಹೊಂದಿದ ಪ್ರಕೃತಿಯ ವಿಕಾರೂಪಗಳು.

೨. ಆ ವಿಕಾರ ಪದಾರ್ಥಗಳಿಂದ ಎಲ್ಲಕ್ಕೂ ಕಾರಣರಾದ ಬ್ರಹ್ಮ, ವಿಷ್ಣು, ರುದ್ರ ಎಂದು ಹೆಸರುಳ್ಳ ಮೂರು ಜನ ದೇವತೆಗಳು ಹುಟ್ಟಿದರು.

**ಸರ್ವತೋ ಭುವನವ್ಯಾಪ್ತಿಶಕ್ತಿಮವ್ಯಾಹತಾಂ ಕ್ವಚಿತ್ ।**
**ಜ್ಞಾನಮಪ್ರತಿಮಂ ಶಶ್ವದೈಶ್ವರ್ಯಂ ಚಾಣಿಮಾದಿಕಂ ॥ ೩ ॥**

**ಸೃಷ್ಟಿಸ್ಥಿತಿಲಯಾಖ್ಯೇಷು ಕರ್ಮಸು ತ್ರಿಷು ಹೇತುತಾಂ ।**
**ಪ್ರಭುತ್ವೇನ ಸಹೈತೇಷಾಂ ಪ್ರಸೀದತಿ ಮಹೇಶ್ವರಃ ॥ ೪ ॥**

**ಕಲ್ಪಾಂತರೇ ಪುನಸ್ತೇಷಾಮಸ್ಪರ್ಧಾಬುದ್ಧಿಮೋಹಿನಾಂ ।**
**ಸರ್ಗರಕ್ಷಾಲಯಾಚಾರಂ ಪ್ರತ್ಯೇಕಂ ಪ್ರದದೌ ಚ ಸಃ ॥ ೫ ॥**

**ಏತೇ ಪರಸ್ಪರೋತ್ಪನ್ನಾ ಧಾರಯಂತಿ ಪರಸ್ಪರಂ ।**
**ಪರಸ್ಪರೇಣ ವರ್ಧಂತೇ ಪರಸ್ಪರಮನುವ್ರತಾಃ ॥ ೬ ॥**

ಪ್ರಭುವಾದ ಮಹೇಶ್ವರನು ಪ್ರಪಂಚದಲ್ಲಿ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡು ಈ ಬ್ರಹ್ಮ ವಿಷ್ಣು ರುದ್ರರಿಗೆ ಯಾರಿಂದಲೂ ಎಲ್ಲಿಯೂ ತಡೆಯಲ ಸಾಧ್ಯವಾದ ಸಾಮರ್ಥ್ಯವನ್ನೂ, ಅಸದೃಶವಾದ ಜ್ಞಾನವನ್ನು ಅಣಿಮಾದ್ಯಷ್ಟೈಶ್ವರ್ಯಗಳನ್ನೂ, ದಯಪಾಲಿಸಿರುವನು. ಸೃಷ್ಟಿ ಸ್ಥಿತಿ ಲಯಗಳೆಂಬ ಮೂರು ಕೆಲಸಗಳನ್ನು ಮಾಡಲು ಇವರಿಗೆ ಅನುಕೂಲವಾದ ಸ್ಥಿತಿಯನ್ನೊದಗಿಸಿ, ಆಯಾಯ ಕೆಲಸಗಳನ್ನು ಮಾಡಲು ಸಂಪೂರ್ಣವಾದ ಸ್ವಾತಂತ್ರ್ಯವನ್ನೂ, ಈ ಮೂರು ದೇವತೆಗಳಿಗೆ ಅನುಗ್ರಹಮಾಡಿಕೊಟ್ಟಿರುವನು.

೫. ಹಿಂದಿನ ಕಲ್ಪದಲ್ಲಿದ್ದ ಆಯಾಯ ಪದಾರ್ಥಗಳನ್ನು ಪುನಃ ಸೃಷ್ಟಿ ಮಾಡುವುದು, ಪಾಲನೆಯನ್ನು ಮಾಡುವುದು, ಲಯಮಾಡುವುದು, ಈ ಕೆಲಸಗಳಲ್ಲಿ ಅವರವರ ಬುದ್ಧಿಯು ಮೋಹಗೊಳ್ಳದಿರುವಂತೆಯೂ, ಈ ಕೆಲಸಗಳನ್ನು ಅವರವರು ಕ್ರಮವಾಗಿ ನಡೆಯಿಸುವಂತೆಯೂ, ಆ ಮಹೇಶ್ವರನು ಈ ಮೂರು ದೇವತೆಗಳಿಗೂ ಬೇರೆ ಬೇರೆಯಾಗಿ ಸಾಮರ್ಥ್ಯವನ್ನು ಅನುಗ್ರಹಿಸಿರುವನು.

೬. ಈ ಮೂರು ಜನಗಳೂ ಒಬ್ಬರನ್ನು ಇನ್ನೊಬ್ಬರು ಅನುಸರಿಸಿ ಹುಟ್ಟಿದವರು. ಒಬ್ಬರನ್ನೊಬ್ಬರು ಅನುಸರಿಸಿಕೊಂಡು ಕೆಲಸಮಾಡುವರು, ಒಬ್ಬರಮೇಲೆ ಇನ್ನೊಬ್ಬರು ಅಸೂಯೆಪಡದೆ, ಪ್ರತಿಯೊಬ್ಬರೂ ತಮ್ಮ ತಮ್ಮ ಕೆಲಸಕಾರ್ಯಗಳನ್ನು ಮಾಡುತ್ತಿರುವರು.

ಕ್ವಚಿದ್ಬ್ರಹ್ಮಾ ಕ್ವಚಿದ್ವಿಷ್ಣುಃ ಕ್ವಚಿದ್ರುದ್ರಃ ಪ್ರಶಸ್ಯತೇ ।
ನಾನೇನ ತೇಷಾಮಾಧಿಕ್ಯಮೈಶ್ವರ್ಯಂ ಚಾತಿರಿಚ್ಯತೇ ॥ ೭ ॥

ಮೂರ್ಖಾ ನಿಂದಂತಿ ತಾನ್ವಾಗ್ಭಿಃ ಸಂರಂಭಾಭಿನಿವೇಶಿನಃ ।
ಯಾತುಧಾನಾ ಭವಂತ್ಯೇವ ಪಿಶಾಚಾಶ್ಚ ನ ಸಂಶಯಃ ॥ ೮ ॥

ದೇವೋ ಗುಣತ್ರಯಾತೀತಶ್ಚತುರ್ವ್ಯೂಹೋ ಮಹೇಶ್ವರಃ ।
ಸಕಲಸ್ಸಕಲಾಧಾರಶಕ್ತೇರುತ್ಪತ್ತಿಕಾರಣಂ ॥ ೯ ॥

ಸೋSಯಮಾತ್ಮಾ ತ್ರಯಸ್ಯಾಸ್ಯ ಪ್ರಕೃತೇಃ ಪುರುಷಸ್ಯ ಚ ।
ಲೀಲಾಕೃತಜಗತ್ಸೃಷ್ಟಿರೀಶ್ವರತ್ವೇ ವ್ಯವಸ್ಥಿತಃ ॥ ೧೦ ॥

---

೭. ಕೆಲವು ಕಡೆಯಲ್ಲಿ ಬ್ರಹ್ಮನಿಗೂ, ಕೆಲವು ಕಡೆಯಲ್ಲಿ ವಿಷ್ಣುವಿಗೂ, ಮತ್ತೆ ಕೆಲವು ಕಡೆಯಲ್ಲಿ ರುದ್ರನಿಗೂ ಪ್ರಾಶಸ್ತ್ಯವು ಇರುವಂತೆ ಕಂಡು ಬರುವುದು. ಹೀಗಿದ್ದ ಮಾತ್ರಕ್ಕೆ ಇವರಿಗೆ ಯಾವ ತಾರತಮ್ಯಭಾವವೂ ಇರುವುದಿಲ್ಲ. ಇವರ ಅಣಿಮಾದಿ ಸಿದ್ಧಿಗಳಲ್ಲಿ ಹೆಚ್ಚುಕಡಿಮೆಯೂ ಇರುವುದಿಲ್ಲ

೮. ಕೆಲವು ದಡ್ಡರು ತಮ್ಮ ತಮ್ಮ ಮತಗಳನ್ನು ಸಾಧಿಸಬೇಕೆಂಬ ಬಲವತ್ತರವಾದ ಹಠದಿಂದ, ಇವರಲ್ಲಿ ಒಬ್ಬನು ಹೆಚ್ಚೆಂದೂ ಮತ್ತೊಬ್ಬನು ಕಡಮೆಯೆಂದೂ ವಾದವಿವಾದಗಳನ್ನು ಮಾಡುತ್ತಾ ತಾರತಮ್ಯಭಾವದಿಂದಿರುವರೆಂದು ನಿಂದಿಸುವರು. ಆ ಜನಗಳು ಮುಂದೆ ರಾಕ್ಷಸರಾಗಿಯೂ, ಪಿಶಾಚಿಗಳಾಗಿಯೂ ಹುಟ್ಟುವುದರಲ್ಲಿ ಕೊಂಚವೂ ಸಂದೇಹವಿಲ್ಲ.

೯. ಮಹೇಶ್ವರನು ಸತ್ತ್ವರಜಸ್ತಮಸ್ಸೆಂಬ ಮೂರು ಗುಣಗಳಿಗೂ ಅಧಿಪತಿಯು. ನಾಲ್ಕು ವ್ಯೂಹದಿಂದ ಇರುವವನು. ಎಲ್ಲಾ ಕಲೆಗಳಿಂದಲೂ ಕೂಡಿರುವನು. ಎಲ್ಲವೂ ಹುಟ್ಟಲು ಕಾರಣವಾಗಿರುವ ಶಕ್ತಿಗೂ ಕಾರಣನಾಗಿರುವನು.

೧೦. ಪರಮಾತ್ಮನಾದ ಮಹೇಶ್ವರನು ಈ ಮೂರು ಜನ ದೇವತೆಗಳಿಗೂ, ಪ್ರಕೃತಿ ಪುರುಷರಿಬ್ಬರಿಗೂ ಕಾರಣನಾಗಿ ಈಶ್ವರನೆನಿಸಿಕೊಂಡು ತನ್ನ ಸಂಕಲ್ಪಮಾತ್ರದಿಂದ ಸೃಷ್ಟ್ಯಾದಿಗಳನ್ನು ನಡೆಯಿಸುವನು.

**ಯಸ್ಸರ್ವಸ್ಮಾತ್ಪರೋ ನಿತ್ಯೋ ನಿಷ್ಕಲಃ ಪರಮೇಶ್ವರಃ ।**
**ಸ ಏವ ಚ ತದಾಧಾರಸ್ತದಾತ್ಮಾ ತದಧಿಷ್ಠಿತಃ ॥ ೧೧ ॥**

**ತಸ್ಮಾನ್ಮಹೇಶ್ವರಶ್ಚೈವ ಪ್ರಕೃತಿಃ ಪುರುಷಸ್ತಥಾ ।**
**ಸದಾಶಿವೋ ಭವೋ ವಿಷ್ಣುರ್ಬ್ರಹ್ಮಾ ಸರ್ವಂ ಶಿವಾತ್ಮಕಂ ॥ ೧೨ ॥**

**ಪ್ರಧಾನಾತ್ಪ್ರಥಮಂ ಜಜ್ಞೇ ವೃದ್ಧಿಃ ಖ್ಯಾತಿರ್ಮತಿರ್ಮಹಾನ್ ।**
**ಮಹತ್ತತ್ತ್ವಸ್ಯ ಸಂಕ್ಷೋಭಾದಹಂಕಾರಸ್ತ್ರಿಧಾಽಭವತ್ ॥ ೧೩ ॥**

**ಅಹಂಕಾರಶ್ಚ ಭೂತಾನಿ ತನ್ಮಾತ್ರಾಣೀಂದ್ರಿಯಾಣಿ ಚ ।**
**ವೈಕಾರಿಕಾದಹಂಕಾರಾತ್ಸತ್ತ್ವೋದ್ರಿಕ್ತಾತ್ತು ಸಾತ್ತ್ವಿಕಃ ॥ ೧೪ ॥**

**ವೈಕಾರಿಕಃ ಸ ಸರ್ಗಸ್ತು ಯುಗಪತ್ಸಂಪ್ರವರ್ತತೇ ।**
**ಬುದ್ಧೀಂದ್ರಿಯಾಣಿ ಪಂಚೈವ ಪಂಚಕರ್ಮೇಂದ್ರಿಯಾಣಿ ಚ ॥ ೧೫ ॥**

---

೧೧. ಪರಮೇಶ್ವರನು ಎಲ್ಲಕ್ಕಿಂತಲೂ ಬೇರೆಯಾಗಿಯೂ ಶ್ರೇಷ್ಠನಾಗಿಯೂ ಇರುವನು. ಇವನು ನಿತ್ಯನು, ಎಂದರೆ ಇವನಿಗೆ ನಾಶನಿಲ್ಲ. ಕಲಾಸಂಬಂಧಗಳೂ ಇವನಿಗಿಲ್ಲ. ಇವನೇ ಎಲ್ಲಕ್ಕೂ ಆಶ್ರಯನಾಗಿ ಆಯಾಯ ರೂಪದಿಂದ ಆಯಾಯ ಪದಾರ್ಥಗಳಲ್ಲಿರುವನು.

೧೨ ಆದ್ದರಿಂದ ಮಹೇಶ್ವರ, ಪ್ರಕೃತಿ, ಪುರುಷ, ಸದಾಶಿವ, ಭವ, ವಿಷ್ಣು, ಬ್ರಹ್ಮ ಇವರೆಲ್ಲರೂ ಶಿವನ ರೂಪಾಂತರಗಳಾಗಿರುವುವು.

೧೩. ಪ್ರಕೃತಿಯಿಂದ ಮೊದಲು, ಬುದ್ಧಿ, ಖ್ಯಾತಿ, ಮತಿ, ಮಹತ್ತತ್ವ ಇವುಗಳು ಹುಟ್ಟಿದುವು. ಕೆಲವರು ಮಹತ್ತತ್ವದಲ್ಲಿಯೇ ಬುದ್ಧಿ, ಖ್ಯಾತಿ, ಮತಿಗಳನ್ನು ಅಡಕಮಾಡುವರು. ಮಹತ್ತತ್ವದಲ್ಲಿ ವಿಕಾರವು ಉಂಟಾಗಿ ಅಹಂಕಾರವೆಂಬುದು ಹುಟ್ಟಿತು. ಇದು ಮೂರು ವಿಧವಾಗಿರುವುದು.

೧೪ ಸತ್ವಗುಣ ಪ್ರಧಾನವಾದ ಮಹತ್ತತ್ವದ ವಿಕಾರವಾದ ಅಹಂಕಾರದಿಂದ ಸಾತ್ವಿಕಾಹಂಕಾರವೂ, ಪಂಚಮಹಾಭೂತಗಳಿಗೆ ಕಾರಣವಾದ ಪಂಚತನ್ಮಾತ್ರಗಳೂ, ಪಂಚಮಹಾಭೂತಗಳೂ, ಇಂದ್ರಿಯಗಳೂ ಹುಟ್ಟಿದುವು.

೧೫. ವಿಕಾರವಾದ ಮಹತ್ತತ್ವದ ದೆಸೆಯಿಂದ ಉಂಟಾಗುವ ಸೃಷ್ಟಿಯು ಒಂದೇ ಸಾರಿಯಾಗುವುದು. ಜ್ಞಾನೇಂದ್ರಿಯಗಳು ಐದು, ಕರ್ಮೇಂದ್ರಿಯಗಳು ಐದು, ಒಟ್ಟು ಹತ್ತು ಇಂದ್ರಿಯಗಳು ಅಹಂಕಾರದಿಂದ ಉಂಟಾಗುವವು.

**ಏಕಾದಶಂ ಮನಸ್ತತ್ರ ಸ್ವಗುಣೇನೋಭಯಾತ್ಮಕಃ ।**
**ತಮೋಯುಕ್ತಾದಹಂಕಾರಾದ್ಭೂತತನ್ಮಾತ್ರಸಂಭವಃ ॥ ೧೬ ॥**

**ಭೂತಾನಾಮಾದಿಭೂತತ್ವಾದ್ಭೂತಾದಿಃ ಕಥ್ಯತೇ ತು ಸಃ ।**
**ಭೂತಾದೇಶ್ಶಬ್ದಮಾತ್ರಂ ಸ್ಯಾತ್ತತ್ರ ಚಾಕಾಶಸಂಭವಃ ॥ ೧೭ ॥**

**ಆಕಾಶಾತ್ಸ್ಪರ್ಶ ಉತ್ಪನ್ನಃ ಸ್ಪರ್ಶಾದ್ವಾಯುಸಮುದ್ಭವಃ ।**
**ವಾಯೋ ರೂಪಂ ತತಸ್ತೇಜಸ್ತೇಜಸೋ ರಸಸಂಭವಃ ॥ ೧೮ ॥**

**ರಸಾದಾಪಸ್ಸಮುತ್ಪನ್ನಾಸ್ತೇಭ್ಯೋ ಗಂಧಸಮುದ್ಭವಃ ।**
**ಗಂಧಾಚ್ಚ ಪೃಥಿವೀ ಜಾತಾ ಭೂತೇಭ್ಯೋಽನ್ಯಚ್ಚರಾಚರಂ ॥ ೧೯ ॥**

**ಪುರುಷಾಧಿಷ್ಠಿತತ್ವಾಚ್ಚ ಅವ್ಯಕ್ತಾನುಗ್ರಹೇಣ ಚ ।**
**ಮಹದಾದಿವಿಶೇಷಾಂತಾ ಹ್ಯಂಡಮುತ್ಪಾದಯಂತಿ ತೇ ॥ ೨೦ ॥**

---

೧೬. ಮನಸ್ಸೆಂಬುವುದು ಹನ್ನೊಂದನೆಯ ಇಂದ್ರಿಯವು. ಇದು ತನ್ನ ಗುಣದಿಂದ ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳ ಎರಡು ವಿಧವಾದ ಕೆಲಸವನ್ನೂ ಮಾಡುವುದು. ತಮೋಗುಣ ಪ್ರಧಾನವಾದ ಅಹಂಕಾರದಿಂದ ಪಂಚಮಹಾಭೂತಗಳ ತನ್ಮಾತ್ರಗಳು ಹುಟ್ಟುವುವು.

೧೭. ತಾಮಸಾಹಂಕಾರವು ಪಂಚಮಹಾಭೂತಗಳಿಗೆ ಕಾರಣವಾದುದರಿಂದ ಭೂತಾದಿ ಎಂದೆನಿಸಿಕೊಳ್ಳುವುದು ಈ ವಿಧವಾದ ಅಹಂಕಾರದಿಂದ ಮೊದಲು ಶಬ್ದವು ಹುಟ್ಟಿ, ಆ ಶಬ್ದದಿಂದ ಆಕಾಶವು ಹುಟ್ಟಿರುವುದು.

೧೮-೧೯. ಆಕಾಶದಿಂದ ಸ್ಪರ್ಶಗುಣವು ಹುಟ್ಟಿ, ಆ ಸ್ಪರ್ಶಗುಣದಿಂದ ವಾಯುವು ಹುಟ್ಟುವುದು. ವಾಯುವಿನಿಂದ ರೂಪವು ಹುಟ್ಟಿ, ಆ ರೂಪದಿಂದ ತೇಜಸ್ಸು ಹುಟ್ಟುವುದು. ತೇಜಸ್ಸಿನಿಂದ ರುಚಿಯು ಉಂಟಾಗಿ ರುಚಿಯಿಂದ ನೀರು ಹುಟ್ಟುವುದು. ನೀರಿನಿಂದ ವಾಸನೆಯೂ, ವಾಸನೆಯಿಂದ ಭೂಮಿಯೂ, ಭೂಮಿಯಿಂದ ಎಲ್ಲಾ ಪ್ರಾಣಿಗಳೂ ಹುಟ್ಟಿರುವುವು.

೨೦. ಪುರುಷನಿಂದ ಕೂಡಿರುವುದರಿಂದಲೂ, ಅವ್ಯಕ್ತದ ಅನುಗ್ರಹದಿಂದಲೂ ಮಹತ್ತತ್ವವೇ ಮೊದಲಾದ ಈ ಪದಾರ್ಥಗಳಿಂದ ಅಂಡವು ಹುಟ್ಟುವುದು.

ತತ್ರ ಕಾರ್ಯಂ ಚ ಕರಣಂ ಸಂಸಿದ್ಧಂ ಬ್ರಹ್ಮಣೋ ಯದಾ ।
ತದಂಡೇ ಸುಪ್ರವೃದ್ಧೋಽಭೂತ್ಕ್ಷೇತ್ರಜ್ಞೋ ಬ್ರಹ್ಮಸಂಜ್ಞಕಃ ॥ ೨೧ ॥

ಸ ವೈ ಶರೀರೀ ಪ್ರಥಮಃ ಸ ವೈ ಪುರುಷ ಉಚ್ಯತೇ ।
ಆದಿಕರ್ತಾ ಸ ಭೂತಾನಾಂ ಬ್ರಹ್ಮಾಗ್ರೇ ಸಮವರ್ತತಃ ॥ ೨೨ ॥

ತಸ್ಯೇಶ್ವರಸ್ಯ ಪ್ರತಿಮಾ ಜ್ಞಾನವೈರಾಗ್ಯಲಕ್ಷಣಾ ।
ಧರ್ಮೈಶ್ವರ್ಯಕರೀ ಬುದ್ಧಿರ್ಬ್ರಾಹ್ಮೀ ಯಜ್ಞೇಽಭಿಮಾನಿನಃ ॥ ೨೩ ॥

ಅವ್ಯಕ್ತಾಜ್ಜಾಯತೇ ತಸ್ಯ ಮನಸಾ ಯದ್ಯದೀಪ್ಸಿತಂ ।
ವಶೀಕೃತತ್ವಾತ್ತ್ರೈಗುಣ್ಯಾತ್ಸಾಪೇಕ್ಷತ್ವಾತ್ಸ್ವಭಾವತಃ ॥ ೨೪ ॥

---

೨೧. ಬ್ರಹ್ಮನು ಎಂದು ಹೆಸರುಳ್ಳವನು ಈ ಅಂಡಕ್ಕೆ ಕ್ಷೇತ್ರಜ್ಞನಾಗಿ ಅಂಡದ ಎಲ್ಲಾ ವಿಷಯವನ್ನೂ ತಿಳಿದಿರುವನು. ಈ ಅಂಡದಲ್ಲಿ ಬ್ರಹ್ಮನು ಮಾಡಬೇಕಾದ ಕಾರ್ಯಾನುಕೂಲವಾದ ಸಾಮಗ್ರಿಗಳೂ, ಬ್ರಹ್ಮನು ಮಾಡಬೇಕಾಗಿರುವ ಕಾರ್ಯಗಳೂ ಸಿದ್ಧವಾಗಿ ಇರುವುವು.

೨೨. ಬ್ರಹ್ಮನು ಶರೀರವನ್ನು ಹೊಂದಿರುವ ಪ್ರಾಣಿಗಳಲ್ಲಿ ಮೊದಲನೆಯವನು. ಆದುದರಿಂದ ಅವನನ್ನು ಪುರುಷನೆಂದೆನ್ನುವರು. ಅವನು ಎಲ್ಲರಿಗಿಂತಲೂ ಮೊದಲು ಹುಟ್ಟಿದವನು, ಅವನು ಎಲ್ಲಾ ಪ್ರಾಣಿಗಳನ್ನೂ ಮೊದಲು ಸೃಷ್ಟಿ ಮಾಡಿದವನು.

೨೩. ಈಶ್ವರನೆನಿಸಿದ ಇವನ ಆಕಾರವು ಜ್ಞಾನ, ವೈರಾಗ್ಯಗಳ ಲಕ್ಷಣಗಳಿಂದ ಕೂಡಿರುವುದು. ಯಜ್ಞಗಳಲ್ಲಿ ಅಭಿಮಾನವುಳ್ಳ ಇವನ ಬುದ್ಧಿಯು ಧರ್ಮ ಮತ್ತು ಐಶ್ವರ್ಯಗಳನ್ನು ಉಂಟುಮಾಡುವುದಾಗಿರುವುದು.

೨೪. ಇವನು ಸೃಷ್ಟಿಮಾಡುವುದರಲ್ಲಿ ಸ್ವಭಾವವಾಗಿ ಇನ್ನೊಂದು ವಸ್ತುವಿನ ಸಹಾಯವು ಬೇಕಾಗುವುದು. ಆದುದರಿಂದ ಮೂರು ಗುಣಗಳನ್ನೂ ಅಧೀನದಲ್ಲಿರಿಸಿಕೊಂಡಿರುವ ಅವ್ಯಕ್ತದಿಂದ ಇವನ ಮನಸ್ಸಿನ ಕೋರಿಕೆಗಳೆಲ್ಲವೂ ತಪ್ಪದೆ ನಡೆಯುವುವು.

ತ್ರಿಧಾ ವಿಭಜ್ಯ ಚಾತ್ಮಾನಂ ತ್ರೈಲೋಕ್ಯೇ ಸಂಪ್ರವರ್ತತೇ ।
ಸೃಜತೇ ಗ್ರಸತೇ ಚೈವ ವೀಕ್ಷತೇ ಚ ತ್ರಿಭಿಃ ಸ್ವಯಂ ॥ ೨೫ ॥

ಚತುರ್ಮುಖಸ್ತು ಬ್ರಹ್ಮತ್ವೇ ಕಾಲತ್ವೇ ಚಾಂತಕಃ ಸ್ಮೃತಃ ।
ಸಹಸ್ರಮೂರ್ಧಾ ಪುರುಷಸ್ತಿಸ್ರೋಽವಸ್ಥಾಸ್ಸ್ವಯಂಭುವಃ ॥ ೨೬ ॥

ಸತ್ತ್ವಂ ರಜಶ್ಚ ಬ್ರಹ್ಮಾಽಚ ಕಾಲತ್ವೇ ಚ ತಮೋ ರಜಃ ।
ವಿಷ್ಣುತ್ವೇ ಕೇವಲಂ ಸತ್ತ್ವಂ ಗುಣವೃದ್ಧಿಸ್ತ್ರಿಧಾ ವಿಭೌ ॥ ೨೭ ॥

ಬ್ರಹ್ಮತ್ವೇ ಸೃಜತೇ ಲೋಕಾನ್ಕಾಲತ್ವೇ ಸಂಕ್ಷಿಪತ್ಯಪಿ ।
ಪುರುಷತ್ವೇಽತ್ಯುದಾಸೀನಃ ಕರ್ಮ ಚ ತ್ರಿವಿಧಂ ವಿಭೋಃ ॥ ೨೮ ॥

ಏವಂ ತ್ರಿಧಾ ವಿಭಿನ್ನತ್ವಾದ್ಬ್ರಹ್ಮಾ ತ್ರಿಗುಣ ಉಚ್ಯತೇ ।
ಚತುರ್ಧಾ ಪ್ರವಿಭಕ್ತಾತ್ಮಾತ್ವಚ್ಚತುರ್ವ್ಯೂಹಃ ಪ್ರಕೀರ್ತಿತಃ ॥ ೨೯ ॥

---

೨೫. ಈ ಈಶ್ವರನು ತನ್ನನ್ನೇ ಮೂರು ಭಾಗವಾಗಿ ಮಾಡಿಕೊಂಡು ಮೂರು ಲೋಕಗಳನ್ನು ಸೃಷ್ಟಿಮಾಡುವುದು, ಅದನ್ನು ಪಾಲಿಸುವುದು, ಅದನ್ನು ನಾಶಮಾಡುವುದು ಎಂಬ ಮೂರು ಕಾರ್ಯಗಳನ್ನೂ ಮೂರುಗುಣಗಳಿಂದ ತಾನೇ ಮಾಡುವನು.

೨೬. ಬ್ರಹ್ಮನಾಗಿರುವಾಗ ನಾಲ್ಕು ಮುಖದಿಂದಿರುವನು. ಕಾಲರೂಪದಿಂದಿರುವಾಗ ಯಮನಾಗುವನು. ತನ್ನಿಂದ ತಾನೇ ಹುಟ್ಟಿದ ಸಾವಿರ ತಲೆಯುಳ್ಳ ಪುರುಷನಾಗಿರುವ ಈ ಬ್ರಹ್ಮನಿಗೆ ಮೂರು ವಿಧವಾದ ಅವಸ್ಥೆಗಳೂ ಇರುವುವು.

೨೭. ಬ್ರಹ್ಮನಾಗಿರುವಾಗ ಸತ್ವರಜೋಗುಣಗಳೂ, ವಿಷ್ಣುವಾಗಿರುವಾಗ ಶುದ್ಧ ಸತ್ವಗುಣವೂ ಇರುವುದರಿಂದ ಈ ಮೂರು ಗುಣಗಳ ವ್ಯತ್ಯಾಸವು ಬ್ರಹ್ಮನಲ್ಲಿ ಕಂಡುಬರುವುದು.

೨೮. ಈ ಮಹಾಮಹಿಮನು ಬ್ರಹ್ಮನಾದಾಗ ಸೃಷ್ಟಿಮಾಡುವನು. ಕಾಲರೂಪದಿಂದಿರುವಾಗ ಸಂಹಾರವನ್ನು ಮಾಡುವನು. ಪುರುಷನಾಗಿರುವಾಗ ಉದಾಸೀನನಾಗಿರುವನು ಎಂದು ಇವನ ಮೂರು ಕಾರ್ಯಗಳು ಕಂಡುಬರುತ್ತವೆ.

೨೯. ಹೀಗೆ ಮೂರು ಗುಣಗಳಿಂದ ಮೂರು ಪ್ರಕಾರವಾಗಿರುವ ಕಾರಣ ಇವನನ್ನು ಮೂರು ಗುಣಗಳುಳ್ಳವನೆಂದೆನ್ನುವರು. ಇವನು ನಾಲ್ಕು ಪ್ರಕಾರವಾಗಿ ತನ್ನನ್ನು ವಿಂಗಡಿಸಿಕೊಂಡಿರುವ ಕಾರಣ ಇವನನ್ನು ಚತುರ್ವ್ಯೂಹ (ಚಿತ್, ಅಂತರ್ಯಾಮಿ, ಸೂತ್ರಾತ್ಮಾ, ವಿರಾಟ್) ವುಳ್ಳವನೆಂದೂ ಹೇಳುವರು.

ಆದಿತ್ವಾದಾದಿದೇವೋऽಸಾವಜಾತತ್ವಾದಜಃ ಸ್ಮೃತಃ ।
ಪಾತಿ ಯಸ್ಮಾತ್ಪ್ರಜಾಃ ಸರ್ವಾಃ ಪ್ರಜಾಪತಿರಿತಿ ಸ್ಮೃತಃ ॥ ೩೦ ॥

ಹಿರಣ್ಮಯಸ್ತು ಯೋ ಮೇರುಸ್ತಸ್ಯೋಲ್ಬಂ ಸುಮಹಾತ್ಮನಃ ।
ಗರ್ಭೋದಕಂ ಸಮುದ್ರಾಶ್ಚ ಜರಾಯುಶ್ಚಾऽಪಿ ಪರ್ವತಾಃ ॥ ೩೧ ॥

ತಸ್ಮಿನ್ನಂಡೇ ತ್ವಿಮೇ ಲೋಕಾ ಅಂತರ್ವಿಶ್ವಮಿದಂ ಜಗತ್ ।
ಚಂದ್ರಾದಿತ್ಯೌ ಸನಕ್ಷತ್ರೌ ಸಗ್ರಹೌ ಸಹ ವಾಯುನಾ ॥ ೩೨ ॥

ಅದ್ಭಿರ್ದಶಗುಣಾಭಿಸ್ತು ಬಾಹ್ಯತೋಂಡಂ ಸಮಾವೃತಂ ।
ಅಪೋ ದಶಗುಣೇನೈವ ತೇಜಸಾ ಬಹಿರಾವೃತಾಃ ॥ ೩೩ ॥

ತೇಜೋ ದಶಗುಣೇನೈವ ವಾಯುನಾ ಬಹಿರಾವೃತಂ ।
ಆಕಾಶೇನಾವೃತೋ ವಾಯುಃ ಖಂ ಚ ಭೂತಾದಿನಾವೃತಂ ॥ ೩೪ ॥

೩೦. ಎಲ್ಲಕ್ಕಿಂತಲೂ ಮೊದಲನೆಯವನಾದ್ದರಿಂದ ಆದಿದೇವನೆನಿಸಿಕೊಳ್ಳುವನು. ಇತರರ ಹಾಗೆ ಜನ್ಮವಿಲ್ಲದ್ದರ ಪ್ರಯುಕ್ತ ಅಜನೆನಿಸಿಕೊಳ್ಳುವನು. ಎಲ್ಲಾ ಪ್ರಜೆಗಳನ್ನೂ ಕಾಪಾಡುವ ಕಾರಣ ಇವನಿಗೆ ಪ್ರಜಾಪತಿಯೆಂದು ಹೆಸರು.

೩೧. ಸುವರ್ಣಮಯವಾದ ಮೇರುಪರ್ವತವು ಈ ಮಹಾತ್ಮನ ದೇಹದಿಂದ ಹುಟ್ಟಿದ ಬ್ರಹ್ಮಾಂಡಕ್ಕೆ ಗರ್ಭಾಶಯವಾಗಿರುವುದು. ಸಮುದ್ರವೆಲ್ಲವೂ ಗರ್ಭೋದಕವಾಗಿಯೂ, ಪರ್ವತಗಳೆಲ್ಲವೂ ಗರ್ಭದ ಮೇಲೆ ಇರುವ (ಜರಾಯು) ಚೀಲವಾಗಿಯೂ ಇರುವುದು.

೩೨-೩೫. ಆ ಅಂಡದಲ್ಲಿ ಈ ಲೋಕಗಳೂ, ಲೋಕದಲ್ಲಿ ಈ ಜಗತ್ತೆಲ್ಲವೂ ಇರುವುದು. ಚಂದ್ರಸೂರ್ಯರೂ, ನಕ್ಷತ್ರಗಳೂ, ಗ್ರಹಗಳೂ, ವಾಯುವೂ ಇರುವುದು. ಈ ಅಂಡದ ಹೊರಗಡೆಯಲ್ಲಿ ಈ ಅಂಡಕ್ಕಿಂತಲೂ ಹತ್ತರಷ್ಟು ನೀರು ಅಂಡದ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವುದು. ಈ ನೀರಿನ ಹೊರಗಡೆಯಲ್ಲಿ ನೀರಿನ ಹತ್ತರಷ್ಟು ತೇಜಸ್ಸೂ, ತೇಜಸ್ಸಿನ ಹೊರಗಡೆಯಲ್ಲಿ ಈ ತೇಜಸ್ಸಿನ ಹತ್ತರಷ್ಟು ಗಾಳಿಯೂ ಇರುವುದು. ಈ ವಾಯುವಿನ ಹೊರಗಡೆಯಲ್ಲಿ ಇದರ ಹತ್ತರಷ್ಟು ಮಟ್ಟಿನ ಆಕಾಶವೂ, ಈ ಆಕಾಶದ ಹೊರಗಡೆಯಲ್ಲಿ ಪಂಚತನ್ಮಾತ್ರಗಳೂ ಇರುವುವು. ಪಂಚತನ್ಮಾತ್ರಗಳು ಮಹತ್ತತ್ವದಿಂದಲೂ, ಮಹತ್ತತ್ತ್ವವು ಅವ್ಯಕ್ತ

**ಭೂತಾದಿರ್ಮಹತಾ ತದ್ವದವ್ಯಕ್ತೇನಾವೃತೋ ಮಹಾನ್ ।**
**ಏತೈರಾವರಣೈರಂಡಂ ಸಪ್ತಭಿರ್ಬಹಿರಾವೃತಂ ॥ ೩೫ ॥**

**ಏತದಾವೃತ್ಯ ಚಾನ್ಯೋಽನ್ಯಮಷ್ಟೌ ಪ್ರಕೃತಯಃ ಸ್ಥಿತಾಃ ।**
**ಸೃಷ್ಟಿಪಾಲನವಿಧ್ವಂಸಕರ್ಮಕರ್ತ್ರ್ಯೋ ದ್ವಿಜೋತ್ತಮಾಃ ॥ ೩೬ ॥**

**ಏವಂ ಪರಸ್ಪರೋತ್ಪನ್ನಾ ಧಾರಯಂತಿ ಪರಸ್ಪರಂ ।**
**ಆಧಾರಾಧೇಯಭಾವೇನ ವಿಕಾರಾಸ್ತು ವಿಕಾರಿಷು ॥ ೩೭ ॥**

**ಕೂರ್ಮೋಽಂಗಾನಿ ಯಥಾ ಪೂರ್ವಂ ಪ್ರಸಾರ್ಯ ವಿನಿಯಚ್ಛತಿ ।**
**ವಿಕಾರಾಂಶ್ಚ ತಥಾವ್ಯಕ್ತಂ ಸೃಷ್ಟ್ವಾ ಭೂಯೋ ನಿಯಚ್ಛತಿ ॥ ೩೮ ॥**

ದಿಂದಲೂ ಆವರಿಸಲ್ಪಟ್ಟದ್ದಾಗಿ ಇರುವುದು. ಈಗ ಹೇಳಿದ ಪ್ರಕಾರ ಈ ಅಂಡದ ಸುತ್ತಲೂ ನೀರು, ತೇಜಸ್ಸು, ವಾಯು, ಆಕಾಶ, ಪಂಚತನ್ಮಾತ್ರ, ಮಹತ್ತತ್ವ, ಅವ್ಯಕ್ತವೆಂಬ ಏಳು ಪದಾರ್ಥಗಳೂ ಒಂದರನಂತರ ಇನ್ನೊಂದರಂತೆ ಈ ಅಂಡವನ್ನು ಆವರಿಸಿಕೊಂಡಿರುವುವು.

೩೬–೩೭. ಈ ಎಂಟು ಪ್ರಕೃತಿಗಳೂ ಪರಸ್ಪರವಾಗಿ ಆವರಿಸಿಕೊಂಡಿರುವುವು. ಇವುಗಳೇ ಬ್ರಹ್ಮನ ಸಾನ್ನಿಧ್ಯದಿಂದ ಸೃಷ್ಟಿ, ರಕ್ಷಣೆ, ನಾಶ ಇವುಗಳನ್ನು ಮಾಡುತ್ತಿರುವುವು. ಎಲೈ ಬ್ರಾಹ್ಮಣಶ್ರೇಷ್ಠರೇ! ಕೇಳಿರಿ. ಇವುಗಳು ಒಂದರಿಂದ ಮತ್ತೊಂದು ಹುಟ್ಟಿರುವವು. ಎಂದರೆ ಆಕಾಶದಿಂದ ವಾಯುವೂ, ವಾಯುವಿನಿಂದ ತೇಜಸ್ಸು ಇತ್ಯಾದಿಯಾಗಿ ಹುಟ್ಟಿ ಒಂದಕ್ಕೊಂದು ಆಧಾರವಾಗಿರುವವು. ಇದರಂತೆಯೇ ಒಂದು ವಸ್ತುವಿನ ವಿಕಾರರೂಪವಾಗಿ ಉತ್ಪನ್ನವಾದ ಪದಾರ್ಥವು ಆ ವಸ್ತುವಿನ ಆಧಾರ ಅಥವಾ ಆಶ್ರಯದಿಂದಿದ್ದು ಕೊನೆಗೆ ಅದರಲ್ಲಿಯೇ ಸೇರಿಹೋಗುವುದು. ಹೀಗೆ ಪರಸ್ಪರಾಶ್ರಯದಿಂದಿರುವ ವಸ್ತುಗಳಿಗೆ ಆಧಾರಾಧೇಯಭಾವವಿರುವುದೆಂದು ಹೇಳುವರು.

೩೮. ಆಮೆಯು ತನ್ನ ಅವಯವಗಳನ್ನು ಚಿಪ್ಪಿನಿಂದ ಹೊರಗಡೆಗೆ ಚಾಚುವಂತೆ ಅವ್ಯಕ್ತವು ತನ್ನ ರೂಪಾಂತರಗಳೇ ಆದ ಈ ಪದಾರ್ಥಗಳೆಲ್ಲವನ್ನೂ ಹರಡಿ ನಂತರ ಅವೆಲ್ಲವನ್ನೂ ಹಿಂತಿರುಗಿ ತನ್ನಲ್ಲಿಯೇ ಅಡಗಿಸಿಕೊಳ್ಳುವುದು.

**ಅವ್ಯಕ್ತಪ್ರಭವಂ ಸರ್ವಮಾನುಲೋಮ್ಯೇನ ಜಾಯತೇ ।**
**ಪ್ರಾಪ್ತೇ ಪ್ರಲಯಕಾಲೇ ತು ಪ್ರಾತಿಲೋಮ್ಯೇಽನುಲೀಯತೇ ॥ ೩೯ ॥**

**ಗುಣಾಃ ಕಾಲವಶಾದೇವ ಭವಂತಿ ವಿಷಮಾಃ ಸಮಾಃ ।**
**ಗುಣಸಾಮ್ಯೇ ಲಯೋ ಜ್ಞೇಯೋ ವೈಷಮ್ಯೇ ಸೃಷ್ಟಿರುಚ್ಯತೇ ॥ ೪೦ ॥**

೩೯ ಅವ್ಯಕ್ತದಿಂದ ಹುಟ್ಟುವುವೆಲ್ಲವೂ ಅನುಲೋಮದಿಂದ ಹುಟ್ಟಿರುವುವು. ಎಂದರೆ ಆಕಾಶದಿಂದ ವಾಯು ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು ನೀರಿನಿಂದ ಪೃಥಿವಿ ಮುಂತಾದವು. ಪ್ರಳಯಕಾಲವು ಬಂದಾಗ ಪೃಥಿವಿಯು ನೀರಿನಲ್ಲಿಯೂ, ನೀರು ಅಗ್ನಿಯಲ್ಲಿಯೂ, ಅಗ್ನಿಯು ವಾಯುವಿನಲ್ಲಿಯೂ, ವಾಯುವು ಆಕಾಶ ದಲ್ಲಿಯೂ ಸೇರಿ ಲಯವನ್ನು ಹೊಂದುವವು ಸೃಷ್ಟಿಪ್ರಳಯಗಳು ಈ ಕ್ರಮ ದಿಂದಿರುವವು.

೪೦. ಕಾಲಕ್ಕೆ ಅಧೀನವಾಗಿರುವ ಸತ್ತ್ವಾದಿ ಗುಣಗಳೆಲ್ಲವೂ ಕೆಲವು ಸಮಯದಲ್ಲಿ ವಿಷಮವಾಗಿಯೂ ಕೆಲವು ಸಮಯದಲ್ಲಿ ಸಮನಾಗಿಯೂ ಇರುವವು. ಸತ್ತ್ವಾದಿ ಮೂರು ಗುಣಗಳು ಸಮನಾದರೆ ಪ್ರಳಯವೆಂತಲೂ ವಿಷಮವಾದರೆ ಸೃಷ್ಟಿಯೆಂತಲೂ ತಿಳಿಯತಕ್ಕದ್ದು. ಮೂಲ ಪ್ರಕೃತಿಯು ತ್ರಿಗುಣಾತ್ಮಕವಾದು ದೆಂದು ಹಿಂದೆಯೇ ಹೇಳಿರುವುದಷ್ಟೆ. ಸತ್ತ್ವರಜಸ್ತಮೋಗುಣಗಳೆಂಬ ಮೂರು ಗುಣಗಳು ಹೆಚ್ಚು ಕಡಮೆಯಾದರೆ ಎಂದರೆ ಒಂದುಗುಣ ಹೆಚ್ಚಾಗಿಯೂ, ಮತ್ತೊಂದು ಗುಣ ಕಡಮೆಯಾಗಿಯೂ ಮಾರ್ಪಟ್ಟರೆ ಆಗ ಪ್ರಕೃತಿಯು ವಿಕಾರ ವನ್ನು ಹೊಂದಿ ರೂಪಾಂತರಗಳಾದ ವಸ್ತುಗಳಾಗಿ ಮಾರ್ಪಡುವುದು. ಇದೇ ಸೃಷ್ಟಿಯು ಅಥವಾ ಸೃಷ್ಟಿಕಾಲದಲ್ಲಿರುವ ಸ್ಥಿತಿಯು, ಅಥವಾ ಪ್ರಕೃತಿಯು ವಿಷಮಾ ವಸ್ಥೆಯು. ಮೇಲೆ ಹೇಳಿದ ಗುಣಗಳು ಹೆಚ್ಚು ಕಡಿಮೆಯಿಲ್ಲದೆ ಎಲ್ಲವೂ ಒಂದೇ ಸಮನಾಗಿದ್ದರೆ ಆಗ ಪ್ರಕೃತಿಯು ವಿಕಾರವನ್ನು ಹೊಂದಲು ಅವಕಾಶವಿಲ್ಲದೆ ಶಾಂತ ವಾದ ಅಥವಾ ಸಮನಾದ ಸ್ಥಿತಿಯಲ್ಲಿರುವುದು. ಇದು ಪ್ರಕೃತಿಯ ಸಾಮ್ಯಾವಸ್ಥೆಯು ಅಥವಾ ಪ್ರಳಯವು. ಪ್ರಳಯವೆಂದು ಹೇಳಲ್ಪಡುವ ಈ ಸಾಮ್ಯಾವಸ್ಥೆಯಲ್ಲಿ ಪ್ರಕೃತಿಯು ಯಾವ ವಿಕಾರವನ್ನೂ ಹೊಂದದೆ ಒಂದೇ ಸಮನಾಗಿ ಅವ್ಯಕ್ತರೂಪ ದಿಂದ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವುದು. ಇಂತಹ ಅವ್ಯಕ್ತಸ್ವರೂಪಕ್ಕೆ ನಿರ್ವಿಶೇಷವೆಂದೂ ಪರಬ್ರಹ್ಮವೆಂದೂ ಹೇಳಲ್ಪಡುವುದು.

**ತದಿದಂ ಬ್ರಹ್ಮಣೋ ಯೋನಿರೇತದಂಡಂ ಘನಂ ಮಹತ್ ।**
**ಬ್ರಹ್ಮಣಃ ಕ್ಷೇತ್ರಮುದ್ದಿಷ್ಟಂ ಬ್ರಹ್ಮಾ ಕ್ಷೇತ್ರಜ್ಞ ಉಚ್ಯತೇ ॥ ೪೧ ॥**

**ಇತೀದೃಶಾನಾಮಂಡಾನಾಂ ಕೋಟ್ಯೋ ಜ್ಞೇಯಾಃ ಸಹಸ್ರಶಃ ।**
**ಸರ್ವಗತ್ವಾತ್ಪ್ರಧಾನಸ್ಯ ತಿರ್ಯಗೂರ್ಧ್ವಮಧಃ ಸ್ಥಿತಾಃ ॥ ೪೨ ॥**

**ತತ್ರ ತತ್ರ ಚತುರ್ವಕ್ತ್ರಾ ಬ್ರಹ್ಮಾಣೋ ಹರಯೋ ಭವಾಃ ।**
**ಸೃಷ್ಟಾ ಪ್ರಧಾನೇನ ತಥಾ ಲಬ್ಧ್ವಾ ಶಂಭೋಽಸ್ತು ಸನ್ನಿಧಿಂ ॥ ೪೩ ॥**

**ಮಹೇಶ್ವರಃ ಪರೋ ವ್ಯಕ್ತಾದಂಡಮವ್ಯಕ್ತಸಂಭವಮ್ ।**
**ಅಂಡಾಜ್ಜಜ್ಞೇ ವಿಭುರ್ಬ್ರಹ್ಮಾ ಲೋಕಾಸ್ತೇನ ಕೃತಾಸ್ತ್ವಿಮೇ ॥ ೪೪ ॥**

**ಅಬುದ್ಧಿಪೂರ್ವಃ ಕಥಿತೋ ಮಯೈಷ ।**
**ಪ್ರಧಾನಸರ್ಗಃ ಪ್ರಥಮಃ ಪ್ರವೃತ್ತಃ ।**

---

೪೧–೪೨ ಗಟ್ಟಿಯಾಗಿಯೂ ದೊಡ್ಡದಾಗಿಯೂ ಇರುವ ಈ ಬ್ರಹ್ಮಾಂಡವು ಬ್ರಹ್ಮನಿಗೆ ಕಾರಣವಾಗಿರುವುದು. ಇದನ್ನು ಬ್ರಹ್ಮನ ಕ್ಷೇತ್ರವೆಂದೆನ್ನುವರು. ಬ್ರಹ್ಮನೇ ಕ್ಷೇತ್ರಜ್ಞ (ಆತ್ಮ) ವೆನಿಸಿಕೊಳ್ಳುವನು. ಪ್ರಧಾನವೆಂಬ ಪದಾರ್ಥವು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡಿರುವುದು. ಇದರಂತಿರುವ ಬ್ರಹ್ಮಾಂಡಗಳು ಸಾವಿರಗಟ್ಟಲೆಯಾಗಿಯೂ ಕೋಟಿಗಟ್ಟಲೆಯಾಗಿಯೂ ಇರುವುವು. ಇವುಗಳು (ಪ್ರಧಾನ) ಪ್ರಕೃತಿಯ ಮೇಲೂ, ಕೆಳಗೂ, ಅಡ್ಡಲಾಗಿಯೂ ಎಲ್ಲೆಲ್ಲಿಯೂ ಇರುವುವು.

೪೩. ಪ್ರತಿಯೊಂದು ಬ್ರಹ್ಮಾಂಡದಲ್ಲಿಯೂ ಚತುರ್ಮುಖಬ್ರಹ್ಮನೂ, ವಿಷ್ಣುವೂ, ಶಿವನೂ ಬೇರೆಬೇರೆಯಾಗಿರುವರು. ಶಂಭುವಿನ ಸನ್ನಿಧಿಯನ್ನು ಹೊಂದಿ ಬ್ರಹ್ಮನು ಪ್ರಕೃತಿಯಿಂದ ಎಲ್ಲವನ್ನೂ ಸೃಷ್ಟಿಮಾಡುವನು.

೪೪. ಮಹೇಶ್ವರನು ಅವ್ಯಕ್ತಕ್ಕಿಂತಲೂ ಬೇರೆಯಾಗಿ ಉತ್ಕೃಷ್ಟನಾಗಿರುವನು. ಬ್ರಹ್ಮಾಂಡವು ಅವ್ಯಕ್ತದಿಂದ ಹುಟ್ಟುವುದು. ಬ್ರಹ್ಮಾಂಡದಿಂದ ವಿಭುವೆನಿಸಿದ ಚತುರ್ಮುಖಬ್ರಹ್ಮನು ಹುಟ್ಟಿ, ಅವನು ಈ ಲೋಕಗಳೆಲ್ಲವನ್ನೂ ಸೃಷ್ಟಿಮಾಡಿರುವನು.

ಆತ್ಯಂತಿಕಶ್ಚ ಪ್ರಲಯೋಂತಕಾಲೇ
ಲೀಲಾಕೃತಃ ಕೇವಲಮೀಶ್ವರಸ್ಯ　　॥ ೪೫ ॥

ಯತ್ತತ್ಸ್ಮೃತಂ ಕಾರಣಮಪ್ರಮೇಯಂ
ಬ್ರಹ್ಮ ಪ್ರಧಾನಂ ಪ್ರಕೃತೇಃ ಪ್ರಸೂತಿಃ ।
ಅನಾದಿಮಧ್ಯಾಂತಮನಂತವೀರ್ಯ
ಶುಕ್ಲಂ ಸುರಕ್ತಂ ಪುರುಷೇಣ ಯುಕ್ತಂ　　॥ ೪೬ ॥

ಉತ್ಪಾದಕತ್ವಾದ್ರಜಸೋಽತಿರೇಕಾ-
ಲ್ಲೋಕಸ್ಯ ಸಂತಾನವಿವೃದ್ಧಿಹೇತೂನ್
ಅಷ್ಟೌ ವಿಕಾರಾನಪಿ ಚಾದಿಕಾಲೇ
ಸೃಷ್ಟ್ವಾ ಸಮಶ್ನಾತಿ ತಥಾಂತಕಾಲೇ　　॥ ೪೭ ॥

---

೪೫. ಮೊದಲು ಸೃಷ್ಟಿಮಾಡಲ್ಪಟ್ಟ ಎಂದರೆ ಬ್ರಹ್ಮನ ಸೃಷ್ಟಿಗಿಂತ ಪೂರ್ವದಲ್ಲಿ ಬ್ರಹ್ಮನ ಸಂಬಂಧವಿಲ್ಲದಿರುವ ಪ್ರಾಕೃತ ಸೃಷ್ಟಿಯನ್ನು ಹೇಳಿರುವೆನು. ಇದನ್ನು ಹೇಳಿದಂತೆಯೇ ಅಂತ್ಯಕಾಲದಲ್ಲಿ ನಡೆಯುವ ಪ್ರಳಯುವನ್ನೂ ತಿಳಿಸಿರುವೆನು. ಇವೆಲ್ಲವೂ ಈಶ್ವರನ ಲೀಲಾಮಾತ್ರದಿಂದಲೇ ನಡೆದಿರುವುದು.

೪೬. ಅವ್ಯಕ್ತಸ್ವರೂಪನೆಂಬುವುದು ಪರಮಪುರುಷನ ನಿಜರೂಪವೆನಿಸುವುದು. ಅದಕ್ಕೆ ಆದಿಮಧ್ಯಾಂತಗಳಿಲ್ಲ. ಅದರ ಸ್ವರೂಪವನ್ನು ಮನಸ್ಸಿನಿಂದ ಊಹಿಸಲೂ ಸಾಧ್ಯವಿಲ್ಲ. ಇದು ಎಲ್ಲಕ್ಕೂ ಕಾರಣವಾಗಿರುವುದು. ಪ್ರಕೃತಿ, ಪುರುಷರ ಉತ್ಪತ್ತಿಗೂ ಕಾರಣವಾಗಿ ಪರಬ್ರಹ್ಮವೆನಿಸಿಕೊಂಡಿರುವುದು. ಇದರ ಶಕ್ತಿಸಾಮರ್ಥ್ಯಾದಿಗಳಿಗೆ ಕೊನೆಯೆಂಬುದಿಲ್ಲ. ಎಂದರೆ ಇದರ ಮಹಿಮೆಯು ಅಪಾರವಾದುದು. ಶುಕ್ಲ ಮತ್ತು ಕೃಷ್ಣವರ್ಣವೆಂದು ಹೇಳಲ್ಪಡುವುದು. ಇಂತಹ ಅವ್ಯಕ್ತ ಸ್ವರೂಪದಿಂದಿರುವ ಬ್ರಹ್ಮನು ಪುರುಷನಿಂದ ಯುಕ್ತವಾಗಿರುವುದೆಂದು ಎಂದರೆ ಮಹೇಶ್ವರಸ್ವರೂಪ (ಶಿವ) ವಾಗಿರುವುದೆಂದು ಹೇಳಲ್ಪಡುವುದು.

೪೭. ಪರಮೇಶ್ವರನ ಪ್ರೇರಣೆಯಿಂದ ಪ್ರಕೃತಿಯಲ್ಲಿ ರಜೋಗುಣದ ಆಧಿಕ್ಯ ಉಂಟಾಗಿ ಅದರಿಂದ ಹಿಂದೆ ಹೇಳಿದ ಎಂಟು ವಿಧವಾದ ವಿಕಾರಗಳುಂಟಾಗವವು. ಆ ವಿಕಾರಗಳು ಲೋಕದ ಪ್ರಜೆಗಳನ್ನು ಸೃಷ್ಟಿಸಲು ಸಹಾಯವಾಗುವುದಲ್ಲದೆ ಉತ್ಪನ್ನರಾದ ಪ್ರಜೆಗಳು ಸಂತಾನಾದಿಗಳಿಂದ ಅಭಿವೃದ್ಧಿಯನ್ನೈದಲೂ ಕಾರಣ

ಪ್ರಕೃತ್ಯವಸ್ಥಾಪಿತಕಾರಣಾನಾಂ
ಯಾ ಚ ಸ್ಥಿತಿರ್ಯಾ ಚ ಪುನಃ ಪ್ರವೃತ್ತಿಃ ।
ತತ್ಸರ್ವಮಪ್ರಾಕೃತವೈಭವಸ್ಯ
ಸಂಕಲ್ಪಮಾತ್ರೇಣ ಮಹೇಶ್ವರಸ್ಯ ॥ ೪೮ ॥

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ಬ್ರಹ್ಮಾಂಡಸ್ಥಿತಿವರ್ಣನಂ ನಾಮ ದಶಮೋಽಧ್ಯಾಯಃ**



ವಾಗಿರುವವು. ಇಂತಹ ಎಂಟು ವಿಧವಾದ ವಿಕಾರಗಳನ್ನು ಪರಮೇಶ್ವರನು ಪ್ರಕೃತಿಯಲ್ಲಿ ಸೃಷ್ಟಿಕಾಲದಲ್ಲಿ ಉಂಟುಮಾಡಿ ಸಂಹಾರಕಾಲದಲ್ಲಿ ಅವುಗಳನ್ನು ಅಲ್ಲಿಯೇ ಅಡಗುವಂತೆ ಮಾಡುವನು.

೪೮. ಪ್ರಕೃತಿಯಲ್ಲಿ ಇನ್ನೊಂದು ಪದಾರ್ಥವು ಹುಟ್ಟಲು ಕಾರಣವಾದ ಸ್ಥಿತಿಯನ್ನು ಉಂಟುಮಾಡುವುದೂ, ಅನಂತರ ಕಾರಣಪದಾರ್ಥಗಳಿಂದ ಹುಟ್ಟಿದವುಗಳು ತಮ್ಮ ಕಾರಣ ಪದಾರ್ಥಗಳನ್ನು ಅನುಸರಿಸಿಕೊಂಡು ಕೊಂಚವೂ ಬದಲಾಯಿಸದಂತೆ ಪುನಃ ಪುನಃ ಕೆಲಸಮಾಡುತ್ತಿರುವುದೂ, ಇವೆಲ್ಲವೂ ಎಂದರೆ ಜಗತ್ಸೃಷ್ಟಿ, ಸ್ಥಿತಿ ಮೊದಲಾದವು ಪ್ರಕೃತಿಸಂಬಂಧವಿಲ್ಲದಿರುವ ಮಹಾಮಹಿಮನಾದ ಮಹೇಶ್ವರನ ಇಚ್ಛಾಮಾತ್ರದಿಂದ ಎಬಿಡದೆ ನಡೆಯುತ್ತಿರುವುವು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಪೂರ್ವಭಾಗದಲ್ಲಿ ಬ್ರಹ್ಮಾಂಡಸ್ಥಿತಿವರ್ಣನವೆಂಬ ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ
## ವಾಯವೀಯಸಂಹಿತಾಯಾಂ ಪೂರ್ವಭಾಗೇ
## ಏಕಾದಶೋಽಧ್ಯಾಯಃ

---

॥ ಮುನಯ ಊಚುಃ ॥

ಮನ್ವಂತರಾಣಿ ಸರ್ವಾಣಿ ಕಲ್ಪಭೇದಾಂಶ್ಚ ಸರ್ವಶಃ ।
ತೇಷ್ವೇಂವಾಂತರಸರ್ಗಂ ಚ ಪ್ರತಿಸರ್ಗಂ ಚ ನೋ ವದ ॥ ೧ ॥

ಕಾಲಸಂಖ್ಯಾವಿವೃತ್ತಸ್ಯ ಪರಾರ್ಧೋ ಬ್ರಹ್ಮಣಃ ಸ್ಮೃತಃ ।
ತಾವಾಂಶ್ಚೈವಾಸ್ಯ ಕಾಲೋಽನ್ಯಸ್ತಸ್ಯಾಂತೇ ಪ್ರತಿಸೃಜ್ಯತೇ ॥ ೨ ॥

---

## ಹನ್ನೊಂದನೆಯ ಅಧ್ಯಾಯವು

೧. ಋಷಿಗಳು ಕೇಳುವರು :—ಎಲೈ ವಾಯುದೇವನೇ, ಈಗ ಮನ್ವಂತರಗಳನ್ನೂ ಪ್ರಳಯಭೇದಗಳನ್ನೂ, ಆಯಾಯ ಕಾಲಗಳಲ್ಲಿ ನಡೆಯುವ ಅವಾಂತರ ಸೃಷ್ಟಿಯಕ್ರಮವನ್ನೂ, ಪ್ರಳಯವಾದನಂತರ ನಡೆಯುವ ಸೃಷ್ಟಿಯನ್ನೂ ನಮಗೆ ವಿವರವಾಗಿ ತಿಳಿಸು ಎಂದು ಕೇಳಲು,

೨ ವಾಯುವು ಹೇಳುವನು :—ಹಿಂದೆ ಬ್ರಹ್ಮನ ಆಯುಃಕಾಲಪರಿಮಾಣವನ್ನು ಹೇಳುವ ಸಂದರ್ಭದಲ್ಲಿ ಪರಾರ್ಧಕಾಲವೆಂದು ಹೇಳಿರುವುದು. ಬ್ರಹ್ಮನ ಹಗಲಿನ ಕಾಲವು ಎಷ್ಟಾಗುವುದೋ ರಾತ್ರಿಯಕಾಲವೂ ಅಷ್ಟೇ ಆಗಿರುವುದು. ಆ ರಾತ್ರಿಯು ಕಳೆದನಂತರ ಅವನು ಪುನಃ ಸೃಷ್ಟಿಮಾಡುವನು.

ದಿವಸೇ ದಿವಸೇ ತಸ್ಯ ಬ್ರಹ್ಮಣಃ ಪೂರ್ವಜನ್ಮನಃ ।
ಚತುರ್ದಶಮಹಾಭಾಗಾ ಮನೂನಾಂ ಪರಿವೃತ್ತಯಃ ॥ ೩ ॥

ಅನಾದಿತ್ವಾದನಂತತ್ವಾದಜ್ಞೇಯತ್ವಾಚ್ಚ ಕೃತ್ಸ್ನಶಃ ।
ಮನ್ವಂತರಾಣಿ ಕಲ್ಪಾಶ್ಚ ನ ಶಕ್ಯಾ ವಚನಾತ್ಪೃಥಕ್ ॥ ೪ ॥

ಉಕ್ತೇಷ್ವಪಿ ಚ ಸರ್ವೇಷು ಶೃಣ್ವತಾಂ ವೋ ವಚೋ ಮಮ ।
ಕಿಮಿಹಾಸ್ತಿ ಫಲಂ ತಸ್ಮಾನ್ನ ಪೃಥಗ್ವಕ್ತುಮುತ್ಸಹೇ ॥ ೫ ॥

ಯ ಏವ ಖಲು ಕಲ್ಪೇಷು ಕಲ್ಪಃ ಸಂಪ್ರತಿ ವರ್ತತೇ ।
ತತ್ರ ಸಂಕ್ಷಿಪ್ಯ ವರ್ತಂತೇ ಸೃಷ್ಟಯಃ ಪ್ರತಿಸೃಷ್ಟಯಃ ॥ ೬ ॥

ಯಸ್ತ್ವಯಂ ವರ್ತತೇ ಕಲ್ಪೋ ವಾರಾಹೋ ನಾಮ ನಾಮತಃ ।
ಅಸ್ಮಿನ್ನಪಿ ದ್ವಿಜಶ್ರೇಷ್ಠಾ ಮನವಸ್ತು ಚತುರ್ದಶ ॥ ೭ ॥

---

೩. ಎಲ್ಲರಿಗಿಂತಲೂ ಮೊದಲು ಹುಟ್ಟಿದ ಆ ಬ್ರಹ್ಮನ ಪ್ರತಿಯೊಂದು ಹಗಲಿನಲ್ಲಿಯೂ, ಹದಿನಾಲ್ಕುಜನ ಮನುಗಳು ಆಗಿಹೋಗುವರು. ಎಂದರೆ ಹದಿನಾಲ್ಕು ಮನ್ವಂತರಗಳು ಕಳೆದುಹೋಗುವವು.

೪-೬. ಹಿಂದಿನ ಕಲ್ಪಗಳಲ್ಲಿ ಎಷ್ಟೋ ಮನ್ವಂತರಗಳು ಕಳೆದುಹೋದುವು. ಅವುಗಳು ಅಸಂಖ್ಯಾತವಾಗಿರುವುದರಿಂದಲೂ, ಹೇಳುವುದಕ್ಕೆ ಪ್ರಾರಂಭಿಸಿದರೆ ಕೊನೆ ಮೊದಲಿಲ್ಲದೆ ಹೋಗುವುದರಿಂದಲೂ, ಹೇಳಿದರೂ ಸಹ ತಿಳಿದುಕೊಳ್ಳುವದು ಕಷ್ಟಸಾಧ್ಯವಾದುದರಿಂದಲೂ ಕಳೆದುಹೋದ ಆ ಮನ್ವಂತರಗಳನ್ನೆಲ್ಲಾ ಇಲ್ಲಿ ಬೇರೆ ಬೇರೆಯಾಗಿ ಹೇಳುವುದು ಶಕ್ಯವಲ್ಲ. ಇದಲ್ಲದೆ ಅವುಗಳನ್ನು ವಿಸ್ತಾರವಾಗಿ ಹೇಳುವುದರಿಂದ ಆಗುವ ಪ್ರಯೋಜನ ತಾನೇ ಏನು? ಒಂದು ಸೃಷ್ಟಿಯಂತೆಯೇ ಮತ್ತೊಂದು ಸೃಷ್ಟಿಯೂ, ಒಂದು ಪ್ರಳಯದಂತೆಯೇ ಮತ್ತೊಂದು ಪ್ರಳಯವೂ ಇರುವುದರಿಂದ ಹಿಂದೆ ಕಳೆದು ಹೋಗಿರುವವನ್ನು ಹೇಳದೆ ಈಗ ನಡೆಯುತ್ತಿರುವ ಕಲ್ಪದ ಸೃಷ್ಟಿ ಪ್ರತಿಸೃಷ್ಟಿಗಳನ್ನು ಮಾತ್ರ ಹೇಳುವೆನು.

೭. ಈಗ ಶ್ವೇತ ವಾರಾಹಕಲ್ಪವು ನಡೆಯುತ್ತಿರುವುದು. ಎಲೈ ಋಷಿಗಳಿರಾ! ಕೇಳಿರಿ. ಇದರಲ್ಲಿಯೂ ಹದಿನಾಲ್ಕುಜನ ಮನುಗಳು ಇರುವರು.

**ಸ್ವಾಯಂಭುವಾದಯಸ್ಸಪ್ತ ಸಪ್ತ ಸಾವರ್ಣಿಕಾದಯಃ ।**
**ತೇಷು ವೈವಸ್ವತೋ ನಾಮ ಸಪ್ತಮೋ ವರ್ತತೇ ಮನುಃ ॥ ೮ ॥**

**ಮನ್ವಂತರೇಷು ಸರ್ವೇಷು ಸರ್ಗಸಂಹಾರವೃತ್ತಯಃ ।**
**ಪ್ರಾಯಃ ಸಮಾ ಭವಂತೀತಿ ತರ್ಕಃ ಕಾರ್ಯೋ ವಿಜಾನತಾ ॥ ೯ ॥**

**ಪೂರ್ವಕಲ್ಪೇ ಪರಾವೃತ್ತೇ ಪ್ರವೃತ್ತೇ ಕಾಲಮಾರುತೇ ।**
**ಸಮುನ್ಮೂಲಿತಮೂಲೇಷು ವೃಕ್ಷೇಷು ಚ ವನೇಷು ಚ ॥ ೧೦ ॥**

**ಜಗಂತಿ ತೃಣವತ್ತ್ರೀಣಿ ದೇವೇ ದಹತಿ ಪಾವಕೇ ।**
**ವೃಷ್ಟ್ಯಾ ಭುವಿ ನಿಷಿಕ್ತಾಯಾಂ ವಿವೇಲೇಷ್ವರ್ಣವೇಷು ಚ ॥ ೧೧ ॥**

**ದಿಕ್ಷು ಸರ್ವಾಸು ಮಗ್ನಾಸು ವಾರಿಪೂರೇ ಮಹೀಯಸಿ ।**
**ತದದ್ಭಿಶ್ಚಟುಲಾಕ್ಷೇಪೈಸ್ತರಂಗಭುಜಮಂಡಲೈಃ ॥ ೧೨ ॥**

---

೮. ಸ್ವಾಯಂಭುವನೇ ಮೊದಲಾದವರು ಏಳುಜನ ಮನುಗಳೂ, ಸಾವರ್ಣಿಯೇ ಮೊದಲಾದವರು ಮತ್ತೆ ಏಳುಜನ ಮನುಗಳೂ, ಅಂತೂ ಒಟ್ಟಿನಲ್ಲಿ ಹದಿನಾಲ್ಕುಜನ ಮನುಗಳು. ಇವರಲ್ಲಿ ಏಳನೆಯವನೇ ವೈವಸ್ವತಮನುವು. ಆ ವೈವಸ್ವತಮನ್ವಂತರವೇ ಈಗ ನಡೆಯುತ್ತಿರುವುದು.

೯. ಎಲ್ಲಾ ಮನ್ವಂತರಗಳಲ್ಲಿಯೂ ಸೃಷ್ಟಿ, ಸ್ಥಿತಿ, ನಾಶ ಇವುಗಳು ಪ್ರಾಯಿಕವಾಗಿ ಒಂದೇ ಸಮನಾಗಿ ಇರುತ್ತವೆ ಎಂದು ತಿಳುವಳಿಕೆಯುಳ್ಳವನು ಊಹಿಸಿ ತಿಳಿದುಕೊಳ್ಳತಕ್ಕದ್ದು.

೧೦ ಹಿಂದಿನ ಪ್ರಳಯಕಾಲವು ಒದಗಿದಾಗ ಪ್ರಚಂಡಮಾರುತವು ಬೀಸುವುದಕ್ಕೆ ಪ್ರಾರಂಭವಾಗಿ ಮರಗಳ ಬೇರೆಲ್ಲವೂ ಸಡಿಲವಾಗಿ ಬುಡಸಹಿತವಾಗಿ ಬಿದ್ದು ಕಾಡುಗಳೆಲ್ಲವೂ ನಾಶವಾದುವು.

೧೧. ಆಗ ಅಗ್ನಿದೇವನು ಹುಲ್ಲುಕಡ್ಡಿಯನ್ನು ಸುಡುವಂತೆ ಮೂರು ಲೋಕಗಳನ್ನೂ ಸುಟ್ಟನು. ಅನಂತರ ಭೂಮಿಯಲ್ಲಿ ವಿಶೇಷವಾಗಿ ಮಳೆಯು ಬಿದ್ದಿತು. ಸಮುದ್ರವು ದಡವನ್ನು ಮೀರಿ ಭೂಮಿಯಮೇಲೆ ನುಗ್ಗಿ ಎಲ್ಲೆಲ್ಲಿಯೂ ನೀರು ತುಂಬಿಕೊಂಡಿತು.

೧೨-೧೩. ಪ್ರಳಯಕಾಲದ ಆ ನೀರು ಎಲ್ಲೆಲ್ಲಿಯೂ ವ್ಯಾಪಿಸಿದ್ದಿತು. ಮಹಾಭಯಂಕರವಾದ ದೊಡ್ಡ ದೊಡ್ಡ ಅಲೆಗಳೆದ್ದು ಬಹಳ ಅಲ್ಲೋಲಕಲ್ಲೋಲ

ಪ್ರಾರಬ್ಧಚಂಡನೃತ್ಯೇಷು ತತಃ ಪ್ರಲಯವಾರಿಷು ।
ಬ್ರಹ್ಮಾ ನಾರಾಯಣೋ ಭೂತ್ವಾ ಸುಷ್ವಾಪ ಸಲಿಲೇ ಸುಖಂ ॥ ೧೩ ॥

ಇಮಂ ಚೋದಾಹರನ್ಮಂತ್ರಂ ಶ್ಲೋಕಂ ನಾರಾಯಣಂ ಪ್ರತಿ ।
ತಂ ಶೃಣುಧ್ವಂ ಮುನಿಶ್ರೇಷ್ಠಾಸ್ತದರ್ಥಂ ಚಾಕ್ಷರಾಶ್ರಯಂ ॥ ೧೪ ॥

ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ।
ಅಯನಂ ತಸ್ಯ ತಾ ಯಸ್ಮಾತ್ತೇನ ನಾರಾಯಣಃ ಸ್ಮೃತಃ ॥ ೧೫ ॥

ಶಿವಯೋಗಮಯೀಂ ನಿದ್ರಾಂ ಕುರ್ವಂತಂ ತ್ರಿದಶೇಶ್ವರಂ ।
ಬದ್ಧಾಂಜಲಿಪುಟಾಸ್ಸಿದ್ಧಾ ಜನಲೋಕನಿವಾಸಿನಃ ॥ ೧೬ ॥

ಸ್ತೋತ್ರೈಃ ಪ್ರಬೋಧಯಾಮಾಸುಃ ಪ್ರಭಾತಸಮಯೇ ಸುರಾಃ ।
ಯಥಾ ಸೃಷ್ಟ್ಯಾದಿಸಮಯೇ ಈಶ್ವರಂ ಶ್ರುತಯಃ ಪುರಾ ॥ ೧೭ ॥

---

ವಾಗಿದ್ದಿತು. ಇಂತಹ ಸಮಯದಲ್ಲಿ ಬ್ರಹ್ಮನು ನಾರಾಯಣನಾಗಿ ಆ ನೀರಿನಲ್ಲಿ ಸುಖವಾಗಿ ಮಲಗಿದ್ದನು.

೧೪-೧೫. ಎಲೈ ಋಷಿಗಳಿರಾ ! ಕೇಳಿರಿ. ನಾರಾಯಣನ ವಿಷಯವಾಗಿರುವ ಅರ್ಥವನ್ನು ಕೊಡುವ ಈ ಮುಂದೆ ಹೇಳುವ ಮಂತ್ರವನ್ನು ಬ್ರಹ್ಮನು ಹೇಳಿದನು. ಆ ಮಂತ್ರವನ್ನೂ, ಅದರ ಅರ್ಥವನ್ನೂ ಹೇಳುವೆನು ಕೇಳಿರಿ. ಆಪಃ ಎಂದರೆ ನೀರು. ಈ ನೀರಿಗೆ ನಾರಾ ಎಂದು ಹೆಸರು. ಈ ನೀರು ಮನುಷ್ಯರ ಉತ್ಪತ್ತಿಗೆ ಕಾರಣವು. ಆ ನೀರುಗಳೇ ವಾಸಸ್ಥಳವಾಗಿರುವುದರಿಂದ ಅಲ್ಲಿ ಮಲಗಿದ್ದವನಿಗೆ ನಾರಾಯಣನೆಂದು ಹೆಸರುಂಟಾಯಿತು.

೧೬-೧೭. ಸೃಷ್ಟಿಯ ಪ್ರಾರಂಭದಲ್ಲಿ ಈಶ್ವರನನ್ನು ವೇದಗಳು ಮೊದಲು ಸ್ತೋತ್ರಮಾಡಿದಂತೆ ದೇವತೆಗಳೂ, ಜನಲೋಕದಲ್ಲಿರುವ ಸಿದ್ಧರೂ ಅಂಜಲಿಬದ್ಧರಾಗಿ ಶಿವಯೋಗರೂಪವಾದ ಯೋಗನಿದ್ರೆಯನ್ನು ಮಾಡುತ್ತಿರುವ ದೇವೇಶ್ವರನಾದ ಈ ಬ್ರಹ್ಮನನ್ನು ಪ್ರಾತಃಕಾಲದಲ್ಲಿ ಸ್ತೋತ್ರಗಳಿಂದ ಹೊಗಳಿ ಎಚ್ಚರಮಾಡಿದರು.

ತತಃ ಪ್ರಬುದ್ಧ ಉತ್ಥಾಯ ಶಯನಾತ್ತ್ತೋಯಮಧ್ಯಗಾತ್ ।
ಉದೈಕ್ಷತ ದಿಶಃ ಸರ್ವಾ ಯೋಗನಿದ್ರಾಲಸೇಕ್ಷಣಃ ॥ ೧೮ ॥

ನಾಪಶ್ಯತ್ಸ ತದಾ ಕಿಂಚಿತ್ಸ್ವಾತ್ಮನೋ ವ್ಯತಿರೇಕಿ ಯತ್ ।
ಸವಿಸ್ಮಯ ಇವಾಸೀನಃ ಪರಾಂ ಚಿಂತಾಮುಪಾಗಮತ್ ॥ ೧೯ ॥

ಕ್ವ ಸಾ ಭಗವತೀ ಯಾತು ಮನೋಜ್ಞಾ ಮಹತೀ ಮಹೀ ।
ನಾನಾವಿಧಮಹಾಶೈಲನದೀನಗರಕಾನನಾ ॥ ೨೦ ॥

ಏವಂ ಸಂಚಿತಯನ್ಬ್ರಹ್ಮಾ ಬುಬುಧೇ ನೈವ ಭೂಸ್ಥಿತಿಂ ।
ತದಾ ಸಸ್ಮಾರ ಪಿತರಂ ಭಗವಂತಂ ತ್ರಿಲೋಚನಂ ॥ ೨೧ ॥

ಸ್ಮರಣಾದ್ದೇವದೇವಸ್ಯ ಭವಸ್ಯಾಮಿತೇಜಸಃ ।
ಜ್ಞಾತವಾನ್ಸಲಿಲೇ ಮಗ್ನಾಂ ಧರಣೀಂ ಧರಣೀಪತಿಃ ॥ ೨೨ ॥

---

೧೮. ಬಳಿಕ ಆ ಬ್ರಹ್ಮನು ಯೋಗನಿದ್ರೆಯಿಂದ ಎಚ್ಚತ್ತು ಕಣ್ಣುಗಳನ್ನು ಹೊಸಗಿಕೊಂಡು ನೀರಿನ ಮಧ್ಯದಲ್ಲಿರುವ ಹಾಸಿಗೆಯಿಂದ ಮೇಲಕ್ಕೆದ್ದು ಎಲ್ಲಾ ದಿಕ್ಕುಗಳನ್ನೂ ನೋಡಿದನು.

೧೯. ಆಗ ಅವನಿಗೆ ತನಗಿಂತಲೂ ಬೇರೆಯಾದ ಯಾವ ವಸ್ತುವೂ ಕಾಣಿಸಲಿಲ್ಲ. ಹೀಗಿರುವುದನ್ನು ನೋಡಿ ಆಶ್ಚರ್ಯಚಕಿತನಾಗಿ ಏನುಮಾಡಲೂ ತೋರದೆ ಸುಮ್ಮನೆ ಚಿಂತಾಮಗ್ನನಾಗಿದ್ದನು.

೨೦. ಅನೇಕ ವಿಧವಾದ ದೊಡ್ಡ ಬೆಟ್ಟ, ಹೊಳೆ, ಪಟ್ಟಣ, ಕಾಡು ಇವುಗಳಿಂದ ಕೂಡಿ, ಮನೋಹರವಾಗಿಯೂ, ದೊಡ್ಡದಾಗಿಯೂ, ಪೂಜಾರ್ಹವಾಗಿಯೂ ಇದ್ದ (ಹಿಂದೆ ಇದ್ದ ಎಂದರೆ ಪ್ರಳಯಕ್ಕೆ ಪೂರ್ವದಲ್ಲಿದ್ದ) ಭೂಮಿಯು ಎಲ್ಲಿ ಹೋಯಿತು ಎಂದು ಯೋಚಿಸಿದನು.

೨೧. ಅವನು ಹೀಗೆಯೇ ಎಷ್ಟು ಯೋಚಿಸಿದರೂ ಭೂಮಿಯ ಸ್ಥಿತಿಯು ಅವನಿಗೆ ಗೊತ್ತಾಗಲಿಲ್ಲ. ಆಗ ಅವನು (ಪೂಜ್ಯನಾದ) ಷಡ್ಗುಣೈಶ್ವರ್ಯಸಂಪನ್ನನೂ ತ್ರಿಲೋಚನನೂ ಆದ ತನ್ನ ತಂದೆಯನ್ನು (ಮಹೇಶ್ವರನನ್ನು) ಸ್ಮರಿಸಿಕೊಂಡನು.

೨೨. ದೇವತೆಗಳಿಗೆಲ್ಲರಿಗೂ ದೇವನಾಗಿರುವ ಅಪರಿಮಿತ ತೇಜಶ್ಶಾಲಿಯಾದ ಶಿವನ ಸ್ಮರಣಮಾತ್ರದಿಂದಲೇ ಭೂಮಿಗೆ ಅಧಿಪನಾದ ಬ್ರಹ್ಮನಿಗೆ ಭೂಮಿಯು ನೀರಿನಲ್ಲಿ ಮುಳುಗಿರುವುದೆಂದು ತಿಳಿಯಿತು.

ತತೋ ಭೂಮೇಸ್ಸಮುದ್ಧಾರಂ ಕರ್ತುಕಾಮಃ ಪ್ರಜಾಪತಿಃ ।
ಜಲಕ್ರೀಡೋಚಿತಂ ದಿವ್ಯಂ ವಾರಾಹಂ ರೂಪಮಸ್ಮರತ್ ॥ ೨೩ ॥

ಮಹಾಪರ್ವತವರ್ಷ್ಮಾಣಂ ಮಹಾಜಲದನಿಸ್ಸ್ವನಂ ।
ನೀಲಮೇಘಪ್ರತೀಕಾಶಂ ದೀಪ್ತಶಬ್ದಂ ಭಯಾನಕಂ ॥ ೨೪ ॥

ಪೀನವೃತ್ತಘನಸ್ಕಂಧಂ ಪೀನೋನ್ನತಕಟೀತಟಂ ।
ಹ್ರಸ್ವವೃತ್ತೋರುಜಂಘಾಗ್ರಂ ಸುತೀಕ್ಷ್ಣಖುರಮಂಡಲಂ ॥ ೨೫ ॥

ಪದ್ಮರಾಗಮಣಿಪ್ರಖ್ಯವೃತ್ತಭೀಷಣಮೀಕ್ಷಣಂ ।
ವೃತ್ತದೀರ್ಘಮಹಾಗಾತ್ರಂ ಸ್ತಬ್ಧಕರ್ಣಸ್ಥಲೋಜ್ಜ್ವಲಂ ॥ ೨೬ ॥

ಉದೀರ್ಣೋಚ್ಛ್ವಾಸನಿಶ್ವಾಸಘೂರ್ಣಿತಪ್ರಲಯಾರ್ಣವಂ ।
ವಿಸ್ಫುರತ್ಸುಸಟಾಚ್ಛನ್ನಕಪೋಲಸ್ಕಂಧಬಂಧುರಂ ॥ ೨೭ ॥

---

೨೩. ಅನಂತರ ಪ್ರಜೆಗಳಿಗೆ ಅಧಿಪತಿಯಾದ ಅವನು ಭೂಮಿಯನ್ನು ಮೇಲಕ್ಕೆತ್ತಬೇಕೆಂದು ಯೋಚಿಸಿ ನೀರಿನಲ್ಲಿ ಆಟವಾಡಲು ಯೋಗ್ಯವಾದ ಹಂದಿಯ ರೂಪವನ್ನು ಸ್ಮರಿಸಿಕೊಂಡನು.

೨೪-೨೬. ಆ ವರಾಹದ ರೂಪವು ದೊಡ್ಡ ಪರ್ವತಕ್ಕೆ ಸಮನಾದ ಶರೀರದಿಂದ ಕೂಡಿ ಕಪ್ಪಗಿರುವ ಮೇಘದಂತೆ ಹೊಳೆಯುತ್ತಿತ್ತು. ದೊಡ್ಡ ಮೇಘದ ಧ್ವನಿಯನ್ನು ಅನುಸರಿಸುವ ಭಯಂಕರವಾದ ಧ್ವನಿಯುಳ್ಳದ್ದಾಗಿತ್ತು. ಈ ವರಾಹದ ಹೆಗಲು ದಪ್ಪನಾಗಿಯೂ ಗುಂಡಾಗಿಯೂ ಗಟ್ಟಿಯಾಗಿಯೂ ಇತ್ತು. ಇದರ ಕಟಿಪ್ರದೇಶವು ದಪ್ಪನಾಗಿ ಎತ್ತರವಾಗಿತ್ತು. ಕುಳ್ಳಾಗಿ ಗುಂಡಾಗಿರುವ ಮುಂಡಿಯ ಪ್ರದೇಶಗಳು ಬಹಳ ಹರಿತವಾದ ಗೊರಸಿನ ದಂಡಿನಿಂದ ಕೂಡಿದ್ದುವು. ಈ ವರಾಹವು ದುಂಡಾಗಿ ಪದ್ಮರಾಗದಂತೆ ಹೊಳೆಯುತ್ತಿರುವ ಕಣ್ಣುಗಳಿಂದಲೂ, ನೆಟ್ಟಗೆ ನಿಂತಿರುವ ಕಿವಿಗಳಿಂದಲೂ ನೋಡುವವರಿಗೆ ಬಹಳ ಭಯಂಕರವಾಗಿತ್ತು.

೨೭-೨೮. ಈ ವರಾಹದ ಉಚ್ಛ್ವಾಸ ನಿಶ್ವಾಸಗಳಿಂದ ಪ್ರಳಯಕಾಲದಂತೆ ಸಮುದ್ರವೆಲ್ಲವೂ ಅಲ್ಲೋಲಕಲ್ಲೋಲವಾಗುತ್ತಿತ್ತು. ಈ ವರಾಹದ ಕುತ್ತಿಗೆ, ಕಪೋಲ ಇವುಗಳ ಸುತ್ತಲೂ ಕೇಸರದ ಕೇಶರಾಶಿಯಿಂದ ತುಂಬಿತ್ತು. ಮೇಘಗಳು ಮಿಂಚುಗಳಿಂದ ಕೂಡಿ ಎತ್ತರದಲ್ಲಿ ಪ್ರಕಾಶಿಸುವಂತೆ, ಅನೇಕ ವಿಧವಾದ ಮುತ್ತು

**ಮಣಿಭಿರ್ಭೂಷಣೈಶ್ಚಿತ್ರೈರ್ಮಹಾರತ್ನೈಃ ಪರಿಷ್ಕೃತಂ ।**
**ವಿರಾಜಮಾನಂ ವಿದ್ಯುದ್ಭಿರ್ಮೇಘಸಂಘಮಿವೋನ್ನತಂ ॥ ೨೮ ॥**

**ಆಸ್ಥಾಯ ವಿಪುಲಂ ರೂಪಂ ವಾರಾಹಮಮಿತಂ ವಿಧಿಃ ।**
**ಪೃಥಿವ್ಯುದ್ಧರಣಾರ್ಥಾಯ ಪ್ರವಿವೇಶ ರಸಾತಲಂ ॥ ೨೯ ॥**

**ಸ ತದಾ ಶುಶುಭೇऽತೀವ ಸೂಕರೋ ಗಿರಿಸನ್ನಿಭಃ ।**
**ಲಿಂಗಾಕೃತೇರ್ಮಹೇಶಸ್ಯ ಪಾದಮೂಲಂ ಗತೋ ಯಥಾ ॥ ೩೦ ॥**

**ತತಸ್ಸ ಸಲಿಲೇ ಮಗ್ನಾಂ ಪೃಥಿವೀಂ ಪೃಥಿವೀಧರಃ ।**
**ಉದ್ಧೃತ್ಯಾಲಿಂಗ್ಯ ದ್ರಂಷ್ಟ್ರಾಭ್ಯಾಮುನ್ಮಮಜ್ಜ ರಸಾತಲಂ ॥ ೩೧ ॥**

**ತಂ ದೃಷ್ಟ್ವಾ ಮುನಯಸ್ಸಿದ್ಧಾ ಜನಲೋಕನಿವಾಸಿನಃ ।**
**ಮುಮುದುರ್ನನೃತುರ್ಮೂರ್ಧ್ನಿ ತಸ್ಯ ಪುಷ್ಪೈರವಾಕಿರನ್ ॥ ೩೨ ॥**

---

ಬಹಳ ಬೆಲೆಯಾಗುವ ಉತ್ತಮವಾದ ರತ್ನದ ಆಭರಣಗಳಿಂದ ಈ ವರಾಹವು ಅಲಂಕೃತವಾಗಿ ಪ್ರಕಾಶಿಸುತ್ತಿತ್ತು.

೨೯. ಬ್ರಹ್ಮನು ಈರೀತಿಯಾಗಿ ಅಳತೆಗೆ ಸಿಕ್ಕದಿರುವಂತಿರುವ ವರಾಹದ ಆಕಾರವನ್ನು ತನ್ನ ಸ್ಮರಣಮಾತ್ರದಿಂದ ಹೊಂದಿ ಭೂಮಿಯನ್ನು ಮೇಲಕ್ಕೆತ್ತುವುದಕ್ಕಾಗಿ ರಸಾತಲಕ್ಕೆ ಹೋದನು.

೩೦ ಆಗ ಪರ್ವತದಂತೆ ದೊಡ್ಡ ಆಕಾರವನ್ನು ಧರಿಸಿರುವ ಆ ವರಾಹವು ಲಿಂಗಾಕಾರದಿಂದ ಇರುವ ಮಹೇಶ್ವರನ ಪಾದಮೂಲವನ್ನು ನಮಸ್ಕರಿಸುವ ಹಾಗೆ ಪ್ರಕಾಶಿಸುತ್ತಿತ್ತು.

೩೧. ಅನಂತರ ಆ ಬ್ರಹ್ಮನು ನೀರಿನಲ್ಲಿ ಮುಳುಗಿರುವ ಆ ಭೂಮಿಯನ್ನು ತನ್ನ ಕೋರೆದಾಡೆಗಳಿಂದ ನೀರಿನಿಂದ ಮೇಲಕ್ಕೆ ಎತ್ತಿಕೊಂಡು ರಸಾತಲದಿಂದ ಬಂದನು.

೩೨. ಜನಲೋಕದಲ್ಲಿ ವಾಸಮಾಡುತ್ತಿರುವ ಋಷಿಗಳೂ, ಸಿದ್ಧರೂ ಆ ಬ್ರಹ್ಮನನ್ನು ನೋಡಿ ಸಂತೋಷಪಟ್ಟರು. ನರ್ತನವಮಾಡಿದರು. ಅವನ ತಲೆಯಮೇಲೆ ಹೂವಿನ ಮಳೆಯನ್ನು ಕರೆದರು.

ವಪುರ್ಮಹಾವರಾಹಸ್ಯ ಶುಶುಭೇ ಪುಷ್ಪಸಂವೃತಂ ।
ಪತದ್ಭಿರಿವ ಖದ್ಯೋತೈಃ ಪ್ರಾಂಶುರಂಜನಪರ್ವತಃ ॥ ೩೩ ॥

ತತಃ ಸಂಸ್ಥಾನಮಾನೀಯ ವರಾಹೋ ಮಹತೀಂ ಮಹೀಂ ।
ಸ್ವಮೇವ ರೂಪಮಾಸ್ಥಾಯ ಸ್ಥಾಪಯಾಮಾಸ ವೈ ವಿಭುಃ ॥ ೩೪ ॥

ಪೃಥಿವೀಂ ಚ ಸಮೀಕೃತ್ಯ ಪೃಥಿವ್ಯಾಂ ಸ್ಥಾಪಯನ್ಗಿರೀನ್ ।
ಭೂರಾದ್ಯಾಂಶ್ಚತುರೋ ಲೋಕಾನ್ಕಲ್ಪಯಾಮಾಸ ಪೂರ್ವವತ್ ॥ ೩೫ ॥

ಇತಿ ಸ ಹ ಮಹತೀಂ ಮಹೀಂ ಮಹೀಧ್ರೈಃ ।
ಪ್ರಲಯಮಹಾಜಲಧೇರಧಸ್ಥಮಧ್ಯಾತ್ ।
ಉಪರಿ ಚ ವಿನಿವೇಶ್ಯ ವಿಶ್ವಕರ್ಮಾ ।
ಚರಮಚರಂ ಚ ಜಗತ್ಸಸರ್ಜ ಭೂಯಃ ॥ ೩೬ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾಂ
ಪೂರ್ವಭಾಗೇ ಸೃಷ್ಟ್ಯಾದಿವರ್ಣನಂ ನಾಮೈಕಾದಶೋಽಧ್ಯಾಯಃ

---

೩೩. ಕುಳ್ಳಾಗಿರುವ ಕಾಡಿಗೆಯ ಬೆಟ್ಟವು ಮಿಂಚಿನ ಹುಳುಗಳಿಂದ ಹೊಳೆಯುವ ಹಾಗೆ ಹೂವಿನ ರಾಶಿಯಿಂದ ಕೂಡಿರುವ ವರಾಹದ ಆ ದೊಡ್ಡ ಶರೀರವು ಪ್ರಕಾಶಿಸುತ್ತಿತ್ತು.

೩೪. ಅನಂತರದಲ್ಲಿ ಸರ್ವವ್ಯಾಪಕನಾದ ಆ ಬ್ರಹ್ಮನು ವರಾಹರೂಪದಿಂದ ದೊಡ್ಡದಾದ ಭೂಮಿಯನ್ನು ಸರಿಯಾಗಿರುವ ಸ್ಥಳದಲ್ಲಿ ನೆಟ್ಟಗೆ ಇರಿಸಿ, ತನ್ನ ಹಿಂದಿನ ನಿಜವಾದ ರೂಪವನ್ನು ಮತ್ತೆ ಧರಿಸಿ ಎಲ್ಲವನ್ನೂ ಮೊದಲಿನಂತೆ ಮಾಡಿದನು.

೩೫. ಭೂಮಿಯನ್ನು ಸಮನಾಗಿಮಾಡಿ, ಬೆಟ್ಟಗಳನ್ನು ಸರಿಯಾಗಿ ಇರಿಸಿ, ಭೂಲೋಕವೇ ಮೊದಲಾದ ನಾಲ್ಕು ಲೋಕಗಳನ್ನೂ ಹಿಂದಿನಂತೆಯೇ ಮಾಡಿದನು.

೩೬. ಪ್ರಪಂಚದ ನಿರ್ಮಾಣಕುಶಲನಾದ ಆ ಬ್ರಹ್ಮನು ಈ ರೀತಿಯಾಗಿ ದೊಡ್ಡದಾದ ಭೂಮಿಯನ್ನು ಬೆಟ್ಟಗಳೊಡನೆ ಪ್ರಳಯಕಾಲದ ದೊಡ್ಡ ಸಮುದ್ರದ ಬುಡದ ಮಧ್ಯದಿಂದ ಮೇಲಕ್ಕೆ ಎತ್ತಿ ಇರಿಸಿ ಸ್ಥಾವರಜಂಗಮವಾದ ಪ್ರಪಂಚವೆಲ್ಲವನ್ನೂ ಮತ್ತೆ ಸೃಷ್ಟಿಮಾಡಿದನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಪೂರ್ವಭಾಗದಲ್ಲಿ ಸೃಷ್ಟ್ಯಾದಿವರ್ಣನವೆಂಬ ಹೆಸರುಳ್ಳ ಹನ್ನೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಾಯುವೀಯಸಂಹಿತಾಯಾಂ ಪೂರ್ವಭಾಗೇ

## ದ್ವಾದಶೋಽಧ್ಯಾಯಃ

---

॥ ವಾಯು ರುವಾಚ ॥

**ಸರ್ಗಂ ಚಿಂತಯತಸ್ತಸ್ಯ ತದಾ ವೈ ಬುದ್ಧಿಪೂರ್ವಕಂ ।**
**ಪ್ರಧ್ಯಾನಕಾಲೇ ಮೋಹಸ್ತು ಪ್ರಾದುರ್ಭೂತಸ್ತಮೋಮಯಃ ॥ ೧ ॥**

**ತಮೋ ಮೋಹೋ ಮಹಾಮೋಹಸ್ತಾಮಿಸ್ರಶ್ಚಾಂಧಸಂಜ್ಞಿತಃ ।**
**ಅವಿದ್ಯಾ ಪಂಚಮೀ ಚೈಷಾ ಪ್ರಾದುರ್ಭೂತಾ ಮಹಾತ್ಮನಃ ॥ ೨ ॥**

**ಪಂಚಧಾಽವಸ್ಥಿತಃ ಸರ್ಗೋ ಧ್ಯಾಯತಸ್ತ್ವಭಿಮಾನಿನಃ ।**
**ಸರ್ವತಸ್ತಮಸಾತೀವ ಬೀಜಕುಂಭವದಾವೃತಃ ॥ ೩ ॥**

---

### ಹನ್ನೆರಡನೆಯ ಅಧ್ಯಾಯವು

೧. ವಾಯುದೇವನು ಹೇಳಿದನು:—ಆಗ ಬ್ರಹ್ಮನು ಪ್ರಜೆಗಳನ್ನು ಸೃಷ್ಟಿ ಮಾಡಬೇಕೆಂದು ಯೋಚನೆಮಾಡುತ್ತಿರುವಾಗ ಮೊದಲು ಬುದ್ಧಿಗೆ ಯಾವುದೂ ತೋರದಿರುವಷ್ಟು ಮಟ್ಟಿನ (ಮೋಹವು) ಮಂಕುತನವು ಉಂಟಾಯಿತು.

೨. ಮಹಾಮಹಿಮನಾದ ಇವನಿಂದ ಉಂಟಾದ ಈ ಮೋಹವು ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ, ಅವಿದ್ಯಾ ಎಂಬುದಾಗಿ ಐದು ವಿಧವಾಯಿತು.

೩. ಧ್ಯಾನಮಾಡುತ್ತಿರುವ ಈ ಬ್ರಹ್ಮನಿಂದ ಉಂಟಾದ ಈ ಸೃಷ್ಟಿಯು ತಮೋಗುಣದಿಂದ ಎಲ್ಲಾ ಕಡೆಯಲ್ಲಿಯೂ ಆವರಿಸಿದ್ದಾಗಿ ಬೀಜಗಳಿಂದ ತುಂಬಿದ ಕುಂಭದಂತೆ ಎಲ್ಲವನ್ನೂ ಆವರಿಸಿಕೊಂಡಿತ್ತು.

ಬಹಿರಂತಶ್ಚಾಪ್ರಕಾಶಃ ಸ್ತಬ್ಧೋ ನಿಃಸಂಜ್ಞ ಏವ ಚ ।
ತಸ್ಮಾತ್ತೇಷಾಂ ವೃತಾ ಬುದ್ಧಿರ್ಮುಖಾನಿ ಕರಣಾನಿ ಚ ॥ ೪ ॥

ತಸ್ಮಾತ್ತೇ ಸಂವೃತಾತ್ಮಾನೋ ನಗಾ ಮುಖ್ಯಾಃ ಪ್ರಕೀರ್ತಿತಾಃ ।
ತಂ ದೃಷ್ಟ್ವಾಽಸಾಧಕಂ ಬ್ರಹ್ಮಾ ಪ್ರಥಮಂ ಸರ್ಗಮೀದೃಶಂ । ॥ ೫ ॥

ಅಪ್ರಸನ್ನಮನಾ ಭೂತ್ವಾ ದ್ವಿತೀಯಂ ಸೋಽಭ್ಯಮನ್ಯತ ।
ತಸ್ಯಾಭಿಧ್ಯಾಯತಃ ಸರ್ಗಂ ತಿರ್ಯಕ್ಸ್ರೋತೋಽಭ್ಯವರ್ತತ ॥ ೬ ॥

ಅಂತಃಪ್ರಕಾಶಾಸ್ತಿರ್ಯಂಚ ಆವೃತಾಶ್ಚ ಬಹಿಃ ಪುನಃ ।
ಪಶ್ವಾತ್ಮಾನಸ್ತತೋ ಜಾತಾ ಉತ್ಪಥಗ್ರಾಹಿಣಶ್ಚ ತೇ ॥ ೭ ॥

ತಮಪ್ಯಸಾಧಕಂ ಜ್ಞಾತ್ವಾ ಸರ್ಗಮನ್ಯಮಮನ್ಯತ ।
ತದೋರ್ಧ್ವಸ್ರೋತಸೋ ವೃತ್ತೋ ದೇವಸರ್ಗಸ್ತು ಸಾತ್ತ್ವಿಕಃ ॥ ೮ ॥

---

೪. ಆದ್ದರಿಂದಲೇ ಬುದ್ಧಿಯೂ, ಇಂದ್ರಿಯಗಳೂ ಇವೆಲ್ಲವೂ ಈ ತಮೋಗುಣದಿಂದ ಆವರಿಸಲ್ಪಟ್ಟು ಯಾವ ವ್ಯಾಪಾರವನ್ನೂ ಮಾಡದೆ ಒಳಗೂ ಹೊರಗೂ ಪ್ರಕಾಶವಿಲ್ಲದವುಗಳಾಗಿಯೂ ಜ್ಞಾನವಿಲ್ಲದವುಗಳಾಗಿಯೂ ಇರುವುವು.

೫. ಈ ತಮೋಗುಣ ಪ್ರಧಾನವಾದ ಸೃಷ್ಟಿಯು ಪರ್ವತಾದಿ ಸೃಷ್ಟಿಯಾದ ಸ್ಥಿರಪದಾರ್ಥಗಳಾಗಿ ಈ ತಮೋಗುಣದಿಂದಲೇ ಆವರಿಸಲ್ಪಟ್ಟವುಗಳಾಗಿರುವವು. ಹೀಗೆ ಇರುವ ಈ ಸೃಷ್ಟಿಯು ಕೆಲಸಕ್ಕೆ ಬಂದದ್ದಲ್ಲವೆಂದು ತಿಳಿದು ಬ್ರಹ್ಮನಿಗೆ ಸಂತೋಷವಾಗಲಿಲ್ಲ. ಆದುದರಿಂದ ಇದಕ್ಕಿಂತ ಬೇರೆಯ ವಿಧವಾದ ಎರಡನೆಯ ಸೃಷ್ಟಿಮಾಡಲುಪಕ್ರಮಮಾಡಿದನು.

೬-೭. ಪುನಃ ಸೃಷ್ಟಿಮಾಡಲು ಧ್ಯಾನಮಾಡುತ್ತಿರುವ ಆ ಬ್ರಹ್ಮನ ದೆಸೆಯಿಂದ ತಿರ್ಯಕ್ ಸ್ರೋತಸ್ಸುಗಳೆಂದೆನಿಸಿಕೊಳ್ಳುವ ಪಶುಗಳು ಉಂಟಾದುವು. ಇವುಗಳಿಗೆ ಜ್ಞಾನಪ್ರಕಾಶವು ಬುದ್ಧಿಯಲ್ಲಿ ಅಡಗಿಕೊಂಡು ತಮೋಗುಣದಿಂದ ಆವೃತವಾಗಿ ಹೊರಗಡೆಯಲ್ಲಿ ಅದು ಪ್ರಸರಿಸದಂತೆ ತಡೆದಿರುವುದು. ಆದ್ದರಿಂದ ಈ ಪಶುಗಳು ತಮಗೆ ತೋರಿದಂತೆ ಲೋಕದಲ್ಲಿ ಇರುವುವು.

೮-೯. ಈ ಸೃಷ್ಟಿಯಿಂದಲೂ ಬ್ರಹ್ಮನಿಗೆ ಉಪಯೋಗವಿಲ್ಲವೆಂದು ತಿಳಿಯಿತು. ಆಗ ಅವನು ಬೇರೆ ಪ್ರಾಣಿಗಳನ್ನು ಸೃಷ್ಟಿಮಾಡಬೇಕೆಂದು ಯೋಚಿಸಿ ಸಾತ್ವಿಕರಾದ

**ತೇ ಸುಖಪ್ರೀತಿಬಹುಲಾ ಬಹಿರಂತಶ್ಚ ನಾವೃತಾಃ ।**
**ಪ್ರಕಾಶಾ ಬಹಿರಂತಶ್ಚ ಸ್ವಭಾವಾದೇವ ಸಂಜ್ಞಿತಾಃ ॥ ೯ ॥**

**ತತೋಽಭಿಧ್ಯಾಯತೋಽವ್ಯಕ್ತಾದರ್ವಾಕ್ಸ್ರೋತಸ್ತು ಸಾಧಕಃ ।**
**ಮನುಷ್ಯನಾಮಾ ಸಂಜಾತಃ ಸರ್ಗೋ ದುಃಖಸಮುತ್ಕಟಃ ॥ ೧೦ ॥**

**ಪ್ರಕಾಶಾ ಬಹಿರಂತಸ್ತೇ ತಮೋದ್ರಿಕ್ತಾ ರಜೋಽಧಿಕಾಃ ।**
**ಪಂಚಮೋಽನುಗ್ರಹಃ ಸರ್ಗಶ್ಚತುರ್ಧಾ ಸಂವ್ಯವಸ್ಥಿತಃ ॥ ೧೧ ॥**

**ವಿಪರ್ಯಯೇಣ ಶಕ್ತ್ಯಾ ಚ ತುಷ್ಟ್ಯಾ ಸಿಧ್ಯಾ ತಥೈವ ಚ ।**
**ತೇಽಪರಿಗ್ರಾಹಿಣಃ ಸರ್ವೇ ಸಂವಿಭಾಗರತಾಃ ಪುನಃ ॥ ೧೨ ॥**

---

ದೇವತೆಗಳನ್ನು ಸೃಷ್ಟಿಮಾಡಿದನು. ಅವರಿಗೆ ಜ್ಞಾನವು ದೇಹದ ಒಳಗೂ ಹೊರಗಡೆಯಲ್ಲಿಯೂ ಬಹಳವಾಗಿ ಪ್ರಸರಿಸುವುದಾದ್ದರಿಂದ ಅವರು ಯಾವಾಗಲೂ ಸುಖಸಂತೋಷಗಳುಳ್ಳವರಾಗಿ ಊರ್ಧ್ವಸ್ರೋತಸರೆಂದು ಪ್ರಸಿದ್ಧರಾದರು. ಇವರ ಸ್ವಭಾವವು ಯಾವಾಗಲೂ ಹೀಗೇ ಇರುವುದು.

೧೦. ಅನಂತರ ಪುನಃ ಧ್ಯಾನಮಾಡುತ್ತಿರಲು ಅವ್ಯಕ್ತದ ದೆಸೆಯಿಂದ ಅರ್ವಾಕ್ ಸ್ರೋತಸ್ಸುಗಳೆಂದು ಹೆಸರುಳ್ಳ ಮನುಷ್ಯರು ಸೃಷ್ಟಿಯಾದರು. ಇವರಿಗೆ ಜ್ಞಾನಪ್ರಸರವು ಒಳಗೂ ಹೊರಗೂ ಇದ್ದಾಗ್ಯೂ ಇವರಲ್ಲಿ ತಮೋಗುಣವು ಕೊಂಚ ಕಡಿಮೆಯಾಗಿ ರಜೋಗುಣವೇ ಹೆಚ್ಚಾಗಿರುವುದು. ಆದ್ದರಿಂದ ಇವರಿಗೆ ದುಃಖವು ಯಾವಾಗಲೂ ಹೆಚ್ಚಾಗಿರುವುದು. ಈ ಪ್ರಕಾರವಾದ ಮನುಷ್ಯರ ಸೃಷ್ಟಿಯನ್ನು ಬ್ರಹ್ಮನು ನೋಡಿ ಇದು ತನಗೆ ಸಾಧಕವೆಂದು ತಿಳಿದನು.

೧೧-೧೨. ಐದನೆಯದಾದ ಸೃಷ್ಟಿಯು ವಿಪರ್ಯಯ, ಶಕ್ತಿ, ತುಷ್ಟಿ, ಸಿದ್ಧಿ ಎಂದು ನಾಲ್ಕು ವಿಧವಾಗಿ ವಿಭಾಗಿಸಲ್ಪಟ್ಟಿರುವುದು. ಭೂತಗಳೇ ಮೊದಲಾದವುಗಳು ಈ ಸೃಷ್ಟಿಗೆ ಸಂಬಂಧಿಸಿರುವುವುಗಳು ಅವರೆಲ್ಲರೂ ಸ್ಥಿರವಾಗಿ ಒಂದೇ ಕಡೆ ಇರದೆ ಬೇರೆ ಬೇರೆಯಾಗಿದ್ದುಕೊಂಡು ಒಂದು ಸ್ವಭಾವಕ್ಕೂ ಒಳಪಡದೆ ಇರುವರು. ಸ್ತ್ರೀ, ಧನ ಮುಂತಾದ ಭೋಗಗಳಲ್ಲಿ ಇವರಿಗೆ ಆಸೆಯಿಲ್ಲ. ಯಾವಾಗಲೂ ತಿನ್ನುವ ಸ್ವಭಾವವುಳ್ಳವರಾಗಿರುವರು.

ಸ್ವಾದನಾಶ್ಚಾಪ್ಯಶೀಲಾಶ್ಚ ಭೂತಾದ್ಯಾಃ ಪರಿಕೀರ್ತಿತಾಃ ।
ಪ್ರಥಮೋ ಮಹತಃ ಸರ್ಗೋ ಬ್ರಹ್ಮಣಃ ಪರಮೇಷ್ಠಿನಃ ॥ ೧೩ ॥

ತನ್ಮಾತ್ರಾಣಾಂ ದ್ವಿತೀಯಸ್ತು ಭೂತಸರ್ಗಃ ಸ ಉಚ್ಯತೇ ।
ವೈಕಾರಿಕಸ್ತೃತೀಯಸ್ತು ಸರ್ಗ ಐಂದ್ರಿಯಕಃ ಸ್ಮೃತಃ ॥ ೧೪ ॥

ಇತ್ಯೇಷ ಪ್ರಕೃತೇಃ ಸರ್ಗಃ ಸಂಭೂತೋಽಬುದ್ಧಿಪೂರ್ವಕಃ ।
ಮುಖ್ಯಸರ್ಗಶ್ಚತುರ್ಥಸ್ತು ಮುಖ್ಯಾ ವೈ ಸ್ಥಾವರಾಃ ಸ್ಮೃತಾಃ ॥ ೧೫ ॥

ತಿರ್ಯಕ್ಸ್ರೋತಸ್ತು ಯಃ ಪ್ರೋಕ್ತಸ್ತಿರ್ಯಗ್ಯೋನಿಃ ಸ ಪಂಚಕಃ ।
ತದೂರ್ಧ್ವಸ್ರೋತಸಃ ಷಷ್ಠೋ ದೇವಸರ್ಗಸ್ತು ಸ ಸ್ಮೃತಃ ॥ ೧೬ ॥

ತತೋಽರ್ವಾಕ್ಸ್ರೋತಸಾಂ ಸರ್ಗಃ ಸಪ್ತಮಃ ಸ ತು ಮಾನುಷಃ ।
ಅಷ್ಟಮೋಽನುಗ್ರಹಃ ಸರ್ಗಃ ಕೌಮಾರೋ ನವಮಃ ಸ್ಮೃತಃ ॥ ೧೭ ॥

---

೧೩-೧೪. ಬ್ರಹ್ಮನ ದೆಸೆಯಿಂದ ಮೊದಲನೆಯದು ಮಹತ್ತತ್ವದ ಸೃಷ್ಟಿಯು. ಪಂಚತನ್ಮಾತ್ರಗಳ ಸೃಷ್ಟಿಯು ಎರಡನೆಯದು. ಇದನ್ನು ಪಂಚಭೂತಗಳ ಸೃಷ್ಟಿಯೆಂದೆನ್ನುವರು. ಮೂರನೆಯದಾದ ಇಂದ್ರಿಯ ಸೃಷ್ಟಿಯು ವೈಕಾರಿಕವೆಂದೆನಿಸಿಕೊಳ್ಳುವುದು.

೧೫. ಇದು ಪ್ರಕೃತಿಯಿಂದ ಸಾಕ್ಷಾತ್ತಾಗಿ ಉಂಟಾದ ಸೃಷ್ಟಿಯು. ಇದನ್ನು ಬ್ರಹ್ಮನು ಬುದ್ಧಿಪೂರ್ವಕವಾಗಿಯೇ ಸೃಷ್ಟಿಸಿರುವನು. ಸ್ಥಾವರ ಪ್ರಾಣಿಗಳ ಸೃಷ್ಟಿಯು ಎಂದರೆ ಸ್ಥಿರಗಳಾಗಿರುವ ಗುಲ್ಮಪಾಷಾಣಾದಿಗಳು ಪ್ರಪಂಚಕ್ಕೆ ಮುಖ್ಯವಾದವುಗಳು. ಇದು ನಾಲ್ಕನೆಯ ಸೃಷ್ಟಿಯು. ತಿರ್ಯಕ್ಸ್ರೋತಸ್ಸಾದ ಪ್ರಾಣಿಗಳ ಸೃಷ್ಟಿಯು ಐದನೆಯದು.

೧೬-೧೭. ಊರ್ಧ್ವಸ್ರೋತಸ್ಕರಾಗಿರುವ ದೇವತೆಗಳ ಸೃಷ್ಟಿಯು ಆರನೆಯದಾಗಿರುವುದು. ಅರ್ವಾಕ್ಸ್ರೋತಸ್ಕರಾದ ಮನುಷ್ಯರ ಸೃಷ್ಟಿಯು ಏಳನೆಯದೆಂದೆನಿಸಿಕೊಳ್ಳುವುದು. ಅನುಗ್ರಾಹಿಕಸೃಷ್ಟಿಯು ಎಂಟನೆಯದು. ಒಂಭತ್ತನೆಯದು ಕೌಮಾರಸೃಷ್ಟಿಯು. ಇವುಗಳಲ್ಲಿ ಮೊದಲ ಮೂರು ಸೃಷ್ಟಿಗಳೂ ಪ್ರಾಕೃತಿಕಸೃಷ್ಟಿ

**ಪ್ರಾಕೃತಾಶ್ಚ ತ್ರಯಃ ಪೂರ್ವೇ ಸರ್ಗಾಸ್ತೇऽಬುದ್ಧಿಪೂರ್ವಕಾಃ ।**
**ಬುದ್ಧಿಪೂರ್ವಂ ಪ್ರವರ್ತಂತೇ ಮುಖ್ಯಾದ್ಯಾಃ ಪಂಚ ವೈಕೃತಾಃ ॥ ೧೮ ॥**

**ಅಗ್ರೇ ಸಸರ್ಜ ವೈ ಬ್ರಹ್ಮಾ ಮಾನಸಾನಾತ್ಮನಃ ಸಮಾನ್ ।**
**ಸನಂದಂ ಸನಕಂಚೈವ ವಿದ್ವಾಂಸಂ ಚ ಸನಾತನಂ ॥ ೧೯ ॥**

**ಋಭುಂ ಸನತ್ಕುಮಾರಂ ಚ ಪೂರ್ವಮೇವ ಪ್ರಜಾಪತಿಃ ।**
**ಸರ್ವೇ ತೇ ಯೋಗಿನೋ ಜ್ಞೇಯಾ ವೀತರಾಗಾ ವಿಮತ್ಸರಾಃ ॥ ೨೦ ॥**

**ಈಶ್ವರಾಸಕ್ತಮನಸೋ ನ ಚಕ್ರುಃ ಸೃಷ್ಟಯೇ ಮತಿಂ ।**
**ತೇಷು ಸೃಷ್ಟ್ಯನಪೇಕ್ಷೇಷು ಗತೇಷು ಸನಕಾದಿಷು ॥ ೨೧ ॥**

**ಸ್ರಷ್ಟುಕಾಮಃ ಪುನರ್ಬ್ರಹ್ಮಾ ತತಾಪ ಪರಮಂ ತಪಃ ।**
**ತಸ್ಯೈವಂ ತಪ್ಯಮಾನಸ್ಯ ನ ಕಿಂಚಿತ್ಸಮವರ್ತತ । ॥ ೨೨ ॥**

---

ಎಂದು ಹೇಳಿಸಿಕೊಳ್ಳುವುವು. ಅವುಗಳನ್ನು ಬ್ರಹ್ಮನು ಬುದ್ಧಿಪೂರ್ವಕವಾಗಿ ಮಾಡ ಲಿಲ್ಲವಾದುದರಿಂದ ಅವುಗಳಿಗೆ ಬುದ್ಧಿಯಲ್ಲಿ ಪ್ರವೃತ್ತಿಯು ಇರುವುದಿಲ್ಲ. ಮುಖ್ಯ ವೆಂದು ಎನಿಸಿಕೊಳ್ಳುವ ಮುಂದಿನ ಐದು ಸೃಷ್ಟಿಗಳೂ ವೈಕಾರಿಕಗಳೆಂದೆನಿಸಿ ಕೊಳ್ಳುವುವು. ಇವುಗಳಿಗೆ ಬುದ್ಧಿಯಲ್ಲಿ ಪ್ರವೃತ್ತಿ ಇರುವುದು.

೨೦. ಬ್ರಹ್ಮನು ಮೊದಲು ತನ್ನ ಮನಸ್ಸಿನಿಂದಲೇ ತನಗೆ ಸಮನಾದ ಮಹಿಮೆಯುಳ್ಳ ಸನಕ, ಸನಂದ, ಸನಾತನ, ಋಭು ಸನತ್ಕುಮಾರ ಎಂಬ ಐದು ಜನರನ್ನೂ ಸೃಷ್ಟಿಮಾಡಿದನು. ಇವರೆಲ್ಲರೂ ಯೋಗಿಗಳಾಗಿರುವರು. ಕಾಮ ಕ್ರೋಧಾದಿಗಳಿಗೆ ಈಡಾಗುವವರಲ್ಲ. ಯಾವಾಗಲೂ ಶಿವನಲ್ಲಿಯೇ ನೆಟ್ಟಮನಸ್ಸು ಳ್ಳವರಾಗಿ ಶಿವಧ್ಯಾನಾಸಕ್ತರಾಗಿರುವುದರಿಂದ ಸೃಷ್ಟಿಯನ್ನು ಮಾಡಲು ಉದ್ಯುಕ್ತ ರಾಗಲಿಲ್ಲ.

೨೧-೨೪ ಸನಕಾದಿಗಳು ಸೃಷ್ಟಿಯನ್ನು ಮಾಡಲು ಇಚ್ಛೆಯಿಲ್ಲದವರಾಗಿ ಉದಾಸೀನರಾದಾಗ, ಬ್ರಹ್ಮನು ಪುನಃ ಸೃಷ್ಟಿಮಾಡಲು ಉತ್ತಮವಾದ ತಪಸ್ಸನ್ನು ಮಾಡಿದನು. ಅವನು ಹೀಗೆ ದೀರ್ಘಕಾಲ ತಪಸ್ಸುಮಾಡುತ್ತಿದ್ದರೂ ಯಾವುದೂ ಕೊಂಚವೂ ಉಂಟಾಗಲಿಲ್ಲ. ಹೀಗೆಯೇ ಬಹಳ ಕಾಲವು ಕಳೆದನಂತರ ಅವನಿಗೆ

**ತತೋ ದೀರ್ಘೇಣ ಕಾಲೇನ ದುಃಖಾತ್ಕ್ರೋಧೋ ವ್ಯಜಾಯತ ।**
**ಕ್ರೋಧಾವಿಷ್ಟಸ್ಯ ನೇತ್ರಾಭ್ಯಾಂ ಪ್ರಾಪತನ್ನಶ್ರುಬಿಂದವಃ ॥ ೨೩ ॥**

**ತತಸ್ತೇಭ್ಯೋಽಶ್ರುಬಿಂದುಭ್ಯೋ ಭೂತಾಃ ಪ್ರೇತಾಸ್ತದಾಭವನ್ ।**
**ಸರ್ವಾಂಸ್ತಾನಶ್ರುಜಾನ್ದೃಷ್ಟ್ವಾ ಬ್ರಹ್ಮಾತ್ಮಾನಮನಿಂದತ ॥ ೨೪ ॥**

**ತಸ್ಯ ತೀವ್ರಾಭವನ್ಮೂರ್ಛಾ ಕ್ರೋಧಾಮರ್ಷಸಮುದ್ಭವಾ ।**
**ಮೂರ್ಛಿತಸ್ತು ಜಹೌ ಪ್ರಾಣಾನ್ಕ್ರೋಧಾವಿಷ್ಟಃ ಪ್ರಜಾಪತಿಃ ॥ ೨೫ ॥**

**ತತಃ ಪ್ರಾಣೇಶ್ವರೋ ರುದ್ರೋ ಭಗವಾನ್ನೀಲಲೋಹಿತಃ ।**
**ಪ್ರಸಾದಮತುಲಂ ಕರ್ತುಂ ಪ್ರಾದುರಾಸೀತ್ಪ್ರಭೋರ್ಮುಖಾತ್ ॥ ೨೬ ॥**

**ದಶಧಾ ಚೈಕಧಾ ಚಕ್ರೇ ಸ್ವಾತ್ಮಾನಂ ಪ್ರಭುರೀಶ್ವರಃ ।**
**ತೇ ತೇನೋಕ್ತಾ ಮಹಾತ್ಮಾನೋ ದಶಧಾ ಚೈಕಧಾ ಕೃತಾಃ ॥ ೨೭ ॥**

---

ದುಃಖವೂ, ದುಃಖದಿಂದ ಕೋಪವೂ ಉಂಟಾದವು. ಅವನು ಕೋಪದಿಂದ ಇರುವಾಗ ಅವನ ಕಣ್ಣುಗಳಿಂದ ನೀರಿನ ಹನಿಗಳು ಬಿದ್ದವು. ಆ ನೀರಿನ ಹನಿಗಳಿಂದ ಭೂತ ಪ್ರೇತಗಳು ಹುಟ್ಟಿದವು. ಇವುಗಳು ಕಣ್ಣೀರಿನಿಂದ ಹುಟ್ಟಿದವೆಂದು ತಿಳಿದು ಬ್ರಹ್ಮನು ತನ್ನನ್ನು ತಾನೇ ನಿಂದಿಸಿಕೊಂಡನು.

೨೫. ಅನಂತರ ಅವನಿಗೆ ತುಂಬಾ ಕೋಪ, ಮೋಹಗಳುಂಟಾಗಿ ಅದರಿಂದ ಆ ಬ್ರಹ್ಮನಿಗೆ ಮೂರ್ಛೆಯು ಬಂದಿತು. ಈರೀತಿಯಾಗಿ ಕ್ರೋಧಪರವಶನಾಗಿ ಮೂರ್ಛೆಯಿಂದ ಆ ಬ್ರಹ್ಮನು ತನ್ನ ಪ್ರಾಣಗಳನ್ನೇ ಬಿಟ್ಟುಬಿಟ್ಟನು.

೨೬-೨೭. ಅನಂತರ ಷಡ್ಗುಣೈಶ್ವರ್ಯ ಸಂಪನ್ನನಾದ ನೀಲಲೋಹಿತನೆಂದು ಹೆಸರುಳ್ಳ ರುದ್ರನು, ತಾನು ಪ್ರಾಣಗಳಿಗೆ ಅಧಿಪತಿಯಾಗಿರುವಕಾರಣ ಆ ಬ್ರಹ್ಮನಿಗೆ ಅನುಗ್ರಹವನ್ನು ಮಾಡುವುದಕ್ಕಾಗಿ ಅವನ ಮುಖದಿಂದ ಪ್ರಕಟನಾದನು. ಪ್ರಭುವಾದ ರುದ್ರನು ತನ್ನನ್ನು ಹನ್ನೊಂದು ಪ್ರಕಾರವಾಗಿರುವಂತೆ ಮಾಡಿಕೊಂಡನು. ಆಗ ಇವನ ರೂಪಾಂತರವಾಗಿರುವ ಆ ಹನ್ನೊಂದುಜನ ರುದ್ರರಿಗೂ, "ಎಲೈ ಮಕ್ಕಳಿರಾ ! ಲೋಕಾನುಗ್ರಹಕ್ಕಾಗಿ ನಿಮ್ಮನ್ನು ನಾನು ಸೃಷ್ಟಿಮಾಡಿರುವೆನು.

**ಯೂಯಂ ಸೃಷ್ಟಾ ಮಯಾ ವತ್ಸಾ ಲೋಕಾನುಗ್ರಹಕಾರಣಾತ್ ।**
**ತಸ್ಮಾತ್ಸರ್ವಸ್ಯ ಲೋಕಸ್ಯ ಸ್ಥಾಪನಾಯ ಹಿತಾಯ ಚ ॥ ೨೮ ॥**

**ಪ್ರಜಾಸಂತಾನಹೇತೋಶ್ಚ ಪ್ರಯತಧ್ವಮತಂದ್ರಿತಾಃ ।**
**ಏವಮುಕ್ತಾಶ್ಚ ರುರುದುರ್ದುದ್ರುವುಶ್ಚ ಸಮಂತತಃ ॥ ೨೯ ॥**

**ರೋದನಾದ್ದ್ರಾವಣಾಚ್ಚೈವ ತೇ ರುದ್ರಾ ನಾಮತಃ ಸ್ಮೃತಾಃ ।**
**ಯೇ ರುದ್ರಾಸ್ತೇ ಖಲು ಪ್ರಾಣಾ ಯೇ ಪ್ರಾಣಾಸ್ತೇ ಮಹಾತ್ಮಕಾಃ ॥ ೩೦ ॥**

**ತತೋ ಮೃತಸ್ಯ ದೇಹಸ್ಯ ಬ್ರಹ್ಮಣಃ ಪರಮೇಷ್ಠಿನಃ ।**
**ಘೃಣೀ ದದೌ ಪುನಃ ಪ್ರಾಣಾನ್ಬ್ರಹ್ಮಪುತ್ರೋ ಮಹೇಶ್ವರಃ ॥ ೩೧ ॥**

**ಪ್ರಹೃಷ್ಟವದನೋ ರುದ್ರಃ ಪ್ರಾಣಪತ್ಯಾಗಮಾದ್ವಿಭೋಃ ।**
**ಅಭ್ಯಭಾಷತ ವಿಶ್ವೇಶೋ ಬ್ರಹ್ಮಾಣಂ ಪರಮಂ ವಚಃ ॥ ೩೨ ॥**

ಆದ್ದರಿಂದ ಲೋಕಗಳೆಲ್ಲವನ್ನೂ ಸ್ಥಿರವಾಗಿಡುವುದಕ್ಕೂ, ಲೋಕದಲ್ಲಿ ಸುಖವು ಉಂಟಾಗುವುದಕ್ಕೂ, ಪ್ರಜೆಗಳು ವೃದ್ಧಿಹೊಂದುವುದಕ್ಕೂ ಕೂಡ ನೀವುಗಳು ಸೋಮಾರಿಗಳಾಗಿರದೆ ಪ್ರಯತ್ನಮಾಡಿರಿ ಎಂದು ಹೇಳಿದನು.

೨೯-೩೦. ಅವನ ಮಾತನ್ನು ಕೇಳಿ ಅವರು ಅಳುತ್ತಾ ಎಲ್ಲಾ ಕಡೆಗೂ ಓಡಿಹೋದರು. ಇವರು ರೋದನಮಾಡುತ್ತಾ ಓಡಿದ ಕಾರಣ ಇವರಿಗೆ ರುದ್ರರೆಂದು ಹೆಸರಾಯಿತು. ಈ ರುದ್ರರೇ ಮಹಾಮಹಿಮೆಯುಳ್ಳ ಪ್ರಾಣಗಳೆಂದು ಹೇಳಿಸಿಕೊಂಡಿರುವರು.

೩೧. ಅನಂತರ ಬ್ರಹ್ಮನ ಮಗನಾದ ಮಹೇಶ್ವರನು ದಯೆಯುಳ್ಳವನಾಗಿ ಪರಮೇಷ್ಠಿಯಾದ ಬ್ರಹ್ಮನು ಮೃತನಾಗಿದ್ದದ್ದರಿಂದ ಅವನ ಪ್ರಾಣಗಳು ಅವನಿಗೆ ಪುನಃ ಬರುವಂತೆ ಮಾಡಿದನು.

೩೨. ಆಗ ಪ್ರಭುವಾದ ಬ್ರಹ್ಮನ ಪ್ರಾಣಗಳು ಹಿಂತಿರುಗಿ ಬಂದದ್ದರಿಂದ ಪ್ರಪಂಚಕ್ಕೆಲ್ಲಕ್ಕೂ ಅಧಿಪತಿಯಾದ ಆ ರುದ್ರನು ಸಂತುಷ್ಟನಾಗಿ ಬ್ರಹ್ಮನನ್ನು ಕುರಿತು,

ಮಾ ಭೈರ್ಮಾ ಭರ್ಮಹಾಭಾಗ ವಿರಿಂಚೇ ಜಗತಾಂ ಗುರೋ ।
ಮಯಾ ತೇ ಪ್ರಾಣಿತಾಃ ಪ್ರಾಣಾಃ ಸುಖಮುತ್ತಿಷ್ಠ ಸುವ್ರತ ॥ ೩೩ ॥

ಸ್ವಪ್ನಾನುಭೂತಮಿವ ತಚ್ಛ್ರುತ್ವಾ ವಾಕ್ಯಂ ಮನೋಹರಂ ।
ಹರಂ ನಿರೀಕ್ಷ್ಯ ಶನಕೈರ್ನೇತ್ರೈಃ ಫುಲ್ಲಾಂಬುಜಪ್ರಭೈಃ ॥ ೩೪ ॥

ತಥಾ ಪ್ರತ್ಯಾಗತಪ್ರಾಣಃ ಸ್ನಿಗ್ಧಗಂಭೀರಯಾ ಗಿರಾ ।
ಉವಾಚ ವಚನಂ ಬ್ರಹ್ಮಾ ತಮುದ್ದಿಶ್ಯ ಕೃತಾಂಜಲಿಃ ॥ ೩೫ ॥

ತ್ವಂ ಹಿ ದರ್ಶನಮಾತ್ರೇಣ ಚಾನಂದಯಸಿ ಮೇ ಮನಃ ।
ಕೋ ಭವಾನ್ ವಿಶ್ವಮೂರ್ತ್ಯಾ ವಾ ಸ್ಥಿರ ಏಕಾದಶಾತ್ಮಕಃ ॥ ೩೬ ॥

ತಸ್ಯ ತದ್ವಚನಂ ಶ್ರುತ್ವಾ ವ್ಯಾಜಹಾರ ಮಹೇಶ್ವರಃ ।
ಸ್ಪೃಶನ್ಕರಾಭ್ಯಾಂ ಬ್ರಹ್ಮಾಣಂ ಸುಸುಖಾಭ್ಯಾಂ ಸುರೇಶ್ವರಃ ॥ ೩೭ ॥

---

೩೩. ಎಲೈ ಜಗದ್ಗುರುವೆ! ಎಲೈ ಬ್ರಹ್ಮನೆ! ಎಲೈ ಅದೃಷ್ಟಶಾಲಿಯೆ! ಹೆದರಬೇಡ. ನಿನ್ನ ಪ್ರಾಣಗಳು ನಿನಗೆ ಹಿಂದಿರುಗಿ ಬರುವಂತೆ ಮಾಡಿರುವೆನು ಆದ್ದರಿಂದ ಸುಖವಾಗಿ ಮೇಲಕ್ಕೆ ಏಳು ಎಂದನು.

೩೪-೩೫. ಆಗ ಬ್ರಹ್ಮನು ಸ್ವಪ್ನದಲ್ಲಿ ಹೇಳುತ್ತಿರುವ ಮಾತಿನಂತಿರುವ ಸುಖಕರವಾದ ಆ ಮಾತನ್ನು ಕೇಳಿ ಅರಳಿದ ಕಮಲದ ಹಾಗೆ ಇರುವ ಕಣ್ಣುಗಳಿಂದ ಶಿವನನ್ನು ಮೆಲ್ಲಗೆ ನೋಡಿದನು ಹಿಂತಿರುಗಿ ಪ್ರಾಣಗಳು ಬಂದದ್ದರಿಂದ ಆ ರುದ್ರನ ಎದುರಿನಲ್ಲಿ ಕೈಮುಗಿದುಕೊಂಡು ಗಂಭೀರವಾಗಿಯೂ ಮೃದುವಾಗಿಯೂ ಇಂತೆಂದನು.

೩೬. ನಿನ್ನ ದರ್ಶನ ಮಾತ್ರದಿಂದಲೇ ನನ್ನ ಮನಸ್ಸಿಗೆ ಆನಂದವುಂಟಾಗಿರುವುದು. ನೀನು ಯಾರು? ಪ್ರಪಂಚವೆಲ್ಲವನ್ನೂ ವ್ಯಾಪಿಸಿಕೊಂಡು ಹನ್ನೊಂದು ರೂಪದಿಂದ ಇರುವೆಯಲ್ಲಾ ಎನ್ನಲು,

೩೭-೩೯. ಅವನ ಮಾತುಗಳನ್ನು ಕೇಳಿ ದೇವತೆಗಳಿಗೆ ಅಧಿಪನಾದ ಮಹೇಶ್ವರನು ಬ್ರಹ್ಮನನ್ನು ಸುಖಕರವಾದ ತನ್ನ ಕೈಗಳಿಂದ ಸ್ಪರ್ಶಮಾಡುತ್ತಾ ಎಲೈ

ಮಾಂ ವಿದ್ಧಿ ಪರಮಾತ್ಮಾನಂ ತವ ಪುತ್ರತ್ವಮಾಗತಂ ।
ಏತೇ ಚೈಕಾದಶ ರುದ್ರಾಸ್ತ್ವಾಂ ಸುರಕ್ಷಿತುಮಾಗತಾಃ ॥ ೩೮ ॥

ತಸ್ಮಾತ್ತೀವ್ರಾಮಿಮಾಂ ಮೂರ್ಚ್ಛಾಂ ವಿಧೂಯ ಮದನುಗ್ರಹಾತ್ ।
ಪ್ರಬುದ್ಧ್ಯಸ್ವ ಯಥಾಪೂರ್ವಂ ಪ್ರಜಾ ವೈ ಸ್ರಷ್ಟುಮರ್ಹಸಿ ॥ ೩೯ ॥

ಏವಂ ಭಗವತಾ ಪ್ರೋಕ್ತೋ ಬ್ರಹ್ಮಾ ಪ್ರೀತಮನಾ ಹ್ಯಭೂತ್ ।
ನಾಮಾಷ್ಟಕೇನ ವಿಶ್ವಾತ್ಮಾ ತುಷ್ಟಾವ ಪರಮೇಶ್ವರಂ ॥ ೪೦ ॥

॥ ಬ್ರಹ್ಮೋವಾಚ ॥

ನಮಸ್ತೇ ಭಗವನ್ರುದ್ರ ಭಾಸ್ಕರಾಮಿತತೇಜಸೇ ।
ನಮೋ ಭವಾಯ ದೇವಾಯ ರಸಾಯಾಂಬುಮಯಾತ್ಮನೇ ॥
ಶರ್ವಾಯ ಕ್ಷಿತಿರೂಪಾಯ ನಂದೀಸುರಭಯೇ ನಮಃ ॥ ೪೧ ॥

ಈಶಾಯ ವಸವೇ ತುಭ್ಯಂ ನಮಸ್ಸ್ಪರ್ಶಮಯಾತ್ಮನೇ ।
ಪಶೂನಾಂ ಪತಯೇ ಚೈವ ಪಾವಕಾಯಾತಿತೇಜಸೇ ॥
ಭೀಮಾಯ ವ್ಯೋಮರೂಪಾಯ ಶಬ್ದಮಾತ್ರಾಯ ತೇ ನಮಃ ॥ ೪೨ ॥

ಬ್ರಹ್ಮನೇ, ನನ್ನನ್ನು ಪರಮಾತ್ಮನೆಂಬದಾಗಿ ತಿಳಿದುಕೋ. ಈಗ ನಾನು ನಿನಗೆ ಪುತ್ರಭಾವವನ್ನು ಹೊಂದಿದ್ದೇನೆ. ಈ ಹನ್ನೊಂದು ಜನ ರುದ್ರರೂ ನಿನ್ನನ್ನು ರಕ್ಷಿಸುವುದಕ್ಕೆ ಸಿದ್ಧರಾಗಿರುತ್ತಾರೆ. ಆದ್ದರಿಂದ ತೀವ್ರವಾಗಿರುವ ಈ ಮೂರ್ಛೆಯನ್ನು ಕಳೆದುಕೊಂಡು ನನ್ನ ಅನುಗ್ರಹದಿಂದ ನೀನು ಪ್ರಬುದ್ಧನಾಗಿ ಹಿಂದಿನಂತೆಯೇ ಪ್ರಜೆಗಳನ್ನೂ ಸೃಷ್ಟಿಮಾಡುತ್ತಿರು ಎಂದನು.

೪೦ ಷಡ್ಗುಣೈಶ್ವರ್ಯಸಂಪನ್ನನಾದ ಮಹೇಶ್ವರನು ಹೇಳಿದ ಮಾತನ್ನು ಕೇಳಿ ಬ್ರಹ್ಮನು ಸಂತೋಷದಿಂದ ಆ ರುದ್ರನನ್ನು ನಾಮಾಷ್ಟಕದಿಂದ ಸ್ತೋತ್ರ ಮಾಡಿದನು.

೪೧-೪೩ ಬ್ರಹ್ಮನಿಂತೆಂದನು :—ಎಲೈ ಭಗವಂತನಾದ ರುದ್ರನೇ, ನೀನು ಸೂರ್ಯನಂತೆ ಅಪಾರವಾದ ತೇಜಸ್ಸಿನಿಂದ ಬೆಳಗುತ್ತಿರುವೆ. ಇಂತಹ ನಿನಗೆ ನಮಸ್ಕಾರವು. ರಸಗುಣಸ್ವರೂಪನಾಗಿ ಭವರೂಪದಿಂದಿರುವ ನಿನಗೆ ನಮಸ್ಕಾರವು. ಪೃಥ್ವೀರೂಪನಾಗಿ ಸದಾ ನಂದಿರೂಪದಿಂದ ಮನೋಹರನಾಗಿರುವ ಶರ್ವರೂಪನಾದ

**ಉಗ್ರಾಯೋಗ್ರಸ್ವರೂಪಾಯ ಯಜಮಾನಾತ್ಮನೇ ನಮಃ ।**
**ಮಹಾದೇವಾಯ ಸೋಮಾಯ ನಮೋಽಸ್ತ್ವಮೃತಮೂರ್ತಯೇ ॥ ೪೩ ॥**

**ಏವಂ ಸ್ತುತ್ವಾ ಮಹಾದೇವಂ ಬ್ರಹ್ಮಾ ಲೋಕಪಿತಾಮಹಃ ।**
**ಪ್ರಾರ್ಥಯಾಮಾಸ ವಿಶ್ವೇಶಂ ಗಿರಾ ಪ್ರಣತಿಪೂರ್ವಯಾ ॥ ೪೪ ॥**

**ಭಗವನ್ಭೂತಭವ್ಯೇಶ ಮಮ ಪುತ್ರ ಮಹೇಶ್ವರ ।**
**ಸೃಷ್ಟಿಹೇತೋಸ್ತ್ವಮುತ್ಪನ್ನೋ ಮಮಾಂಗೇಽನಂಗನಾಶನಃ ॥ ೪೫ ॥**

**ತಸ್ಮಾನ್ಮಹತಿ ಕಾರ್ಯೇಽಸ್ಮಿನ್ವ್ಯಾಪೃತಸ್ಯ ಜಗತ್ಪ್ರಭೋ ।**
**ಸಹಾಯಂ ಕುರು ಸರ್ವತ್ರ ಸ್ರಷ್ಟುಮರ್ಹಸಿ ಸ ಪ್ರಜಾಃ ॥ ೪೬ ॥**

---

ನಿನಗೆ ನಮಸ್ಕಾರವು. ಸ್ಪರ್ಶರೂಪದಿಂದ ವಸುರೂಪನಾಗಿರುವ ಈಶನಿಗೆ ನಮಸ್ಕಾರವು. ಪಾವಕನಂತೆ ಅತಿತೇಜಸ್ಸಿನಿಂದ ಯುಕ್ತನಾದ ಪಶುಪತಿಗೆ ನಮಸ್ಕಾರವು. ಶಬ್ದಮಾತ್ರದಿಂದ ಹುಟ್ಟಿದ ವ್ಯೋಮರೂಪದಿಂದಿರುವ ಭೀಮರೂಪನಾದ ನಿನಗೆ ನಮಸ್ಕಾರವು. ಯಜ್ಞದಲ್ಲಿ ಯಜಮಾನನ ರೂಪದಿಂದಿರುವ ಉಗ್ರಸ್ವರೂಪನಾದ ನಿನಗೆ ನಮಸ್ಕಾರವು. ಅಮೃತಸ್ವರೂಪನಾಗಿ ಸೋಮನೆಂದು ಪ್ರಸಿದ್ಧನಾಗಿರುವ ಮಹಾದೇವನಾದ ನಿನಗೆ ನಮಸ್ಕಾರವು ಎಂದು ಮಹೇಶ್ವರನ ಎಂಟು ನಾಮಗಳಿಂದ ಸ್ತೋತ್ರಮಾಡಿದನು.

೪೪. ಲೋಕಗಳಿಗೆಲ್ಲಕ್ಕೂ ಪಿತಾಮಹನಾದ ಬ್ರಹ್ಮನು ಪ್ರಪಂಚಕ್ಕೆ ಅಧಿಪನಾದ ಮಹಾದೇವನನ್ನು ಹೀಗೆ ನಮಸ್ಕಾರಪೂರ್ವಕವಾದ ಸ್ತೋತ್ರಮಾಡಿದ ನಂತರ ಅವನನ್ನು ಈರೀತಿ ಪ್ರಾರ್ಥನೆಮಾಡಿದನು.

೪೫-೪೬. ಎಲೈ ಭಗವಂತನೇ, ನೀನು ಭೂತಭವಿಷ್ಯದ್ವಸ್ತುಗಳಿಗೆ ಅಧಿಪತಿಯಾದವನು, ಮಹೇಶ್ವರನು. ಕಾಮನನ್ನು ನಾಶಮಾಡಿದ ನೀನು ಸೃಷ್ಟಿಕಾರ್ಯವನ್ನು ನಿರ್ವಹಿಸುವುದಕ್ಕಾಗಿಯೇ ಅವತರಿಸಿರುತ್ತೀಯೆ. ಎಲೈ ಜಗತ್ಪ್ರಭುವೆ ! ಆದ್ದರಿಂದ ನೀನು ಈ ಮಹಾಕಾರ್ಯದಲ್ಲಿ ಉದ್ಯುಕ್ತನಾದ ನನಗೆ ಪ್ರಜೆಗಳನ್ನು ಸೃಷ್ಟಿಮಾಡಲು ಎಲ್ಲಾ ವಿಧದಲ್ಲಿಯೂ ಸಹಾಯವನ್ನು ಮಾಡು ಎನ್ನಲು,

**ತೇನೈಷಾಂ ಸಾವಿತೋ ದೇಹೋ ರುದಸ್ತ್ರಿಪುರವರ್ಧನಃ ।**
**ಬಾಢಮಿತ್ಯೇವ ತಾಂ ವಾಣೀಂ ಪ್ರತಿಜಗ್ರಾಹ ಶಂಕರಃ ॥ ೪೭ ॥**

**ತತಸ್ಸ ಭಗವಾನ್ಬ್ರಹ್ಮಾ ಹೃಷ್ಟಂ ತಮಭಿನಂದ್ಯ ಚ ।**
**ಸ್ರಷ್ಟುಂ ತೇನಾಭ್ಯನುಜ್ಞಾತಸ್ತಥಾನ್ಯಾಶ್ಚಾಸೃಜತ್ಪ್ರಜಾಃ ॥ ೪೮ ॥**

**ಮರೀಚಿಭೃಗ್ವಂಗಿರಸಃ ಪುಲಸ್ತ್ಯಂ ಪುಲಹಂ ಕ್ರತುಂ ।**
**ದಕ್ಷಮತ್ರಿಂ ವಸಿಷ್ಠಂ ಚ ಸೋಽಸೃಜನ್ಮನಸೈವ ಚ ॥**
**ಪುರಸ್ತಾದಸೃಜದ್ಬ್ರಹ್ಮಾ ಧರ್ಮಂ ಸಂಕಲ್ಪಮೇವ ಚ ॥ ೪೯ ॥**

**ಇತ್ಯೇತೇ ಬ್ರಹ್ಮಣಃ ಪುತ್ರಾಃ ದ್ವಾದಶಾದೌ ಪ್ರಕೀರ್ತಿತಾಃ ।**
**ಸಹ ರುದ್ರೇಣ ಸಂಭೂತಾಃ ಪುರಾಣಾ ಗೃಹಮೇಧಿನಃ ॥ ೫೦ ॥**

**ತೇಷಾಂ ದ್ವಾದಶವಂಶಾಃ ಸ್ಯುರ್ದಿವ್ಯಾ ದೇವಗಣಾನ್ವಿತಾಃ ।**
**ಪ್ರಜಾವಂತಃ ಕ್ರಿಯಾವಂತೋ ಮಹರ್ಷಿಭಿರಲಂಕೃತಾಃ ॥ ೫೧ ॥**

---

೪೭. ಬ್ರಹ್ಮನ ಆ ಮಾತಿನಿಂದ ತ್ರಿಪುರಾರಿಯಾದ ಮಹೇಶ್ವರನು ಪ್ರಸನ್ನನಾಗಿ, ಅವನ ಮಾತನ್ನು ಕೇಳಿ. " ಹಾಗೇ ಆಗಲಿ " ಎಂದು ಒಪ್ಪಿಕೊಂಡು ಅವನಿಗೆ ಅನುಗ್ರಹಮಾಡಿದನು.

೪೮–೪೯. ಅನಂತರ ಬ್ರಹ್ಮನು ಸಂತೋಷದಿಂದ ಅವನನ್ನು ಹೊಗಳಿ ಅವನ ಅನುಮತಿಯಿಂದ ಹಿಂದಿನಂತೆಯೇ ಪ್ರಜೆಗಳನ್ನು ಸೃಷ್ಟಿಮಾಡಲು ಪ್ರಾರಂಭಿಸಿ ಮರೀಚಿ, ಭೃಗು, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ದಕ್ಷ, ಅತ್ರಿ, ವಸಿಷ್ಠ ಮೊದಲಾದ ಹನ್ನೆರಡು ಮಂದಿಯನ್ನು ತನ್ನ ಮನಸ್ಸಿನಿಂದಲೇ ಸೃಷ್ಟಿಮಾಡಿದನು. ಧರ್ಮ, ಸಂಕಲ್ಪ ಇವುಗಳನ್ನು ಮೊದಲು ಸೃಷ್ಟಿಮಾಡಿದನು.

೫೦-೫೧. ಈ ಹನ್ನೆರಡು ಜನಗಳೂ ಬ್ರಹ್ಮನ ಮಾನಸಪುತ್ರರು. ಇವರೆಲ್ಲರೂ ರುದ್ರನ ಜೊತೆಯಲ್ಲಿಯೇ ಹುಟ್ಟಿದವರು ಮೊದಲಿನಿಂದಲೂ ಇವರು ಗೃಹಸ್ಥರಾಗಿರುವರು. ಇವರ ವಂಶಗಳು ಹನ್ನೆರಡೂ ಪ್ರತ್ಯೇಕವಾಗಿರುವುವು. ಆ ವಂಶಗಳಲ್ಲಿ ಅನೇಕ ದೇವತೆಗಳೂ ಪ್ರಜೆಗಳೂ ನಿಯಮನಿಷ್ಠರಾದ ಮಹರ್ಷಿಗಳೂ ಅನೇಕರಿರುವರು.

**ಅಥ ದೇವಾಸುರಪಿತೄನ್ಮನುಷ್ಯಾಂಶ್ಚ ಚತುಷ್ಟಯಂ ।**
**ಸಹ ರುದ್ರೇಣ ಸಿಸೃಕ್ಷುರಂಭಸ್ಯೇತಾನಿ ವೈ ವಿಧಿಃ ॥ ೫೨ ॥**

**ಸ ಸೃಷ್ಟ್ಯರ್ಥಂ ಸಮಾಧಾಯ ಬ್ರಹ್ಮಾತ್ಮಾನಮಯೂಯುಜತ್ ।**
**ಮುಖಾದಜನಯದ್ದೇವಾನ್ಪಿತೄಂಶ್ಚೈವೋಪಪಕ್ಷತಃ ॥ ೫೩ ॥**

**ಜಘನಾದಸುರಾನ್ಸರ್ವಾನ್ಪ್ರಜನಾದಪಿ ಮಾನುಷಾನ್ ।**
**ಅವಸ್ಕರೇಕ್ಷುಧಾವಿಷ್ಟಾ ರಾಕ್ಷಸಾಸ್ತಸ್ಯ ಜಜ್ಞಿರೇ ॥ ೫೪ ॥**

**ಪುತ್ರಾಸ್ತಮೋರಜಃ ಪ್ರಾಯಾ ಬಲಿನಸ್ತೇ ನಿಶಾಚರಾಃ ।**
**ಸರ್ಪಾ ಯಕ್ಷಾಸ್ತಥಾ ಭೂತಾ ಗಂಧರ್ವಾಃ ಸಂಪ್ರಜಜ್ಞಿರೇ ॥ ೫೫ ॥**

**ವಯಾಂಸಿ ಪಕ್ಷತಸ್ಸೃಷ್ಟಾಃ ಪಕ್ಷಿಣೋ ವಕ್ಷಸೋಽಸೃಜತ್ ।**
**ಮುಖತೋಽಜಾಂಸ್ತಥಾ ಪಾರ್ಶ್ವಾದುರಗಾಂಶ್ಚ ವಿನಿರ್ಮಮೇ ॥ ೫೬ ॥**

---

೫೨. ಅನಂತರ ಬ್ರಹ್ಮನು ರುದ್ರನೊಡನೆ ಸೃಷ್ಟಿಮಾಡಲು ಇಚ್ಛೆಯುಳ್ಳವನಾಗಿ ದೇವತೆಗಳು, ಅಸುರರು, ಪಿತೃಗಳು, ಮನುಷ್ಯರು ಎಂಬ ನಾಲ್ಕುವಿಧ ಪ್ರಜೆಗಳನ್ನು ಸೃಷ್ಟಿಮಾಡುವ ಕಾರ್ಯದಲ್ಲಿ ಉದ್ಯುಕ್ತನಾದನು.

೫೩-೫೪. ತನ್ನ ಮುಖದಿಂದ ದೇವತೆಗಳನ್ನೂ, ಪಾರ್ಶ್ವದಿಂದ ಪಿತೃಗಳನ್ನೂ, ಕಟಿಪುರೋಭಾಗದಿಂದ ಅಸುರರನ್ನೂ, ಗುಹ್ಯೇಂದ್ರಿಯದಿಂದ ಮನುಷ್ಯರನ್ನೂ ನಿರ್ಮಿಸಿದನು. ಅವನ ಪೃಷ್ಠಭಾಗದಿಂದ ಯಾವಾಗಲೂ ಹಸಿವೆಯಿಂದ ಬಳಲುತ್ತಿರುವ ರಾಕ್ಷಸರು ಹುಟ್ಟಿದರು

೫೫-೫೬. ರಾಕ್ಷಸರಲ್ಲಿ ತಮೋಗುಣವೂ ರಜೋಗುಣವೂ ಹೆಚ್ಚಾಗಿರುವುದರಿಂದ ಅವರು ಬಲಶಾಲಿಗಳಾಗಿ ರಾತ್ರಿಯಲ್ಲಿಯೇ ಹೆಚ್ಚಾಗಿ ಸಂಚರಿಸುವ ಸ್ವಭಾವವುಳ್ಳವರಾಗಿ ಹುಟ್ಟಿದರು. ಹಾವುಗಳು, ಯಕ್ಷರು, ಭೂತಗಳು, ಗಂಧರ್ವರು ಇವರೂ ಬ್ರಹ್ಮನಿಂದಲೇ ಹುಟ್ಟಿದರು. ಹಕ್ಕಿಗಳು ಬ್ರಹ್ಮನ ಪಾರ್ಶ್ವಗಳಿಂದಲೂ, ಹೆಚ್ಚಾಗಿ ಎತ್ತರಕ್ಕೆ ಹಾರುವ ಹಕ್ಕಿಗಳು ಎದೆಯಿಂದಲೂ ಸೃಷ್ಟಿಮಾಡಲ್ಪಟ್ಟವು. ನಂತರ ಅವನು ಮುಖದಿಂದ ಆಡುಗಳನ್ನೂ, ಪಾರ್ಶ್ವಗಳಿಂದ ನೆಲದಲ್ಲಿ ಹರಿಯುವ ಹಾವೇ ಮೊದಲಾದ ಕ್ರಿಮಿಕೀಟಾದಿಗಳನ್ನೂ ನಿರ್ಮಿಸಿದನು.

**ಪದ್ಭ್ಯಾಂ ಚಾಶ್ವಾನ್ಸಮಾತಂಗಾನ್ ಶರಭಾನ್ಗವಯಾನ್ಮೃಗಾನ್ ।**
**ಉಷ್ಟ್ರಾನಶ್ವತರಾಂಶ್ಚೈವ ನ್ಯಂಕೂನನ್ಯಾಂಶ್ಚ ಜಾಯಗಃ ॥ ೫೭ ॥**

**ಔಷಧ್ಯಃ ಫಲಮೂಲಾನಿ ರೋಮಭ್ಯಸ್ತಸ್ಯ ಜಜ್ಞಿರೇ ।**
**ಗಾಯತ್ರೀಂ ಚ ಋಚಂ ಚೈವ ತ್ರಿವೃತ್ಸಾಮ ರಥಂತರಂ ॥ ೫೮ ॥**

**ಅಗ್ನಿಷ್ಟೋಮಂ ಚ ಯಜ್ಞಾನಾಂ ನಿರ್ಮಮೇ ಪ್ರಥಮಾನ್ಮುಖಾತ್ ।**
**ಯಜೂಂಷಿ ತ್ರೈಷ್ಟುಭಂ ಛಂದಃ ಸ್ತೋಮಂ ಪಂಚದಶಂ ತಥಾ ॥ ೫೯ ॥**

**ಬೃಹತ್ಸಾಮ ತಥೋಕ್ಥಂ ಚ ದಕ್ಷಿಣಾದಸೃಜನ್ಮುಖಾತ್ ।**
**ಸಾಮಾನಿ ಜಗತೀಛಂದಃಸ್ತೋಮಂ ಸಪ್ತದಶಂ ತಥಾ ॥ ೬೦ ॥**

---

೫೭-೫೮. ಅವನು ತನ್ನ ಕಾಲುಗಳಿಂದ ಕುದುರೆ, ಆನೆ, ಶರಭ, ಗವಯ, ಇತರ ಮೃಗಗಳು, ಹೆಬ್ಬಾವುಗಳು, ಹೇಸರಕತ್ತೆಗಳು, ಸಾರಗ, ಜಿಂಕೆ, ಇನ್ನೂ ಇತರ ವಿಧವಾದ ಪ್ರಾಣಿಗಳನ್ನೂ ನಿರ್ಮಿಸಿದನು. ಮೂಲಿಕೆಗಳು, ಹಣ್ಣುಬಿಡುವ ಗಿಡಗಳು, ಗೆಡ್ಡೆಯನ್ನು ಬಿಡುವ ಗಿಡಗಳು, ಇವುಗಳು ಅವನ ರೋಮಕೂಪಗಳಿಂದ ಹುಟ್ಟಿದವು. ಆ ಬ್ರಹ್ಮನು ತನ್ನ ಮೊದಲನೆಯ ಮುಖದಿಂದ ಗಾಯಿತ್ರಿಯನ್ನೂ, ಋಗ್ವೇದವನ್ನೂ, ತ್ರಿವೃತ್ಸ್ತೋಮ, ರಥಂತರವೆಂಬ ಸಾಮಗಾನಗಳನ್ನೂ ಅಗ್ನಿಷ್ಟೋಮವೆಂಬ ಯಾಗವನ್ನೂ ನಿರ್ಮಿಸಿದನು.

೫೯. ಅವನು ತನ್ನ ದಕ್ಷಿಣಮುಖದಿಂದ ಯಜುರ್ವೇದ, ತ್ರಿಷ್ಟುಪ್ ಛಂದಸ್ಸು, ಸ್ತೋಮ, ಪಂಚದಶಸಾಮ, ಬೃಹತ್ಸಾಮ, ಉಕ್ಥವೆಂಬಯಾಗ ಇವುಗಳನ್ನು ನಿರ್ಮಿಸಿದನು.

೬೦. ಸಾಮವೇದದಲ್ಲಿನ ಪ್ರಭೇದಗಳೂ, ಜಗತೀಛಂದಸ್ಸು, ಸಪ್ತದಶಸ್ತೋಮವೂ, ವೈರೂಪ್ಯವೆಂಬ ಸಾಮಪ್ರಭೇದವೂ, ಅತಿರಾತ್ರವೆಂಬ ಯಜ್ಞವೂ ಬ್ರಹ್ಮನ ಪಶ್ಚಿಮದಿಕ್ಕಿನ ಮುಖದಿಂದ ಹುಟ್ಟಿದುವು.

ವೈರೂಪ್ಯಮತಿರಾತ್ರಂ ಚ ಪಶ್ಚಿಮಾದಸೃಜನ್ಮುಖಾತ್ ।
ಏಕವಿಂಶಮಥರ್ವಾಣಮಾಪ್ತೋರ್ಯಾಮಾಣಮೇವ ಚ ॥ ೬೧ ॥

ಅನುಷ್ಟುಭಂ ಸ ವೈರಾಜಮುತ್ತರಾಜಸೃಜನ್ಮುಖಾತ್ ।
ಉಚ್ಚಾವಚಾನಿ ಭೂತಾನಿ ಗಾತ್ರೇಭ್ಯಸ್ತತ್ರ ಜಜ್ಞಿರೇ ॥ ೬೨ ॥

ಯಕ್ಷಾಃ ಪಿಶಾಚಾ ಗಂಧರ್ವಾಸ್ತಥೈವಾಪ್ಸರಸಾಂ ಗಣಾಃ ।
ನರಕಿನ್ನರರಕ್ಷಾಂಸಿ ವಯಃ ಪಶುಮೃಗೋರಗಾಃ ॥ ೬೩ ॥

ಅವ್ಯಯಂ ಚೈವ ಯದಿದಂ ಸ್ಥಾಣು ಸ್ಥಾವರಜಂಗಮಂ ।
ತೇಷಾಂ ವೈ ಯಾನಿ ಕರ್ಮಾಣಿ ಪ್ರಾಕ್ಸೃಷ್ಟಾನಿ ಪ್ರಪೇದಿರೇ ॥ ೬೪ ॥

ತಾನ್ಯೇವ ತೇ ಪ್ರಪದ್ಯಂತೇ ಸೃಜ್ಯಮಾನಾಃ ಪುನಃ ಪುನಃ ।
ಹಿಂಸ್ರಾಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮಾವೃತಾನೃತೇ ॥ ೬೫ ॥

---

೬೧. ಇಪ್ಪತ್ತೊಂದು ವಿಧವಾದ ಅಥರ್ವಣ ಮಂತ್ರಗಳೂ, ಅಪ್ತೋರ್ಯಾಮವೆಂಬ ಯಜ್ಞವೂ, ಅನುಷ್ಟುಪ್‌ಛಂದಸ್ಸು, ವೈರಾಜಸಾಮ ಇವುಗಳು ಬ್ರಹ್ಮನ ಉತ್ತರದಿಕ್ಕಿನ ಮುಖದಿಂದ ಹುಟ್ಟಿದುವು.

೬೨-೬೩. ಬಲದಿಂದಲೂ ದೇಹಪ್ರಮಾಣದಿಂದಲೂ ದೊಡ್ಡದಾದ ಪ್ರಾಣಿಗಳಲ್ಲಿ ಎಣಿಸಬಹುದಾದ ಯಕ್ಷರೂ, ಪಿಶಾಚಗಳೂ, ಗಂಧರ್ವರೂ, ಅಪ್ಸರಸ್ತ್ರೀಯರು, ಮನುಷ್ಯರು, ಕಿನ್ನರರು, ರಾಕ್ಷಸರು, ಹಕ್ಕಿಗಳು, ಪಶುಗಳು, ಮೃಗಗಳು, ಹಾವುಗಳು ಇವೆಲ್ಲವೂ ಆ ಬ್ರಹ್ಮನ ಶರೀರದಿಂದ ಹುಟ್ಟಿದುವು.

೬೪. ಸ್ಥಿರಚರಗಳಾಗಿರುವ ಈ ಪ್ರಾಣಿಗಳು ಮಾಡುತ್ತಿರುವ ಕಾರ್ಯಗಳೆಲ್ಲವೂ, ಹಿಂದಿನ ಸೃಷ್ಟಿಯಲ್ಲಿ ಅವುಗಳಿಗೆ ರೂಢಿಯಲ್ಲಿ ಬಂದವುಗಳೇ ಆಗಿರುವುದರಿಂದ ಈಗಿನ ಸೃಷ್ಟಿಯಲ್ಲಿಯೂ ಅವುಗಳನ್ನು ಅನುಸರಿಸಿ ಬಂದಿರುತ್ತವೆ.

೬೫-೬೬. ಆಯಾಯ ಪ್ರಾಣಿಗಳ ಜಾತಿಗೆ ಹಿಂದಿನ ಜನ್ಮದಿಂದಲೂ ಅನುಸರಿಸಿ ಬಂದಿರುವ ಧರ್ಮಗಳು ಈಗಲೂ ಅನುಸರಿಸಿಬಂದಿರುವವು. ಇತರರನ್ನು ಹಿಂಸೆಮಾಡುವರು, ಹಿಂಸೆಯನ್ನು ಮಾಡದಿರುವರು, ಕ್ರೂರಸ್ವಭಾವ, ಅಧರ್ಮದ

**ತದ್ಭಾವಿತಾಃ ಪ್ರಪದ್ಯಂತೇ ತಸ್ಮಾತ್ತತ್ತಸ್ಯ ರೋಚತೇ ।**
**ಮಹಾಭೂತೇಷು ನಾನಾತ್ವಮಿಂದ್ರಿಯಾರ್ಥೇಷು ಮುಕ್ತಿಷು ॥ ೬೬ ॥**

**ವಿನಿಯೋಗಂ ಚ ಭೂತಾನಾಂ ಧಾತೈವ ವ್ಯದಧತ್ಸ್ವಯಂ ।**
**ನಾಮ ರೂಪಂ ಚ ಭೂತಾನಾಂ ಪ್ರಾಕೃತಾನಾಂ ಪ್ರಪಂಚನಂ ॥ ೬೭ ॥**

**ವೇದ ಶಬ್ದೇಭ್ಯ ಏವಾದೌ ನಿರ್ಮನೋsಸೌ ಪಿತಾಮಹಃ ।**
**ಆರ್ಷಾಣಿ ಚೈವ ನಾಮಾನಿ ಯಾಶ್ಚ ವೇದೇಷು ವೃತ್ತಯಃ ॥ ೬೮ ॥**

**ಶರ್ವರ್ಯಂತೇ ಪ್ರಸೂತಾನಾಂ ತಾನ್ಯೇವೈಭ್ಯೋ ದದಾವಜಃ ।**
**ಯಥಾರ್ತಾವೃತುಲಿಂಗಾನಿ ನಾನಾರೂಪಾಣಿ ಪರ್ಯಯೇ ॥ ೬೯ ॥**

---

ಸ್ವಭಾವ, ಸುಳ್ಳುಹೇಳಿ ಜೀವಿಸುವುದು, ನಿಜವನ್ನು ಹೇಳುವುದು, ಮುಂತಾದ ಅನೇಕ ವಿಧವಾದ ಸ್ವಭಾವಗಳು ಹಿಂದಿನಂತೆ ಈಗಲೂ ಅವರವರಿಗೆ ಅನುಸರಿಸಿ ಬರುವವು. ಅದರಿಂದ ಅವರವರು ಆಯಾಯ ಸ್ವಭಾವವುಳ್ಳವರಾಗಿರುವರು.

೬೭-೬೮. ಇಂದ್ರಿಯಾದಿಗಳಿಂದ ವಿಷಯಾದಿಸುಖಗಳನ್ನು ಭೋಗಿಸುವುದಕ್ಕೂ ಕಡೆಗೆ ಮುಕ್ತಿಯನ್ನು ಪಡೆಯುವುದಕ್ಕೂ ಅನುಕೂಲವಾಗುವಂತೆ ಬ್ರಹ್ಮನು ಮಹಾಭೂತಗಳಿಂದ ಅನೇಕ ರೂಪಾಂತರಗಳನ್ನು ಎಂದರೆ ಭೇದಪ್ರಭೇದಾತ್ಮಕವಾದ ವಸ್ತುಗಳನ್ನು ತಾನೇ ಸೃಷ್ಟಿಮಾಡಿದನು. ಪ್ರಕೃತಿಯಿಂದ ಉಂಟಾದ ಮೊದಲಿನ ಸೃಷ್ಟಿಯಲ್ಲಿದ್ದಂತೆ ಆಯಾಯ ಪ್ರಾಣಿಗಳಿಗೆ ತಕ್ಕ ಆಕಾರಗಳನ್ನೂ, ಹೆಸರುಗಳನ್ನೂ ಆಯಾ ಯುಗಗಳನ್ನೂ ಋತುಧರ್ಮವನ್ನೂ ಅನುಸರಿಸಿ ವೇದದಲ್ಲಿ ಹೇಳಿರುವಂತೆ ಬ್ರಹ್ಮನು ನಿರ್ಮಿಸಿದನು. ವೇದಗಳಲ್ಲಿ ಯಾವ ಯಾವ ಹೆಸರುಗಳು ಋಷಿಗಳಿಂದ ನಿಶ್ಚಯಮಾಡಿ ಕೊಡಲ್ಪಟ್ಟಿರುತ್ತವೆಯೋ ಆಯಾಯ ಪ್ರಾಣಿಗಳಿಗೆ ಆಯಾಯ ಹೆಸರುಗಳನ್ನೂ ಕೂಡ ತನ್ನ ರಾತ್ರಿಯ ಕೊನೆಯಲ್ಲಿ ಹೊಸದಾಗಿ ಸೃಷ್ಟಿಯಾದ ಕಾಲದಲ್ಲಿ ಹಿಂದಿನಂತೆಯೇ ಇರುವಂತೆ ಮಾಡಿದನು.

೬೯-೭೦. ಆಯಾಯ ಯುಗಗಳ ಮೊದಲಿನಲ್ಲಿಯೂ, ಕೊನೆಯಲ್ಲಿಯೂ ಇರಬೇಕಾದ ಆಯಾಯ ಋತುಗಳ ಧರ್ಮಗಳನ್ನೂ ಅವುಗಳ ಹೆಸರುಗಳನ್ನೂ ಕೂಡ ಹಿಂದಿನಂತೆಯೇ, ಪ್ರಳಯವಾದ ನಂತರದ ಈ ಸೃಷ್ಟಿಯಲ್ಲಿಯೂ ಇರುವಂತೆ

**ದೃಶ್ಯಂತೇ ತಾನಿ ತಾನ್ಯೇವ ತಥಾ ಭಾವಾ ಯುಗಾದಿಷು ।**
**ಇತ್ಯೇಷ ಕರಣೋದ್ಭೂತೋ ಲೋಕಸರ್ಗಸ್ಸ್ವಯಂಭುವಃ ॥ ೭೦ ॥**

**ಮಹದಾದ್ಯೋ ವಿಶೇಷಾಂತೋ ವಿಕಾರಃ ಪ್ರಕೃತೇಃ ಸ್ವಯಂ ।**
**ಚಂದ್ರಸೂರ್ಯಪ್ರಭಾಜುಷ್ಟೋ ಗ್ರಹನಕ್ಷತ್ರಮಂಡಿತಃ ॥ ೭೧ ॥**

**ನದೀಭಿಶ್ಚ ಸಮುದ್ರೈಶ್ಚ ಪರ್ವತೈಶ್ಚ ಸ ಮಂಡಿತಃ ।**
**ಪುರೈಶ್ಚ ವಿವಿಧೈರಮ್ಯೈಃ ಸ್ಫೀತೈರ್ಜನಪದೈಸ್ತಥಾ ॥ ೭೨ ॥**

**ತಸ್ಮಿನ್ಬ್ರಹ್ಮವನೇಽವ್ಯಕ್ತೋ ಬ್ರಹ್ಮಾ ಚರತಿ ಸರ್ವವಿತ್ ।**
**ಅವ್ಯಕ್ತಬೀಜಪ್ರಭವ ಈಶ್ವರಾನುಗ್ರಹೇ ಸ್ಥಿತಃ ॥ ೭೩ ॥**

**ಬುದ್ಧಿಸ್ಕಂಧಮಹಾಶಾಖ ಇಂದ್ರಿಯಾಂತರಕೋಟರಃ ।**
**ಮಹಾಭೂತಪ್ರಮಾಣಶ್ಚ ವಿಶೇಷಾಮಲಪಲ್ಲವಃ ॥ ೭೪ ॥**

ನಿರ್ಮಿಸಿದನು. ಈ ಪ್ರಕಾರವಾಗಿ ಲೋಕಸೃಷ್ಟಿಯು ಬ್ರಹ್ಮನ ಅವಯವಗಳಿಂದ ಉಂಟಾಯಿತು.

೭೧-೭೨. ಮಹತ್ತತ್ವವೇ ಮೊದಲಾಗಿ ವಿಶೇಷ ಪದಾರ್ಥಗಳೇ ಕೊನೆಯಾಗಿರುವ ಸೃಷ್ಟಿಯೆಲ್ಲವೂ ಪ್ರಕೃತಿಯ ವಿಧವಿಧವಾದ ವಿಕಾರರೂಪಗಳಾಗಿರುವವು. ಈ ಸೃಷ್ಟಿಯಲ್ಲಿ ಚಂದ್ರ, ಸೂರ್ಯರು, ಗ್ರಹಗಳು, ನಕ್ಷತ್ರಗಳು, ನದಿಗಳು, ಸಮುದ್ರಗಳು, ಪರ್ವತಗಳು, ಫಲವತ್ತಾಗಿರುವ ದೇಶಗಳೂ, ಅನೇಕ ಪ್ರಕಾರದಿಂದ ಇರುವ ಸುಂದರವಾದ ನಗರಗಳು ಇರುವವು. ಇವೆಲ್ಲವೂ ಪ್ರಕೃತಿಯ ವಿಕಾರರೂಪಗಳೇ ಆಗಿರುವವು.

೭೩. ಈಶ್ವರನ ಅನುಗ್ರಹದಿಂದ, ಅವ್ಯಕ್ತದಿಂದ ಉತ್ಪನ್ನನಾದ, ಸರ್ವವನ್ನೂ ತಿಳಿದ ಈ ಬ್ರಹ್ಮನು ಬ್ರಹ್ಮರೂಪವಾದ ವನದಲ್ಲಿ ಸಂಚರಿಸುತ್ತಾ ಸುಖದಿಂದಿರುವನು.

೭೪-೭೫. ಈ ಬ್ರಹ್ಮನೆಂಬ ಮರವು ಎಲ್ಲಾ ಪ್ರಾಣಿಗಳಿಗೂ ವಾಸಕ್ಕನುಕೂಲವಾಗಿರುವುದು. ಈ ಮರಕ್ಕೆ ಬುದ್ಧಿಯು ದೊಡ್ಡ ಕೊಂಬೆಯಾಗಿಯೂ, ಇಂದ್ರಿಯಗಳೇ ಪೊಟ್ಟರೆಯಾಗಿಯೂ, ಮಹಾಭೂತಗಳು ಇದರ ದೊಡ್ಡ ಆಕಾರವಾಗಿಯೂ, ವಿಶೇಷಪದಾರ್ಥಗಳು ನಿರ್ಮಲವಾದ ಚಿಗುರುಗಳಾಗಿಯೂ ಇರುವುವು. ಈ ಮರದಲ್ಲಿ

**ಧರ್ಮಾಧರ್ಮಸುಪುಷ್ಪಾಢ್ಯಃ ಸುಖದುಃಖಫಲೋದಯಃ ।**
**ಆಜೀವ್ಯಃ ಸರ್ವಭೂತಾನಾಂ ಬ್ರಹ್ಮವೃಕ್ಷಃ ಸನಾತನಃ    ॥ ೭೫ ॥**

**ದ್ಯಾಂ ಮೂರ್ಧಾನಂ ತಸ್ಯ ವಿಪ್ರಾ ವದಂತಿ**
**ಖಂ ವೈ ನಾಭಿಂ ಚಂದ್ರಸೂರ್ಯೌ ಚ ನೇತ್ರೇ ।**
**ದಿಶಃ ಶ್ರೋತ್ರೇ ಚರಣೌ ಚ ಕ್ಷಿತಿಂ ಚ**
**ಸೋಽಚಿಂತ್ಯಾತ್ಮಾ ಸರ್ವಭೂತಪ್ರಣೇತಾ    ॥ ೭೬ ॥**

**ವಕ್ತ್ರಾತ್ತಸ್ಯ ಬ್ರಾಹ್ಮಣಾಸ್ಸಂಪ್ರಸೂತಾ-**
**ಸ್ತದ್ವಕ್ಷಸಃ ಕ್ಷತ್ರಿಯಾಃ ಪೂರ್ವಭಾಗಾತ್ ।**
**ವೈಶ್ಯಾ ಊರುಭ್ಯಾಂ ತಸ್ಯ ಪದ್ಭ್ಯಾಂ ಚ ಶೂದ್ರಾಃ**
**ಸರ್ವೇ ವರ್ಣಾ ಗಾತ್ರತಃ ಸಂಪ್ರಸೂತಾಃ    ॥ ೭೭ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ಸೃಷ್ಟಿವರ್ಣನಂ ನಾಮ ದ್ವಾದಶೋಽಧ್ಯಾಯಃ**

---

ಧರ್ಮ, ಅಧರ್ಮವೆಂಬ ಹೂವುಗಳು ಬಿಡುವುವು. ಸುಖ, ದುಃಖವೆಂಬ ಹಣ್ಣುಗಳು ಉಂಟಾಗುವುವು.

೭೬. ಈ ಅವ್ಯಕ್ತದಿಂದ ಹುಟ್ಟಿದ ಬ್ರಹ್ಮನ ಸ್ವರೂಪವು ವಿರಾಡ್ರೂಪದಿಂದ ಇರುವುದು. ಈ ವಿರಾಡ್ರೂಪದಿಂದ ಇರುವ ಇವನ ಶಿರಸ್ಸು ಸ್ವರ್ಗವೆಂಬುದಾಗಿಯೂ, ಅಂತರಿಕ್ಷವೇ ಇವನ ನಾಭಿಯೆಂತಲೂ, ಈ ರೂಪಕ್ಕೆ ಚಂದ್ರಸೂರ್ಯರೇ ಕಣ್ಣುಗಳೆಂತಲೂ, ದಿಕ್ಕುಗಳೆಲ್ಲವೂ ಕಿವಿಯೆಂತಲೂ, ಭೂಮಿಯು ಪಾದವೆಂತಲೂ ಋಷಿಗಳು ಹೇಳುವರು. ಯಾರಿಂದಲೂ ಊಹಿಸಲಶಕ್ಯನಾದ ರೂಪವುಳ್ಳ ಈ ಬ್ರಹ್ಮನೇ ಎಲ್ಲಾ ಪ್ರಾಣಿಗಳನ್ನೂ ನಿರ್ಮಿಸಿರುವನು.

೭೭. ಈ ಬ್ರಹ್ಮನ ಮುಖದಿಂದ ಬ್ರಾಹ್ಮಣರೂ, ಎದೆಯ ಮುಂಭಾಗದಿಂದ ಕ್ಷತ್ರಿಯರೂ, ತೊಡೆಗಳಿಂದ ವೈಶ್ಯರೂ, ಕಾಲುಗಳಿಂದ ಶೂದ್ರರೂ ಹುಟ್ಟಿರುವರು. ಈ ಪ್ರಕಾರವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಜಾತಿಗಳೆಲ್ಲವೂ ಈ ಬ್ರಹ್ಮನ ಶರೀರದಿಂದಲೇ ಹುಟ್ಟಿರುವುವು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಪೂರ್ವಭಾಗದಲ್ಲಿ ಸೃಷ್ಟಿವರ್ಣನವೆಂದು ಹೆಸರುಳ್ಳ ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ವಾಯುವೀಯಸಂಹಿತಾಯಾಂ ಪೂರ್ವಭಾಗೇ
## ತ್ರಯೋದಶೋಽಧ್ಯಾಯಃ

---

॥ ಋಷಯ ಊಚುಃ ॥

ಭವತಾ ಕಥಿತಾ ಸೃಷ್ಟಿರ್ಭವಸ್ಯ ಪರಮಾತ್ಮನಃ ।
ಚತುರ್ಮುಖಮುಖಾತ್ತಸ್ಯ ಸಂಶಯೋ ನಃ ಪ್ರಜಾಯತೇ ॥ ೧ ॥

ದೇವಶ್ರೇಷ್ಠೋ ವಿರೂಪಾಕ್ಷೋ ದೀಪ್ತಶೂಲಧರೋ ಹರಃ ।
ಕಾಲಾತ್ಮಾ ಭಗವಾನ್ರುದ್ರಃ ಕಪರ್ದೀ ನಿಲಲೋಹಿತಃ ॥ ೨ ॥

---

## ಹದಿಮೂರನೆಯ ಅಧ್ಯಾಯವು

೧. ಋಷಿಗಳು ಹೇಳಿದರು :—ಪರಮಾತ್ಮನಾಗಿರುವ ಶಿವನು ಮಾಡಿದ ಸೃಷ್ಟಿಯು ಚತುರ್ಮುಖ ಬ್ರಹ್ಮನ ಮೂಲಕವಾಗಿ ಪ್ರಕಾಶವಾದ ಕ್ರಮವನ್ನು ನೀನು ಇದುವರಿಗೆ ಹೇಳಿದೆ. ಈ ವಿಷಯದಲ್ಲಿ ನಮಗೆ ಸಂಶಯವು ಉಂಟಾಗಿರುವುದು.

೨. ದೇವತೆಗಳಲ್ಲಿ ಉತ್ತಮನೂ ತ್ರಿಲೋಚನನೂ ಆದ ಶಿವನು, ಪ್ರಕಾಶಿಸುತ್ತಿರುವ ತ್ರಿಶೂಲವನ್ನು ಧರಿಸಿ ಷಡ್ಗುಣೈಶ್ವರ್ಯಸಂಪನ್ನನಾಗಿಯೂ, ಜಟಾಧಾರಿಯಾಗಿಯೂ, ನೀಲಲೋಹಿತರೂಪವುಳ್ಳವನಾಗಿಯೂ ಕಾಲರೂಪದಿಂದ ಬೆಳಗುತ್ತಿರುವನು.

ಸಬ್ರಹ್ಮಕಮಿಮಂ ಲೋಕಂ ಸವಿಷ್ಣುಮಪಿ ಪಾವಕಂ ।
ಯಃ ಸಂಹರತಿ ಸಂಕ್ರುದ್ಧೋ ಯುಗಾಂತೇ ಸಮುಪಸ್ಥಿತೇ ॥ ೩ ॥

ಯಸ್ಯ ಬ್ರಹ್ಮಾ ಚ ವಿಷ್ಣುಶ್ಚ ಪ್ರಣಾಮಂ ಕುರುತೋ ಭಯಾತ್ ।
ಲೋಕಸಂಕೋಚಕಸ್ಯಾಸ್ಯ ಯಸ್ಯ ತೌ ವಶವರ್ತಿನೌ ॥ ೪ ॥

ಯೋಽಯಂ ದೇವಃ ಸ್ವಕಾದಂಗಾದ್ಬ್ರಹ್ಮವಿಷ್ಣೂ ಪುರಾಸೃಜತ್ ।
ಸ ಏವ ಹಿ ತಯೋರ್ನಿತ್ಯಂ ಯೋಗಕ್ಷೇಮಕರಃ ಪ್ರಭುಃ ॥ ೫ ॥

ಸ ಕಥಂ ಭಗವಾನ್ರುದ್ರ ಆದಿದೇವಃ ಪುರಾತನಃ ।
ಪುತ್ರತ್ವಮಗಮಚ್ಛಂಭುರ್ಬ್ರಹ್ಮಣೋಽವ್ಯಕ್ತಜನ್ಮನಃ ॥ ೬ ॥

ಪ್ರಜಾಪತಿಶ್ಚ ವಿಷ್ಣುಶ್ಚ ರುದ್ರಸ್ಯೈತೌ ಪರಸ್ಪರಂ ।
ಸೃಷ್ಟೌ ಪರಸ್ಪರಸ್ಯಾಂಗಾದಿತಿ ಪ್ರಾಗಪಿ ಶುಶ್ರುಮ ॥ ೭ ॥

ಕಥಂ ಪುನರಶೇಷಾಣಾಂ ಭೂತಾನಾಂ ಹೇತುಭೂತಯೋಃ ।
ಗುಣಪ್ರಧಾನಭಾವೇನ ಪ್ರಾದುರ್ಭಾವಃ ಪರಸ್ಪರಾತ್ ॥ ೮ ॥

---

೩-೫. ಯುಗಾವಸಾನ ಕಾಲದಲ್ಲಿ ಆ ಶಿವನು ಬ್ರಹ್ಮ, ವಿಷ್ಣು, ಅಗ್ನಿಗಳನ್ನೂ ಎಲ್ಲಾ ಲೋಕಗಳನ್ನೂ ಕೋಪದಿಂದ ನಾಶಮಾಡುವನು. ವಿಷ್ಣುವೂ, ಬ್ರಹ್ಮನೂ ಕೂಡ ಇವನಿಗೆ ಭಯದಿಂದ ನಮಸ್ಕಾರವನ್ನು ಮಾಡುವರು. ಲೋಕಗಳನ್ನು ನಾಶಮಾಡುವ ಈ ರುದ್ರನಿಗೆ ಇವರಿಬ್ಬರೂ ಅಧೀನರಾಗಿರುವರು. ಈ ದೇವನು ತನ್ನ ಶರೀರದಿಂದ ಮೊದಲು ಬ್ರಹ್ಮ, ವಿಷ್ಣು ಇವರಿಬ್ಬರನ್ನೂ ನಿರ್ಮಿಸಿರುವನು. ಈ ರುದ್ರನು ತಾನೇ ಇವರಿಗೆ ಪ್ರಭುವಾಗಿ ಯಾವಾಗಲೂ ಇವರ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುತ್ತಿರುವನು. ಈ ವಿಷಯಗಳನ್ನೆಲ್ಲಾ ನಾವು ತಿಳಿದುಕೊಂಡೆವು.

೬. ಈಗ ಪುರಾತನನೂ ಆದಿದೇವನೂ ಆದ ಭಗವಾನ್ ರುದ್ರನು ಅವ್ಯಕ್ತದಿಂದ ಹುಟ್ಟಿದ ಬ್ರಹ್ಮನಿಗೆ ಪುತ್ರನಾದನೆಂದು ಹೇಳುವಿಯಲ್ಲಾ. ಅದು ಹೇಗೆ ?

೭-೮ ರುದ್ರನ ಅಂಗದಿಂದ ಬ್ರಹ್ಮನೂ, ವಿಷ್ಣುವೂ ಇವರಿಬ್ಬರೂ ಅನ್ಯೋನ್ಯವಾಗಿ ಹುಟ್ಟಿದರೆಂದು ಹಿಂದೆ ಕೇಳಿರುತ್ತೇವೆ. ಹೀಗಿರುವಲ್ಲಿ ಎಲ್ಲಾ ಪ್ರಾಣಿಗಳಿಗೂ ಕಾರಣರಾದ ಇವರಿಬ್ಬರೂ ಎಲ್ಲಾ ವಿಷಯಗಳಲ್ಲಿಯೂ ಸಮರಷ್ಟೆ ? ಇವರ ಅಧಿಕಾರ ವ್ಯಾಪ್ತಿಯೂ ಸಮನಾಗಿಯೇ ಇರುವುದು. ಹೀಗಿರುವಲ್ಲಿ ಒಬ್ಬರಿಂದ ಒಬ್ಬರು

**ನಾಪೃಷ್ಟಂ ಭವತಾ ಕಿಂಚಿನ್ನಾಶ್ರುತಂ ಚ ಕಥಂಚನ ।**
**ಭಗವಚ್ಛಿಷ್ಯಭೂತೇನ ಭವತಾ ಸಕಲಂ ಸ್ಮೃತಂ ॥ ೯ ॥**

**ತತ್ತ್ವಂ ವದ ಯಥಾ ಬ್ರಹ್ಮಾ ಮುನೀನಾಮುವದದ್ವಿಭುಃ ।**
**ವಯಂ ಶ್ರದ್ಧಾಲವಸ್ತಾತ ಶ್ರೋತುಮೀಶ್ವರಸದ್ಯಶಃ ॥ ೧೦ ॥**

**॥ ವಾಯುರುವಾಚ ॥**

**ಸ್ಥಾನೇ ಪೃಷ್ಟಮಿದಂ ವಿಪ್ರಾ ಭವದ್ಭಿಃ ಪ್ರಶ್ನಕೋವಿದೈಃ ।**
**ಇದಮೇವ ಪುರಾ ಪೃಷ್ಟೋ ಮಮ ಪ್ರಾಹ ಪಿತಾಮಹಃ ॥ ೧೧ ॥**

**ತದಹಂ ಸಂಪ್ರವಕ್ಷ್ಯಾಮಿ ಯಥಾ ರುದ್ರಸಮುದ್ಭವಃ ।**
**ಯಥಾ ಚ ಪುನರುತ್ಪತ್ತಿರ್ಬ್ರಹ್ಮವಿಷ್ಣ್ವೋಃ ಪರಸ್ಪರಂ ॥ ೧೨ ॥**

**ತ್ರಯಸ್ತೇ ಕಾರಣಾತ್ಮಾನೋ ಜಾತಾಸ್ಸಾಕ್ಷಾನ್ಮಹೇಶ್ವರಾತ್ ।**
**ಚರಾಚರಸ್ಯ ವಿಶ್ವಸ್ಯ ಸರ್ಗಸ್ಥಿತ್ಯಂತಹೇತವಃ ॥ ೧೩ ॥**

---

ಹುಟ್ಟಿದರು ಎಂದು ಹೇಳುವುದು ಹೇಗೆ ಸಮಂಜಸವಾಗುವುದು ? ನೀನು ಎಲ್ಲವನ್ನೂ ತಿಳಿದಿರುವೆ. ಯಾವುದನ್ನೂ ಯಾರನ್ನೂ ಕೇಳಬೇಕಾಗಿಲ್ಲ. ನಿನಗೆ ತಿಳಿಯದಿರುವುದು ಯಾವುದೂ ಇಲ್ಲವು. ಷಡ್ಗುಣೈಶ್ವರ್ಯಸಂಪನ್ನನಾದ ವ್ಯಾಸಋಷಿಗೆ ಶಿಷ್ಯನಾದ ನಿನಗೆ ಎಲ್ಲವೂ ತಿಳಿದೇ ಇರುವುದು. ಆದುದರಿಂದ,

೧೦. ಮಹಾಮಹಿಮನಾದ ಬ್ರಹ್ಮನು ಮುನಿಗಳಿಗೆ ಈ ವಿಷಯದಲ್ಲಿ ಹೇಳಿರುವ ಕ್ರಮವನ್ನೂ, ತತ್ವವನ್ನೂ ನಮಗೆ ತಿಳಿಸು. ಈಶ್ವರನ ಉತ್ತಮವಾದ ಕಥೆಯನ್ನು ಕೇಳುವುದರಲ್ಲಿ ನಾವುಗಳು ಬಹಳ ಆಸಕ್ತಿಯಿಂದ ಇರುವೆವು ಎಂದರು.

೧೧-೧೨. ವಾಯುದೇವನಿಂತೆಂದನು :—ಎಲೈ ಋಷಿಗಳಿರಾ! ಪ್ರಶ್ನೆಮಾಡುವುದರಲ್ಲಿ ನಿಪುಣರಾದ ನೀವು ನ್ಯಾಯವಾಗಿಯೇ ಪ್ರಶ್ನೆಯನ್ನು ಮಾಡಿರುವಿರಿ. ನಾನು ಬ್ರಹ್ಮನನ್ನು ಈ ವಿಷಯವಾಗಿ ಪ್ರಶ್ನೆಮಾಡಿದೆನು. ಅವನು ನನಗೆ ರುದ್ರನು ಹುಟ್ಟಿದ ಕ್ರಮವನ್ನು ಹೇಳಿದನು. ಅದನ್ನೇ ನಾನು ಹೇಳುವೆನು. ಬ್ರಹ್ಮ, ವಿಷ್ಣು ಇವರಿಬ್ಬರೂ ಅನ್ಯೋನ್ಯವಾಗಿ ಹುಟ್ಟಿದ ಕ್ರಮವನ್ನೂ ಹೇಳುವೆನು.

೧೩. ಬ್ರಹ್ಮ, ವಿಷ್ಣು, ರುದ್ರರೆಂಬ ಈ ಮೂರುಜನ ದೇವತೆಗಳು ಮಹೇಶ್ವರನಿಂದ (ಸಾಕ್ಷಾತ್ತಾಗಿ) ಹುಟ್ಟಿದರು. ಇವರು ಎಲ್ಲಕ್ಕೂ ಕಾರಣರೂಪದಿಂದ ಇರುವರು.

**ಪರಮೇಶ್ವರ್ಯಸಂಯುಕ್ತಾಃ ಪರಮೇಶ್ವರಭಾವಿತಾಃ ।**
**ತಚ್ಛಕ್ತ್ಯಧಿಷ್ಠಿತಾ ನಿತ್ಯಂ ತತ್ಕಾರ್ಯಕರಣಕ್ಷಮಾಃ ॥ ೧೪ ॥**

**ಪಿತ್ರಾ ನಿಯಮಿತಾಃ ಪೂರ್ವಂ ತ್ರಯೋಽಪಿ ತ್ರಿಷು ಕರ್ಮಸು ।**
**ಬ್ರಹ್ಮಾ ಸರ್ಗೇ ಹರಿಸ್ತ್ರಾಣೇ ರುದ್ರಃ ಸಂಹರಣೇ ತಥಾ ॥ ೧೫ ॥**

**ತಥಾಪ್ಯನ್ಯೋನ್ಯಮಾತ್ಸರ್ಯಾದನ್ಯೋನ್ಯಾತಿಶಯಾಶಿನಃ ।**
**ತಪಸಾ ತೋಷಯಿತ್ವಾ ಸ್ವಂ ಪಿತರಂ ಪರಮೇಶ್ವರಂ ॥ ೧೬ ॥**

**ಲಬ್ಧ್ವಾ ಸರ್ವಾತ್ಮನಾ ತಸ್ಯ ಪ್ರಸಾದಾತ್ಪರಮೇಷ್ಠಿನಃ ।**
**ಬ್ರಹ್ಮನಾರಾಯಣೌ ಪೂರ್ವಂ ರುದ್ರಃ ಕಲ್ಪಾಂತರೇಽಸೃಜತ್ ॥ ೧೭ ॥**

**ಕಲ್ಪಾಂತರೇ ಪುನರ್ಬ್ರಹ್ಮಾ ರುದ್ರವಿಷ್ಣೂ ಜಗನ್ಮಯಃ ।**
**ವಿಷ್ಣುಶ್ಚ ಭಗವಾನ್ರುದ್ರಂ ಬ್ರಹ್ಮಾಣಮಸೃಜತ್ಪುನಃ ॥ ೧೮ ॥**

---

ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣವಾಗಿರುವರು.

೧೪. ಇವರು ಪರಮೇಶ್ವರನ ಭಾವನೆಯನ್ನು ಹೊಂದಿ ಆ ಸಾಮರ್ಥ್ಯದಿಂದ ಅಣಿಮಾದಿಸಿದ್ಧಿಗಳನ್ನು ಪಡೆದು, ಶಿವನ ಶಕ್ತಿಯ ಆಶ್ರಯದಿಂದ ಯಾವಾಗಲೂ ತಮ್ಮ ತಮ್ಮ ಕೆಲಸಗಳನ್ನು ಮಾಡಲು ಸಮರ್ಥರಾಗಿರುವರು.

೧೫. ಈ ಮೂರು ಜನರೂ ಮಹೇಶ್ವರನಿಂದ ಮೊದಲು ಮೂರು ಕೆಲಸಗಳಲ್ಲಿ ನಿಯಮಿಸಲ್ಪಟ್ಟಿರುವರು. ಬ್ರಹ್ಮನು ಸೃಷ್ಟಿಯಲ್ಲಿಯೂ, ವಿಷ್ಣುವು ಪಾಲನೆಯಲ್ಲಿಯೂ, ರುದ್ರನು ಸಂಹಾರ ಕರ್ಮದಲ್ಲಿಯೂ ನಿಯಮಿಸಲ್ಪಟ್ಟು ಆಯಾ ಕರ್ಮಗಳಲ್ಲಿ ನಿರತರಾಗಿದ್ದಾಗ್ಯೂ ಒಬ್ಬರನ್ನೊಬ್ಬರು ಮೀರಿಸಬೇಕೆಂಬ ಆಸೆಯಿಂದ ಕೊಂಚ ಮಟ್ಟಿನ ಅಸೂಯೆಯಿಂದ ಕೂಡಿದ್ದರು.

೧೬-೧೭. ಹಿಂದೆ ಒಂದು ಕಲ್ಪದಲ್ಲಿ ರುದ್ರನು ತನಗೆ ಕಾರಣನಾದ ಪರಮೇಶ್ವರನನ್ನು ತಪಸ್ಸಿನಿಂದ ಸಂತೋಷಪಡಿಸಿ ಅವನ ಅನುಗ್ರಹದಿಂದ ಬ್ರಹ್ಮ ಮತ್ತು ವಿಷ್ಣು ಇವರನ್ನು ಸೃಷ್ಟಿಮಾಡಿದನು.

೧೮. ಇನ್ನೊಂದು ಕಲ್ಪದಲ್ಲಿ ಬ್ರಹ್ಮನು ಈಶನ ಅನುಗ್ರಹದಿಂದ ತಾನು ಜಗದ್ರೂಪವನ್ನು ತಾಳಿ ವಿಷ್ಣು, ರುದ್ರರನ್ನು ಸೃಷ್ಟಿಮಾಡಿದನು. ಅದರಂತೆಯೇ

**ನಾರಾಯಣಂ ಪುನರ್ಬ್ರಹ್ಮಾ ಬ್ರಹ್ಮಾಣಂ ಚ ಪುನರ್ಭವಃ ।**
**ಏವಂ ಕಲ್ಪೇಷು ಕಲ್ಪೇಷು ಬ್ರಹ್ಮವಿಷ್ಣುಮಹೇಶ್ವರಾಃ ॥ ೧೯ ॥**

**ಪರಸ್ಪರೇಣ ಜಾಯಂತೇ ಪರಸ್ಪರಹಿತೈಷಿಣಃ ।**
**ತತ್ತತ್ಕಲ್ಪಾಂತವೃತ್ತಾಂತಮಧಿಕೃತ್ಯ ಮಹರ್ಷಿಭಿಃ ॥ ೨೦ ॥**

**ಪ್ರಭಾವಃ ಕಥ್ಯತೇ ತೇಷಾಂ ಪರಸ್ಪರಸಮುದ್ಭವಾತ್ ।**
**ಶೃಣು ತೇಷಾಂ ಕಥಾಂ ಚಿತ್ರಾಂ ಪುಣ್ಯಾಂ ಪಾಪಪ್ರಮೋಚಿನೀಂ ॥ ೨೧ ॥**

**ಕಲ್ಪೇ ತತ್ಪುರುಷೇ ವೃತ್ತಾಂ ಬ್ರಹ್ಮಣಃ ಪರಮೇಷ್ಠಿನಃ ।**
**ಪುರಾ ನಾರಾಯಣೋ ನಾಮ ಕಲ್ಪೇ ವೈ ಮೇಘವಾಹನೇ ॥ ೨೨ ॥**

**ದಿವ್ಯಂ ವರ್ಷಸಹಸ್ರಂ ತು ಮೇಘೋ ಭೂತ್ವಾವಹದ್ಧರಾಂ ।**
**ತಸ್ಯ ಭಾವಂ ಸಮಾಲಕ್ಷ್ಯ ವಿಷ್ಣೋರ್ವಿಶ್ವಜಗದ್ಗುರುಃ ॥ ೨೩ ॥**

---

ವಿಷ್ಣುವೂ ಷಡ್ಗುಣೈಶ್ವರ್ಯಸಂಪನ್ನನಾಗಿ ಮತ್ತೊಂದು ಕಲ್ಪದಲ್ಲಿ ಬ್ರಹ್ಮ, ರುದ್ರರಿಬ್ಬರನ್ನೂ ನಿರ್ಮಿಸಿದನು.

೧೯-೨೦. ನಾರಾಯಣನನ್ನು ಬ್ರಹ್ಮನೂ, ಬ್ರಹ್ಮನನ್ನು ರುದ್ರನೂ ಸೃಷ್ಟಿ ಮಾಡುತ್ತಿರುವರು. ಹೀಗೆಯೇ ಆಯಾಯ ಕಲ್ಪಗಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರು ಅನ್ಯೋನ್ಯನಾಗಿ ಹಿತವನ್ನುಂಟುಮಾಡಿಕೊಳ್ಳಲು ಅನ್ಯೋನ್ಯವಾಗಿ ಹುಟ್ಟುತ್ತಿರುವರು. ಮಹರ್ಷಿಗಳು ಆಯಾಯ ಕಲ್ಪದ ವಿಚಾರಕ್ಕನುಸಾರವಾಗಿ ಅವರವರ ಮಹಿಮೆಗಳನ್ನು ಅವರ ಜನ್ಮಕ್ಕನುಸಾರವಾಗಿ ಹೇಳುತ್ತಿರುವರು.

೨೧-೨೨. ಈ ವಿಷಯದಲ್ಲಿ ಪಾಪಗಳನ್ನು ನಾಶಮಾಡುವ, ಪವಿತ್ರಕರವಾದ ಒಂದು ಕಥೆಯನ್ನು ಹೇಳುವೆನು ಕೇಳು. ಈ ಕಥೆಯು ತತ್ಪುರುಷವೆಂಬ ಕಲ್ಪದಲ್ಲಿ ನಡೆದಿರುವುದು. ಇದು ಬ್ರಹ್ಮನಿಗೆ ಸಂಬಂಧಪಟ್ಟ ಕಥೆಯು. ಪೂರ್ವದಲ್ಲಿ ಮೇಘವಾಹನವೆಂಬ ಕಲ್ಪದಲ್ಲಿ ನಾರಾಯಣನು ದೇವಮಾನದಿಂದ ಸಾವಿರ ವರ್ಷಗಳ ಪರ್ಯಂತರ ಮೇಘರೂಪದಿಂದ ಭೂಮಿಯನ್ನು ಧರಿಸಿದ್ದನು. ಆಗ ಜಗತ್ತಿಗೆಲ್ಲಕ್ಕೂ ಗುರುವಾದ ಮಹೇಶ್ವರನು ಅವನ ಅಭಿಪ್ರಾಯವನ್ನು ತಿಳಿದು ಅವನಿಗೆ ಸರ್ವಾತ್ಮಭಾವವುಂಟಾಗುವಂತೆ ಪೂರ್ಣವಾದ ಸಾಮರ್ಥ್ಯವನ್ನು ಅನುಗ್ರಹಿಸಿದನು.

೨೩-೨೫. ಆಗ ವಿಷ್ಣುವು ಎಲ್ಲಕ್ಕೂ ಅಧಿಪತಿಯಾದ ಮಹೇಶ್ವರನಿಂದ ಸರ್ವಾತ್ಮಭಾವವನ್ನು ಪಡೆದು, ಬ್ರಹ್ಮನಿಂದ ಸಹಿತವಾದ ಈ ಪ್ರಪಂಚವೆಲ್ಲವನ್ನೂ

**ಸರ್ವಸ್ಸರ್ವಾತ್ಮಭಾವೇನ ಪ್ರದದೌ ಶಕ್ತಿಮವ್ಯಯಾಂ ।**
**ಶಕ್ತಿಂ ಲಬ್ಧ್ವಾ ತು ಸರ್ವಾತ್ಮಾ ಶಿವಾತ್ಸರ್ವೇಶ್ವರಾತ್ತದಾ ॥ ೨೪ ॥**

**ಸಸರ್ಜ ಭಗವಾನ್ವಿಷ್ಣುರ್ವಿಶ್ವಂ ವಿಶ್ವಸೃಜಾ ಸಹ ।**
**ವಿಷ್ಣೋಸ್ತದ್ವೈಭವಂ ದೃಷ್ಟ್ವಾ ಸೃಷ್ಟಸ್ತೇನ ಪಿತಾಮಹಃ ॥ ೨೫ ॥**

**ಈರ್ಷ್ಯಯಾ ಪರಯಾ ಗ್ರಸ್ತಃ ಪ್ರಹಸನ್ನಿದಮಬ್ರವೀತ್ ।**
**ಗಚ್ಛ ವಿಷ್ಣೋ ಮಯಾ ಜ್ಞಾತಂ ತವ ಸರ್ಗಸ್ಯ ಕಾರಣಂ ॥**
**ಆವಯೋರಧಿಕಶ್ಚಾಸ್ತಿ ಸ ರುದ್ರೋ ನಾತ್ರ ಸಂಶಯಃ ॥ ೨೬ ॥**

**ತಸ್ಯ ದೇವಾಧಿದೇವಸ್ಯ ಪ್ರಸಾದಾತ್ಪರಮೇಷ್ಠಿನಃ ।**
**ಸ್ರಷ್ಟಾ ತ್ವಂ ಭಗವಾನದ್ಯ ಪಾಲಕಃ ಪರಮಾರ್ಥತಃ ॥ ೨೭ ॥**

**ಅಹಂ ಚ ತಪಸಾರಾಧ್ಯ ರುದ್ರಂ ತ್ರಿದಶನಾಯಕಂ ।**
**ತ್ವಯಾ ಸಹ ಜಗತ್ಸರ್ವಂ ಸ್ರಕ್ಷ್ಯಾಮ್ಯತ್ರ ನ ಸಂಶಯಃ ॥ ೨೮ ॥**

**ಏವಂ ವಿಷ್ಣುಮುಪಾಲಭ್ಯ ಭಗವಾನಬ್ಜಸಂಭವಃ ।**
**ಏವಂ ವಿಜ್ಞಾಪಯಾಮಾಸ ತಪಸಾ ಪ್ರಾಪ್ಯ ಶಂಕರಂ ॥ ೨೯ ॥**

---

ಸೃಷ್ಟಿಮಾಡಿದನು. ವಿಷ್ಣುವಿನಿಂದ ಸೃಷ್ಟಿಮಾಡಲ್ಪಟ್ಟ ಬ್ರಹ್ಮನು ವಿಷ್ಣುವಿನ ಆ ಮಹಿಮೆಯನ್ನು ನೋಡಿ ಅಸೂಯಾಪರವಶನಾಗಿ ನಸುನಗುತ್ತಾ,

೨೬-೨೮. ಎಲೈ ವಿಷ್ಣುವೇ ! ನಾಕು ಸುಮ್ಮನಿರು. ಹೆಮ್ಮೆಪಡಬೇಡ. ನಿನಗೆ ಸೃಷ್ಟಿಮಾಡುವ ಸಾಮರ್ಥ್ಯವಿರುವುದಕ್ಕೆ ಕಾರಣವನ್ನು ನಾನು ಬಲ್ಲೆನು. ನಮ್ಮಿಬ್ಬರಿಗಿಂತಲೂ ಹೆಚ್ಚಾದ ಮಹಿಮೆಯುಳ್ಳ ರುದ್ರನು ಇರುವುದರಲ್ಲಿ ಸಂಶಯವಿಲ್ಲ. ಪರಮಾತ್ಮನಾದ ಆ ದೇವದೇವನ ಅನುಗ್ರಹದಿಂದ ನೀನು ಸೃಷ್ಟಿಯನ್ನು ಮಾಡಿರುವೆ. ನಿಜವಾಗಿಯೂ ಷಡ್ಗುಣೈಶ್ವರ್ಯಸಂಪನ್ನನಾದ ಅವನೇ ಎಲ್ಲವನ್ನೂ ಕಾಪಾಡುವನು. ನಾನೂ ಕೂಡ ದೇವತೆಗಳಿಗೆ ಅಧಿಪತಿಯಾದ ರುದ್ರನನ್ನು ತಪಸ್ಸಿನಿಂದ ಸಂತೋಷಪಡಿಸಿ ಜಗತ್ತೆಲ್ಲವನ್ನೂ ಸೃಷ್ಟಿಮಾಡುವೆನು. ಇದರಲ್ಲಿ ಸಂಶಯವಿಲ್ಲ ಎಂದನು.

೨೯-೩೦. ಕಮಲಸಂಭವನಾದ ಆ ಬ್ರಹ್ಮನು ವಿಷ್ಣುವನ್ನು ಹೀಗೆ ನಿಂದೆಮಾಡಿದ ನಂತರ ಶಿವನನ್ನು ಕುರಿತು ತಪಸ್ಸನ್ನು ಮಾಡಿ ಅವನು ಪ್ರತ್ಯಕ್ಷವಾದ

**ಭಗವನ್ದೇವದೇವೇಶ ವಿಶ್ವೇಶ್ವರ ಮಹೇಶ್ವರ ।**
**ತವ ವಾಮಾಂಗಜೋ ವಿಷ್ಣುರ್ದಕ್ಷಿಣಾಂಗಭವೋ ಹ್ಯಹಂ ॥ ೩೦ ॥**

**ಮಯಾ ಸಹ ಜಗತ್ಸರ್ವಂ ತಥಾಪ್ಯಸೃಜದಚ್ಯುತಃ ।**
**ಸ ಮತ್ಸರಾದುಪಾಲಬ್ಧಸ್ತ್ವದಾಶ್ರಯಬಲಾನ್ಮಯಾ ॥ ೩೧ ॥**

**ಮದ್ಭಾವಾನ್ನಾಧಿಕಸ್ತೇತಿಭಾವಸ್ತ್ವಯಿ ಮಹೇಶ್ವರೇ ।**
**ತ್ವತ್ತ ಏವ ಸಮುತ್ಪತ್ತಿರಾವಯೋಸ್ಸದೃಶೀ ಯತಃ ॥ ೩೨ ॥**

**ತಸ್ಯ ಭಕ್ತ್ಯಾ ಯಥಾಪೂರ್ವಂ ಪ್ರಸಾದಂ ಕೃತವಾನಸಿ ।**
**ತಥಾ ಮಮಾಪಿ ತತ್ಸರ್ವಂ ದಾತುಮರ್ಹಸಿ ಶಂಕರ ॥ ೩೩ ॥**

**ಇತಿ ವಿಜ್ಞಾಪಿತಸ್ತೇನ ಭಗವಾನ್ಭಗನೇತ್ರಹಾ ।**
**ನ್ಯಾಯೇನ ವೈ ದದೌ ಸರ್ವಂ ತಸ್ಯಾಪಿ ಸ ಘೃಣಾನಿಧಿಃ ॥ ೩೪ ॥**

---

ನಂತರ, ಎಲೈ ಷಡ್ಗುಣೈಶ್ವರ್ಯ ಸಂಪನ್ನನಾದ ದೇವದೇವನೇ ! ನೀನು ಪ್ರಪಂಚಕ್ಕೆಲ್ಲಕ್ಕೂ ಅಧಿಪತಿಯು. ಮಹೇಶ್ವರನು. ನಾನು ನಿನ್ನ ದೇಹದ ಬಲಭಾಗದಿಂದ ಹುಟ್ಟಿರುವೆನು. ವಿಷ್ಣುವು ಎಡಭಾಗದಿಂದ ಹುಟ್ಟಿರುವನು. ಆದುದರಿಂದ ನಾವಿಬ್ಬರೂ ಸರಿಸಮಾನರಾದ ಹಾಗಾಯಿತು. ಆದಾಗ್ಯೂ ಅವನು ನನ್ನಿಂದ ಕೂಡಿದ ಈ ಜಗತ್ತನ್ನು ನಿರ್ಮಿಸಿರುವನು.

೩೧–೩೩. ನಿನ್ನ ಆಶ್ರಯದ ಬಲವು ಇರುವುದೆಂಬ ಬುದ್ಧಿಯಿಂದ ನಾನು ಅವನನ್ನು ನಿಂದಿಸಿದೆನು. ಮಹೇಶ್ವರನಾದ ನಿನ್ನಲ್ಲಿ ನನಗೆ ಹೆಚ್ಚಾದ ಭಕ್ತಿ ಭಾವನೆಯು ಇರುವ ಕಾರಣದಿಂದಲೂ, ನಮ್ಮಿಬ್ಬರ ಉತ್ಪತ್ತಿಯೂ ನಿನ್ನಿಂದಲೇ ಆಗಿರುವುದರಿಂದಲೂ ನಿನ್ನಲ್ಲಿ ನನಗೆ ದುರಭಿಪ್ರಾಯವಿರುವುದಿಲ್ಲ. ನನ್ನ ಭಕ್ತಿಯಿಂದ ಪ್ರೀತನಾಗಿ ನೀನು ನನಗೆ ಅನುಗ್ರಹವನ್ನು ಹಿಂದಿನಂತೆಯೇ ಸಂಪೂರ್ಣವಾಗಿ ಮಾಡು ಎಂದನು.

೩೪–೩೫. ಷಡ್ಗುಣೈಶ್ವರ್ಯ ಸಂಪನ್ನನೂ ಭಗದೇವನ ನೇತ್ರವಿಧ್ವಂಸನೂ ಆದ ಶಿವನು, ಬ್ರಹ್ಮನು ಹೀಗೆ ಹೇಳಿದ ಮಾತುಗಳನ್ನು ಕೇಳಿ ಅವನ ಮಾತು ನ್ಯಾಯವಾಗಿರುವುದರಿಂದಲೂ, ತಾನು ತುಂಬಾ ದಯಾಶಾಲಿಯಾಗಿರುವುದರಿಂದಲೂ ಅವನು ಕೇಳಿದ್ದೆಲ್ಲವನ್ನೂ ಅವನಿಗೆ ಅನುಗ್ರಹಿಸಿ ಕೊಟ್ಟನು. ಬ್ರಹ್ಮನು ಹೀಗೆ

**ಲಬ್ಧ್ವೈವಮೀಶ್ವರಾದೇವ ಬ್ರಹ್ಮಾ ಸರ್ವಾತ್ಮತಾಂ ಕ್ಷಣಾತ್ ।**
**ತ್ವರಮಾಣೋಽಥ ಸಂಗಮ್ಯ ದದರ್ಶ ಪುರುಷೋತ್ತಮಂ ॥ ೩೫ ॥**

**ಕ್ಷೀರಾರ್ಣವಾಲಯೇ ಶುಭ್ರೇ ವಿಮಾನೇ ಸೂರ್ಯಸನ್ನಿಭೇ ।**
**ಹೇಮರತ್ನಾನ್ವಿತೇ ದಿವ್ಯೇ ಮನಸಾ ತೇನ ನಿರ್ಮಿತೇ ॥ ೩೬ ॥**

**ಅನಂತಭೋಗಶಯ್ಯಾಯಾಂ ಶಯಾನಂ ಪಂಕಜೇಕ್ಷಣಂ ।**
**ಚತುರ್ಭುಜಮುದಾರಾಂಗಂ ಸರ್ವಾಭರಣಭೂಷಿತಂ ॥ ೩೭ ॥**

**ಶಂಖಚಕ್ರಧರಂ ಸೌಮ್ಯಂ ಚಂದ್ರಬಿಂಬಸಮಾನನಂ ।**
**ಶ್ರೀವತ್ಸವಕ್ಷಸಂ ದೇವಂ ಪ್ರಸನ್ನಮಧುರಸ್ಮಿತಂ ॥ ೩೮ ॥**

**ಧರಾಮೃದುಕರಾಂಭೋಜಸ್ಪರ್ಶರಕ್ತಪದಾಂಬುಜಂ ।**
**ಕ್ಷೀರಾರ್ಣವಾಮೃತಮಿವ ಶಯಾನಂ ಯೋಗನಿದ್ರಯಾ ॥ ೩೯ ॥**

---

ಈಶ್ವರನಿಂದ ಸರ್ವಾತ್ಮಭಾವವನ್ನು ಹೊಂದಿ, ತಕ್ಷಣದಲ್ಲಿಯೇ ಹೊರಟು ಬೇಗಬೇಗನೆ ಪುರುಷೋತ್ತಮನಾದ ವಿಷ್ಣುವಿನ ಹತ್ತಿರಕ್ಕೆ ಬಂದನು.

೩೬. ಆಗ ವಿಷ್ಣುವು ಬೆಳ್ಳಗಿರುವ ಕ್ಷೀರಸಮುದ್ರದಲ್ಲಿರುವ ತನ್ನ ನಿವಾಸ ಸ್ಥಾನದಲ್ಲಿ ಸೂರ್ಯನಿಗಿಂತಲೂ ಅತಿಪ್ರಕಾಶಮಾನವಾದ ವಿಮಾನದ ಮಧ್ಯದಲ್ಲಿ ತನ್ನ ಮನಸ್ಸಿನಿಂದಲೇ ನಿರ್ಮಿತವಾದ ಚಿನ್ನದ ಆಸನದಲ್ಲಿ ಪ್ರಕಾಶಿಸುತ್ತಿದ್ದನು.

೩೭–೩೯ ಆಗ ವಿಷ್ಣುವು ಅನಂತನೆಂಬ ಸರ್ಪಶಯನದಲ್ಲಿ ಮಲಗಿದ್ದನು. ಚತುರ್ಭುಜಗಳು, ಕಮಲದಂತಿರುವ ಕಣ್ಣುಗಳು, ಉತ್ತಮವಾದ ಅವಯವಗಳು ಇವುಗಳಿಂದ ಒಪ್ಪುತ್ತಿದನು. ಸರ್ವಾಭರಣಭೂಷಿತನಾಗಿ, ಶಂಖಚಕ್ರಗಳನ್ನು ಧರಿಸಿ, ಚಂದ್ರಬಿಂಬದಂತೆ ಆಹ್ಲಾದಕರವಾಗಿಯೂ ಮಂಗಳಕರವಾಗಿಯೂ ಇರುವ ಸುಂದರವಾದ ಮುಖಕಮಲದಿಂದ ಬೆಳಗುತ್ತಿದ್ದನು. ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆಯಿದ್ದಿತು. ಮಂದಹಾಸದಿಂದ ಮನೋಹರವಾಗಿದ್ದನು. ಭೂದೇವಿಯ ಮೃದುವಾದ ಕರಕಮಲದಲ್ಲಿ ತನ್ನ ಪಾದಪದ್ಮಗಳನ್ನು ಇರಿಸಿ, ಕ್ಷೀರಸಮುದ್ರದಲ್ಲಿನ ಅಮೃತದ ಹಾಗೆ ಸಂತೋಷವನ್ನು ಸುತ್ತಲೂ ಬೀರುತ್ತಾ ಯೋಗನಿದ್ರೆಯಲ್ಲಿದ್ದನು.

ತಮಸಾ ಕಾಲರುದ್ರಾಖ್ಯಂ ರಜಸಾ ಕನಕಾಂಡಜಂ ।
ಸತ್ತ್ವೇನ ಸರ್ವಗಂ ವಿಷ್ಣುಂ ನಿರ್ಗುಣತ್ವೇ ಮಹೇಶ್ವರಂ ॥ ೪೦ ॥

ತಂ ದೃಷ್ಟ್ವಾ ಪುರುಷಂ ಬ್ರಹ್ಮಾ ಪ್ರಗಲ್ಭಮಿದಮಬ್ರವೀತ್ ।
ಗ್ರಸಾಮಿ ತ್ವಾಮಹಂ ವಿಷ್ಣೋ ತ್ವಮಾತ್ಮನಂ ಯಥಾ ಪುರಾ ॥ ೪೧ ॥

ತಸ್ಯ ತದ್ವಚನಂ ಶ್ರುತ್ವಾ ಪ್ರತಿಬುಧ್ಯ ಪಿತಾಮಹಂ ।
ಉದೈಕ್ಷತ ಮಹಾಬಾಹುಸ್ಸ್ಮಿತಮೀಷಚ್ಚಕಾರ ಚ ॥ ೪೨ ॥

ತಸ್ಮಿನ್ನವಸರೇ ವಿಷ್ಣುರ್ಗ್ರಸ್ತಸ್ತೇನ ಮಹಾತ್ಮನಾ ।
ಸೃಷ್ಟಶ್ಚ ಬ್ರಹ್ಮಣಾ ಸದ್ಯೋ ಭ್ರುವೋರ್ಮಧ್ಯಾದಯತ್ನತಃ ॥ ೪೩ ॥

ತಸ್ಮಿನ್ನವಸರೇ ಸಾಕ್ಷಾದ್ಭಗವಾನಿಂದುಭೂಷಣಃ ।
ಶಕ್ತಿಂ ತಯೋರಪಿ ದ್ರಷ್ಟುಮರೂಪೋ ರೂಪಮಾಸ್ಥಿತಃ ॥ ೪೪ ॥

---

೪೦-೪೧. ಈ ವಿಷ್ಣುವು ತನ್ನ ತಮೋಗುಣದಿಂದ ಕಾಲರುದ್ರನೆಂತಲೂ, ರಜೋಗುಣದಿಂದ ಚಿನ್ನದ ಮೊಟ್ಟೆಯಿಂದ ಹುಟ್ಟಿದ ಬ್ರಹ್ಮನೆಂತಲೂ, ಸತ್ವಗುಣದಿಂದ ಎಲ್ಲವನ್ನೂ ವ್ಯಾಪಿಸಿಕೊಂಡಿರುವ ವಿಷ್ಣುವೆಂತಲೂ, ಗುಣಗಳ ಸಂಬಂಧವಿಲ್ಲದಿರುವಾಗ ಮಹೇಶ್ವರನೆಂತಲೂ ಹೊಗಳಿಸಿಕೊಳ್ಳುವನು. ಬ್ರಹ್ಮನು ಈ ಪ್ರಕಾರದಿಂದ ಇರುವ ಪರಮಪುರುಷನಾದ ವಿಷ್ಣುವನ್ನು ನೋಡಿ—ಎಲೈ ವಿಷ್ಣುವೇ ! ನೀನು ನನ್ನನ್ನು ಹಿಂದೆ ನುಂಗಿದಂತೆ ಈಗ ನಾನು ನಿನ್ನನ್ನು ನುಂಗುವೆನು ಎಂದು ಅಹಂಕಾರದಿಂದ ಹೇಳಿದನು.

೪೨-೪೩. ಮಹಾಬಾಹುಯುಕ್ತನಾದ ಆ ವಿಷ್ಣುವು ಬ್ರಹ್ಮನ ಗರ್ವಯುಕ್ತವಾದ ಈ ಮಾತನ್ನು ಕೇಳಿ ಎಚ್ಚರಗೊಂಡು ಬ್ರಹ್ಮನನ್ನು ನೋಡಿ ಇದೇನಿರಬಹುದೆಂದು ಮಂದಹಾಸದಿಂದ ನಕ್ಕನು. ಇಷ್ಟರಲ್ಲಿ ಮಹಾಮಹಿಮೆಯುಳ್ಳ ಆ ಬ್ರಹ್ಮನು ವಿಷ್ಣುವನ್ನು ನುಂಗಿ ಅನಾಯಾಸದಿಂದಲೇ ಅವನನ್ನು ಮತ್ತೆ ತನ್ನ ಹುಬ್ಬಿನ ಮಧ್ಯದಲ್ಲಿ ಸೃಷ್ಟಿಸಿದನು.

೪೪-೪೫. ಆ ಕಾಲಕ್ಕೆ ಸರಿಯಾಗಿ ಭಗವಾನ್ ಚಂದ್ರಶೇಖರನಾದ ಶಿವನು ರೂಪರಹಿತನಾದರೂ ಆಕಾರವನ್ನು ಹೊಂದಿ ಅವರ ಸಮೀಪಕ್ಕೆ ಬಂದನು. ತಾನೇ

**ಪ್ರಸಾದಮತುಲಂ ಕರ್ತುಂ ಪುರಾ ದತ್ತವರಸ್ತಯೋಃ ।**
**ಆಗಚ್ಛತ್ತತ್ರ ಯತ್ರೇಮೌ ಬ್ರಹ್ಮನಾರಾಯಣೌ ಸ್ಥಿತೌ ॥ ೪೫ ॥**

**ಅಥ ತುಷ್ಟುವತುರ್ದೇವಂ ಪ್ರೀತೌ ಭೀತೌ ಚ ಕೌತುಕಾತ್ ।**
**ಪ್ರಣೇಮತುಶ್ಚ ಬಹುಶೋ ಬಹುಮಾನೇನ ದೂರತಃ ॥ ೪೬ ॥**

**ಭವೋಽಪಿ ಭಗವಾನೇತಾವನುಗೃಹ್ಯ ಪಿನಾಕಧೃಕ್ ।**
**ಸಾದರಂ ಪಶ್ಯತೋರೇವ ತಯೋರಂತರಧೀಯತ ॥ ೪೭ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ಬ್ರಹ್ಮವಿಷ್ಣುಸೃಷ್ಟಿಕಥನಂ ನಾಮ ತ್ರಯೋದಶೋಽಧ್ಯಾಯಃ**



ಅವರಿಬ್ಬರಿಗೂ ಅನುಗ್ರಹವನ್ನು ಹಿಂದೆ ಮಾಡಿದ್ದಕಾರಣ ಅವರವರ ಸಾಮರ್ಥ್ಯವನ್ನು ನೋಡಿ, ಅವರಿಬ್ಬರಿಗೂ ಇನ್ನೂ ಹೆಚ್ಚಾದ ಅನುಗ್ರಹವನ್ನು ಮಾಡುವ ಉದ್ದೇಶದಿಂದ ಈ ಬ್ರಹ್ಮ ನಾರಾಯಣರಿಬ್ಬರಿಗೂ ಇರುವ ಪ್ರದೇಶಕ್ಕೆ ಬಂದನು.

೪೬. ಅನಂತರ ಅವರಿಬ್ಬರೂ ಮಹೇಶ್ವರನನ್ನು ನೋಡಿ ಆಶ್ಚರ್ಯಚಕಿತರಾಗಿ ಭಯಭಕ್ತಿಯಿಂದಲೂ, ಸಂತೋಷದಿಂದಲೂ ಕೂಡಿ ದೂರದಿಂದಲೇ ನಮಸ್ಕಾರ ಮಾಡಿ, ಬಹಳ ಮರ್ಯಾದೆಯಿಂದ ಅವನನ್ನು ನಾನಾವಿಧವಾಗಿ ಸ್ತುತಿಸಿದರು.

೪೭. ಷಡ್ಗುಣೈಶ್ವರ್ಯ ಸಂಪನ್ನನೂ, ಪಿನಾಕವೆಂಬ ಧನಸ್ಸನ್ನು ಧರಿಸಿರುವವನೂ ಆದ ಆ ಶಿವನೂ ಕೂಡ ಇವರಿಬ್ಬರನ್ನೂ ಆದರದಿಂದ ಅನುಗ್ರಹಿಸಿ, ಅವರಿಬ್ಬರೂ ನೋಡುತ್ತಿರುವಾಗಲೇ ಅಲ್ಲಿಯೇ ಅಂತರ್ಧಾನನಾದನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯ ಸಂಹಿತೆಯ ಪೂರ್ವಭಾಗದಲ್ಲಿ ಬ್ರಹ್ಮ, ವಿಷ್ಣು ಸೃಷ್ಟಿಕಥನವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ಚತುರ್ದಶೋಽಧ್ಯಾಯಃ

---

॥ ವಾಯುರುವಾಚ ॥

ಪ್ರತಿಕಲ್ಪಂ ಪ್ರವಕ್ಷ್ಯಾಮಿ ರುದ್ರಾವಿರ್ಭಾವಕಾರಣಂ ।
ಯತೋ ವಿಚ್ಛಿನ್ನಸಂತಾನಾ ಬ್ರಹ್ಮಸೃಷ್ಟಿಃ ಪ್ರವರ್ತತೇ ॥ ೧ ॥

ಕಲ್ಪೇ ಕಲ್ಪೇ ಪ್ರಜಾಃ ಸೃಷ್ಟ್ವಾ ಬ್ರಹ್ಮಾ ಬ್ರಹ್ಮಾಂಡಸಂಭವಃ ।
ಅವೃದ್ಧಿಹೇತೋರ್ಭೂತಾನಾಂ ಮುಮೋಹ ಭೃಶದುಃಖಿತಃ ॥ ೨ ॥

---

## ಹದಿನಾಲ್ಕನೆಯ ಅಧ್ಯಾಯವು

೧. ವಾಯುದೇವನಿಂತೆಂದನು—ಆಯಾಯ ಕಲ್ಪಗಳಲ್ಲಿ ರುದ್ರನು ಹುಟ್ಟು ವುದಕ್ಕೆ ತಕ್ಕ ಕಾರಣವನ್ನು ಹೇಳುವೆನು. ಅಂತಹ ಆ ರುದ್ರನ ಸಹಾಯದಿಂದ ಬ್ರಹ್ಮನು ಮಾಡುವ ಸೃಷ್ಟಿಯು ಯಾವ ತಡೆಯೂ ಇಲ್ಲದೆ ದಿನೇ ದಿನೇ ವೃದ್ಧಿಯನ್ನು ಹೊಂದುತ್ತಿರುವುದು.

೨. ಪ್ರತಿಯೊಂದು ಕಲ್ಪದಲ್ಲಿಯೂ ಬ್ರಹ್ಮಾಂಡದಿಂದ ಹುಟ್ಟಿದ ಬ್ರಹ್ಮನು ಪ್ರಜೆಗಳನ್ನು ಸೃಷ್ಟಿಮಾಡಿದರೂ, ತಾನು ನಿರ್ಮಿಸಿದ ಪ್ರಾಣಿಗಳು ತಮ್ಮಷ್ಟಕ್ಕೆ ತಾವೇ ವೃದ್ಧಿಯಾಗದೆ ಇರುವುದಕ್ಕಾಗಿ ಬಹಳ ದುಃಖಪಡುತ್ತಾ ಚಿಂತಾಕುಲ ನಾಗಿದ್ದನು.

ತಸ್ಯ ದುಃಖಪ್ರಶಾಂತ್ಯರ್ಥಂ ಪ್ರಜಾನಾಂ ಚ ವಿವೃದ್ಧಯೇ ।
ತತ್ತತ್ಕಲ್ಪೇಷು ಕಾಲಾತ್ಮಾ ರುದ್ರೋ ರುದ್ರಗಣಾಧಿಪಃ ॥ ೩ ॥

ನಿರ್ದಿಷ್ಟಃ ಪರಮೇಶೇನ ಮಹೇಶೋ ನೀಲಲೋಹಿತಃ ।
ಪುತ್ರೋ ಭೂತ್ವಾನುಗೃಹ್ಣಾತಿ ಬ್ರಹ್ಮಾಣಂ ಬ್ರಹ್ಮಣೋಽನುಜಃ ॥ ೪ ॥

ಸ ಏವ ಭಗವಾನೀಶಸ್ತೇಜೋರಾಶಿರನಾಮಯಃ ।
ಅನಾದಿನಿಧನೋ ಧಾತಾ ಭೂತಸಂಕೋಚಕೋ ವಿಭುಃ ॥ ೫ ॥

ಪರಮೈಶ್ವರ್ಯಸಂಯುಕ್ತಃ ಪರಮೇಶ್ವರಭಾವಿತಃ ।
ತಚ್ಛಕ್ತ್ಯಾಧಿಷ್ಠಿತಶ್ಚಶ್ವತ್ತಚ್ಚಿಹ್ನೈರಪಿ ಚಿಹ್ನಿತಃ ॥ ೬ ॥

ತನ್ನಾಮನಾಮಾ ತದ್ರೂಪಸ್ತತ್ಕಾರ್ಯಕರಣಕ್ಷಮಃ ।
ತತ್ತುಲ್ಯವ್ಯವಹಾರಶ್ಚ ತದಾಜ್ಞಾಪರಿಪಾಲಕಃ ॥ ೭ ॥

---

೩-೪. ಬ್ರಹ್ಮನ ದುಃಖವನ್ನು ನಾಶಗೊಳಿಸಿ ಪ್ರಜೆಗಳು ವೃದ್ಧಿಯಾಗುವಂತೆ ಮಾಡುವುದಕ್ಕಾಗಿ ರುದ್ರಗಣಗಳಿಗೆ ಅಧಿಪತಿಯಾದ, ಕಾಲರೂಪದಿಂದ ಇರುವ ರುದ್ರನು, ನೀಲಲೋಹಿತನಾದ ಪರಮೇಶ್ವರನ ಅನುಗ್ರಹದಿಂದ ಬ್ರಹ್ಮನ ಮಗನಾಗಿ ಅವತರಿಸಿ ಬ್ರಹ್ಮನಿಗೆ ಅನುಗ್ರಹವನ್ನು ಮಾಡುವನು.

೫-೬ ಆ ರುದ್ರನೇ ಷಡ್ಗುಣೈಶ್ವರ್ಯಸಂಪನ್ನನು. ಬಹಳ ತೇಜಸ್ಸುಳ್ಳವನು. ಯಾವ ವಿಧವಾದ ದುಃಖಕ್ಕೂ ಈಡಾಗದಿರುವವನು. ಆದಿ, ಕೊನೆ ಇವು ಯಾವುದೂ ಅವನಿಗಿಲ್ಲ. ಅವನೇ ಎಲ್ಲಕ್ಕೂ ಆಶ್ರಯನಾಗಿಯೂ ಆಧಾರನಾಗಿಯೂ ಇರುವನು. ಅಂತ್ಯಕಾಲದಲ್ಲಿ ಪ್ರಾಣಿಗಳೆಲ್ಲವನ್ನೂ ನಾಶಮಾಡುವನು. ಸಮಸ್ತ ಚರಾಚರ ವಸ್ತುಗಳಲ್ಲಿಯೂ ವ್ಯಾಪಕನಾಗಿರುವನು ಪರಮೇಶ್ವರನ ಭಾವನೆಯಿಂದಿರುವುದರಿಂದ ಅಣಿಮಾದ್ಯಷ್ಟೈಶ್ವರ್ಯಯುಕ್ತನಾಗಿ, ಪರಮೇಶ್ವರನ ಶಕ್ತಿಯ ಅನುಗ್ರಹದಿಂದಲೇ ಅವನ ಅನೇಕ ವಿಧವಾದ ಚಿಹ್ನೆಗಳಿಂದ ಕೂಡಿರುವನು. ಅವನ ಹೆಸರನ್ನೇ ಧರಿಸಿ ಕೊಂಡು ಆ ಪರಮೇಶ್ವರನ ರೂಪದಿಂದಲೇ ಪ್ರಕಾಶಿಸುತ್ತಿರುವನು. ಆ ಮಹೇಶ್ವರನ ಕೆಲಸಗಳನ್ನೇ ಮಾಡುವಷ್ಟು ಸಾಮರ್ಥ್ಯವನ್ನು ಹೊಂದಿರುವನು. ಅವನಿಗೆ ಸರಿ ಸಮನಾಗಿ ವ್ಯವಹಾರಮಾಡುವವನಾದರೂ ಅವನ ಆಜ್ಞೆಯನ್ನು ಅನುಸರಿಸಿ ನಡೆಯುತ್ತಿರುವನು.

೭-೮. ಸಹಸ್ರಸೂರ್ಯರು ಏಕಕಾಲದಲ್ಲಿ ಉದಯಿಸಿದರೆ ಉಂಟಾಗುವ ಮಹಾತೇಜಸ್ಸಿನಂತಿರುವ ಕಾಂತಿಸಮೂಹದಿಂದ ಬೆಳಗುವನು. ಚಂದ್ರನ ಕಲೆಯನ್ನು

**ಸಹಸ್ರಾದಿತ್ಯಸಂಕಾಶಶ್ಚಂದ್ರಾವಯವಭೂಷಣಃ ।**
**ಭುಜಂಗಹಾರಕೇಯೂರವಲಯೋ ಮುಂಜಮೇಖಲಃ ॥ ೮ ॥**

**ಜಲಂಧರವಿರಿಂಚೇಂದ್ರಕಪಾಲಶಕಲೋಜ್ಜ್ವಲಃ ।**
**ಗಂಗಾತುಂಗತರಂಗಾರ್ದ್ರಪಿಂಗಲಾನನಮೂರ್ಧಜಃ ॥ ೯ ॥**

**ಭಗ್ನದಂಷ್ಟ್ರಾಂಕುರಾಕ್ರಾಂತಪ್ರಾಂತಕಾಂತಧರಾಧರಃ ।**
**ಸವ್ಯಶ್ರವಣಪಾರ್ಶ್ವಾಂತಮಂಡಲೀಕೃತಕುಂಡಲಃ ॥ ೧೦ ॥**

**ಮಹಾವೃಷಭನಿರ್ಯಾಣೋ ಮಹಾಜಲದನಿಃಸ್ವನಃ ।**
**ಮಹಾನಲಸಮುಪ್ರಖ್ಯೋ ಮಹಾಬಲಪರಾಕ್ರಮಃ ॥ ೧೧ ॥**

**ಏವಂ ಘೋರಮಹಾರೂಪೋ ಬ್ರಹ್ಮಪುತ್ರೋ ಮಹೇಶ್ವರಃ ।**
**ವಿಜ್ಞಾನಂ ಬ್ರಹ್ಮಣೇ ದತ್ತ್ವಾ ಸರ್ಗೇ ಸಹಕರೋತಿ ಚ ॥ ೧೨ ॥**

---

ಶಿರಸ್ಸಿನಲ್ಲಿ ಆಭರಣವನ್ನಾಗಿ ಧರಿಸಿರುವನು. ಆ ಪರಮೇಶ್ವರನಂತೆಯೇ ಸರ್ಪವನ್ನು ಹಾರ, ವಲಯ, ಕೇಯೂರ ಇವೇ ಮೊದಲಾದ ಆಭರಣವನ್ನಾಗಿ ಮಾಡಿಕೊಂಡು ಗುಲಗಂಜಿಯ ಸರವನ್ನು ಡಾಬಿನಂತೆ ಧರಿಸಿರುವನು.

೯. ಜಲಂಧರ, ಬ್ರಹ್ಮ, ಇಂದ್ರ ಇವರುಗಳ ತಲೆಯ ಬುರುಡೆಯ ಚೂರುಗಳಿಂದ ನಿರ್ಮಿತವಾದ ಹಾರವನ್ನು ಧರಿಸಿರುವನು. ಶಿರಸ್ಸಿನಲ್ಲಿ ಕಂಗೊಳಿಸುತ್ತಿರುವ ಹಳದೀಬಣ್ಣದ ಜಟಾಮಂಡಲವು ಗಂಗಾನದಿಯ ಅಲೆಗಳಿಂದ ನೆನೆದು ಶೋಭಿಸುತ್ತಿರುವುದು.

೧೦-೧೧. ಮುರಿದಿರುವ ಕೋರೆಹಲ್ಲುಗಳಿಂದ ಕೂಡಿರುವ ಮನೋಹರವಾದ ಶ್ವೇತವರಾಹವು ಸಮೀಪದಲ್ಲಿ ಒಪ್ಪುತ್ತಿರುವುದು. ದುಂಡಗೆ ಸುತ್ತಿಕೊಂಡಿರುವ ಹಾವನ್ನು ಕುಂಡಲವಾಗಿ ಧರಿಸಿರುವ ಈ ರುದ್ರದೇವನು ದೊಡ್ಡ ವೃಷಭವನ್ನು ವಾಹನವನ್ನಾಗಿ ಮಾಡಿಕೊಂಡು ದೊಡ್ಡ ಮೇಘದಂತೆ ಧ್ವನಿಮಾಡುತ್ತಾ, ಅಗ್ನಿಯಂತೆ ಕಾಂತಿಯಿಂದ ಬೆಳಗುತ್ತಾ, ಬಹಳ ಹೆಚ್ಚಾದ ಶಕ್ತಿಸಾಮರ್ಥ್ಯಗಳುಳ್ಳವನಾಗಿರುವನು.

೧೨-೧೩ ಬ್ರಹ್ಮಪುತ್ರನಾದ ಮಹೇಶ್ವರನು ಈ ಪ್ರಕಾರದಿಂದ ಭಯಂಕರವಾದ ದೊಡ್ಡ ಆಕಾರವನ್ನು ಧರಿಸಿಕೊಂಡು ಬ್ರಹ್ಮನಿಗೆ ವಿಜ್ಞಾನವನ್ನು ಉಪದೇಶ ಮಾಡಿ, ಬ್ರಹ್ಮನು ಮಾಡುವ ಸೃಷ್ಟಿಗೆ ಸಹಾಯ ಮಾಡುತ್ತಿರುವನು.. ಆದ್ದರಿಂದ

**ತಸ್ಮಾದ್ರುದ್ರಪ್ರಸಾದೇನ ಪ್ರತಿಕಲ್ಪಂ ಪ್ರಜಾಪತೇಃ ।**
**ಪ್ರವಾಹರೂಪತೋ ನಿತ್ಯಾ ಪ್ರಜಾಸೃಷ್ಟಿಃ ಪ್ರವರ್ತತೇ ॥ ೧೩ ॥**

**ಕದಾಚಿತ್ಪ್ರಾರ್ಥಿತಃ ಸ್ರಷ್ಟುಂ ಬ್ರಹ್ಮಣಾ ನೀಲಲೋಹಿತಃ ।**
**ಸ್ವಾತ್ಮನಾ ಸದೃಶಾನ್ಸರ್ವಾನ್ಸಸರ್ಜ ಮನಸಾ ವಿಭುಃ ॥ ೧೪ ॥**

**ಕಪರ್ದಿನೋ ನಿರಾತಂಕಾನ್ನೀಲಗ್ರೀವಾಂಸ್ತ್ರಿಲೋಚನಾನ್ ।**
**ಜರಾಮರಣನಿರ್ಮುಕ್ತಾನ್ದೀಪ್ತಶೂಲವರಾಯುಧಾನ್ ॥ ೧೫ ॥**

**ತೈಸ್ತು ಸಂಛಾದಿತಂ ಸರ್ವಂ ಚತುರ್ದಶವಿಧಂ ಜಗತ್ ।**
**ತಾನ್ದೃಷ್ಟ್ವಾ ವಿವಿಧಾನ್ರುದ್ರಾನ್ರುದ್ರಮಾಹ ಪಿತಾಮಹಃ ॥ ೧೬ ॥**

**ನಮಸ್ತೇ ದೇವದೇವೇಶ ಮಾಸ್ರಾಕ್ಷೀರೀದೃಶೀಃ ಪ್ರಜಾಃ ।**
**ಅನ್ಯಾಃ ಸೃಜ ತ್ವಂ ಭದ್ರಂ ತೇ ಪ್ರಜಾ ಮೃತ್ಯುಸಮನ್ವಿತಾಃ ॥ ೧೭ ॥**

---

ರುದ್ರನ ಅನುಗ್ರಹದಿಂದ ಬ್ರಹ್ಮನು ಮಾಡುವ ಪ್ರತಿಯೊಂದು ಸೃಷ್ಟಿಯಲ್ಲಿಯೂ ಪ್ರಜಾಭಿವೃದ್ಧಿಯು ಯಾವಾಗಲೂ ಹರಿಯುವ ಪ್ರವಾಹದಂತೆ ಎಡಬಿಡದೆ ನಡೆಯುತ್ತಿರುವುದು.

೧೪. ಒಂದು ಕಾಲದಲ್ಲಿ ಈ ನೀಲಲೋಹಿತನಾದ ರುದ್ರನನ್ನು, ಪ್ರಜೆಗಳನ್ನು ಸೃಷ್ಟಿಮಾಡಬೇಕೆಂದು ಬ್ರಹ್ಮನು ಪ್ರಾರ್ಥಿಸಿದನು. ಅದರಂತೆ ವ್ಯಾಪಕನಾದ ಆ ರುದ್ರನು ಶಕ್ತಿ ಸಾಮರ್ಥ್ಯಾದಿಗಳಲ್ಲಿ ತನಗೆ ಸಮನಾದ ಅನೇಕರನ್ನು ತನ್ನ ಮನಸ್ಸಿನಿಂದಲೇ ನಿರ್ಮಿಸಿದನು.

೧೫-೧೬. ಅವನಿಂದ ಸೃಷ್ಟರಾದವರು ಎಲ್ಲರೂ ಅವನಂತೆಯೇ ಜಡೆಯುಳ್ಳವರು. ಕಪ್ಪುಬಣ್ಣದ ಕುತ್ತಿಗೆಯುಳ್ಳವರು. ಮೂರು ಕಣ್ಣುಗಳುಳ್ಳವರು. ಇವರಿಗೆ ಮುಪ್ಪು, ಮರಣ ಮೊದಲಾದ ವಿಕಾರಗಳಿಲ್ಲ. ಎಲ್ಲರೂ ಹೊಳೆಯುತ್ತಿರುವ ಉತ್ತಮವಾದ ತ್ರಿಶೂಲಾಯುಧವನ್ನು ಧರಿಸಿರುವರು. ರುದ್ರನು ಸೃಷ್ಟಿಮಾಡಿದ ಈ ವಿಧವಾದ ಪ್ರಜೆಗಳಿಂದ ಹದಿನಾಲ್ಕು ಲೋಕಗಳೂ ತುಂಬಿಹೋದವು. ಇದನ್ನು ನೋಡಿ ಬ್ರಹ್ಮನು ರುದ್ರನನ್ನು ಕುರಿತು,

೧೭-೧೯. ಎಲೈ ದೇವನೇ, ನಿನಗೆ ಮಂಗಳವಾಗಲಿ. ನೀನು ಇನ್ನು ಮುಂದೆ ಈ ವಿಧವಾದ ಪ್ರಜೆಗಳನ್ನು ಸೃಷ್ಟಿಮಾಡಬೇಡ. ಏಕೆಂದರೆ ನೀನು ಸೃಷ್ಟಿಮಾಡಿದ ಪ್ರಜೆಗಳು ಮರಣರಹಿತರಾಗಿರುವುದರಿಂದ ಅವರೇ ಈ ಲೋಕಗಳೆಲ್ಲವನ್ನೂ ವ್ಯಾಪಿಸಿ

**ಇತ್ಯುಕ್ತಃ ಪ್ರಹಸನ್ಪ್ರಾಹ ಬ್ರಹ್ಮಾಣಂ ಪರಮೇಶ್ವರಃ ।**
**ನಾಸ್ತಿ ಮೇ ತಾದೃಶಸ್ಸರ್ಗಸ್ಸೃಜ ತ್ವಮಶುಭಾಃ ಪ್ರಜಾಃ ॥ ೧೮ ॥**

**ಯೇ ತ್ವಿಮೇ ಮನಸಾ ಸೃಷ್ಟಾ ಮಹಾತ್ಮಾನೋ ಮಹಾಬಲಾಃ ।**
**ಚರಿಷ್ಯಂತಿ ಮಯಾ ಸಾರ್ಧಂ ಸರ್ವ ಏವ ಹಿ ಯಾಜ್ಞಿಕಾಃ ॥ ೧೯ ॥**

**ಇತ್ಯುಕ್ತ್ವಾ ವಿಶ್ವಕರ್ಮಾಣಂ ವಿಶ್ವಭೂತೇಶ್ವರೋ ಹರಃ ।**
**ಸಹ ರುದ್ರೈಃ ಪ್ರಜಾಸರ್ಗಾನ್ನಿವೃತ್ತಾತ್ಮಾ ವ್ಯತಿಷ್ಠತ । ॥ ೨೦ ॥**

**ತತಃ ಪ್ರಭೃತಿ ದೇವೋಽಸೌ ನ ಪ್ರಸೂತೇ ಪ್ರಜಾಃ ಶುಭಾಃ ।**
**ಊರ್ಧ್ವರೇತಾಃ ಸ್ಥಿತಿಃ ಸ್ಥಾಣುರ್ಯಾವದಾಭೂತಸಂಪ್ಲವಂ ॥ ೨೧ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ರುದ್ರಾವಿರ್ಭಾವವರ್ಣನಂ ನಾಮ ಚತುರ್ದಶೋಽಧ್ಯಾಯಃ**

---

ಮುಂದಿನ ಪ್ರಜಾವೃದ್ಧಿಗೆ ಅವಕಾಶವಿಲ್ಲದಂತಿರುವರು. ಸೃಷ್ಟಿಮಾಡಿದ ಪ್ರಜೆಗಳು ಕೆಲವು ಕಾಲವಿದ್ದು ಮೃತರಾಗುತ್ತಿದ್ದರೆ- ಮುಂದೆ-ಅವರ ಸ್ಥಾನದಲ್ಲಿ ಬೇರೆಬೇರೆ ಪ್ರಜೆಗಳು ಹುಟ್ಟಲು ಅವಕಾಶವಾಗುವುದು. ಅದರಿಂದ ಪ್ರಜಾವೃದ್ಧಿಯು ಅವಿಚ್ಛಿನ್ನವಾಗಿ ನಡೆದು ಕೊಂಡು ಬರುವುದು. ಆದುದರಿಂದ ಈಗ ನೀನು ಅಂತಹ ಪ್ರಜೆಗಳನ್ನು ಎಂದರೆ ಕೆಲವು ಕಾಲ ಜೀವಿಸಿದ್ದು ಮೃತರಾಗುವ ಬೇರೆ ಪ್ರಜೆಗಳನ್ನು ಸೃಷ್ಟಿಮಾಡು ಎಂದು ಪ್ರಾರ್ಥಿಸಲು, ಆ ರುದ್ರನು ಬ್ರಹ್ಮನ ಮಾತನ್ನು ಕೇಳಿ ನಸುನಗುತ್ತಾ “ ಎಲೈ ಬ್ರಹ್ಮನೇ ಕೇಳು, ನಾನು ಸೃಷ್ಟಿಮಾಡುವ ಪ್ರಜೆಗಳೆಲ್ಲರೂ ಹೀಗೆಯೇ ಜರಾಮರಣರಹಿತರಾಗಿ ಮಹಾ ಮಹಿಮೆಯುಳ್ಳವರಾಗಿರುವರು ಇವರೆಲ್ಲರೂ ನನ್ನ ಮನಸ್ಸಿನಿಂದಲೇ ಸೃಷ್ಟಿಸಲ್ಪಟ್ಟಿರುವುದರಿಂದ ಯಜ್ಞಾದಿಗಳಿಂದ ಮಹೇಶ್ವರನನ್ನು ಆರಾಧಿಸುತ್ತಾ ಮಹಾಬಲಶಾಲಿಗಳಾಗಿ ನನ್ನೊಡನೆ ಎಲ್ಲೆಡೆಯಲ್ಲಿಯೂ ಸಂಚರಿಸುವರು. ಆದುದರಿಂದ ಮೃತಿಯನ್ನೈದುವ ಅಮಂಗಳಕರರಾದ ಪ್ರಜೆಗಳನ್ನು ನೀನೇ ಸೃಷ್ಟಿಮಾಡು ” ಎಂದನು.

೨೦-೨೧. ಹೀಗೆಂದು ಹೇಳಿ ಪ್ರಜೆಗಳನ್ನು ಸೃಷ್ಟಿಮಾಡುವುದನ್ನು ನಿಲ್ಲಿಸಿ ರುದ್ರನೊಡನೆ ಸುಮ್ಮನೆ ಇದ್ದನು ಆಗಿನಿಂದಲೂ ಶಿವನು ಊರ್ಧ್ವರೇತಸ್ಕನಾಗಿ ಪ್ರಜೆಗಳನ್ನು ಸೃಷ್ಟಿಮಾಡದೆ ಪ್ರಳಯಕಾಲದವರೆಗೂ ಸುಮ್ಮನಿರುವನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯ ಸಂಹಿತೆಯ ಪೂರ್ವಭಾಗದಲ್ಲಿ ರುದ್ರಾವಿರ್ಭಾವವರ್ಣನವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ಪಂಚದಶೋಽಧ್ಯಾಯಃ

॥ ವಾಯುರುವಾಚ ॥

ಯದಾ ಪುನಃ ಪ್ರಜಾಃ ಸೃಷ್ಟ್ವಾ ನ ವ್ಯವರ್ಧಂತ ವೇಧಸಃ ।
ತದಾ ಮೈಥುನಜಾಂ ಸೃಷ್ಟಿಂ ಬ್ರಹ್ಮಾ ಕರ್ತುಮಮನ್ಯತ ॥ ೧ ॥

ನ ನಿರ್ಗತಂ ಪುರಾ ಯಸ್ಮಾನ್ನಾರೀಣಾಂ ಕುಲಮೀಶ್ವರಾತ್ ।
ತೇನ ಮೈಥುನಜಾಂ ಸೃಷ್ಟಿಂ ನ ಶಶಾಕ ಪಿತಾಮಹಃ ॥ ೨ ॥

## ಹದಿನೈದನೆಯ ಅಧ್ಯಾಯವು

೧. ವಾಯುದೇವನಿಂತೆಂದನು.––ಬ್ರಹ್ಮನಿಂದ ಸೃಷ್ಟಿಯಾದ ಪ್ರಜೆಗಳು ಮುಂದೆ ತಮ್ಮಿಂದ ತಾವೇ ವೃದ್ಧಿಯನ್ನೈದದೆ ಸೃಷ್ಟಿಮಾಡಿದಂತೆಯೇ ಇದ್ದರು. ಆಗ ಬ್ರಹ್ಮನು ಮಿಥುನಸೃಷ್ಟಿಯನ್ನು ಎಂದರೆ ಸ್ತ್ರೀಪುರುಷರ ಸಂಭೋಗದಿಂದ ಪ್ರಜಾಸೃಷ್ಟಿಯಾಗುವ ಕ್ರಮವನ್ನುಂಟುಮಾಡಬೇಕೆಂದು ನಿಶ್ಚಯಿಸಿದನು

೨. ಅದುವರೆಗೆ ಸೃಷ್ಟಿಮಾಡಿದ ಪ್ರಜೆಗಳೆಲ್ಲರೂ ಪುರುಷರಾಗಿಯೇ ಇದ್ದರು. ಆಗ ಸ್ತ್ರೀಯರೇ ಇರಲಿಲ್ಲ. ಹೀಗಿರುವುದರಿಂದ ಸೃಷ್ಟಿಯು ವೃದ್ಧಿಯಾಗುವುದಿಲ್ಲವೆಂದು ಬ್ರಹ್ಮನು ನಿಶ್ಚಯಮಾಡಿದನು. ಮತ್ತು ಮೈಥುನದಿಂದ ಪ್ರಜೆಗಳು ಹುಟ್ಟಿದರೆ ಸರಿಯಾಗುವುದೆಂದೂ, ಆ ಸ್ತ್ರೀಯರನ್ನು ಸೃಷ್ಟಿಮಾಡಲು ತನಗೆ ಸಾಮರ್ಥ್ಯವು ಇಲ್ಲವೆಂದೂ ತಿಳಿದು,

**ತತಸ್ಸ ವಿದಧೇ ಬುದ್ಧಿಮರ್ಥನಿಶ್ಚಯಗಾಮಿನೀಂ ।**
**ಪ್ರಜಾನಾಮೇವ ವೃಧ್ಯರ್ಥಂ ಪ್ರಷ್ಟವ್ಯಃ ಪರಮೇಶ್ವರಃ** ॥ ೩ ॥

**ಪ್ರಸಾದೇನ ವಿನಾ ತಸ್ಯ ನ ವರ್ದ್ಧೇರನ್ನಿಮಾಃ ಪ್ರಜಾಃ ।**
**ಏವಂ ಸಂಚಿಂತ್ಯ ವಿಶ್ವಾತ್ಮಾ ತಪಃ ಕರ್ತುಂ ಪ್ರಚಕ್ರಮೇ** ॥ ೪ ॥

**ತದಾದ್ಯಾ ಪರಮಾ ಶಕ್ತಿರನಂತಾ ಲೋಕಭಾವಿನೀ ।**
**ಆದ್ಯಾ ಸೂಕ್ಷ್ಮತರಾ ಶುದ್ಧಾ ಭಾವಗಮ್ಯಾ ಮನೋಹರಾ** ॥ ೫ ॥

**ನಿರ್ಗುಣಾ ನಿಷ್ಪ್ರಪಂಚಾ ಚ ನಿಷ್ಕಲಾ ನಿರುಪಪ್ಲವಾ ।**
**ನಿರಂತರತರಾ ನಿತ್ಯಾ ನಿತ್ಯಮೀಶ್ವರಪಾರ್ಶ್ವಗಾ** ॥ ೬ ॥

**ತಯಾ ಪರಮಯಾ ಶಕ್ತ್ಯಾ ಭಗವಂತಂ ತ್ರಿಯಂಬಕಂ ।**
**ಸಂಚಿಂತ್ಯ ಹೃದಯೇ ಬ್ರಹ್ಮಾ ತತಾಪ ಪರಮಂ ತಪಃ** ॥ ೭ ॥

---

೩. ಈ ವಿಧವಾದ ಪ್ರಜಾಸೃಷ್ಟಿಯನ್ನು ಮಾಡಲು ತನಗೆ ಶಕ್ತಿಸಾಮರ್ಥ್ಯಾದಿಗಳಿಲ್ಲದಿರುವುದರಿಂದ ತಪಸ್ಸನ್ನು ಮಾಡಿ ಈಶ್ವರನನ್ನು ಸಂತೋಷಪಡಿಸಿ ಸ್ತ್ರೀಯರನ್ನು ಸೃಷ್ಟಿಮಾಡುವುದಕ್ಕಾಗಿ ಅವನ ಅನುಮತಿಯನ್ನು ಕೇಳಬೇಕೆಂದು ನಿಶ್ಚಯ ಮಾಡಿದನು.

೪-೭. ಹೀಗೆ ಯೋಚನೆಯನ್ನು ಮಾಡಿ ತಪಸ್ಸನ್ನು ಮಾಡಲು ಪ್ರಾರಂಭಿಸಿದನು. ಆಗ ಬ್ರಹ್ಮನು ಪರಮೇಶ್ವರನನ್ನು ಶಕ್ತಿಯೊಡನೆ ಧ್ಯಾನಮಾಡಿದನು. ಆ ಶಕ್ತಿಯು ಲೋಕಗಳಿಗೆಲ್ಲಾ ಆದಿಯಾಗಿ ಬಹಳ ಉತ್ಕೃಷ್ಟವಾಗಿರುವುದು. ಆ ಶಕ್ತಿಯು ಪ್ರಪಂಚವನ್ನೆಲ್ಲಾ ಆವರಿಸಿ ಅನಂತವಾಗಿರುವುದು. ಇದು ಎಲ್ಲಕ್ಕೂ ಆದಿಯು. ಬಹು ಸೂಕ್ಷ್ಮವಾಗಿರುವುದು ಮತ್ತು ಶುದ್ಧವಾಗಿರುವುದು. ಇಂತಹ ಮನೋಹರವಾದ ಶಕ್ತಿಯನ್ನು ನೋಡುವುದಕ್ಕಾಗುವುದಿಲ್ಲ ಮನಸ್ಸಿನ ಭಾವನೆಯಿಂದಲೇ ಊಹಿಸಬೇಕಾಗಿರುವುದು. ಈ ಶಕ್ತಿಯು, ತ್ರಿಗುಣಗಳು, ಪ್ರಪಂಚಾದಿ ವಿಕಾರಗಳು, ಕಲೆಗಳು ಮೊದಲಾದ ಉಪಾಧಿಗಳಿಂದ ರಹಿತವಾಗಿ ಯಾವಾಗಲೂ ಈಶ್ವರನ ಸಮೀಪದಲ್ಲಿಯೇ ಬೆಳಗುತ್ತಿರುವುದು. ಇಂತಹ ಉತ್ತಮವಾದ ಶಕ್ತಿಯಿಂದ ಸಹಿತನೂ, ತ್ರಿಲೋಚನನೂ ಆದ ಭಗವಂತನನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಾ ಆ ಬ್ರಹ್ಮನು ಉಗ್ರವಾದ ತಪಸ್ಸನ್ನು ಮಾಡಲುಪಕ್ರಮಿಸಿದನು.

**ತ್ರೀವ್ರೇಣ ತಪಸಾ ತಸ್ಯ ಯುಕ್ತಸ್ಯ ಪರಮೇಷ್ಠಿನಃ ।**
**ಅಚಿರೇಣೈವ ಕಾಲೇನ ಪಿತಾ ಸಂಪ್ರತುತೋಷ ಹ ॥ ೮ ॥**

**ತತಃ ಕೇನಚಿದಂಶೇನ ಮೂರ್ತಿಮಾವಿಶ್ಯ ಕಾಮುಕಿ ।**
**ಅರ್ಧನಾರೀಶ್ವರೋ ಭೂತ್ವಾ ಯಯೌ ದೇವಸ್ಸ್ವಯಂ ಹರಃ ॥ ೯ ॥**

**ತಂ ದೃಷ್ಟ್ವಾ ಪರಮಂ ದೇವಂ ತಮಸಃ ಪರಮವ್ಯಯಂ ।**
**ಅದ್ವಿತೀಯಮನಿರ್ದೇಶ್ಯಮದೃಶ್ಯಮಕೃತಾತ್ಮಭಿಃ ॥ ೧೦ ॥**

**ಸರ್ವಲೋಕನಿಧಾತಾರಂ ಸರ್ವಲೋಕೇಶ್ವರೇಶ್ವರಂ ।**
**ಸರ್ವಲೋಕವಿಧಾಯಿನ್ಯಾ ಶಕ್ತ್ಯಾ ಪರಮಯಾ ಯುತಂ ॥ ೧೧ ॥**

**ಅಪ್ರತರ್ಕ್ಯಮನಾಭಾಸಮಮೇಯಮಜರಂ ಧ್ರುವಂ ।**
**ಅಚಲಂ ನಿರ್ಗುಣಂ ಶಾಂತಮನಂತಮಹಿಮಾಸ್ಪದಂ ॥ ೧೨ ॥**

---

೮-೯. ಅವನ ತಪಸ್ಸಿಗೆ ಮೆಚ್ಚಿ ಅವನ ತಂದೆಯಾದ ಶಿವನು ಯಾವುದೋ ಒಂದು ಅಂಶದಿಂದ ಒಂದು ಆಕಾರವನ್ನು ಹೊಂದಿ ಅರ್ಧನಾರೀಶ್ವರನಾಗಿ ಬ್ರಹ್ಮನ ಸಮೀಪಕ್ಕೆ ಬಂದನು

೧೦-೧೫. ಹೀಗೆ ಬ್ರಹ್ಮನಿಗೆ ಪ್ರತ್ಯಕ್ಷನಾದ ಅರ್ಧನಾರೀಶ್ವರನು ಅಜ್ಞಾನಾಂಧಕಾರದಿಂದ ರಹಿತನಾಗಿ ನಾಶರಹಿತವಾದ ತನ್ನ ದಿವ್ಯವರ್ಚಸ್ಸಿನಿಂದ ಬೆಳಗುತ್ತಿದ್ದನು. ಈ ಶಿವನು ಅದ್ವಿತೀಯನು ಎಂದರೆ ಇವನಿಗೆ ಸಮರಾಗಲಿ, ಅಧಿಕರಾದವರಾಗಲೀ ಇಲ್ಲ ಇವನ ಸ್ವರೂಪವನ್ನು ಹೀಗೆಂದು ತಿಳಿಯಲು ಸಾಧ್ಯವಿಲ್ಲ. ಆತ್ಮಜ್ಞಾನವಿಲ್ಲದವರಿಗೆ ಅಗೋಚರನು. ಸರ್ವಪ್ರಪಂಚವನ್ನು ಸೃಷ್ಟಿಮಾಡುವವನು. ಸರ್ವಲೋಕಗಳಿಗೂ ಒಡೆಯನು. ಮತ್ತು ಲೋಕಗಳನ್ನೆಲ್ಲಾ ತನ್ನ ಆಜ್ಞೆಗೆ ಒಳಪಟ್ಟು ನಡೆಯುವಂತೆ ನಿಯಮಿಸುವ ಉತ್ತಮವಾದ ಶಕ್ತಿಯಿಂದ ಕೂಡಿ ಬೆಳಗುತ್ತಿರುವವನು. ಇವನ ಸ್ವರೂಪವು ಊಹೆಮಾಡುವುದಕ್ಕಾಗಲಿ, ಅಳತೆಗಾಗಲಿ ಸಿಕ್ಕುವಹಾಗಿಲ್ಲ. ನಿತ್ಯನೂ, ಶಾಶ್ವತನೂ, ನಾಶರಹಿತನೂ, ನಿರ್ಗುಣನೂ, ಆಗಿ ಶಾಂತರೂಪದಿಂದ ಮಹಾಮಹಿಮಯುಕ್ತನಾಗಿ ಪ್ರಕಾಶಿಸುತ್ತಿರುವನು. ಎಲ್ಲೆಲ್ಲಿಯೂ ವ್ಯಾಪಿಸಿರುವನು. ಸಮಸ್ತ ಇಷ್ಟಾರ್ಥಗಳನ್ನು ಕೊಡಲು ಸಮರ್ಥನು. ಸತ್, ಅಸತ್ ಇವುಗಳಿಲ್ಲದವನು. ಎಂದರೆ ವ್ಯಕ್ತಾವ್ಯಕ್ತರೂಪರಹಿತನು. ಇವನಿಗೆ ಹೋಲಿಕೆ

**ಸರ್ವಗಂ ಸರ್ವದಂ ಸರ್ವಸದಸದ್ವ್ಯಕ್ತಿವರ್ಜಿತಂ ।**
**ಸರ್ವೋಪಮಾನನಿರ್ಮುಕ್ತಂ ಶರಣ್ಯಂ ಶಾಶ್ವತಂ ಶಿವಂ ॥ ೧೩ ॥**

**ಪ್ರಣಮ್ಯ ದಂಡವದ್ಬ್ರಹ್ಮಾ ಸಮುತ್ಥಾಯ ಕೃತಾಂಜಲಿಃ ।**
**ಶ್ರದ್ಧಾವಿನಯಸಂಪನ್ನೈಃ ಶ್ರಾವ್ಯೈಃ ಸಂಸ್ಕಾರಸಂಯುತೈಃ ॥ ೧೪ ॥**

**ಯಥಾರ್ಥಯುಕ್ತಸರ್ವಾರ್ಥೈರ್ವೇದಾರ್ಥಪರಿಬೃಂಹಿತೈಃ ।**
**ತುಷ್ಟಾವ ದೇವಂ ದೇವೀಂ ಚ ಸೂಕ್ತೈಃ ಸೂಕ್ಷ್ಮಾರ್ಥಗೋಚರೈಃ ॥ ೧೫ ॥**

**॥ ಬ್ರಹ್ಮೋವಾಚ ॥**

**ಜಯ ದೇವ ಮಹಾದೇವ ಜಯೇಶ್ವರ ಮಹೇಶ್ವರ ।**
**ಜಯ ಸರ್ವಗುಣಶ್ರೇಷ್ಠ ಜಯ ಸರ್ವಸುರಾಧಿಪ ॥ ೧೬ ॥**

**ಜಯ ಪ್ರಕೃತಿ ಕಲ್ಯಾಣಿ ಜಯ ಪ್ರಕೃತಿನಾಯಕೇ ।**
**ಜಯ ಪ್ರಕೃತಿದೂರೇ ತ್ವಂ ಜಯ ಪ್ರಕೃತಿಸುಂದರಿ ॥ ೧೭ ॥**

---

ಯಾಗುವ ವಸ್ತುವೇ ಪ್ರಪಂಚದಲ್ಲಿಲ್ಲ ನಾಶರಹಿತನಾಗಿಯೂ, ಮಂಗಳಕರನಾಗಿಯೂ ಸರ್ವರಿಗೂ ರಕ್ಷಕನಾಗಿಯೂ ಇರುವನು ಇಂತಹ ದೇವದೇವನನ್ನು ಬ್ರಹ್ಮನು ದಂಡಾಕಾರವಾಗಿ ನಮಸ್ಕರಿಸಿ, ಬಳಿಕ ಮೇಲೆದ್ದು ಕೈಮುಗಿದುಕೊಂಡು ಶ್ರದ್ಧಾ ಭಕ್ತಿಗಳಿಂದಲೂ, ವಿನಯದಿಂದಲೂ, ನಮ್ರನಾಗಿ ಕೇಳುವುದಕ್ಕೆ ಮನೋಹರ ವಾಗಿಯೂ, ವೇದಾಂತತತ್ತ್ವಗಳನ್ನೊಳಗೊಂಡು ಸರ್ವವೇದಾರ್ಥಗರ್ಭಿತವಾದ ವಾಕ್ಯಗಳಿಂದಲೂ ಸೂಕ್ಷ್ಮಾರ್ಥಯುಕ್ತವಾದ ವೇದಸೂಕ್ತಗಳಿಂದಲೂ ಆ ಮಹೇಶ್ವರ ನನ್ನು ದೇವಿಯೊಡನೆ ಪರಿಪರಿಯಾಗಿ ಸ್ತೋತ್ರಮಾಡಿದನು.

೧೬. ಬ್ರಹ್ಮನಿಂತೆಂದನು—ಎಲೈ ದೇವನೇ, ನೀನು ದೇವತೆಗಳಿಗೆಲ್ಲಾ ದೊಡ್ಡವನು. ಸರ್ವಲೋಕಕ್ಕೂ ಸ್ವಾಮಿಯು, ಮಹೇಶ್ವರನು. ಶ್ರೇಷ್ಠವಾದ ಸರ್ವಗುಣಗಳಿಂದಲೂ ಕೂಡಿರುವೆ. ಸಮಸ್ತ ದೇವತೆಗಳಿಗೂ ಅಧಿಪತಿಯು ಇಂತಹ ನಿನಗೆ ಜಯವಾಗಲಿ.

೧೭. ಎಲೌ ಶಕ್ತಿಯೇ, ನೀನು ಸ್ವಭಾವದಿಂದ ಮಂಗಳಕರಳು. ಪ್ರಕೃತಿಗೆ ಅಧಿಪತಿಯು. ಆದರೂ ಪ್ರಕೃತಿಯ ಗುಣಗಳಿಂದ ದೂರಳಾದವಳು. ಸ್ವಭಾವದಿಂದ ಸುಂದರಳಾದ ಎಲೌ ದೇವಿಯೇ ! ನಿನಗೆ ಜಯವು.

**ಜಯಾಮೋಘಮಹಾಮಾಯ ಜಯಾಮೋಘಮನೋರಥ ।**
**ಜಯಾಮೋಘಮಹಾಲೀಲ ಜಯಾಮೋಘಮಹಾಬಲ ॥ ೧೮ ॥**

**ಜಯ ವಿಶ್ವಜಗನ್ಮಾತರ್ಜಯ ವಿಶ್ವಜಗನ್ಮಯೇ ।**
**ಜಯ ವಿಶ್ವಜಗದ್ಧಾತ್ರಿ ಜಯ ವಿಶ್ವಜಗತ್ಸಖಿ ॥ ೧೯ ॥**

**ಜಯ ಶಾಶ್ವತಿಕೈಶ್ವರ್ಯ ಜಯ ಶಾಶ್ವತಿಕಾಲಯ ।**
**ಜಯ ಶಾಶ್ವತಿಕಾಕಾರ ಜಯ ಶಾಶ್ವತಿಕಾನುಗ ॥ ೨೦ ॥**

**ಜಯಾತ್ಮತ್ರಯನಿರ್ಮಾತ್ರಿ ಜಯಾತ್ಮತ್ರಯಪಾಲಿನಿ ।**
**ಜಯಾತ್ಮತ್ರಯಸಂಹರ್ತ್ರಿ ಜಯಾತ್ಮತ್ರಯನಾಯಿಕೇ ॥ ೨೧ ॥**

---

೧೮. ಎಲೈ ಮಹೇಶ್ವರನೇ, ನಿನ್ನ ಮಹಾಮಾಯಾಶಕ್ತಿಯು ಅಮೋಘವಾದುದು. ನಿನ್ನ ಸಂಕಲ್ಪವು ವ್ಯರ್ಥರಹಿತವಾದುದು ಎಂದರೆ ನೀನು ಸತ್ಯಸಂಕಲ್ಪನು. ನಿನ್ನ ಲೀಲೆಯು ಅದ್ಭುತವಾದುದು. ನಿನ್ನ ಶಕ್ತಿಯು ಅಪರಿಮಿತವಾದುದು. ಇಂತಹ ನಿನಗೆ ಜಯವಾಗಲಿ.

೧೯. ಎಲೌ ಶಕ್ತಿಯೇ, ನೀನು ಪ್ರಪಂಚಕ್ಕೆಲ್ಲಕ್ಕೂ ತಾಯಿಯಾಗಿರುವೆ. ಎಲ್ಲಾ ಪ್ರಪಂಚದ ರೂಪದಿಂದ ಇರುವೆ. ಎಲೈ ದೇವಿಯೆ ! ಪ್ರಪಂಚವೆಲ್ಲವನ್ನೂ ಧರಿಸಿಕೊಂಡು ಪ್ರಪಂಚಕ್ಕೆಲ್ಲಕ್ಕೂ ಸ್ನೇಹಿತೆಯಾಗಿರುವೆ. ಇಂತಹ ನಿನಗೆ ಜಯವು.

೨೦. ನಿನ್ನ ಐಶ್ವರ್ಯಕ್ಕೆ ನಾಶವಿಲ್ಲ. ನಿನ್ನ ಪರಮಪದವೂ ಅದರಂತೆಯೇ ನಾಶರಹಿತವಾದುದು. ನಿನ್ನ ಆಕಾರವೂ, (ಸ್ವರೂಪವೂ) ಶಾಶ್ವತವಾದುದು. ಅಷ್ಟೇಕೆ ? ನಿನ್ನನ್ನು ಅನುಸರಿಸುವ ಭಕ್ತರೂ ಸಹ ನಾಶರಹಿತರಾಗಿ ನಿತ್ಯಸುಖವನ್ನನುಭವಿಸುವರು. ಇಂತಹ ನಿನಗೆ ಜಯವು.

೨೧. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಮೂರು ದೇವತೆಗಳನ್ನೂ ನಿರ್ಮಿಸಿ, ಅವರನ್ನು ರಕ್ಷಿಸಿ, ಕೊನೆಯಲ್ಲಿ ಅವರನ್ನು ನಾಶಮಾಡುತ್ತಿರುವ ಕಾರಣ ಈ ಮೂರು ದೇವತೆಗಳಿಗೂ ಅಧಿಪತಿಯಾದ ಎಲೈ ದೇವಿಯೇ ! ನೀನು ಸರ್ವೋತ್ಕೃಷ್ಟಳಾಗಿರು.

ಜಯಾವಲೋಕನಾಯತ್ತ ಜಗತ್ಕಾರಣಬೃಂಹಣ ।
ಜಯೋಪೇಕ್ಷಾಕಟಾಕ್ಷೋತ್ಥಹುತಭುಗ್ಭುಕ್ತಭೌತಿಕ ॥ ೨೨ ॥

ಜಯ ದೇವಾದ್ಯವಿಜ್ಞೇಯೋ ಸ್ವಾತ್ಮಸೂಕ್ಷ್ಮದೃಶೋಜ್ಜ್ವಲೇ ।
ಜಯ ಸ್ಥೂಲಾತ್ಮಶಕ್ತ್ಯೇಶೇ ಜಯ ವ್ಯಾಪ್ತಚರಾಚರೇ ॥ ೨೩ ॥

ಜಯ ನಾನೈಕವಿನ್ಯಸ್ತವಿಶ್ವತತ್ತ್ವಸಮುಚ್ಚಯ ।
ಜಯಾಸುರಶಿರೋನಿಷ್ಠ ಶ್ರೇಷ್ಠಾನುಗಕದಂಬಕ ॥ ೨೪ ॥

ಜಯೋಪಾಶ್ರಿತಸಂರಕ್ಷಾಸಂವಿಧಾನಪಟೀಯಸಿ ।
ಜಯೋನ್ಮೂಲಿತಸಂಸಾರವಿಷವೃಕ್ಷಾಂಕುರೋದ್ಗಮೇ ॥ ೨೫ ॥

---

೨೨. ಎಲೈ ದೇವನೇ, ನಿನ್ನ ಕೃಪಾಪೂರಿತವಾದ ಅವಲೋಕನಮಾತ್ರದಿಂದಲೇ ಸಮಸ್ತ ಜಗತ್ತಿಗೂ ಕಾರಣವಾದ ಅವ್ಯಕ್ತವು ಜಗದಾಕಾರವನ್ನು ಹೊಂದುವುದು. ಅದರಂತೆಯೇ ದಯಾರಹಿತವಾದ ನಿನ್ನ ಕಟಾಕ್ಷದೃಷ್ಟಿಯಿಂದ ಪಾಂಚಭೌತಿಕವಾದ ಈ ಜಗತ್ತು ಅಗ್ನಿಗೆ ಸಿಕ್ಕಿದಂತೆ ಭಸ್ಮವಾಗುವುದು. ಇಂತಹ ನಿನಗೆ ಜಯವು.

೨೩. ಎಲೌ ದೇವಿಯೇ! ನೀನು ದೇವಾದಿಗಳಿಂದಲೂ ತಿಳಿಯಲಶಕ್ಯಳಾಗಿರುವೆ. ಸೂಕ್ಷ್ಮವಾಗಿರುವ ನಿನ್ನ ಆತ್ಮದೃಗ್ಭಾವದಿಂದ ಪ್ರಕಾಶಿಸುತ್ತಿರುವೆ. ಸ್ಥೂಲವಾದ ನಿನ್ನ ಶಕ್ತಿಯ ಅಂಶದಿಂದ ಸಮಸ್ತವಾದ ಪ್ರಪಂಚವನ್ನೂ ವ್ಯಾಪಿಸಿಕೊಂಡಿರುವೆ. ಹೀಗಿರುವ ನಿನಗೆ ಜಯವಾಗಲಿ.

೨೪. ಪ್ರಪಂಚದ ತತ್ವಗಳೆಲ್ಲವನ್ನೂ ನಿನಗೆ ಬೇಕಾದ ಅನೇಕರಲ್ಲಿರಿಸಿ, ಅಸುರರ ಶಿರಸ್ಸಿನಲ್ಲಿ ನಿನ್ನ ಪರಿವಾರದವರು ಅಧಿಕಾರಮಾಡುವಂತೆ ಮಾಡಿರುವ ಎಲೈ ದೇವನೆ! ನೀನು ಜಯಶೀಲನಾಗಿರು.

೨೫. ಆಶ್ರಿತರನ್ನು ಸಂರಕ್ಷಣೆಮಾಡುವುದರಲ್ಲಿ ಬೇಕಾದಷ್ಟು ಸಾಮರ್ಥ್ಯವನ್ನು ಹೊಂದಿರುವಳಾಗಿ, ಸಂಸಾರವೆಂಬ ವಿಷವೃಕ್ಷದ ಮೊಳಕೆಯನ್ನು ಕಿತ್ತುಹಾಕುವಳಾದ ಎಲೌ ದೇವಿಯೇ! ನೀನು ಜಯಶೀಲಳಾಗಿರು.

**ಜಯ ಪ್ರಾದೇಶಿಕೈಶ್ವರ್ಯವೀರ್ಯಶೌರ್ಯವಿಜೃಂಭಣ ।**
**ಜಯ ವಿಶ್ವಬಹಿರ್ಭೂತ ನಿರಸ್ತಪರವೈಭವ ॥ ೨೬ ॥**

**ಜಯ ಪ್ರಣೀತಪಂಚಾರ್ಥಪ್ರಯೋಗಪರಮಾಮೃತ ।**
**ಜಯ ಪಂಚಾರ್ಥವಿಜ್ಞಾನಸುಧಾಸ್ತೋತ್ರಸ್ವರೂಪಿಣಿ ॥ ೨೭ ॥**

**ಜಯಾತಿಘೋರಸಂಸಾರಮಹಾರೋಗಭಿಷಗ್ವರ ।**
**ಜಯಾನಾದಿಮಲಾಜ್ಞಾನತಮಃಪಟಲಚಂದ್ರಿಕೇ ॥ ೨೮ ॥**

**ಜಯ ತ್ರಿಪುರಕಾಲಾಗ್ನೇ ಜಯ ತ್ರಿಪುರಭೈರವಿ ।**
**ಜಯ ತ್ರಿಗುಣನಿರ್ಮುಕ್ತೇ ಜಯ ತ್ರಿಗುಣಮರ್ದಿನಿ ॥ ೨೯ ॥**

---

೨೬. ಎಲೈ ದೇವನೆ ! ನೀನು ಆಯಾಯ ಪ್ರದೇಶಗಳಲ್ಲಿ ನಿನ್ನ ಐಶ್ವರ್ಯ, ಪರಾಕ್ರಮ, ಸಾಮರ್ಥ್ಯ, ಇವುಗಳನ್ನು ಪ್ರಕಟಮಾಡುತ್ತಾ, ನೀನು ಪ್ರಪಂಚಕ್ಕಿಂತಲೂ ಬೇರೆಯಾಗಿದ್ದುಕೊಂಡು, ನಿನಗಿಂತಲೂ ಬೇರೆಯವರ ಮಹಿಮೆಯು ಹರಡದಂತೆ ಮಾಡಿರುವೆ ಇಂತಹ ನಿನಗೆ ಜಯವು.

೨೭. ಓ ದೇವನೇ, ನೀನು ಸೃಷ್ಟಿ, ಸ್ಥಿತಿ, ಲಯ, ಅನುಗ್ರಹ, ತಿರೋಭಾವಗಳೆಂಬ ಐದು ಕಾರ್ಯಗಳನ್ನು ಸರಿಯಾಗಿ ನಡೆಯಿಸಿಕೊಂಡು ಎಲ್ಲರನ್ನೂ ರಕ್ಷಿಸುವೆ. ನೀನು ಜಯಶೀಲನಾಗಿರು. ಈ ಐದು ಕಾರ್ಯಗಳ ತಿಳುವಳಿಕೆಯಿಂದ ಎಲ್ಲರಿಗೂ ಅನುಗ್ರಹಮಾಡುತ್ತಿರುವ ಎಲೈ ದೇವಿಯೆ ! ನೀರು ಜಯಶೀಲಳಾಗಿರು.

೨೮. ಓ ದೇವ, ನೀನು ಬಹಳ ಭಯಂಕರವಾದ ಸಂಸಾರವೆಂಬ ಪ್ರಬಲವಾದ ರೋಗವನ್ನು ನಾಶಮಾಡಲು ತಕ್ಕ ವೈದ್ಯನಾಗಿರುವೆ. ಇಂತಹ ನೀನು ಜಯಶೀಲನಾಗಿರು. ಮೊದಲಿನಿಂದಲೂ ಅನುಸರಿಸಿ ಬಂದಿರುವ ಅಜ್ಞಾನವೆಂಬ ಕಗ್ಗತ್ತಲೆಯನ್ನು ನಾಶಪಡಿಸುವ ಬೆಳದಿಂಗಳಿನ ರೂಪದಿಂದ ಇರುವ ಎಲೈ ದೇವಿಯೆ ! ನೀನು ಜಯಶೀಲಳಾಗಿರು.

೨೯. ತ್ರಿಪುರಗಳಲ್ಲಿದ್ದ ರಾಕ್ಷಸರನ್ನು ಪ್ರಳಯಕಾಲದ ಅಗ್ನಿಯಂತೆ ನಾಶಮಾಡಿ, ತ್ರಿಪುರರಿಗೆ ಭಯವನ್ನುಂಟುಮಾಡುವವಳಾಗಿ, ಸತ್ವರಜಸ್ತಮೋಗುಣಗಳಿಂದ ರಹಿತಳಾಗಿ ಸತ್ವರಜಸ್ತಮೋಗುಣಗಳನ್ನು ನಾಶಮಾಡುತ್ತಿರುವ ಎಲೌ ದೇವಿಯೆ ! ನೀನು ಜಯಶೀಲಳಾಗಿರು.

ಜಯ ಪ್ರಥಮಸರ್ವಜ್ಞ ಜಯ ಸರ್ವಪ್ರಬೋಧಿಕೇ ।
ಜಯ ಪ್ರಚುರದಿವ್ಯಾಂಗ ಜಯ ಪ್ರಾರ್ಥಿತದಾಯಿನಿ ॥ ೩೦ ॥

ಕ್ವ ದೇವ ತೇ ಪರಂ ಧಾಮ ಕ್ವ ಚ ತುಚ್ಛಂ ಚ ನೋ ವಚಃ ।
ತಥಾಪಿ ಭಗವನ್ಭಕ್ತ್ಯಾ ಪ್ರಲಪಂತಂ ಕ್ಷಮಸ್ವ ಮಾಂ ॥ ೩೧ ॥

ವಿಜ್ಞಾಪ್ಯೈವಂವಿಧೈಃ ಸೂಕ್ತೈರ್ವಿಶ್ವಕರ್ಮಾ ಚತುರ್ಮುಖಃ ।
ನಮಶ್ಚಕಾರ ರುದ್ರಾಯ ರುದ್ರಾಣ್ಯೈ ಚ ಮುಹುರ್ಮುಹುಃ ॥ ೩೨ ॥

ಇದಂ ಸ್ತೋತ್ರವರಂ ಪುಣ್ಯಂ ಬ್ರಹ್ಮಣಾ ಸಮುದೀರಿತಂ ।
ಅರ್ಧನಾರೀಶ್ವರಂ ನಾಮ ಶಿವಯೋರ್ಹರ್ಷವರ್ಧನಂ ॥ ೩೩ ॥

---

೩೦. ಅನಾದಿಕಾಲದಿಂದಲೂ ಸರ್ವಜ್ಞನೆನಿಸಿರುವ ಎಲೈ ದೇವನೆ! ಎಲ್ಲರನ್ನೂ ಎಚ್ಚರಗೊಳಿಸುವ ಎಲೈ ದೇವಿಯೆ! ನೀವಿಬ್ಬರೂ ಜಯಶೀಲರಾಗಿರಿ. ಪ್ರಕಟವಾದ ಉತ್ತಮ ಶರೀರವುಳ್ಳ ಎಲೈ ದೇವನೆ! ಬೇಡಿದವರ ಇಷ್ಟಗಳನ್ನು ಕೊಡುವ ಎಲೌ ದೇವಿಯೆ! ನೀವಿಬ್ಬರೂ ಜಯಶೀಲರಾಗಿರಿ.

೩೧. ಎಲೈ ದೇವನೆ! ನಿನ್ನ ಉತ್ತಮವಾದ ಪರಮಪದವೆಂಬ ಸ್ಥಾನವೆಲ್ಲಿ? ನನ್ನ ನೀಚವಾದ ಈ ವಾಕ್ಯಗಳೆಲ್ಲಿ? ಎಂದರೆ ನನ್ನ ಅಲ್ಪವಾಕ್ಯಗಳಿಂದ ನಿನ್ನ ಮಹಾ ಮಹಿಮೆಯನ್ನು ವರ್ಣಿಸಲು ಸಾಧ್ಯವೇ? ಇವುಗಳು ಒಂದಕ್ಕೊಂದು ಸಮನಲ್ಲವು. ಎಲೈ ಭಗವಂತನೆ! ಹೀಗಿದ್ದಾಗ್ಯೂ ಭಕ್ತಿಯಿಂದ ನಿನ್ನನ್ನು ಸ್ತೋತ್ರಮಾಡಬೇಕೆಂದು ಕೆಲವು ಮಾತುಗಳನ್ನು ಹೇಳುತ್ತಿರುವ ನನ್ನನ್ನು ಕ್ಷಮಿಸು. ಎಂದು ಸ್ತೋತ್ರ ಮಾಡಿದನು.

೩೨. ಚತುರ್ಮುಖಬ್ರಹ್ಮನು ತಾನು ಪ್ರಪಂಚವೆಲ್ಲವನ್ನೂ ನಿರ್ಮಿಸಿದವನಾದಾಗ್ಯೂ ಹೀಗೆಂದು ಹೇಳುತ್ತಾ ರುದ್ರನಿಗೂ, ರುದ್ರನ ಪತ್ನಿಗೂ ಸಹ ಅನೇಕಸಾರಿ ನಮಸ್ಕಾರವನ್ನು ಮಾಡಿದನು.

೩೩–೩೪. ಪಾರ್ವತೀಪರಮೇಶ್ವರರನ್ನು ಉದ್ದೇಶಮಾಡಿ ಬ್ರಹ್ಮನು ಮಾಡಿರುವ ಈ ಸ್ತೋತ್ರಕ್ಕೆ ಅರ್ಧನಾರೀಶ್ವರ ಸ್ತೋತ್ರವೆಂಮ ಹೆಸರು. ಈ ಸ್ತುತಿಯು ಪುಣ್ಯವನ್ನುಂಟುಮಾಡುವುದು. ಪಾರ್ವತೀಪರಮೇಶ್ವರರಿಗೆ ಸಂತೋಷವನ್ನುಂಟು

**ಯ ಇದಂ ಕೀರ್ತಯೇದ್ಭಕ್ತ್ಯಾ ಯಸ್ಯ ಕಸ್ಯಾಪಿ ಶಿಕ್ಷಯಾ ।**
**ಸ ತತ್ಫಲಮವಾಪ್ನೋತಿ ಶಿವಯೋಃ ಪ್ರೀತಿಕಾರಣಾತ್ ॥ ೩೪ ॥**

**ಸಕಲಭುವನಭೂತಿಭಾವನಾಭ್ಯಾಂ**
**ಜನನವಿನಾಶವಿಹೀನವಿಗ್ರಹಾಭ್ಯಾಂ ।**
**ನರವರಯುವತೀವಪುರ್ಧರಾಭ್ಯಾಂ**
**ಸತತಮಹಂ ಪ್ರಣತೋಽಸ್ಮಿ ಶಂಕರಾಭ್ಯಾಂ ॥ ೩೫ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಂ ಪೂರ್ವಭಾಗೆ ಶಿವಶಿವಾಸ್ತುತಿವರ್ಣನಂ ನಾಮ ಪಂಚದಶೋಽಧ್ಯಾಯಃ**



---

ಮಾಡುವುದು. ಈ ಸ್ತೋತ್ರವನ್ನು ಯಾರಿಂದಲಾದರೂ ಹೇಳಿಸಿಕೊಂಡು ಭಕ್ತಿಯಿಂದ ಪಠಿಸುವವರಿಗೆ ಪಾರ್ವತೀಪರಮೇಶ್ವರರು ಸಂತೋಷದಿಂದ ಬೇಕಾದ ವರಗಳನ್ನು ಕೊಡುವರು.

೩೫. ಎಲ್ಲಾ ಲೋಕಗಳಲ್ಲಿಯೂ ಇರುವ ಪ್ರಾಣಿಗಳ ಭಾವನೆಗೆ ಒಳಪಟ್ಟಿರುವವರಾಗಿಯೂ, ಜನನಮರಣರಹಿತವಾಗಿಯೂ, ಉತ್ತಮವಾಗಿಯೂ, ಇರುವ ಸ್ತ್ರೀಪುರುಷಶರೀರಗಳನ್ನು ಧರಿಸಿರುವವರೂ ಆದ ಪಾರ್ವತೀಪರಮೇಶ್ವರರನ್ನು ನಾನು ಯಾವಾಗಲೂ ನಮಸ್ಕರಿಸುತ್ತೇನೆ.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯಸಂಹಿತೆಯ ಪೂರ್ವಭಾಗದಲ್ಲಿ
ಪಾರ್ವತೀಪರಮೇಶ್ವರ ಸ್ತೋತ್ರವರ್ಣನವೆಂಬ ಹದಿನೈದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ
## ವಾಯುವೀಯಸಂಹಿತಾಯಾಂ ಪೂರ್ವಭಾಗೇ
## ಷೋಡಶೋಽಧ್ಯಾಯಃ

॥ ವಾಯುರುವಾಚ ॥

**ಅಥ ದೇವೋ ಮಹಾದೇವೋ ಮಹಾಜಲದನಾದಯಾ ।**
**ವಾಚಾ ಮಧುರಗಂಭೀರಶಿವದಶ್ಲಕ್ಷ್ಣವರ್ಣಯಾ** ॥ ೧ ॥

**ಅಥ ಸಂಪನ್ನಪದಯಾ ರಾಜಲಕ್ಷಣಯುಕ್ತಯಾ ।**
**ಅಶೇಷವಿಷಯಾರಂಭರಕ್ಷಾಪಿಮಲದಕ್ಷಯಾ** ॥ ೨ ॥

**ಮನೋಹರತರೋದಾರಮಧುರಸ್ಮಿತಪೂರ್ವಯಾ ।**
**ಸಂಬಬಾಷೇ ಸುಸಂಪ್ರೀತೋ ವಿಶ್ವಕರ್ಮಾಣಮೀಶ್ವರಃ** ॥ ೩ ॥

## ಹದಿನಾರನೆಯ ಅಧ್ಯಾಯವು

೧-೩. ವಾಯುದೇವನು ಹೇಳಿದನು :—ಅನಂತರದಲ್ಲಿ ಮಹಾದೇವನೆನಿಸಿಕೊಂಡಿರುವ ಶಿವನು ದೊಡ್ಡ ಮೇಘದ ಧ್ವನಿಯಂತೆ ಎಲ್ಲರಿಗೂ ಕೇಳಿಸುವಂತೆಯೂ, ಮಧುರವಾಗಿಯೂ, ಗಂಭೀರವಾಗಿಯೂ, ಕಿವಿಗೆ ಕೇಳಲು ಇಂಪಾಗಿಯೂ, ಮೃದುವಾದ ಅಕ್ಷರಗಳಿಂದ ಕೂಡಿಯೂ ಇರುವ ಮಾತುಗಳಿಂದಿಂತೆಂದನು. ಆಗ ಅವನು ಬ್ರಹ್ಮನ ಸಂಗಡ ಹೇಳಿದ ಮಾತು ಅರ್ಥಗರ್ಭಿತವಾಗಿಯೂ ರಾಜಲಕ್ಷಣಯುಕ್ತವಾಗಿಯೂ ಎಲ್ಲವನ್ನೂ ಸಂರಕ್ಷಣೆಮಾಡುವ ವಿಷಯದಲ್ಲಿ ಸಾಮರ್ಥ್ಯವನ್ನು ಸೂಚಿಸುವುದಾಗಿಯೂ ಇದ್ದಿತು. ಇಂತಹ ಮನೋಹರವೂ ಮೃದುಮಧುರವೂ ಆದ, ಮಂದಹಾಸಪೂರ್ವಕವಾಗಿ ಆಡಿದ ಮಾತು ಬ್ರಹ್ಮನ ವಿಷಯದಲ್ಲಿ ಈಶ್ವರನಿಗೆ ಇರುವ ಪ್ರೀತಿಯನ್ನು ಸ್ಪಷ್ಟಪಡಿಸುವುದಾಗಿತ್ತು.

॥ ಈಶ್ವರ ಉವಾಚ ॥

ವತ್ಸ ವತ್ಸ ಮಹಾಭಾಗ ಮಮ ಪುತ್ರ ಪಿತಾಮಹ ।
ಜ್ಞಾತಮೇವ ಮಯಾ ಸರ್ವಂ ತವ ವಾಕ್ಯಸ್ಯ ಗೌರವಂ ॥ ೪ ॥

ಪ್ರಜಾನಾಮೇವ ವೃದ್ಧ್ಯರ್ಥಂ ತಪಸ್ತಪ್ತಂ ತ್ವಯಾಧುನಾ ।
ತಪಸಾನೇನ ತುಷ್ಟೋಽಸ್ಮಿ ದದಾಮಿ ಚ ತವೇಽಪ್ಸಿತಂ ॥ ೫ ॥

ಇತ್ಯುಕ್ತ್ವಾ ಪರಮೋದಾರಂ ಸ್ವಭಾವಮಧುರಂ ವಚಃ ।
ಸಸರ್ಜ ವಪುಷೋ ಭಾಗಾದ್ದೇವೀಂ ದೇವವರೋ ಹರಃ ॥ ೬ ॥

ಯಾಮಾಹುರ್ಬ್ರಹ್ಮವಿದ್ವಾಂಸೋ ದೇವೀಂ ದಿವ್ಯಗುಣಾನ್ವಿತಾಂ ।
ಪರಸ್ಯ ಪರಮಾಂ ಶಕ್ತಿಂ ಭವಸ್ಯ ಪರಮಾತ್ಮನಃ ॥ ೭ ॥

ಯಸ್ಯಾಂ ನ ಖಲು ವಿದ್ಯಂತೇ ಜನ್ಮಮೃತ್ಯುಜರಾದಯಃ ।
ಯಾ ಭವಾನೀ ಭವಸ್ಯಾಂಗಾತ್ಸಮಾವಿರಭವತ್ಕಿಲ ॥ ೮ ॥

ಯಸ್ಯಾ ವಾಚೋ ನಿವರ್ತಂತೇ ಮನಸಾ ಚೇಂದ್ರಿಯೈಃ ಸಹಃ ।
ಸಾ ಭರ್ತುರ್ವಪುಷೋ ಭಾಗಾಜ್ಜಾತೇವ ಸಮದೃಶ್ಯತ ॥ ೯ ॥

---

೪-೬. ಈಶ್ವರನು ಹೇಳಿದನು:—ಎಲೈ ಮಗುವೆ! ಪುತ್ರನಾದ ಬ್ರಹ್ಮನೆ! ನೀನು ಈಗ ಹೇಳಿದ ವಾಕ್ಯಗಳ ಅರ್ಥಗೌರವವನ್ನು ನಾನು ಚೆನ್ನಾಗಿ ತಿಳಿದಿರುವೆನು, ಈಗ ನೀನು ಪ್ರಜೆಗಳ ವೃದ್ಧಿಗಾಗಿ ತಪಸ್ಸನ್ನು ಮಾಡಿರುತ್ತೀಯೆ. ನಿನ್ನ ಈ ತಪಸ್ಸಿನಿಂದ ನನಗೆ ಬಹಳ ಸಂತೋಷವಾಯಿತು. ನಿನ್ನ ಇಷ್ಟವನ್ನು ನೆರವೇರಿಸಿಕೊಡುತ್ತೇನೆ ಎಂದು ಶಿವನು ಬ್ರಹ್ಮನ ಸಂಗಡ ಸ್ವಭಾವಮೃದುವಾದ ಮಾತನ್ನು ಹೇಳಿ, ತನ್ನ ಶರೀರದ ಒಂದು ಭಾಗದಿಂದ ದೇವಿಯನ್ನು ನಿರ್ಮಿಸಿದನು.

೭-೮. ಬ್ರಹ್ಮನಿಷ್ಠರಾದ ಜ್ಞಾನಿಗಳು ಶಿವನ ಶರೀರದಿಂದ ಹುಟ್ಟಿರುವ ಈ ದೇವಿಯನ್ನು ಪರಮಾತ್ಮನ ಉತ್ತಮಗುಣಗಳಿಂದ ಕೂಡಿರುವ ಉತ್ಕೃಷ್ಟಳಾದ ಶಕ್ತಿದೇವತೆಯನ್ನಾಗಿ ಹೇಳುತ್ತಾರೆ. ಈ ದೇವಿಯನ್ನು ಉಪಾಸನೆ ಮಾಡುವವರಿಗೆ ಜನನ, ಮರಣ, ಮುಪ್ಪು, ಇವೇ ಮೊದಲಾದ ವಿಕಾರಗಳು ಇರುವುದಿಲ್ಲ.

೯. ಈ ಶಕ್ತಿದೇವಿಯನ್ನು ಇಂದ್ರಿಯಗಳ, ಮನಸ್ಸು, ಮಾತುಗಳು ಇವುಗಳಿಂದ ಊಹಿಸುವುದಕ್ಕಾಗಲಿ, ತಿಳಿಯುವುದಕ್ಕಾಗಲಿ, ಗುಣಗಳನ್ನು ಹೇಳುವುದ

**ಯಾ ಸಾ ಜಗದಿದಂ ಕೃತ್ಸ್ನಂ ಮಹಿಮ್ನಾ ವ್ಯಾಪ್ಯ ತಿಷ್ಠತಿ ।**
**ಶರೀರಿಣೀವ ಸಾ ದೇವೀ ವಿಚಿತ್ರಂ ಸಮಲಕ್ಷ್ಯತ । ॥ ೧೦ ॥**

**ಸರ್ವಂ ಜಗದಿದಂ ಚೈಷಾ ಸಂಮೋಹಯತಿ ಮಾಯಯಾ ।**
**ಈಶ್ವರಾತ್ಸೈವ ಜಾತಾಭೂದಜಾತಾ ಪರಮಾರ್ಥತಃ ॥ ೧೧ ॥**

**ನ ಯಸ್ಯಾಃ ಪರಮೋ ಭಾವಃ ಸುರಾಣಾಮಪಿ ಗೋಚರಃ ।**
**ವಿಶ್ವಾಮರೇಶ್ವರೀ ಚೈವ ವಿಭಕ್ತಾ ಭರ್ತುರಂಗತಃ ॥ ೧೨ ॥**

**ತಾಂ ದೃಷ್ಟ್ವಾ ಪರಮೇಶಾನೀಂ ಸರ್ವಲೋಕಮಹೇಶ್ವರೀಂ ।**
**ಸರ್ವಜ್ಞಾಂ ಸರ್ವಗಾಂ ಸೂಕ್ಷ್ಮಾಂ ಸದಸದ್ವ್ಯಕ್ತಿವರ್ಜಿತಾಂ ॥ ೧೩ ॥**

**ಪರಮಾಂ ನಿಖಿಲಂ ಭಾಸಾ ಭಾಸಯಂತೀಮಿದಂ ಜಗತ್ ।**
**ಪ್ರಣಿಪತ್ಯ ಮಹಾದೇವೀಂ ಪ್ರಾರ್ಥಯಾಮಾಸ ವೈ ವಿರಾಟ್ ॥ ೧೪ ॥**

---

ಕ್ಕಾಗಲಿ, ಸಾಧ್ಯವಾಗುವುದಿಲ್ಲ. ಈ ಪ್ರಕಾರವಾದ ಮಹಿಮೆಯುಳ್ಳ ದೇವಿಯು ತನ್ನ ಪತಿಯ ಶರೀರಭಾಗದಿಂದ ಆಗ ಹುಟ್ಟಿದಂತೆ ಎಲ್ಲರೂ ತಿಳಿದರು.

೧೦. ಆ ದೇವಿಯು ಜಗತ್ತೆಲ್ಲವನ್ನೂ ತನ್ನ ಮಹಿಮೆಯಿಂದ ವ್ಯಾಪಿಸಿಕೊಂಡಿರುವಳು. ಆದಾಗ್ಯೂ ಅವಳು ಶರೀರವನ್ನು ಹೊಂದಿರುವುದು ಆಶ್ಚರ್ಯಕರವಾಗಿ ಕಂಡುಬಂದಿತು.

೧೧. ಆ ದೇವಿಯು ಪಾರಮಾರ್ಥಿಕ ದೃಷ್ಟಿಯಿಂದ (ತತ್ತ್ವಸ್ಥಿತಿಯಿಂದ) ಹುಟ್ಟದಿದ್ದಾಗ್ಯೂ ಜಗತ್ತೆಲ್ಲವನ್ನೂ ತನ್ನ ಮಾಯೆಯಿಂದ ಮೋಹಗೊಳಿಸುವವಳಾಗಿ ಈಶ್ವರನಿಂದ ಹುಟ್ಟಿದಂತೆ ತೋರಿಸಿಕೊಂಡಳು.

೧೨. ತನ್ನ ಪತಿಯಾದ ಶಿವನ ಶರೀರದಿಂದ ಬೇರೆಯಾಗಿರುವಂತೆ ಕಾಣುತ್ತಿರುವ, ದೇವತೆಗಳೆಲ್ಲರಿಗೂ ಅಧಿಪಳಾದ ಈ ದೇವಿಯ ಉತ್ತಮವಾದ ಮಹಿಮೆಯು ದೇವತೆಗಳಿಗೂ ತಿಳಿಯಲಸಾಧ್ಯವಾಗಿರುವುದು.

೧೩–೧೪. ಈ ದೇವಿಗೆ ನಿತ್ಯ, ಅನಿತ್ಯವೆಂಬ ಭೇದಭಾವವಿರುವುದಿಲ್ಲ. ಈ ದೇವಿಯು ಸರ್ವಜ್ಞಳು, ಸರ್ವವ್ಯಾಪಕಳು ಸತ್, ಅಸತ್ ಎಂಬ ವ್ಯಕ್ತಾವ್ಯಕ್ತ ರೂಪರಹಿತಳು. ತನ್ನ ದಿವ್ಯವಾದ ತೇಜಸ್ಸಿನಿಂದ ಸಮಸ್ತ ಜಗತ್ತನ್ನೂ ಬೆಳಗುತ್ತಿರುವಳು. ಅಥವಾ ತನ್ನ ಶಕ್ತಿಮಹಿಮೆಯಿಂದ ಸಮಸ್ತ ಜಗತ್ತನ್ನು

॥ ಬ್ರಹ್ಮೋವಾಚ ॥

**ದೇವಿ ದೇವೇನ ಸೃಷ್ಟೋಽಹಮಾದೌ ಸರ್ವಜಗನ್ಮಯಿ ।**
**ಪ್ರಜಾಸರ್ಗೇ ನಿಯುಕ್ತಶ್ಚ ಸೃಜಾಮಿ ಸಕಲಂ ಜಗತ್ ॥ ೧೫ ॥**

**ಮನಸಾ ನಿರ್ಮಿತಾಃ ಸರ್ವೇ ದೇವಿ ದೇವಾದಯೋ ಮಯಾ ।**
**ನ ವೃದ್ಧಿಮುಪಗಚ್ಛಂತಿ ಸೃಜ್ಯಮಾನಾಃ ಪುನಃ ಪುನಃ ॥ ೧೬ ॥**

**ಮಿಥುನಪ್ರಭವಾಮೇವ ಕೃತ್ವಾ ಸೃಷ್ಟಿಮತಃ ಪರಂ ।**
**ಸಂವರ್ಧಯಿತುಮಿಚ್ಛಾಮಿ ಸರ್ವಾ ಏವ ಮಮ ಪ್ರಜಾಃ ॥ ೧೭ ॥**

**ನ ನಿರ್ಗತಂ ಪುರಾ ತ್ವತ್ತೋ ನಾರೀಣಾಂ ಕುಲಮವ್ಯಯಂ ।**
**ತೇನ ನಾರೀಕುಲಂ ಸ್ರಷ್ಟುಂ ಶಕ್ತಿರ್ಮಮ ನ ವಿದ್ಯತೇ ॥ ೧೮ ॥**

**ಸರ್ವಾಸಾಮೇವ ಶಕ್ತೀನಾಂ ತ್ವತ್ತಃ ಖಲು ಸಮುದ್ಭವಃ ।**
**ತಸ್ಮಾತ್ಸರ್ವತ್ರ ಸರ್ವೇಷಾಂ ಸರ್ವಶಕ್ತಿಪ್ರದಾಯಿನೀಂ ॥ ೧೯ ॥**

ಪ್ರೇರಿಸುವಳು ಇಂತಹ ಸರ್ವಜಗತ್ತಿಗೂ ಅಧಿಪತಿಯಾದ ಶಕ್ತಿದೇವತೆಯನ್ನು ಬ್ರಹ್ಮನು ನೋಡಿ ಭಕ್ತಿಪೂರ್ವಕವಾಗಿ ನಮಸ್ಕಾರಮಾಡಿ ಸ್ತೋತ್ರಮಾಡಿದನು.

೧೫-೧೭. ಬ್ರಹ್ಮನು ಹೇಳಿದನು :— ಸರ್ವಜಗತ್ಸ್ವರೂಪಳಾದ ಎಲೌ ದೇವಿ, ನಾನು ಪರಮೇಶ್ವರನಿಂದ ಮೊದಲು ಈ ಜಗತ್ತನ್ನು ಸೃಷ್ಟಿಮಾಡುವ ಉದ್ದೇಶದಿಂದ ನಿರ್ಮಿಸಲ್ಪಟ್ಟವನಾಗಿ ಪ್ರಜೆಗಳನ್ನೂ ಜಗತ್ತೆಲ್ಲವನ್ನೂ ಸೃಷ್ಟಿಮಾಡಿರುವೆನು. ನನ್ನ ಮನಸ್ಸಿನಿಂದಲೇ ದೇವತೆಗಳೇ ಮೊದಲಾದವರೆಲ್ಲರನ್ನೂ ನಿರ್ಮಿಸಿರುವೆನು. ಹೀಗೆ ನಾನು ಪುನಃ ಪುನಃ ಸೃಷ್ಟಿಮಾಡುತ್ತಿದ್ದರೂ ಅವರೆಲ್ಲರೂ ವೃದ್ಧಿಯನ್ನು ಹೊಂದದೆ ಇದ್ದಂತೆಯೇ ಇರುವರು. ಇದರಿಂದ ನನಗೆ ಪದೇ ಪದೇ ಸೃಷ್ಟಿಮಾಡುವ ಕೆಲಸವು ತಪ್ಪಿಯೇ ಇಲ್ಲವು. ಆದುದರಿಂದ ಈ ಪ್ರಜೆಗಳೆಲ್ಲರೂ ಇನ್ನು ಮುಂದೆ ಸ್ತ್ರೀಪುರುಷರ ಪರಸ್ಪರ ಸಂಬಂಧದಿಂದಲೇ ವೃದ್ಧಿಯನ್ನೈದುವಂತೆ ಮಾಡಬೇಕೆಂದು ನನ್ನ ಇಷ್ಟವು.

೧೮-೧೯. ನಿನ್ನ ದೆಸೆಯಿಂದ ಇದುವರಿಗೂ ಸ್ತ್ರೀಯರ ವಂಶಗಳು ಹುಟ್ಟಿರುವುದಿಲ್ಲ. ನಾಶವಿಲ್ಲದಿರುವಂತೆ ಎಂದರೆ ಅಭಿವೃದ್ಧಿಯನ್ನೈದುವಂತೆ ಆ ಕುಲಗಳನ್ನು ಸೃಷ್ಟಿಮಾಡುವ ಶಕ್ತಿಯೂ ನನಗೆ ಇಲ್ಲ. ಸಮಸ್ತಶಕ್ತಿಗಳಿಗೂ ನೀನೇ ಉತ್ಪತ್ತಿಸ್ಥಾನವು. ಎಲ್ಲರಿಗೂ ಎಲ್ಲಾ ವಿಧವಾದ ಶಕ್ತಿಯನ್ನು ಕೊಡುವ ಸಾಮರ್ಥ್ಯವು ನಿನಗಿರುವುದು. ಆದುದರಿಂದ ನಿನ್ನನ್ನು ಪ್ರಾರ್ಥಿಸುತ್ತೇನೆ.

**ತ್ವಾಮೇವ ವರದಾಂ ಮಾಯಾಂ ಪ್ರಾರ್ಥಯಾಮಿ ಸುರೇಶ್ವರೀಂ ।**
**ಚರಾಚರವಿವೃದ್ಧ್ಯರ್ಥಮಂಶೇನೈಕೇನ ಸರ್ವಗೇ ॥ ೨೦ ॥**

**ದಕ್ಷಸ್ಯ ಮಮ ಪುತ್ರಸ್ಯ ಪುತ್ರೀ ಭವ ಭವಾರ್ದಿನಿ ।**
**ಏವಂ ಸಾ ಯಾಚಿತಾ ದೇವೀ ಬ್ರಹ್ಮಣಾ ಬ್ರಹ್ಮಯೋನಿನಾ ॥ ೨೧ ॥**

**ಶಕ್ತಿಮೇಕಾಂ ಭ್ರುವೋರ್ಮಧ್ಯಾತ್ಸಸರ್ಜಾತ್ಮಸಮಪ್ರಭಾಂ ।**
**ತಾಮಾಹ ಪ್ರಹಸನ್ಪ್ರೇಕ್ಷ್ಯ ದೇವದೇವವರೋ ಹರಃ ॥ ೨೨ ॥**

**ಬ್ರಹ್ಮಾಣಂ ತಪಸಾರಾಧ್ಯ ಕುರು ತಸ್ಯ ಯಥೇಪ್ಸಿತಂ ।**
**ತಾಮಾಜ್ಞಾಂ ಪರಮೇಶಸ್ಯ ಶಿರಸಾ ಪ್ರತಿಗೃಹ್ಯ ಸಾ ॥ ೨೩ ॥**

**ಬ್ರಹ್ಮಣೋ ವಚನಾದ್ದೇವೀ ದಕ್ಷಸ್ಯ ದುಹಿತಾಭವತ್ ।**
**ದತ್ವೈವಮತುಲಾಂ ಶಕ್ತಿಂ ಬ್ರಹ್ಮಣೇ ಬ್ರಹ್ಮರೂಪಿಣೀಂ ॥ ೨೪ ॥**

---

೨೦-೨೧. ನೀನು ದೇವತೆಗಳಿಗೆಲ್ಲರಿಗೂ ಅಧಿಪತಿಯಾಗಿರುವೆ. ಕೇಳಿದವರಿಗೆ ಬೇಕಾದ ವರಗಳನ್ನು ಕೊಡುವವಳು. ನೀನು ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚದ ಅಭಿವೃದ್ಧಿಗಾಗಿ ನನಗೆ ಮಗನಾದ ದಕ್ಷಬ್ರಹ್ಮನ ಮಗಳಾಗಿ ನಿನ್ನ ಅಂಶದಿಂದ ಅವತಾರವನ್ನು ಮಾಡು ಎಂದನು.

೨೨-೨೩. ಪರಮೇಶ್ವರನಿಂದ ಉತ್ಪನ್ನನಾದ ಬ್ರಹ್ಮನು, ದೇವಿಯನ್ನು ಹೀಗೆ ಪ್ರಾರ್ಥನೆಮಾಡಲು ಆ ದೇವಿಯು ತನಗೆ ಸಮನಾದ ತೇಜಸ್ಸುಳ್ಳ ಶಕ್ತಿದೇವಿಯನ್ನು ತನ್ನ ಹುಬ್ಬಿನ ಮಧ್ಯದಿಂದ ನಿರ್ಮಿಸಿದಳು. ಆಗ ದೇವದೇವನಾದ ಶಿವನು ಆ ದೇವಿಯನ್ನು ನೋಡಿ, ತಪಸ್ಸಿನಿಂದ ನಿನ್ನನ್ನು ಸೇವೆಮಾಡಿರುವ ಈ ಬ್ರಹ್ಮನ ಇಷ್ಟವನ್ನು ನೆರವೇರಿಸು ಎಂದು ಹೇಳಿದನು. ಆಗ ಆ ದೇವಿಯು ಪರಮೇಶ್ವರನ ಅಪ್ಪಣೆಯನ್ನು ಶಿರಸಾವಹಿಸಿ ಬ್ರಹ್ಮನ ಪ್ರಾರ್ಥನೆಯ ಪ್ರಕಾರ ದಕ್ಷಬ್ರಹ್ಮನಿಗೆ ಮಗಳಾದಳು.

೨೪. ಆ ದೇವಿಯು ಸ್ತ್ರೀಯರನ್ನು ಸೃಷ್ಟಿಮಾಡುವ ಅಸದೃಶವಾದ ಸಾಮರ್ಥ್ಯವನ್ನೂ ಬ್ರಹ್ಮನಿಗೆ ಕೊಟ್ಟು, ಪರಮೇಶ್ವರನ ಶರೀರವನ್ನು ಪೂರ್ವದಂತೆಯೇ ಪ್ರವೇಶಿಸಿದಳು. ಪರಮೇಶ್ವರನೂ ಆಗ ಅಲ್ಲಿಯೇ ಅಂತರ್ಧಾನನಾದನು.

**ವಿವೇಶ ದೇಹಂ ದೇವಸ್ಯ ದೇವಶ್ಚಾಂತರಧೀಯತ ।**
**ತದಾಪ್ರಭೃತಿ ಲೋಕೇಽಸ್ಮಿನ್ಸ್ತ್ರಿಯಾಂ ಭೋಗಃ ಪ್ರತಿಷ್ಠಿತಃ ॥ ೨೫ ॥**

**ಪ್ರಜಾಸೃಷ್ಟಿಶ್ಚ ವಿಪ್ರೇಂದ್ರಾ ಮ್ಮೈಥುನೇನ ಪ್ರವರ್ತತೇ ।**
**ಬ್ರಹ್ಮಾಪಿ ಪ್ರಾಪ ಸಾನಂದಂ ಸಂತೋಷಂ ಮುನಿಪುಂಗವಾಃ ॥ ೨೬ ॥**

**ಏತದ್ವಸ್ಸರ್ವಮಾಖ್ಯಾತಂ ದೇವ್ಯಾಃ ಶಕ್ತಿಸಮುದ್ಭವಂ ।**
**ಪುಣ್ಯವೃದ್ಧಿಕರಂ ಶ್ರಾವ್ಯಂ ಭೂತಸರ್ಗಾನುಷಂಗತಃ ॥ ೨೭ ॥**

**ಯ ಇದಂ ಕೀರ್ತಯೇನ್ನಿತ್ಯಂ ದೇವ್ಯಾಃ ಶಕ್ತಿಸಮುದ್ಭವಂ ।**
**ಪುಣ್ಯಂ ಸರ್ವಮವಾಪ್ನೋತಿ ಪುತ್ರಾಂಶ್ಚ ಲಭತೇ ಶುಭಾನ್ ॥ ೨೮ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾಂ ಪೂರ್ವಭಾಗೆ ದೇವೀಶಕ್ತ್ಯುದ್ಭವವರ್ಣನಂ ನಾಮ ಷೋಡಶೋಽಧ್ಯಾಯಃ**

---

೨೫–೨೬. ಆಕಾಲ ಮೊದಲುಗೊಂಡು ಈ ಲೋಕದಲ್ಲಿ ಸ್ತ್ರೀಯರ ಸಂಗಡ ಭೋಗಪಡುವುದು ಪ್ರಾರಂಭವಾಯಿತು. ಎಲೈ ಋಷಿಗಳಿರಾ! ಕೇಳಿರಿ. ಸ್ತ್ರೀಪುರುಷರ ಸಂಭೋಗದಿಂದ ಪ್ರಜೆಗಳು ಹುಟ್ಟುವುದಕ್ಕೆ ಮೊದಲಾಯಿತು. ಇದನ್ನು ನೋಡಿ ಬ್ರಹ್ಮನಿಗೆ ಬಹು ಸಂತೋಷವಾಯಿತು

೨೭-೨೮. ಎಲೈ ಋಷಿಶ್ರೇಷ್ಠರೇ ! ಕೇಳಿರಿ. ಈ ರೀತಿಯಾಗಿ ದೇವಿಯಿಂದ ಶಕ್ತಿಯು ಹುಟ್ಟಿದ ಪ್ರಕಾರವೆಲ್ಲವನ್ನೂ ಹೇಳಿದೆನು. ಪ್ರಸಂಗವಶದಿಂದ ಪ್ರಾಣಿಗಳನ್ನು ಸೃಷ್ಟಿಮಾಡುವ ವಿವರವನ್ನೂ ಹೇಳಿರುತ್ತೇನೆ. ಶಕ್ತಿದೇವತೆಯು ಹುಟ್ಟಿದ ಈ ಕ್ರಮವು ಪವಿತ್ರಕರವಾದದ್ದು. ಇದನ್ನು ಎಲ್ಲರೂ ಶ್ರವಣಮಾಡಬೇಕು. ಶಕ್ತಿದೇವತೆಯು ಹುಟ್ಟಿದ ಕ್ರಮವನ್ನು ಪ್ರತಿನಿತ್ಯವೂ ಪಾರಾಯಣಮಾಡುವವನು ಸಮಸ್ತ ಪುಣ್ಯವನ್ನು ಗಳಿಸುವುದಲ್ಲದೆ ಉತ್ತಮರಾದ ಮಕ್ಕಳನ್ನೂ ಪಡೆಯುವನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಪೂರ್ವಖಂಡದಲ್ಲಿ ದೇವೀಶಕ್ತಿಯು ಉತ್ಪನ್ನಳಾದ ವಿವರವನ್ನು ತಿಳಿಸುವ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ
## ವಾಯವೀಯಸಂಹಿತಾಯಾಂ ಪೂರ್ವಭಾಗೇ
## ಸಪ್ತದಶೋಽಧ್ಯಾಯಃ

॥ ವಾಯುರುವಾಚ ॥

ಏವಂ ಲಬ್ಧ್ವಾ ಪರಾಂ ಶಕ್ತಿಮೀಶ್ವರಾದೇವ ಶಾಶ್ವತೀಂ ।
ಮೈಥುನಪ್ರಭವಾಂ ಸೃಷ್ಟಿಂ ಕರ್ತುಕಾಮಃ ಪ್ರಜಾಪತಿಃ ॥ ೧ ॥

ಸ್ವಯಮುಪ್ಯದ್ಭುತೋ ನಾರೀ ಚಾರ್ಧ್ದೇನ ಪುರುಷೋಽಭವತ್ ।
ಯಾರ್ಧ್ದೇನ ನಾರೀ ಸಾ ತಸ್ಮಾಚ್ಛತರೂಪಾ ವ್ಯಜಾಯತ ॥ ೨ ॥

ವಿರಾಜಮಸೃಜದ್ಬ್ರಹ್ಮಾ ಸೋಽರ್ಧೇನ ಪುರುಷೋಽಭವತ್ ।
ಸ ವೈ ಸ್ವಾಯಂಭುವಃ ಪೂರ್ವಂ ಪುರುಷೋ ಮನುರುಚ್ಯತೇ ॥ ೩ ॥

---

## ಹದಿನೇಳನೆಯ ಅಧ್ಯಾಯವು

೧–೩. ವಾಯುದೇವನಿಂತೆಂದನು:—ಬ್ರಹ್ಮನು ಶಿವನಿಂದ, ನಿತ್ಯವೂ ಉತ್ಕೃಷ್ಟವೂ ಆದ ಸೃಷ್ಟಿಮಾಡುವ ಶಕ್ತಿಯನ್ನು ಹೊಂದಿದನಂತರ, ಪ್ರಪಂಚದಲ್ಲಿ ಮಿಥುನದಿಂದ ಸೃಷ್ಟಿಯಾಗುವ ಬಗೆಯನ್ನು ಹೆಚ್ಚಿಸಬೇಕೆಂದು ಉದ್ದೇಶಿಸಿ, ತಾನೂ ತನ್ನ ಶರೀರದ ಅರ್ಧದಿಂದ ಇತರರಿಗೆ ಆಶ್ಚರ್ಯವನ್ನುಂಟುಮಾಡುವ ಸ್ತ್ರೀರೂಪವನ್ನೂ, ಉಳಿದ ಅರ್ಧಭಾಗದಿಂದ ಪುರುಷನ ರೂಪವನ್ನು ಹೊಂದಿದನು. ಅವನ ಶರೀರದ ಅರ್ಧಭಾಗವನ್ನು ಒಳಗೊಂಡಿರುವ ಆ ಹೆಂಗಸಿಗೆ ಶತರೂಪಾ ಎಂದು ಹೆಸರಾಯಿತು. ಉಳಿದ ಅರ್ಧಭಾಗದಿಂದ ಬ್ರಹ್ಮನು ವಿರಾಜನೆಂಬ ಪುರುಷನನ್ನು ಸೃಜಿಸಿದನು. ಆ ವಿರಾಜನೆಂಬುವನೇ ಸ್ವಾಯಂಭುವಮನುವು.

ಸಾ ದೇವೀ ಶತರೂಪಾ ತು ತಪಃ ಕೃತ್ವಾ ಸುದುಶ್ಚರಂ ।
ಭರ್ತಾರಂ ದೀಪ್ತಯಶಸಂ ಮನುಮೇವಾನ್ವಪದ್ಯತ ॥ ೪ ॥

ತಸ್ಮಾತ್ತು ಶತರೂಪಾ ಸಾ ಪುತ್ರದ್ವಯಮಸೂಯತ ।
ಪ್ರಿಯವ್ರತೋತ್ತಾನಪಾದೌ ಪುತ್ರೌ ಪುತ್ರವತಾಂ ವರೌ ॥ ೫ ॥

ಕನ್ಯೇ ದ್ವೇ ಚ ಮಹಾಭಾಗೇ ಯಾಭ್ಯಾಂ ಜಾತಾಸ್ತ್ವಿಮಾಃ ಪ್ರಜಾಃ ।
ಆಕೂತಿರೇಕಾ ವಿಜ್ಞೇಯಾ ಪ್ರಸೂತಿರಪರಾ ಸ್ಮೃತಾ । ॥ ೬ ॥

ಸ್ವಾಯಂಭುವಃ ಪ್ರಸೂತಿಂ ಚ ದದೌ ದಕ್ಷಾಯ ತಾಂ ಪ್ರಭುಃ ।
ರುಚೇಃ ಪ್ರಜಾಪತಿಶ್ಚೈವ ಚಾಕೂತಿಂ ಸಮಪಾದಯತ್ ॥ ೭ ॥

ಆಕೂತ್ಯಾಂ ಮಿಥುನಂ ಜಜ್ಞೇ ಮಾನಸಸ್ಯ ರುಚೇಃ ಶುಭಂ ।
ಯಜ್ಞಶ್ಚ ದಕ್ಷಿಣಾ ಚೈವ ಯಾಭ್ಯಾಂ ಸಂವರ್ತಿತಂ ಜಗತ್ ॥ ೮ ॥

ಸ್ವಾಯಂಭುವಸುತಾಯಾಂ ತು ಪ್ರಸೂತ್ಯಾಂ ಲೋಕಮಾತರಃ ।
ಚತಸ್ರೋ ವಿಂಶತಿಃ ಕನ್ಯಾ ದಕ್ಷಸ್ತ್ವಜನಯತ್ಪ್ರಭುಃ ॥ ೯ ॥

೪-೬. ಶತರೂಪಾದೇವಿಯು, ಯಾರೂ ಮಾಡಲಶಕ್ಯವಾದ ತಪಸ್ಸನ್ನು ಮಾಡಿ ಬಹಳ ತೇಜಶ್ಶಾಲಿಯಾದ ಮನುವನ್ನು ಗಂಡನನ್ನಾಗಿ ಪಡೆದಳು. ಅವನಿಂದಲೇ ಪ್ರಿಯವ್ರತ, ಉತ್ತಾನಪಾದರೆಂಬ ಇಬ್ಬರು ಪುತ್ರಶ್ರೇಷ್ಠರಾದ ಗಂಡು ಮಕ್ಕಳನ್ನೂ, ಇಬ್ಬರು ಹೆಣ್ಣುಮಕ್ಕಳನ್ನೂ ಪಡೆದಳು. ಆ ಹೆಣ್ಣುಮಕ್ಕಳಲ್ಲಿ ಓರ್ವಳ ಹೆಸರು ಆಕುತಿಯೆಂದು. ಮತ್ತೊಬ್ಬಳ ಹೆಸರು ಪ್ರಸೂತಿಯೆಂದು. ಈ ಇಬ್ಬರು ಕನ್ಯೆಯರ ಸಂತಾನಗಳಿಂದಲೇ ಈ ಜಗತ್ತಿನ ಪ್ರಜೆಗಳೆಲ್ಲರೂ ಹುಟ್ಟಿರುವರು.

೭-೮ ಪ್ರಭುವಾದ ಸ್ವಾಯಂಭುವಮನುವು ಪ್ರಸೂತಿಯನ್ನು ದಕ್ಷಬ್ರಹ್ಮನಿಗೆ ಮದುವೆಮಾಡಿಕೊಟ್ಟನು. ಆಕೂತಿಯನ್ನು ರುಚಿ ಎಂಬುವನಿಗೆ ಕೊಟ್ಟನು. ಬ್ರಹ್ಮನ ಮಾನಸಪುತ್ರನಾದ ರುಚಿಯು ಆಕೂತಿಯಲ್ಲಿ ಯಜ್ಞ, ದಕ್ಷಿಣಾ ಎಂಬ ಇಬ್ಬರು ಮಕ್ಕಳನ್ನು ಪಡೆದನು. ಇವರಿಬ್ಬರಿಂದ ಈ ಪ್ರಪಂಚವು ವೃದ್ಧಿಗೊಂಡಿತು.

೯-೧೨ ದಕ್ಷಬ್ರಹ್ಮನಿಂದ ಪ್ರಸೂತಿಯಲ್ಲಿ ಇಪ್ಪತ್ತನಾಲ್ಕು ಮಂದಿ ಹೆಣ್ಣು ಮಕ್ಕಳು ಹುಟ್ಟಿದರು. ಈ ಪ್ರಸೂತಿಯು ಸ್ವಾಯಂಭುವಮನುವಿನ ಮಗಳು.

ಶ್ರದ್ಧಾ ಲಕ್ಷ್ಮೀರ್ಧೃತಿಃ ಪುಷ್ಟಿಸ್ತುಷ್ಟಿರ್ಮೇಧಾ ಕ್ರಿಯಾ ತಥಾ ।
ಬುದ್ಧಿರ್ಲಜ್ಜಾ ವಪುಃ ಶಾಂತಿಸ್ಸಿದ್ಧಿಃ ಕೀರ್ತಿಸ್ತ್ರಯೋದಶೀ ॥ ೧೦ ॥

ಪತ್ನ್ಯರ್ಥಂ ಪ್ರತಿಜಗ್ರಾಹ ಧರ್ಮೋ ದಾಕ್ಷಾಯಣೀಃ ಪ್ರಭುಃ ।
ತಾಭ್ಯಃ ಶಿಷ್ಟಾ ಯವೀಯಸ್ಯ ಏಕಾದಶ ಸುಲೋಚನಾಃ ॥ ೧೧ ॥

ಖ್ಯಾತಿಃ ಸತ್ಯರ್ಥಸಂಭೂತಿಃ ಸ್ಮೃತಿಃ ಪ್ರೀತಿಃ ಕ್ಷಮಾ ತಥಾ ।
ಸನ್ನತಿಶ್ಚಾನಸೂಯಾ ಚ ಊರ್ಜಾ ಸ್ವಾಹಾ ಸ್ವಧಾ ತಥಾ ॥ ೧೨ ॥

ಭೃಗುಶ್ಶರ್ವೋ ಮರೀಚಿಶ್ಚ ಅಂಗಿರಾಃ ಪುಲಹಃ ಕ್ರತುಃ ।
ಪುಲಸ್ತ್ಯೋಽತ್ರಿರ್ವಸಿಷ್ಠಶ್ಚ ಪಾವಕಃ ಪಿತರಸ್ತಥಾ ॥ ೧೩ ॥

ಖ್ಯಾತ್ಯಾದ್ಯಾ ಜಗೃಹುಃ ಕನ್ಯಾ ಮುನಯೋ ಮುನಿಸತ್ತಮಾಃ ।
ಕಾಮಾದ್ಯಾಸ್ತು ಯಶೋಂತಾ ಯೇ ತೇ ತ್ರಯೋದಶ ಸೂನವಃ ॥ ೧೪ ॥

---

ಇವಳಲ್ಲಿ ಹುಟ್ಟಿದವರೆಲ್ಲರೂ ಪ್ರಪಂಚಕ್ಕೆಲ್ಲಕ್ಕೂ ತಾಯಿಯರಾಗಿದ್ದರು. ಇವರಲ್ಲಿ ಶ್ರದ್ಧಾ, ಲಕ್ಷ್ಮೀ, ಧೃತಿ, ಪುಷ್ಟಿ, ತುಷ್ಟಿ, ಮೇಧಾ, ಕ್ರಿಯಾ, ಬುದ್ಧಿ, ಲಜ್ಜಾ, ವಪುಃ, ಶಾಂತಿಃ, ಸಿದ್ಧಿ, ಕೀರ್ತಿ ಎಂದು ಹೆಸರುಳ್ಳ ದಕ್ಷಬ್ರಹ್ಮನ ಹದಿಮೂರು ಜನ ಹೆಣ್ಣು ಮಕ್ಕಳನ್ನೂ ದಕ್ಷಬ್ರಹ್ಮನು ಧರ್ಮನಿಗೆ ಮದುವೆಮಾಡಿಕೊಟ್ಟನು. ಖ್ಯಾತಿ, ಸತೀ, ಅರ್ಥಸಂಭೂತಿ, ಸ್ಮೃತಿ, ಪ್ರೀತಿ, ಕ್ಷಮಾ, ಸಂತತಿ, ಅನಸೂಯಾ, ಊರ್ಜಾ, ಸ್ವಾಹಾ, ಸ್ವಧಾ ಎಂದು ಹೆಸರುಳ್ಳ ಹನ್ನೊಂದು ಜನ ಹೆಣ್ಣುಮಕ್ಕಳು ಮದುವೆಗೆ ಸಿದ್ಧವಾಗಿದ್ದರು.

೧೩-೧೬. ಎಲೈ ಋಷಿಶ್ರೇಷ್ಠರೇ, ಕೇಳಿರಿ. ಭೃಗು, ಶರ್ವ, ಮರೀಚಿ, ಅಂಗಿರಸ್ಸು, ಪುಲಹ, ಕ್ರತು, ಪುಲಸ್ತ್ಯ, ಅತ್ರಿ, ವಸಿಷ್ಠ, ಪಾವಕ, ಪಿತೃಗಳು ಎಂದು ಹೆಸರುಳ್ಳ ಹನ್ನೊಂದು ಜನರೂ ದಕ್ಷಬ್ರಹ್ಮನ ಖ್ಯಾತಿಯೇ ಮೊದಲಾದ ಹನ್ನೊಂದು ಜನ ಪುತ್ರಿಯರನ್ನು ಮದುವೆಮಾಡಿಕೊಂಡರು. ಕಾಮ ಎಂಬ ಹೆಸರಿನವನೇ ಮೊದಲಾಗಿ ಯಶಸ್ಸೆಂಬ ಹೆಸರಿನವನು ಕೊನೆಯಾಗಿರುವ ಹದಿಮೂರು ಮಂದಿ ಮಕ್ಕಳು ಎಂದರೆ ಕಾಮ, ದರ್ಪ, ನಿಲಯ, ಸಂತೋಷ, ಲಾಭ, ಶ್ರುತ, ದಂಡ, ಸಮಯ, ಬೋಧ, ಅಪ್ರಮಾದ, ವಿಲಯ, ಸುಖ, ಯಶ ಎಂಬುವರು ಧರ್ಮನಿಂದ ಹುಟ್ಟಿದರು. ಶ್ರದ್ಧಾ ಇತ್ಯಾದಿಗಳು ಹೆಚ್ಚಾಗಿ ಸುಖವನ್ನು ಅನುಭವಿಸಿದವರು.

**ಧರ್ಮಸ್ಯ ಜಜ್ಞಿರೇ ತಾಸ್ತು ಶ್ರದ್ಧಾದ್ಯಾಸ್ಸುಖೋತ್ತರಾಃ ।**
**ದುಃಖೋತ್ತರಾಶ್ಚ ಹಿಂಸಾಯಾಮಧರ್ಮಸ್ಯ ಚ ಸಂತತೌ ॥ ೧೫ ॥**

**ನಿಕೃತ್ಯಾದಯ ಉತ್ಪನ್ನಾಃ ಪುತ್ರಾಶ್ಚ ಧರ್ಮಲಕ್ಷಣಾಃ ।**
**ನೈಷಾಂ ಭಾರ್ಯಾಶ್ಚ ಪುತ್ರಾ ವಾ ಸರ್ವೇ ತ್ವನಿಯಮಾಃ ಸ್ಮೃತಾಃ ॥೧೬॥**

**ಸ ಏಷ ತಾಮಸಸ್ಸರ್ಗೋ ಜಜ್ಞೇ ಧರ್ಮನಿಯಾಮಕಃ ।**
**ಯಾ ಸಾ ದಕ್ಷಸ್ಯ ದುಹಿತಾ ರುದ್ರಸ್ಯ ದಯಿತಾ ಸತೀ ॥ ೧೭ ॥**

**ಭರ್ತೃನಿಂದಾಪ್ರಸಂಗೇನ ತ್ಯಕ್ತ್ವಾ ದಾಕ್ಷಾಯಣೀಂ ತನುಂ ।**
**ದಕ್ಷಂ ಚ ದಕ್ಷಭಾರ್ಯಾಂ ಚ ವಿನಿಂದ್ಯ ಸಹ ಬಂಧುಭಿಃ ॥ ೧೮ ॥**

**ಸಾ ಮೇನಾಯಾಮಾವಿರಭೂತ್ಪುತ್ರೀ ಹಿಮವತೋ ಗಿರೇಃ ।**
**ರುದ್ರಸ್ತು ತಾಂ ಸತೀಂ ದೃಷ್ಟ್ವಾ ರುದ್ರಾಂಸ್ತ್ವಾತ್ಮಸಮಪ್ರಭಾನ್ ॥ ೧೯ ॥**

---

ಅಧರ್ಮನ ಸಂತತಿಯು ಹಿಂಸೆಯೆಂಬುವಳಿಂದ ವೃದ್ಧಿಹೊಂದಿತು ಇವರೆಲ್ಲರೂ ದುಃಖವೇ ಹೆಚ್ಚಾಗಿರುವವರು. ಮತ್ತು ಅಧರ್ಮನಿಗೆ ನಿಕೃತಿ ಎಂಬ ಹೆಸರುಳ್ಳವರೇ ಮೊದಲಾದ ಮಕ್ಕಳುಗಳು ಹುಟ್ಟಿದರು. ಇವರಲ್ಲಿ ಅಧರ್ಮವೇ ಹೆಚ್ಚಾಗಿದ್ದಿತು. ಇವರಿಗೆ ಕ್ಲುಪ್ತರಾದ ಹೆಂಡತಿಯರೂ ಮಕ್ಕಳೂ ಇಲ್ಲ. ಇವರ ಹೆಂಡತಿಯರೂ ಮಕ್ಕಳೂ ಲೋಕನಿಯಮಕ್ಕೆ ಬದ್ಧರಾಗಿರಲಿಲ್ಲ. ಈ ಸೃಷ್ಟಿಯು ಅಧರ್ಮದ ನಿಯಮ ದಿಂದ ಹುಟ್ಟಿದ್ದಾಗಿ ತಾಮಸಸೃಷ್ಟಿಯೆಂದೆನಿಸಿಕೊಂಡಿತು.

೧೭-೧೮. ದಕ್ಷಬ್ರಹ್ಮನ ಮಗಳಾದ, ರುದ್ರನ ಹೆಂಡತಿಯಾದ ಸತೀದೇವಿಯು ತನ್ನ ಪತಿಗೆ ದಕ್ಷನು ಅವಮಾನಮಾಡಿದನೆಂದು ದಕ್ಷಬ್ರಹ್ಮನನ್ನೂ, ಅವನ ಹೆಂಡತಿ ಯನ್ನೂ ನಿಂದಿಸಿ, ತಾನು ಆ ಶರೀರವನ್ನು ತ್ಯಾಗಮಾಡಿ ಹಿಮವತ್ಪರ್ವತನ ಹೆಂಡತಿ ಯಾದ ಮೇನಾ ಎಂಬುವಳಲ್ಲಿ ಮಗಳಾಗಿ ಪಾರ್ವತೀ ಎಂಬ ಹೆಸರಿನಿಂದ ಅವತರಿಸಿದಳು.

೧೯-೨೧. ರುದ್ರನು ಆ ಸತೀದೇವಿಯಲ್ಲಿ ತನಗೆ ಸಮನಾದ ಮಹಿಮೆಯುಳ್ಳ ಲೆಕ್ಕವಿಲ್ಲದಿರುವಷ್ಟು ಮಕ್ಕಳನ್ನು ಪಡೆದನೆಂದು ಹಿಂದೆಯೇ ಹೇಳಿರುವುದು. ಭೃಗು

ಯಥಾಸೃಜದಸಂಖ್ಯಾತಾಂಸ್ತಥಾ ಕಥಿತಮೇವ ಚ ।
ಭೃಗೋಃ ಖ್ಯಾತ್ಯಾಂ ಸಮುತ್ಪನ್ನಾ ಲಕ್ಷ್ಮೀರ್ನಾರಾಯಣಪ್ರಿಯಾ ॥ ೨೦ ॥

ದೇವೌ ಧಾತೃವಿಧಾತಾರೌ ಮನ್ವಂತರವಿಧಾರಿಣೌ ।
ತಯೋರ್ವೈ ಪುತ್ರಪೌತ್ರಾದ್ಯಾಃ ಶತಶೋಽಥ ಸಹಸ್ರಶಃ ॥ ೨೧ ॥

ಸ್ವಾಯಂಭುವೇಽಂತರೇ ನೀತಾಃ ಸರ್ವೇ ತೇ ಭಾರ್ಗವಾ ಮತಾಃ ।
ಮರೀಚೇರಪಿ ಸಂಭೂತಿಃ ಪೌರ್ಣಮಾಸಮಸೂಯತ ॥ ೨೨ ॥

ಕನ್ಯಾಚತುಷ್ಟಯಂ ಚೈವ ಮಹೀಯಾಂಸಸ್ತದನ್ವಯಾಃ ।
ಯೇಷಾಂ ವಂಶೇ ಸಮುತ್ಪನ್ನೋ ಬಹುಪುತ್ರಸ್ಯ ಕಶ್ಯಪಃ ॥ ೨೩ ॥

ಸ್ಮೃತಿಶ್ಚಾಂಗಿರಸಃ ಪತ್ನೀ ಜನಯಾಮಾಸ ವೈ ಸುತೌ ।
ಆಗ್ನೀಧ್ರಂ ಶರಭಂ ಚೈವ ತಥಾ ಕನ್ಯಾಚತುಷ್ಟಯಂ ॥ ೨೪ ॥

ತದೀಯಾಃ ಪುತ್ರಪೌತ್ರಾಶ್ಚ ಯೇಽತೀತಾಸ್ತೇ ಸಹಸ್ರಶಃ ।
ಪ್ರೀತ್ಯಾಂ ಪುಲಸ್ತ್ಯಭಾರ್ಯಾಯಾಂ ದಂತೋಗ್ನಿರಭವತ್ಸುತಃ ।
ಪೂರ್ವಜನ್ಮನಿ ಯೋಽಗಸ್ತ್ಯಸ್ಸ್ಮೃತಃ ಸ್ವಾಯಂಭುವೇಽಂತರೇ ॥ ೨೫ ॥

---

ಋಷಿಯಿಂದ ಖ್ಯಾತಿಯೆಂಬುವಳಲ್ಲಿ ವಿಷ್ಣುವಿಗೆ ಪತ್ನಿಯಾದ ಲಕ್ಷ್ಮಿಯು, ಹುಟ್ಟಿದಳು. ಮತ್ತು ಮನ್ವಂತರಗಳನ್ನು ಕ್ಲುಪ್ತಮಾಡವವರಾದ ಧಾತೃ, ವಿಧಾತೃ ಎಂಬ ಇಬ್ಬರು ದೇವತೆಗಳೂ ಹುಟ್ಟಿದರು. ಇವರುಗಳ ಸಂತತಿಯೆಲ್ಲವೂ ಇವರ ಮಕ್ಕಳು, ಮೊಮ್ಮಕ್ಕಳು ಇವರಿಂದ ತುಂಬಿದ್ದುದಾಗಿ ಭಾರ್ಗವರೆಂಬ ಹೆಸರಿನಿಂದ ಸ್ವಾಯಂಭುವ ಮನ್ವಂತರದಲ್ಲಿ ಪ್ರಸಿದ್ಧಿಯನ್ನು ಹೊಂದಿತ್ತು.

೨೨-೨೪. ಸಂಭೂತಿಯೆಂಬುವಳು ಮರೀಚಿಋಷಿಯಿಂದ ಪೌರ್ಣಮಾಸನೆಂಬ ಮಗನನ್ನೂ, ನಾಲ್ಕುಜನ ಹೆಣ್ಣುಮಕ್ಕಳನ್ನೂ ಪಡೆದಳು. ಈ ಮರೀಚಿ ಋಷಿಯ ವಂಶವು ಬಹಳ ದೊಡ್ಡದಾಗಿರುವುದು. ಇವನ ವಂಶದಲ್ಲಿಯೇ ಬಹಳ ಮಕ್ಕಳುಳ್ಳ ಕಶ್ಯಪನು ಹುಟ್ಟಿರುವುದು. ಅಂಗಿರಸ್ಸೆಂಬ ಋಷಿಯ ಹೆಂಡತಿಯಾದ ಸ್ಮೃತಿಯು ಆಗ್ನೀಧ್ರ, ಶರಭ ಎಂಬ ಇಬ್ಬರು ಗಂಡುಮಕ್ಕಳನ್ನೂ, ನಾಲ್ಕುಜನ ಹೆಣ್ಣುಮಕ್ಕಳನ್ನೂ ಹೆತ್ತಳು.

೨೫-೨೭. ಅವರ ಮಕ್ಕಳು, ಮೊಮ್ಮಕ್ಕಳು ಇವರುಗಳು ಸಾವಿರಗಟ್ಟಲೆಯಾಗಿ ಇದ್ದರು. ಪುಲಸ್ತ್ಯಋಷಿಯ ಹೆಂಡತಿಯಾದ ಪ್ರೀತಿಯೆಂಬುವಳಲ್ಲಿ ದಂತ

ತತ್ಸಂತತೀಯಾ ಬಹವಃ ಪೌಲಸ್ತ್ಯಾ ಇತಿ ವಿಶ್ರುತಾಃ ।
ಕ್ಷಮಾ ತು ಸುಷುವೇ ಪುತ್ರಾನ್ಪುಲಹಸ್ಯ ಪ್ರಜಾಪತೇಃ ॥ ೨೬ ॥

ಕರ್ದಮಶ್ಚಾಸುರಿಶ್ಚೈವ ಸಹಿಷ್ಣುಶ್ಚೇತಿ ತೇ ತ್ರಯಃ ।
ತ್ರೇತಾಗ್ನಿವರ್ಚಸಸ್ಸರ್ವೇ ಯೇಷಾಂ ವಂಶಃ ಪ್ರತಿಷ್ಠಿತಃ ॥ ೨೭ ॥

ಕ್ರತೋಃ ಕ್ರತುಸಮಾನ್ಭಾರ್ಯಾ ಸನ್ನತಿಸ್ಸುಷುವೇ ಸುತಾನ್ ।
ನೈಷಾಂ ಭಾರ್ಯಾಶ್ಚ ಪುತ್ರಾಶ್ಚ ಸರ್ವೇ ತೇ ಹ್ಯೂರ್ಧ್ವರೇತಸಃ ॥ ೨೮ ॥

ಷಷ್ಟಿಸ್ತಾನಿ ಸಹಸ್ರಾಣಿ ವಾಲಖಿಲ್ಯಾ ಇತಿ ಸ್ಮೃತಾಃ ।
ಅನೂರೋರಗ್ರತೋ ಯಾಂತಿ ಪರಿವಾರ್ಯ ದಿವಾಕರಂ ॥ ೨೯ ॥

ಅತ್ರೇರ್ಭಾರ್ಯಾನಸೂಯಾ ಚ ಪಂಚಾತ್ರೇಯಾನಸೂಯತ ।
ಕನ್ಯಕಾಂ ಚ ಶ್ರುತಿಂ ನಾಮ ಮಾತಾ ಶಂಖಪದಸ್ಯ ಚ ॥ ೩೦ ॥

---

ನೆಂದು ಹೆಸರುಳ್ಳ ಅಗ್ನಿಯು ಹುಟ್ಟಿದನು. ಸ್ವಾಯಂಭುವ ಮನ್ವಂತರದಲ್ಲಿ ಇವನು ಅಗಸ್ತ್ಯನಾಗಿದ್ದನು. ಇವನ ವಂಶದವರಿಗೆಲ್ಲರಿಗೂ ಪೌಲಸ್ತ್ಯರೆಂದು ಹೆಸರಾಗಿರುವುದು. ಇವರೂ ಅನೇಕ ಮಂದಿ ಇದ್ದರು. ಪುಲಹಬ್ರಹ್ಮನಿಗೆ ಕರ್ದಮ, ಆಸುರಿ, ಸಹಿಷ್ಣು ಎಂದು ಹೆಸರುಳ್ಳ ಮೂರು ಜನ ಗಂಡುಮಕ್ಕಳು ಕ್ಷಮಾದೇವಿಯಲ್ಲಿ ಹುಟ್ಟಿದರು. ಇವರೆಲ್ಲರೂ ತ್ರೇತಾಗ್ನಿಗೆ ಸಮನಾದ ಕಾಂತಿಯುಳ್ಳವರಾಗಿದ್ದರು. ಇವರ ವಂಶವು ಬಹಳ ಹೆಸರುವಾಸಿಯಾದದ್ದು.

೨೮-೨೯. ಸನ್ನತಿ ಎಂಬುವಳು ಕ್ರತುವೆಂಬ ಋಷಿಯ ಹೆಂಡತಿಯು. ಇವಳು ತನ್ನ ಗಂಡನಿಗೆ ಸಮನಾದ ಮಹಿಮೆಯುಳ್ಳ ಮಕ್ಕಳನ್ನು ಹೆತ್ತಳು. ಇವರೆಲ್ಲರೂ ಒಟ್ಟು ಅರವತ್ತುಸಾವಿರ ಜನರಾಗಿರುವರು ಇವರಿಗೆ ವಾಲಖಿಲ್ಯರೆಂದು ಹೆಸರು. ಇವರು ಸೂರ್ಯಸಾರಥಿಯಾದ ಅರುಣನ ಮುಂದುಗಡೆಯಲ್ಲಿ ಸೂರ್ಯನ ಸುತ್ತಲೂ ಇರುವರು. ಇವರೆಲ್ಲರೂ ಊರ್ಧ್ವರೇತಸ್ಕರಾದಕಾರಣ ಇವರಿಗೆ ಹೆಂಡತಿಯರೂ, ಮಕ್ಕಳೂ ಇಲ್ಲವು.

೩೦-೩೨. ಅತ್ರಿಋಷಿಯ ಹೆಂಡತಿಯಾದ ಅನಸೂಯೆಯು ಸತ್ಯನೇತ್ರ, ಹವ್ಯ, ಆಪೋಮೂರ್ತಿ, ಶನೈಶ್ಚರ, ಸೋಮ ಎಂದು ಹೆಸರುಳ್ಳ ಐದು ಗಂಡು ಮಕ್ಕ

**ಸತ್ಯನೇತ್ರಶ್ಚ ಹವ್ಯಶ್ಚ ಆಪೋಮೂರ್ತಿಶ್ಶನೈಶ್ಚರಃ ।**
**ಸೋಮಶ್ಚ ಪಂಚಮಸ್ತ್ವೇತೇ ಪಂಚಾತ್ರೇಯಾಃ ಪ್ರಕೀರ್ತಿತಾಃ ॥ ೩೧ ॥**

**ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಹ್ಯಾತ್ರೇಯಾಣಾಂ ಮಹಾತ್ಮನಾಂ ।**
**ಸ್ವಾಯಂಭುವೇಽನ್ತರೇಽತೀತಾಃ ಶತಶೋಽಥ ಸಹಸ್ರಶಃ ॥ ೩೨ ॥**

**ಊರ್ಜಾಯಾಂ ತು ವಸಿಷ್ಠಸ್ಯ ಪುತ್ರಾ ವೈ ಸಪ್ತ ಜಜ್ಞಿರೇ ।**
**ಜ್ಯಾಯಸೀ ಚ ಸ್ವಸಾ ತೇಷಾಂ ಪುಂಡರೀಕಾ ಸುಮಧ್ಯಮಾ ॥ ೩೩ ॥**

**ರಜೋಗಾತ್ರೋರ್ಧ್ವಬಾಹೂ ಚ ಸವನಶ್ಚಾನಯಶ್ಚ ಯಃ ।**
**ಸುತಪಾಶ್ಶುಕ್ರ ಇತ್ಯೇತೇ ಸಪ್ತ ಸಪ್ತರ್ಷಯಃ ಸ್ಮೃತಾಃ ॥ ೩೪ ॥**

**ಗೋತ್ರಾಣಿ ನಾಮಭಿಸ್ತೇಷಾಂ ವಾಸಿಷ್ಠಾನಾಂ ಮಹಾತ್ಮನಾಂ ।**
**ಸ್ವಾಯಂಭುವೇಽಂತರೇಽತೀತಾನ್ಯರ್ಬುದಾನಿ ಶತಾನಿ ಚ ॥ ೩೫ ॥**

**ಇತ್ಯೇಷ ಋಷಿಸರ್ಗಸ್ತು ಸಾನುಬಂಧಃ ಪ್ರಕೀರ್ತಿತಃ ।**
**ಸಮಾಸಾದ್ವಿಸ್ತರಾದ್ವಕ್ತುಮಶಕ್ಯೋಽಯಮಿತಿ ದ್ವಿಜಾಃ ॥ ೩೬ ॥**

---

ಳನ್ನೂ ಶಂಖಪದನಿಗೆ ತಾಯಿಯಾದ ಶ್ರುತಿ ಎಂಬ ಹೆಣ್ಣುಮಗಳನ್ನೂ ಹೆತ್ತಳು. ಆತ್ರೇಯರೆಂದು ಪ್ರಸಿದ್ಧರಾದ ಮಹಾಮಹಿಮರಾದ ಈ ಐದು ಜನಗಳ ಮಕ್ಕಳು, ಮೊಮ್ಮಕ್ಕಳು ಇವರಿಂದ ಕೂಡಿದ ವಂಶವು ಸ್ವಾಯಂಭುವ ಮನ್ವಂತರದಲ್ಲಿ ಬಹಳ ವೃದ್ಧಿಯನ್ನು ಹೊಂದಿ ಕಳೆದುಹೋಯಿತು.

೩೩-೩೫. ವಸಿಷ್ಠಋಷಿಯ ಪತ್ನಿಯಾದ ಊರ್ಜಾ ಎಂಬುವಳು ರಜೋಗಾತ್ರ, ಊರ್ಧ್ವಬಾಹು, ಸವನ, ಅನಯ, ಚಯ, ಸುತಪಾಃ, ಶುಕ್ರ ಎಂದು ಹೆಸರುಳ್ಳ ಏಳುಜನ ಗಂಡುಮಕ್ಕಳನ್ನೂ, ಪುಂಡರೀಕಾ ಎಂಬ ಹೆಣ್ಣುಮಗಳನ್ನೂ ಹೆತ್ತಳು. ಈ ಗಂಡುಮಕ್ಕಳು ಏಳುಜನರೂ ಸಪ್ತರ್ಷಿಗಳಾಗಿ ಪ್ರಸಿದ್ಧಿಯನ್ನು ಹೊಂದಿದರು. ಬಹಳ ಮಹಿಮೆಯುಳ್ಳ ಈ ವಸಿಷ್ಠಋಷಿಯ ವಂಶದವರ ಹೆಸರೂ (ಗೋತ್ರವೂ) ಸಂತತಿಯೂ ಸ್ವಾಯಂಭುವ ಮನ್ವತರದಲ್ಲಿ ಅರ್ಬುದವೇ ಮೊದಲಾದ ಅನೇಕ ಸಂಖ್ಯೆಗಳಿಗೂ ಸಿಕ್ಕದೆ ಅಗಣಿತವಾಗಿತ್ತು.

೩೬-೪೦. ಈ ರೀತಿಯಾಗಿ ಋಷಿಗಳ ವಂಶಗಳನ್ನೂ, ಸೃಷ್ಟಿಯನ್ನೂ, ಅದಕ್ಕೆ ಸಂಬಂಧಿಸಿದ ವಿಷಯವನ್ನೂ ಹೇಳಿರುವೆನು. ಇದನ್ನು ಇನ್ನೂ ವಿಸ್ತಾರ

**ಯೋऽಸೌ ರುದ್ರಾತ್ಮಕೋ ವಹ್ನಿರ್ಬ್ರಹ್ಮಣೋ ಮಾನಸಸ್ಸುತಃ ।**
**ಸ್ವಾಹಾ ತಸ್ಯ ಪ್ರಿಯಾ ಲೇಭೇ ಪುತ್ರಾಂಸ್ತ್ರೀನಮಿತೌಜಸಃ ॥ ೩೭ ॥**

**ಪಾವಕಃ ಪವಮಾನಶ್ಚ ಶುಚಿರಿತ್ಯೇಷ ತೇ ತ್ರಯಃ ।**
**ನಿರ್ಮಂಥ್ಯಃ ಪವಮಾನಸ್ಸ್ಯಾದ್ವೈದ್ಯುತಃ ಪಾವಕಃ ಸ್ಮೃತಃ ॥ ೩೮ ॥**

**ಸೂರ್ಯೋ ತಪತಿ ಯಶ್ಚಾಸೌ ಶುಚಿಃ ಸೌರ ಉದಾಹೃತಃ ।**
**ಹವ್ಯವಾಹಃ ಕವ್ಯವಾಹಃ ಸಹ ರಕ್ಷಾ ಇತಿ ತ್ರಯಃ ॥ ೩೯ ॥**

**ತ್ರಯಾಣಾಂ ಕ್ರಮಶಃ ಪುತ್ರಾ ದೇವಪಿತ್ರಸುರಾಶ್ಚ ತೇ ।**
**ಏತೇಷಾಂ ಪುತ್ರಪೌತ್ರಾಶ್ಚ ಚತ್ವಾರಿಂಶನ್ನವೈವ ತೇ ॥ ೪೦ ॥**

**ಕಾಮ್ಯನೈಮಿತ್ತಿಕಾಜಸ್ರಕರ್ಮಸು ತ್ರಿಷು ಸಂಸ್ಥಿತಾಃ ।**
**ಸರ್ವೇ ತಪಸ್ವಿನೋ ಜ್ಞೇಯಾಃ ಸರ್ವೇ ವ್ರತಭೃತಸ್ತಥಾ ॥ ೪೧ ॥**

---

ವಾಗಿ ಹೇಳಲು ಸಾಧ್ಯವಿಲ್ಲ. ಬ್ರಹ್ಮನ ಮಾನಸಪುತ್ರನಾದ ರುದ್ರನೆಂದು ಹೆಸರುಳ್ಳ ಅಗ್ನಿಯ ಹೆಂಡತಿಯಾದ ಸ್ವಾಹಾ ಎಂಬುವಳು ಬಹಳ ಮಹಿಮೆಯಿಂದ ಇರುವ ಪಾವಕ, ಪವಮಾನ, ಶುಚಿ ಎಂದು ಹೆಸರುಳ್ಳ ಮೂರು ಗಂಡುಮಕ್ಕಳನ್ನು ಹೆತ್ತಳು. ಅರಣಿಯಲ್ಲಿ ಕಡೆದದ್ದರಿಂದ ಕಾಣುವ ಪವಮಾನವೆಂಬ ಅಗ್ನಿಯು ನಿರ್ಮಂಥ್ಯವೆಂದು ಹೆಸರುಗೊಂಡಿರುವುದು. ವಿದ್ಯುತ್ಸಂಬಂಧವಾದ ಅಗ್ನಿಯು ಪಾವಕವೆನಿಸುವುದು. ಸೂರ್ಯನು ಪ್ರಕಾಶಿಸುತ್ತಿರುವಾಗ ಅವನ ತೇಜಸ್ಸಿಗೆ ರುಚಿ (ಶುಚಿ) ಎಂದು ಹೆಸರು. ಆದುದರಿಂದ ಈ ಶುಚಿಯೆಂಬ ಅಗ್ನಿಗೆ ಸೌರಾಗ್ನಿಯೆಂದೂ ಹೆಸರು. ಈ ಮೂರು ಮಂದಿ ಅಗ್ನಿಗಳಿಗೆ ಹವ್ಯವಾಹ, ಕವ್ಯವಾಹ, ಸಹರಕ್ಷಾ ಎಂದು ಬೇರೆ ಹೆಸರೂ ಇರುವುದು. ಇವರುಗಳಿಗೆ ಕ್ರಮವಾಗಿ ದೇವತೆಗಳು, ಪಿತೃಗಳು, ಅಸುರರು ಪುತ್ರರಾಗಿರುವರು. ಎಂದರೆ ಇವರ ವಂಶದಲ್ಲಿಯೇ ದೇವತೆಗಳೂ, ಪಿತೃಗಳೂ ಇವರೇ ಮೊದಲಾದವರಾಗಿರುವವರು ಮಕ್ಕಳಾಗಿ ಹುಟ್ಟಿರುವರು. ಇವರು ನಲವತ್ತೊಂಭತ್ತು ಜನರು ಇರುವರು. ಇವರು ತಪಸ್ವಿಗಳು ಮತ್ತು ವ್ರತನಿಯಮನಿಷ್ಠರು. ಇವರೆಲ್ಲರೂ ಕಾಮ್ಯ, ನೈಮಿತ್ತಿಕ ಮತ್ತು ನಿತ್ಯವೆಂಬ ಮೂರು ಕರ್ಮಗಳಲ್ಲಿಯೂ ಯಾವಾಗಲೂ ಲೋಕದಲ್ಲಿ ಪ್ರಸಿದ್ಧರಾಗಿರುವರು.

೪೧-೪೩. ಇವರೆಲ್ಲರೂ ತಪಸ್ವಿಗಳಾಗಿರುವರು. ಎಲ್ಲರೂ ಸತ್ಯವಂತರು. ಎಲ್ಲರೂ ರುದ್ರಾತ್ಮಕರಾಗಿ ರುದ್ರನಲ್ಲಿ ಭಕ್ತಿಯುಳ್ಳವರು. ಆದ್ದರಿಂದ ಅಗ್ನಿಯಲ್ಲಿ

ಸರ್ವೇ ರುದ್ರಾತ್ಮಕಾಶ್ಚೈವ ಸರ್ವೇ ರುದ್ರಪರಾಯಣಾಃ ।
ತಸ್ಮಾದಗ್ನಿಮುಖೇ ಯತ್ತದ್ಧುತಂ ಸ್ಯಾದೇವ ಕೇನಚಿತ್ ॥ ೪೨ ॥

ತತ್ಸರ್ವಂ ರುದ್ರಮುದ್ದಿಶ್ಯ ದತ್ತಂ ಸ್ಯಾನ್ನಾತ್ರ ಸಂಶಯಃ ।
ಇತ್ಯೇವಂ ನಿಶ್ಚಯೋಽಗ್ನೀನಾಮನುಕ್ರಾಂತೋ ಯಥಾತಥಂ ॥ ೪೩ ॥

ನಾತಿವಿಸ್ತರತೋ ವಿಪ್ರಾಃ ಪಿತ್ನ್‌ನ್ವಕ್ಷ್ಯಾಮ್ಯತಃ ಪರಂ ।
ಯಸ್ಮಾತ್ಷಡೃತವಸ್ತೇಷಾಂ ಸ್ಥಾನಂ ಸ್ಥಾನಾಭಿಮಾನಿನಾಂ ॥ ೪೪ ॥

ಋತವಃ ಪಿತರಸ್ತಸ್ಮಾದಿತ್ಯೇಷಾ ವೈದಿಕೀ ಶ್ರುತಿಃ ।
ಯಸ್ಮಾದೃತುಷು ಸರ್ವೇ ಹಿ ಜಾಯಂತೇ ಸ್ಥಾಸ್ನುಜಂಗಮಾಃ ॥ ೪೫ ॥

ತಸ್ಮಾದೇತೇ ಹಿ ಪಿತರ ಆರ್ತವಾ ಇತಿ ಚ ಶ್ರುತಂ ।
ಏವಂ ಪಿತ್ನ್‌ಣಾಮೇತೇಷಾಮೃತುಕಾಲಾಭಿಮಾನಿನಾಂ ॥ ೪೬ ॥

---

ಹೋಮಮಾಡಿದ್ದೆಲ್ಲವೂ ರುದ್ರನನ್ನು ಉದ್ದೇಶವಾಡಿ ಹೋಮಮಾಡಿದಂತಾಗುವುದು.. ಈ ವಿಚಾರದಲ್ಲಿ ಸಂಶಯವನ್ನು ಪಡಬೇಡಿರಿ. ಹೀಗೆ ಅಗ್ನಿಗಳ ಉತ್ಪತ್ತಿ ಕ್ರಮವೆಲ್ಲವನ್ನೂ ಸಂಕ್ಷೇಪವಾಗಿ ಹೇಳಿರುವೆನು. ಇನ್ನು ಮುಂದೆ ಪಿತೃಗಳ ವಂಶ ಕ್ರಮವನ್ನು ಸಂಕ್ಷೇಪವಾಗಿ ಹೇಳುವೆನು.

೪೪-೪೫. ಆಯಾಯ ಪ್ರದೇಶಗಳನ್ನು ಕ್ಲುಪ್ತಮಾಡಿಕೊಂಡಿರುವ ಈ ಪಿತೃ ದೇವತೆಗಳು ಆರು ಋತುಗಳಿಗೂ ಆಶ್ರಯವಾಗಿ ಅವುಗಳ ಅಭಿಮಾನಿದೇವತೆಗಳಾಗಿರುವರು. “ ಋತವಃ ಖಲು ವೈ ಪಿತರಃ ” ಎಂದು ಶ್ರುತಿ ಇರುವುದು. ಆಯಾಯ ಕಾಲದಲ್ಲಿ ಆಯಾಯ ಪ್ರದೇಶದಲ್ಲಿ ಅಭಿವ್ಯಕ್ತಿಯಾಗುವ ಪ್ರಾಣಿಗಳಿಗೆ ಕಾರಣವಾದ ಋತುಗಳು ಪಿತೃಗಳೆಂದು ವೇದಗಳನ್ನು ತಿಳಿದವರು ಹೇಳುವರು. ಸ್ಥಾವರಜಂಗ ಮಾತ್ಮಕವಾದ ಈ ಪ್ರಪಂಚವೆಲ್ಲವೂ ಋತುಗಳಿಂದ ಉಂಟಾದಕಾರಣ ಈ ಪಿತೃಗಳಿಗೆ ಆರ್ತವರೆಂದು ಹೆಸರು ಇರುವುದು.

೪೬-೪೮. ಈ ಪಿತೃದೇವತೆಗಳು ಋತುಕಾಲದ ವಿಷಯದಲ್ಲಿ ಬಹಳ ಅಭಿಮಾನವುಳ್ಳವರು. ಇವರಿಗೆ.ಆತ್ಮನ ಅಣಿಮಾದಿಸಿದ್ಧಿಗಳೆಲ್ಲವೂ ಇರುವುದು. ಇವರು ಬಹಳ ಮಹಿಮೆಯುಳ್ಳವರಾಗಿರುವರು. ಇವರು ಮೇಘಗಳ ಜತೆಯಲ್ಲಿ ಸೇರಿ

**ಆತ್ಮೈಶ್ವರ್ಯಾ ಮಹಾತ್ಮಾನಸ್ತಿಷ್ಠಂತೀಹಾಭ್ರಸಂಗಮಾತ್ ।**
**ಅಗ್ನಿಷ್ವಾತ್ತಾ ಬರ್ಹಿಷದಃ ಪಿತರೋ ದ್ವಿವಿಧಾಃ ಸ್ಮೃತಾಃ ॥ ೪೭ ॥**

**ಅಯಜ್ವಾನಶ್ಚ ಯಜ್ವಾನಃ ಕ್ರಮಾತ್ತೇ ಗೃಹಮೇಧಿನಃ ।**
**ಸ್ವಧಾಸೂತ ಪಿತೃಭ್ಯಶ್ಚ ದ್ವೇ ಕನ್ಯೇ ಲೋಕವಿಶ್ರುತೇ ॥ ೪೮ ॥**

**ಮೇನಾಂ ಚ ಧರಣೀಂ ಚೈವ ಯಾಭ್ಯಾಂ ವಿಶ್ವಮಿದಂ ಧೃತಂ ।**
**ಅಗ್ನಿಷ್ವಾತ್ತಸುತಾ ಮೇನಾ ದರಿಣೀ ಬರ್ಹಿಷತ್ಸುತಾ ॥ ೪೯ ॥**

**ಮೇನಾ ಹಿಮವತಃ ಪತ್ನೀ ಮೈನಾಕಂ ಕ್ರೌಂಚಮೇವ ಚ ।**
**ಗೌರೀಂ ಗಂಗಾಂ ಚ ಸುಷುವೇ ಭವಾಂಗಾಶ್ಲೇಷಪಾವನೀಂ ॥ ೫೦ ॥**

**ಮೇರೋಸ್ತು ಧರಣೀ ಪತ್ನೀ ದಿವ್ಯೌಷಧಿಸಮನ್ವಿತಂ ।**
**ಮಂದರಂ ಸುಷುವೇ ಪುತ್ರಂ ಚಿತ್ರಸುಂದರಕಂಧರಂ ॥ ೫೧ ॥**

---

ಕೊಂಡಿರುವರು. ಇವರಲ್ಲಿ ಅಗ್ನಿಷ್ವಾತ್ತ, ಬರ್ಹಿಷದ ಎಂದು ಎರಡು ಪಂಗಡವು ಇರುವುದು. ಇವರು ಅಗ್ನಿಹೋತ್ರಮಾಡದಿರುವವರು, ಮತ್ತು ಅಗ್ನಿಹೋತ್ರ ಮಾಡುವವರೆಂದು ಪ್ರಸಿದ್ಧರಾಗಿ ಎರಡು ಪಂಗಡದವರೂ ಸಂಸಾರವಂದಿಗರಾಗಿರುವರು. ಈ ಪಿತೃದೇವತೆಗಳಿಗೆ ಸ್ವಧಾ ಎಂಬುವಳಲ್ಲಿ ಪ್ರಸಿದ್ಧರಾದ ಮೇನಾ, ಧರಣೀ ಎಂಬ ಇಬ್ಬರು ಹೆಣ್ಣುಮಕ್ಕಳುಗಳು ಹುಟ್ಟಿದರು. ಇವರಿಬ್ಬರ ವಂಶದಿಂದ ಪ್ರಪಂಚವು ತುಂಬಿರುವುದು.

೪೯-೫೧. ಮೇನಾ ಎಂಬುವಳು ಅಗ್ನಿಷ್ವಾತ್ತರ ಮಗಳು. ಧರಣಿ ಎಂಬುವಳು ಬರ್ಹಿಷತ್ ಪಿತೃದೇವತೆಗಳ ಮಗಳು. ಮೇನೆಯು ಹಿಮವಂತನನ್ನು ಮದುವೆಯಾಗಿ ಮೈನಾಕ, ಕ್ರೌಂಚ ಎಂಬ ಇಬ್ಬರು ಗಂಡುಮಕ್ಕಳನ್ನೂ, ಗೌರಿ, ಗಂಗಾ ಎಂಬಿಬ್ಬರು ಹೆಣ್ಣು ಮಕ್ಕಳನ್ನೂ ಹೆತ್ತಳು. ಇವರಲ್ಲಿ ಗಂಗೆಯು ಶಿವನ ಅಂಗಸ್ಪರ್ಶದಿಂದ ಪ್ರಪಂಚವೆಲ್ಲವನ್ನೂ ಪವಿತ್ರಮಾಡುತ್ತಿರುವಳು. ಧರಣಿ ಎಂಬುವಳು ಮೇರು ಎಂಬ ಪರ್ವತನ ಹೆಂಡತಿಯು. ಇವಳು ಆಶ್ಚರ್ಯಕರವಾದ ಸುಂದರವಾದ ಗುಹೆಯುಳ್ಳ ಮಂದರಪರ್ವತವನ್ನೂ ಮಗನನ್ನಾಗಿ ಪಡೆದಳು. ಈ ಮಂದರ ಪರ್ವತದಲ್ಲಿ ಅನೇಕವಾದ ಉತ್ತಮವಾದ ಮೂಲಿಕೆಗಳು ಇರುವುವು.

**ಸ ಏವ ಮಂದರಃ ಶ್ರೀಮಾನ್ಮೇರುಪುತ್ರಸ್ತಪೋಬಲಾತ್ ।**
**ಸಾಕ್ಷಾಚ್ಛ್ರೀಕಂಠನಾಥಸ್ಯ ಶಿವಸ್ಯಾವಸಥಂ ಗತಃ ॥ ೫೨ ॥**

**ಸಾಸೂತ ಧರಣೀ ಭೂಯಸ್ತ್ರಿಂಶತ್ಕನ್ಯಾಶ್ಚ ವಿಶ್ರುತಾಃ ।**
**ವೇಲಾಂ ಚ ನಿಯತಿಂ ಚೈವ ತೃತೀಯಾಮಪಿ ಚಾಯತಿಂ ॥ ೫೩ ॥**

**ಆಯತಿರ್ನಿಯತಿಶ್ಚೈವ ಪತ್ನ್ಯೌ ದ್ವೇ ಭೃಗುಪುತ್ರಯೋಃ ।**
**ಸ್ವಾಯಂಭುವೇಽನ್ತರೇ ಪೂರ್ವಂ ಕಥಿತಸ್ತೇ ತದನ್ವಯಃ ॥ ೫೪ ॥**

**ಸುಷುವೇ ಸಾಗರಾದ್ವೇಲಾ ಕನ್ಯಾಮೇಕಾಮನಿಂದಿತಾಂ ।**
**ಸವರ್ಣಾಂ ನಾಮ ಸಾಮುದ್ರೀಂ ಪತ್ನೀಂ ಪ್ರಾಚೀನಬರ್ಹಿಷಃ ॥ ೫೫ ॥**

**ಸಾಮುದ್ರೀ ಸುಷುವೇ ಪುತ್ರಾನ್ದಶ ಪ್ರಾಚೀನಬರ್ಹಿಷಃ ।**
**ಸರ್ವೇ ಪ್ರಾಚೇತಸಾ ನಾಮ ಧನುರ್ವೇದಸ್ಯ ಪಾರಗಾಃ ॥ ೫೬ ॥**

---

೫೨–೫೩. ಮೇರುಪುತ್ರನಾದ ಈ ಮಂದರಪರ್ವತವು ತನ್ನ ತಪಸ್ಸಿನ ಬಲದಿಂದ ಶಿವನು ಯಾವಾಗಲೂ ಪ್ರತ್ಯಕ್ಷವಾಗಿ ವಾಸಮಾಡಲು ಯೋಗ್ಯವಾದದ್ದಾಗಿ ಅವನಿಗೆ ವಾಸಸ್ಥಳವಾಗಿ ಪ್ರಸಿದ್ಧಿಯನ್ನು ಹೊಂದಿರುವುದು. ಮೇರುಪರ್ವತದ ಹೆಂಡತಿಯಾದ ಧರಣಿಯು ಮೂವತ್ತು ಮಂದಿ ಪುತ್ರಿಯರನ್ನು ಪಡೆದಳು. ಅವರಲ್ಲಿ ವೇಲಾ, ನಿಯತಿ, ಆಯತಿ ಎಂಬ ಮೂರು ಜನ ಪ್ರಸಿದ್ಧರಾದವರು.

೫೪–೫೬. ಆಯತಿ, ನಿಯತಿ ಎಂಬುವವರಿಬ್ಬರೂ ಭೃಗುಮಹರ್ಷಿಗಳ ಮಕ್ಕಳಿಗೆ ಹೆಂಡತಿಯರಾಗಿದ್ದರು. ಇವರ ವಂಶವು ಸ್ವಾಯಂಭುವ ಮನ್ವಂತರದಲ್ಲಿ ಪ್ರಸಿದ್ಧವಾಗಿದ್ದಿತೆಂದು ಹಿಂದೆ ಹೇಳಿರುವೆನು. ವೇಲಾ ಎಂಬುವಳು ಸಮುದ್ರನ ಹೆಂಡತಿಯು. ಇವಳು ಒಬ್ಬ ಹೆಣ್ಣು ಮಗಳನ್ನು ಹೆತ್ತಳು. ಅವಳಿಗೆ ಸವರ್ಣಾ ಎಂದು ಹೆಸರು. ಸಮುದ್ರದ ಮಗಳಾದ್ದರಿಂದ ಸಾಮುದ್ರೀ ಎಂದು ಹೆಸರಾಯಿತು. ಇವಳು ಪ್ರಾಚೀನಬರ್ಹಿಷ ಎಂಬುವನನ್ನು ಮದುವೆಯಾಗಿದ್ದಳು. ಸಮುದ್ರನ ಮಗಳಾದ ಸಾಮುದ್ರಿಯು ಪ್ರಾಚೀನಬರ್ಹಿಷರೆಂದು ಹೆಸರುಳ್ಳ ಹತ್ತು ಜನ ಗಂಡುಮಕ್ಕಳನ್ನು ಹೆತ್ತಳು. ಇವರಿಗೆ ಪ್ರಾಚೇತಸರೆಂದು ಹೆಸರು. ಇವರೆಲ್ಲರೂ ಧನುರ್ವೇದವನ್ನು ಚೆನ್ನಾಗಿ ತಿಳಿದವರಾಗಿದ್ದರು.

**ಯೇಷಾಂ ಸ್ವಾಯಂಭುವೇ ದಕ್ಷಃ ಪುತ್ರತ್ವಮುಗಮತ್ಪುರಾ ।**
**ತ್ರಿಯಂಬಕಸ್ಯ ಶಾಪೇನ ಚಾಕ್ಷುಷಸ್ಯಾಂತರೇ ಮನೋಃ　　॥ ೫೭ ॥**

**ಇತ್ಯೇತೇ ಬ್ರಹ್ಮಪುತ್ರಾಣಾಂ ಧರ್ಮಾದೀನಾಂ ಮಹಾತ್ಮನಾಂ ।**
**ನಾತಿಸಂಕ್ಷೇಪತೋ ವಿಪ್ರಾ ನಾತಿ ವಿಸ್ತರತಃ ಕ್ರಮಾತ್　　॥ ೫೮ ॥**

**ವರ್ಣಿತಾ ವೈ ಮಯಾ ವಂಶಾ ದಿವ್ಯಾ ದೇವಗಣಾನ್ವಿತಾಃ ।**
**ಕ್ರಿಯಾವಂತಃ ಪ್ರಜಾವಂತೋ ಮಹರ್ದ್ಧಿಭಿರಲಂಕೃತಾಃ　　॥ ೫೯ ॥**

**ಪ್ರಜಾನಾಂ ಸನ್ನಿವೇಶೋಽಯಂ ಪ್ರಜಾಪತಿಸಮುದ್ಭವಃ ।**
**ನ ಹಿ ಶಕ್ಯಃ ಪ್ರಸಂಖ್ಯಾತುಂ ವರ್ಷಕೋಟಿಶತೈರಪಿ　　॥ ೬೦ ॥**

**ರಾಜ್ಞಾಮಪಿ ಚ ಯೋ ವಂಶೋ ದ್ವಿಧಾ ಸೋಽಪಿ ಪ್ರವರ್ತತೇ ।**
**ಸೂರ್ಯವಂಶಸ್ಸೋಮವಂಶ ಇತಿ ಪುಣ್ಯತಮಃ ಕ್ಷಿತೌ　　॥ ೬೧ ॥**

---

೫೭-೫೯. ಪೂರ್ವದಲ್ಲಿ, ಸ್ವಾಯಂಭುವ ಮನ್ವಂತರದಲ್ಲಿ ಇದ್ದ ಮನು ಪುತ್ರನಾದ ದಕ್ಷಬ್ರಹ್ಮನು ಶಿವನ ಶಾಪದಿಂದ ಚಾಕ್ಷುಷಮನ್ವಂತರದಲ್ಲಿ ಪ್ರಾಚೇತಸರ ಮಗನಾಗಿ ಹುಟ್ಟಿದನು. ಮಹಾಮಹಿಮರಾದ ಧರ್ಮನೇ ಮೊದಲಾದ ಬ್ರಹ್ಮನ ಮಕ್ಕಳುಗಳ ವಂಶವನ್ನು ಅತಿ ಸಂಕ್ಷೇಪವಾಗಿಲ್ಲದಂತೆಯೂ, ಹೆಚ್ಚು ವಿಸ್ತಾರವಾಗಿಲ್ಲದಂತೆಯೂ ನಿಮಗೆ ಹೇಳಿದ್ದಾಯಿತು. ಈ ವಂಶಗಳಲ್ಲಿ ಅನೇಕ ದೇವತೆಗಳು ಜನಿಸಿ ಪ್ರಸಿದ್ಧರಾಗಿರುವರು. ಕ್ರಿಯಾನಿಷ್ಠರಾದ ಮಕ್ಕಳು ಮೊಮ್ಮಕ್ಕಳುಗಳಿಂದ ಸಹಿತರಾದ ಅನೇಕ ಮಹರ್ಷಿಗಳೂ ಈ ವಂಶಗಳಲ್ಲಿ ಜನಿಸಿರುವರು. ಇಂತಹ ಉತ್ತಮವಾದ ವಂಶಗಳ ವಿವರವನ್ನು ನಿಮಗೆ ಹೇಳಿರುವೆನು.

೬೦. ಪ್ರಜೆಗಳು ಹೀಗೆ ಸೃಷ್ಟಿಯಾದ ಕ್ರಮಕ್ಕೆ ಬ್ರಹ್ಮನೇ ಕಾರಣನಾದವನು. ಎಂದರೆ ಬ್ರಹ್ಮನಿಂದಲೇ ಈ ಪ್ರಜೆಗಳೆಲ್ಲರೂ ಹುಟ್ಟಿರುವರು. ಅನೇಕ ಕೋಟಿ ವರ್ಷಗಳವರಿಗೂ ಎಣಿಕೆಮಾಡಿ ಸರಿಯಾಗಿ ಲೆಕ್ಕಹಾಕಿದರೂ ಈ ಪ್ರಜೆಗಳೆಲ್ಲವನ್ನೂ ಒಂದೂ ಬಿಡದಂತೆ ಹೇಳಲು ಸಾಧ್ಯವಿಲ್ಲ.

೬೧. ಭೂಮಿಯಲ್ಲಿ ಅನೇಕ ರಾಜರ ವಂಶಗಳಿರುವವು. ಅವುಗಳಲ್ಲಿ ಬಹಳ ಪವಿತ್ರವಾದವುಗಳು ಎರಡು. ಒಂದು ಚಂದ್ರವಂಶವು, ಇನ್ನೊಂದು ಸೂರ್ಯವಂಶವು. ಇವೆರಡೇ ವಂಶಗಳು ಪ್ರಸಿದ್ಧವಾಗಿರುವುವು.

ಇಕ್ಷ್ವಾಕುರಂಬರೀಷಶ್ಚ ಯಯಾತಿರ್ನಾಹುಷಾದಯಃ ।
ಪುಣ್ಯಶ್ಲೋಕಾಃ ಶ್ರುತಾ ಯೇಽತ್ರ ತೇಽಪಿ ತದ್ವಂಶಸಂಭವಾಃ ॥ ೬೨ ॥

ಅನ್ಯೇ ಚ ರಾಜಋಷಯೋ ನಾನಾವೀರ್ಯಸಮನ್ವಿತಾಃ ।
ಕಿಂ ತೈಃ ಫಲಮನುತ್ಕ್ರಾಂತೈರುಕ್ತಪೂರ್ವೈಃ ಪುರಾತನೈಃ ॥ ೬೩ ॥

ಕಿಂ ಚೇಶ್ವರಕಥಾವೃತ್ತೌ ಯತ್ರ ತತ್ರಾನ್ಯಕೀರ್ತನಂ ।
ನ ಸದ್ಭಿಃ ಸಮ್ಮತಂ ಮತ್ವಾ ನೋತ್ಸಹೇ ಬಹುಭಾಷಿತುಂ ॥ ೬೪ ॥

ಪ್ರಸಂಗಾದೀಶ್ವರಸ್ಯೈವ ಪ್ರಭಾವದ್ಯೋತನಾನಪಿ ।
ಸರ್ಗಾದಯೋಽಪಿ ಕಥಿತಾ ಇತ್ಯತ್ರ ತತ್ಪ್ರವಿಸ್ತರೈಃ ॥ ೬೫ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾಂ
ಪೂರ್ವಭಾಗೇ ಸೃಷ್ಟಿಕಥನಂ ನಾಮ ಸಪ್ತದಶೋಽಧ್ಯಾಯಃ

---

೬೨-೬೪. ಇಕ್ಷ್ವಾಕು, ಅಂಬರೀಷ, ಯಯಾತಿ, ನಹುಷ ಇವರೇ ಮೊದಲಾದ ಪ್ರಸಿದ್ಧರಾದ ರಾಜರುಗಳೆಲ್ಲರೂ ನಾನು ಹೇಳಿರುವ ವಂಶದಲ್ಲಿ ಹುಟ್ಟಿದವರು. ಇವರೆಲ್ಲರೂ ಕೀರ್ತಿವಂತರು. ಇವರಲ್ಲದೆ ಬೇರೆ ರಾಜಋಷಿಗಳೂ ಬಹಳ ಮಂದಿ ಇದ್ದರು. ಇವರೆಲ್ಲರಿಗೂ ನಾನಾವಿಧವಾದ ಶಕ್ತಿಸಾಮರ್ಥ್ಯಗಳಿದ್ದವು. ಅವರೆಲ್ಲರನ್ನೂ ಇಲ್ಲಿ ಹೇಳಿದ್ದರಿಂದ ಪ್ರಯೋಜನವೇನೂ ಇಲ್ಲ. ಇವರೆಲ್ಲರೂ ಬಹಳ ಹಿಂದಿನ ಕಾಲದಲ್ಲಿ ರಾಜರಾಗಿದ್ದವರು. ಮತ್ತು ಶಿವನ ಸಂಬಂಧವಾದ ಕಥೆಯನ್ನು ಹೇಳಲು ಪ್ರಾರಂಭಿಸಿರುವಾಗ ಬೇರೆಯವರ ಚರಿತ್ರೆಯನ್ನು ಹೇಳುವುದು ಸತ್ಪುರುಷರ ಧರ್ಮವಲ್ಲ. ಆದ್ದರಿಂದ ನಾನು ಹೆಚ್ಚಾಗಿ ಈ ವಿಷಯವನ್ನು ಹೇಳಬಯಸುವುದಿಲ್ಲ.

೬೫. ಈಶ್ವರನ ಮಹಿಮೆಯನ್ನು ಪ್ರಕಟಮಾಡುವುದೇ ಇಲ್ಲಿ ಮುಖ್ಯವಾದ ಉದ್ದೇಶವಾಗಿರುವುದು. ಈಶ್ವರನ ಸ್ವರೂಪವರ್ಣನೆ, ಈಶ್ವರನ ಸಂಕಲ್ಪ ಮತ್ತು ಕಾರ್ಯ ಇವುಗಳಿಗೆ ಈ ಸೃಷ್ಟಿಕ್ರಮವು ಸಂಬಂಧಪಟ್ಟಿರುವುದರಿಂದ ಸೃಷ್ಟಿಯೇ ಮೊದಲಾದುವುಗಳನ್ನು ವಿಸ್ತಾರವಾಗಿ ಹೇಳಿರುವೆನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯ ಸಂಹಿತೆಯ ಪೂರ್ವಭಾಗದಲ್ಲಿ
ಸೃಷ್ಟಿಕಥನವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ಅಷ್ಟಾದಶೋಽಧ್ಯಾಯಃ

॥ ಋಷಯ ಊಚುಃ ॥

ದೇವೀ ದಕ್ಷಸ್ಯ ತನಯಾ ತ್ಯಕ್ತ್ವಾ ದಾಕ್ಷಾಯಣೀ ತನುಂ ।
ಕಥಂ ಹಿಮವತಃ ಪುತ್ರೀ ಮೇನಾಯಾಮಭವತ್ಪುರಾ ॥ ೧ ॥

ಕಥಂ ಚ ನಿಂದಿತೋ ರುದ್ರೋ ದಕ್ಷೇಣ ಚ ಮಹಾತ್ಮನಾ ।
ನಿಮಿತ್ತಮಪಿ ಕಿಂ ತತ್ರ ಯೇನ ಸ್ಯಾನ್ನಿಂದಿತೋ ಭವಃ ॥ ೨ ॥

ಉತ್ಪನ್ನಶ್ಚ ಕಥಂ ದಕ್ಷೋ ಹ್ಯಭಿಶಾಪಾದ್ಭವಸ್ಯ ತು ।
ಚಾಕ್ಷುಷಸ್ಯಾಂತರೇ ಪೂರ್ವಂ ಮನೋಃ ಪ್ರಬ್ರೂಹಿ ಮಾರುತ ॥ ೩ ॥

---

## ಹದಿನೆಂಟನೆಯ ಅಧ್ಯಾಯವು

೧-೩. ಋಷಿಗಳು ಕೇಳುವರು.—ದಕ್ಷಬ್ರಹ್ಮನ ಮಗಳಾದ ದಾಕ್ಷಾಯಿಣೀ ದೇವಿಯು ತನ್ನ ಶರೀರವನ್ನು ಬಿಟ್ಟು ಹಿಮವಂತನ ಮಗಳಾಗಿ ಮೇನೆಯೆಂಬುವಳಲ್ಲಿ ಏತಕ್ಕಾಗಿ ಹುಟ್ಟಿದಳು ? ಮಹಾಮಹಿಮನಾದ ದಕ್ಷಬ್ರಹ್ಮನು ರುದ್ರನನ್ನು ಏತಕ್ಕಾಗಿ ನಿಂದಿಸಿದನು ? ಹೀಗೆ ರುದ್ರನು ದಕ್ಷಬ್ರಹ್ಮನಿಂದ ನಿಂದೆಯನ್ನು ಹೊಂದಲು ಕಾರಣ ವೇನು ? ಪೂರ್ವದಲ್ಲಿ ಸ್ವಾಯಂಭುವ ಮನ್ವಂತರದಲ್ಲಿದ್ದ ದಕ್ಷನು ಶಿವನ ಶಾಪದಿಂದ ಚಾಕ್ಷುಷಮನ್ವಂತರದಲ್ಲಿ ಹುಟ್ಟಲು ಕಾರಣವೇನು ? ಎಲೈ ವಾಯುದೇವನೆ! ಇದೆಲ್ಲ ವನ್ನೂ ನಮಗೆ ವಿಸ್ತಾರವಾಗಿ ಹೇಳು ಎನ್ನಲು,

॥ ವಾಯುರುವಾಚ ॥

ಶೃಣ್ವಂತು ಕಥಯಿಷ್ಯಾಮಿ ದಕ್ಷಸ್ಯ ಲಘುಚೇತಸಃ ।
ವೃತ್ತಂ ಪಾಪಾತ್ಪ್ರಮಾದಾಚ್ಚ ವಿಶ್ವಾಮರವಿದೂಷಣಂ ॥ ೪ ॥

ಪುರಾ ಸುರಾಸುರಾಸ್ಸರ್ವೇ ಸಿದ್ಧಾಶ್ಚ ಪರಮರ್ಷಯಃ ।
ಕದಾಚಿದ್ದ್ರಷ್ಟುಮೀಶಾನಂ ಹಿಮವಚ್ಛಿಖರಂ ಯಯುಃ ॥ ೫ ॥

ತದಾ ದೇವಶ್ಚ ದೇವೀ ಚ ದಿವ್ಯಾಸನಗಾತಾವುಭೌ ।
ದರ್ಶನಂ ದದತುಸ್ತೇಷಾಂ ದೇವಾದೀನಾಂ ದ್ವಿಜೋತ್ತಮಾಃ ॥ ೬ ॥

ತದಾನೀಮೇವ ದಕ್ಷೋಽಪಿ ಗತಸ್ತತ್ರ ಸಹಾಮರೈಃ ।
ಜಾಮಾತರಂ ಹರಂ ದ್ರಷ್ಟುಂ ದೇವೀಂ ಚಾತ್ಮಸುತಾಂ ಸತೀಂ ॥ ೭ ॥

ತದಾತ್ಮಗೌರವಾದ್ದೇವೋ ದೇವ್ಯಾ ದಕ್ಷೇ ಸಮಾಗತೇ ।
ದೇವಾದಿಭ್ಯೋ ವಿಶೇಷೇಣ ನ ಕದಾಚಿದಭೂತ್ಸ್ಮೃತಿಃ ॥ ೮ ॥

---

೪. ವಾಯುದೇವನು ಹೇಳುವನು—ಎಲೈ ಋಷಿಗಳಿರಾ, ಸಾವಧಾನವಾಗಿ ಕೇಳಿರಿ. ಎಲ್ಲವನ್ನು ಹೇಳುವೆನು. ದಕ್ಷಬ್ರಹ್ಮನು ಅಲ್ಪ ಸಾಮರ್ಥ್ಯವುಳ್ಳವನು. ಇವನು ಎಲ್ಲಾ ದೇವತೆಗಳನ್ನೂ ನಿಂದೆಮಾಡಲು ಇವನ ಪಾಪವೂ, ಇವನ ತಪ್ಪು ತಿಳುವಳಿಕೆಯೂ ಇವನ ಶಾಪಕ್ಕೆ ಕಾರಣವಾಯಿತು. ಇವೆಲ್ಲಾ ವೃತ್ತಾಂತವನ್ನೂ ತಿಳಿಸುವೆನು.

೫. ಪೂರ್ವದಲ್ಲಿ ದೇವತೆಗಳೂ, ರಾಕ್ಷಸರೂ, ಸಿದ್ಧರೂ, ಮಹರ್ಷಿಗಳೂ ಇವರೆಲ್ಲರೂ ಈಶ್ವರನನ್ನು ದರ್ಶನಮಾಡುವ ಉದ್ದೇಶದಿಂದ ಹಿಮವತ್ಪರ್ವತದ ಶಿಖರಕ್ಕೆ ಹೋದರು.

೬. ಎಲೈ ಬ್ರಾಹ್ಮಣ ಶ್ರೇಷ್ಠರೇ ! ಕೇಳಿರಿ. ಆಗ ಪರಮೇಶ್ವರನೂ ದಾಕ್ಷಾಯಿಣೀದೇವಿಯೂ ಇವರಿಬ್ಬರೂ ಉತ್ತಮವಾದ ಆಸನಗಳಲ್ಲಿ ಕುಳಿತುಕೊಂಡು ಆ ದೇವತೆಗಳೇ ಮೊದಲಾದವರಿಗೆಲ್ಲರಿಗೂ ದರ್ಶನವನ್ನು ಕೊಡುತ್ತಿದ್ದರು.

೭-೧೦. ಆಗ ದಕ್ಷಬ್ರಹ್ಮನೂ ಕೂಡ ತನ್ನ ಮಗಳಾದ ಸತಿಯನ್ನೂ ಅಳಿಯನಾದ ಪರಮೇಶ್ವರನನ್ನೂ ನೋಡುವುದಕ್ಕಾಗಿ ದೇವತೆಗಳ ಜೊತೆಯಲ್ಲಿ ಅಲ್ಲಿಗೆ

ತಸ್ಯ ತಸ್ಯಾಃ ಪರಂ ಭಾವಮಜ್ಞಾತುಶ್ಚಾಪಿ ಕೇವಲಂ ।
ಪುತ್ರೀತ್ಯೇವಂ ವಿಮೂಢಸ್ಯ ತಸ್ಯಾಂ ವೈರಮಜಾಯತ ॥ ೯ ॥

ತತಸ್ತೇನೈವ ವೈರೇಣ ವಿಧಿನಾ ಚ ಪ್ರಚೋದಿತಃ ।
ನಾಜುಹಾವ ಭವಂ ದಕ್ಷೋ ದೀಕ್ಷಿತಸ್ತಾಮಪಿ ದ್ವಿಷನ್ ॥ ೧೦ ॥

ಅನ್ಯಾಶ್ಚಾಮಾತರಸ್ಸರ್ವಾನಾಹೂಯ ಸ ಯಥಾಕ್ರಮಂ ।
ಶತಶಃ ಪುಷ್ಕಲಾಮರ್ಚಾಂ ಚಕಾರ ಚ ಪೃಥಕ್ಪೃಥಕ್ ॥ ೧೧ ॥

ತಥಾ ತಾನ್ಸಂಗತಾನ್ಶ್ರುತ್ವಾ ನಾರದಸ್ಯ ಮುಖಾತ್ತದಾ ।
ಯಯೌ ರುದ್ರಾಯ ರುದ್ರಾಣೀ ವಿಜ್ಞಾಪ್ಯ ಭವನಂ ಪಿತುಃ ॥ ೧೨ ॥

ಬಂದಿದ್ದನು. ಆಗ ಸತೀದೇವಿಯೊಡನೆ ಇರುವ ಪರಮೇಶ್ವರನು ದೇವತೆಗಳೆಲ್ಲರೂ ತನ್ನ ದರ್ಶನಕ್ಕಾಗಿ ಬಂದಿರುವರೆಂದು ತನ್ನ ಗೌರವದಿಂದ ಇದ್ದನು. ತನಗೆ ಮಾವ ನಾಗಿರುವ ದಕ್ಷಬ್ರಹ್ಮನು ತನ್ನ ಸಮೀಪಕ್ಕೆ ಬಂದಿರುವುದು ಆ ಕಾಲದಲ್ಲಿ ಸ್ಮರಣೆಗೆ ಕೊಂಚವೂ ಬರಲಿಲ್ಲ. ತನಗೆ ಮಾವನಾಗಿದ್ದರೂ ದೇವತೆಗಳೊಡನೆ ಸಾಮಾನ್ಯವಾಗಿ ರುವ ಮರ್ಯಾದೆಯನ್ನು ಮಾಡಿದನೇ ಹೊರತು ಹೆಚ್ಚಾಗಿ ಗೌರವವನ್ನು ಕೊಡಲಿಲ್ಲ. ಆಗ ದಡ್ಡನಾದ ದಕ್ಷಬ್ರಹ್ಮನಿಗೆ ಈಶ್ವರನ ಉತ್ತಮವಾದ ಮನೋಭಿಪ್ರಾಯವು ತಿಳಿ ಯಲಾಗದಿದ್ದಾಗ್ಯೂ ತನ್ನ ಮಗಳ ವಿಷಯದಲ್ಲಿ ಮಾತ್ರ ತುಂಬಾ ದ್ವೇಷಬುದ್ಧಿಯು ಹುಟ್ಟಿತು. ಆ ದ್ವೇಷಬುದ್ಧಿಯಿಂದಲೂ, ತನಗೆ ಮುಂದೆ ಉಂಟಾಗಬೇಕಾಗಿರುವ ಪಾಪಫಲವನ್ನು ಕೊಡುವ ವಿಧಿಯ ಪ್ರೇರಣೆಯಿಂದಲೂ, ತಾನು ಯಜ್ಞವನ್ನು ಮಾಡಲು ದೀಕ್ಷೆಯನ್ನು ವಹಿಸಿಕೊಂಡಾಗ ತನ್ನ ಮಗಳನ್ನೂ, ಅಳಿಯನಾದ ಶಿವ ನನ್ನೂ ಯಜ್ಞಕ್ಕೆ ಬರಲು ಹೇಳಿಕಳುಹಿಸಲಿಲ್ಲ.

೧೧. ತನ್ನ ಇತರ ಹೆಣ್ಣುಮಕ್ಕಳೆಲ್ಲರನ್ನೂ ಅಳಿಯಂದಿರೊಡನೆ ಯಜ್ಞಕ್ಕೆ ಕರೆಸಿಕೊಂಡು, ಅವರೆಲ್ಲರಿಗೂ ಬೇಕಾದ ಹಾಗೆ ಉಪಚರಿಸಿ ಮರ್ಯಾದೆಮಾಡಿದನು,

೧೨. ರುದ್ರನ ಪತ್ನಿಯಾದ ಸತೀದೇವಿಯು, ತನ್ನ ಒಡಹುಟ್ಟಿದವರೆಲ್ಲರೂ ತಮ್ಮ ತಂದೆಯ ಮನೆಗೆ ಯಜ್ಞಕ್ಕಾಗಿ ಬಂದಿರುವುದನ್ನೂ, ಅವರಿಗೆ ನಡೆಯುತ್ತಿರುವ ಸತ್ಕಾರವನ್ನೂ ನಾರದನ ಮೂಲಕವಾಗಿ ತಿಳಿದುಕೊಂಡು ತನ್ನ ಪತಿಯಾದ ರುದ್ರನ ಅಪ್ಪಣೆಯನ್ನು ಪಡೆದು ತನ್ನ ತಂದೆಯ ಮನೆಗೆ ಹೊರಟಳು.

ಅಥ ಸನ್ನಿಹಿತಂ ದಿವ್ಯಂ ವಿಮಾನಂ ವಿಶ್ವತೋಮುಖಂ ।
ಲಕ್ಷಣಾಢ್ಯಂ ಸುಖಾರೋಹಮತಿಮಾತ್ರಮನೋಹರಂ ॥ ೧೩ ॥

ತಪ್ತಜಾಂಬೂನದಪ್ರಖ್ಯಂ ಚಿತ್ರರತ್ನಪರಿಷ್ಕೃತಂ ।
ಮುಕ್ತಾಮಯವಿತಾನಾಗ್ರ್ಯಂ ಸ್ರಗ್ದಾಮಸಮಲಂಕೃತಂ ॥ ೧೪ ॥

ತಪ್ತಕಾಂಚನನಿರ್ವ್ಯೂಹಂ ರತ್ನಸ್ತಂಭಶತಾವೃತಂ ।
ವಜ್ರಕಲ್ಪಿತಸೋಪಾನಂ ವಿದ್ರುಮಸ್ತಂಭತೋರಣಂ ॥ ೧೫ ॥

ಪುಷ್ಪಪಟ್ಟಪರಿಸ್ತೀರ್ಣಂ ಚಿತ್ರರತ್ನಮಹಾಸನಂ ।
ವಜ್ರಜಾಲಕಿರಚ್ಛಿದ್ರಮಚ್ಛಿದ್ರಮಣಿಕುಟ್ಟಿಮಂ ॥ ೧೬ ॥

ಮಣಿದಂಡಮನೋಜ್ಞೇನ ಮಹಾವೃಷಭಲಕ್ಷ್ಮಣಾ ।
ಅಲಂಕೃತಪುರೋಭಾಗಮಭ್ರಶುಭ್ರೇಣ ಕೇತುನಾ ॥ ೧೭ ॥

---

೧೩-೧೪. ಆಗ ಅವಳ ಪ್ರಯಾಣಕ್ಕಾಗಿ ಉತ್ತಮವಾದ ವಿಮಾನವು ಸಿದ್ಧವಾಯಿತು. ಆ ವಿಮಾನವು ಉತ್ತಮವಾದ ಶುಭಲಕ್ಷಣಗಳಿಂದ ಕೂಡಿತ್ತು. ಅದನ್ನು ಹತ್ತುವುದಕ್ಕೆ ಸುಖಕರವಾದ ಮೆಟ್ಟಲುಗಳಿದ್ದವು ಆ ವಿಮಾನವು ಬಹಳ ಅಂದವಾಗಿಯೂ ಪುಟಹಾಕಿದ ಚಿನ್ನದಿಂದಲೇ ಮಾಡಲ್ಪಟ್ಟದ್ದಾಗಿಯೂ ಅನೇಕ ವಿಧವಾದ ರತ್ನಗಳಿಂದ ಚೆನ್ನಾಗಿ ಪ್ರಕಾಶಿಸುತ್ತಲೂ ಇತ್ತು. ಆ ವಿಮಾನದ ಮೇಲುಗಡೆಗೆ ಮುತ್ತಿನ ಮೇಲುಕಟ್ಟುಗಳನ್ನು ಹಾಕಿದ್ದರು. ಹೂವಿನಹಾರಗಳಿಂದ ಆ ವಿಮಾನವನ್ನು ಬಗೆಬಗೆಯಾಗಿ ಅಲಂಕರಿಸಿದ್ದರು.

೧೫. ಪುಟವಿಕ್ಕಿದ ಚಿನ್ನದಿಂದ ನಿರ್ಮಿತವಾಗಿ ರತ್ನಖಚಿತವಾದ ನೂರಾರು ಕಂಬಗಳು ಆ ವಿಮಾನದಲ್ಲಿದ್ದುವು. ವಜ್ರದ ಮೆಟ್ಟಲುಗಳನ್ನು ಮಾಡಿದ್ದರು. ಹವಳದ ಕಂಬವನ್ನು ಮಾಡಿ, ಅದಕ್ಕೆ ಹವಳದ ತೋರಣವನ್ನು ಕಟ್ಟಿದ್ದರು.

೧೬. ಚಿತ್ರವಿಚಿತ್ರವಾಗಿ ಹೂವು ಕೆತ್ತಿರುವ ಪಟ್ಟೆವಸ್ತ್ರವನ್ನು ಹಾಸಿ ಅದರ ಮೇಲೆ ರತ್ನಖಚಿತವಾದ ಉತ್ತಮವಾದ ಆಸನವನ್ನು ಹಾಕಿದ್ದರು. ಆ ವಿಮಾನದ ಹೊಸಲಿನಲ್ಲಿ ಕೊಂಚವೂ ಅವಕಾಶಬಿಡದಂತೆ ರತ್ನಗಳನ್ನು ಕೆತ್ತಿದ್ದರು. ಆ ವಜ್ರಗಳಿಂದ ಹೊರಹೊರಟ ಕಾಂತಿಯು ಸುತ್ತಲೂ ಪ್ರಸರಿಸಿ ಥಳಥಳಿಸುತ್ತಿತ್ತು.

೧೭. ಆ ವಿಮಾನದ ಮುಂದುಗಡೆಯಲ್ಲಿ ಧ್ವಜಪಟವನ್ನು ಕಟ್ಟಿದ್ದರು. ಆ ಧ್ವಜಪಟದ ಕಂಬವು ರತ್ನಖಚಿತವಾಗಿದ್ದಿತು. ಧ್ವಜಪಟಕ್ಕಾಗಿ ಕಟ್ಟಿದ್ದ ಶುಭ್ರವಾದ ಬಟ್ಟೆಯಮೇಲೆ ದೊಡ್ಡ ವೃಷಭವನ್ನು ಬರೆದಿದ್ದರು.

ರತ್ನಕಂಚುಕಗುಪ್ತಾಂಗೈಶ್ಚಿತ್ರವೇತ್ರೈಕಪಾಣಿಭಿಃ ।
ಅಧಿಷ್ಠಿತಮಹಾದ್ವಾರಮಪ್ರಧೃಷ್ಯೈರ್ಗಣೇಶ್ವರೈಃ ॥ ೧೮ ॥

ಮೃದಂಗತಾಲಗೀತಾದಿ ವೇಣುವೀಣಾವಿಶಾರದೈಃ ।
ವಿದಗ್ಧವೇಷಭಾವೈಶ್ಚ ಬಹುಭಿಃ ಸ್ತ್ರೀಜನೈರ್ವೃತಂ ॥ ೧೯ ॥

ಆರುರೋಹ ಮಹಾದೇವೀ ಸಹ ಪ್ರಿಯಸಖೀಜನೈಃ ।
ಚಾಮರವ್ಯಜನೇ ತಸ್ಯಾ ವಜ್ರದಂಡಮನೋಹರೇ ॥ ೨೦ ॥

ಗೃಹೀತ್ವಾ ರುದ್ರಕನ್ಯೇ ದ್ವೇ ವಿವೀಜತುರುಭೇ ಶುಭೇ ।
ತದಾ ಚಾಮರಯೋರ್ಮಧ್ಯೇ ದೇವ್ಯಾ ವದನಮಾಬಭೌ ॥ ೨೧ ॥

ಅನ್ಯೋನ್ಯಂ ಯುಧ್ಯತೋರ್ಮಧ್ಯೇ ಹಂಸಯೋರಿವ ಪಂಕಜಂ ।
ಛತ್ರಂ ಶಶಿನಿಭಂ ತಸ್ಯಾಶ್ಚೂಡೋಪರಿ ಸುಮಾಲಿನೀ ॥ ೨೨ ॥

---

೧೮. ಈ ವಿಮಾನದ ಮುಂದುಗಡೆಯಲ್ಲಿ ರತ್ನಖಚಿತವಾದ ಕವಚಗಳನ್ನು ಧರಿಸಿಕೊಂಡು ಕೈಯ್ಯಲ್ಲಿ ಅನೇಕವಿಧವಾದ ಬೆತ್ತಗಳನ್ನು ಹಿಡಿದುಕೊಂಡು, ಯಾರಿಗೂ ಸಹಿಸಲಶಕ್ಯವಾದ ಪರಾಕ್ರಮವುಳ್ಳ ಅನೇಕ ಗಣೇಶ್ವರರು ಕಾವಲಾಗಿದ್ದರು.

೧೯ ಈ ವಿಮಾನದಲ್ಲಿ ಮೃದಂಗ, ತಾಳ, ಸಂಗೀತ, ವೀಣೆ, ಕೊಳಲು ಇವುಗಳಲ್ಲಿ ನಿಪುಣರಾಗಿ ಸಮಯೋಚಿತವಾದ ವೇಷಭಾಷಾದಿಗಳನ್ನು ಬಲ್ಲವರಾದ ಅನೇಕ ಮಂದಿ ಸ್ತ್ರೀಯರು ಸಿದ್ಧರಾಗಿ ತುಂಬಿದ್ದರು.

೨೦. ಈ ಪ್ರಕಾರದಿಂದ ಪ್ರಕಾಶಿಸುತ್ತಿರುವ ವಿಮಾನವನ್ನು ಆ ಸತೀದೇವಿಯು ಹತ್ತಿದ ಕೂಡಲೇ ಇಬ್ಬರು ರುದ್ರಕನ್ಯೆಯರು ಎಡಬಲಪಾರ್ಶ್ವಗಳಲ್ಲಿ ನಿಂತು ಮಂಗಳಕರವಾದ ಎರಡು ಚಾಮರಗಳನ್ನು ಹಾಕಲು ಪ್ರಾರಂಭಿಸಿದರು.

೨೧. ಆಗ ಸತೀದೇವಿಯ ಮುಖವು ಪರಸ್ಪರವಾಗಿ ಜಗಳವಾಡುತ್ತಿರುವ ಎರಡು ಹಂಸಗಳ ಮಧ್ಯದಲ್ಲಿರುವ ಕಮಲದ ಹಾಗೆ ಪ್ರಕಾಶಿಸುತ್ತಿತ್ತು.

೨೨-೨೪. ಆಗ ಸುಮಾಲಿನೀ ಎಂಬುವಳು ಆ ಸತೀದೇವಿಯ ಶಿರಸ್ಸಿನ ಮೇಲೆ ಚಂದ್ರನಂತೆ ಪ್ರಕಾಶಿಸುತ್ತಿರುವ, ಮುತ್ತಿನ ಮೇಲುಕಟ್ಟನ್ನು ಹಾಕಿರುವ

ಧೃತಮುಕ್ತಾಪರಿಕ್ಷಿಪ್ತಂ ಬಭಾರ ಪ್ರೇಮನಿರ್ಭರಾ ।
ತಚ್ಛತ್ರಮುಜ್ಜ್ವಲಂ ದೇವ್ಯಾ ರುರುಚೇ ವದನೋಪರಿ ॥ ೨೩ ॥

ಉಪರ್ಯಮೃತಭಾಂಡಸ್ಯ ಮಂಡಲಂ ಶಶಿನೋ ಯಥಾ ।
ಅಥ ಚಾಗ್ರೇ ಸಮಾಸೀನಾ ಸುಸ್ಮಿತಾಸ್ಯಾ ಶುಭಾವತೀ ॥ ೨೪ ॥

ಅಕ್ಷದ್ಯೂತವಿನೋದೇನ ರಮಯಾಮಾಸ ವೈ ಸತೀಂ ।
ಸುಯಶಾಃ ಪಾದುಕೇ ದೇವ್ಯಾಶ್ಶುಭೇ ರತ್ನಪರಿಷ್ಕೃತೇ ॥ ೨೫ ॥

ಸ್ತನಯೋರಂತರೇ ಕೃತ್ವಾ ತದಾ ದೇವೀಮಸೇವತ ।
ಅನ್ಯಾ ಕಾಂಚನಸರ್ವಾಂಗೀ ದೀಪ್ತಂ ಜಗ್ರಾಹ ದರ್ಪಣಂ ॥ ೨೬ ॥

ಅಪರಾ ತಾಲವೃಂತಂ ಚ ಪರಾ ತಾಂಬೂಲಪೇಟಿಕಾಂ ।
ಕಾಚಿತ್ಕ್ರೀಡಾಶುಕಂ ಚಾರು ಕರೇಽಕುರುತ ಭಾಮಿನೀ ॥ ೨೭ ॥

---

ಛತ್ರಿಯನ್ನು ಬಹಳ ಪ್ರೀತಿಯಿಂದ ಹಿಡಿದಳು. ಆ ಛತ್ರಿಯು, ದೇವಿಯ ಮುಖದ ಮೇಲುಗಡೆಯಲ್ಲಿ ಅಮೃತಕಲಶದ ಮೇಲೆ ಚಂದ್ರನನ್ನು ಇರಿಸಿದಂತೆ ಬಹಳ ಅಂದವಾಗಿ ಕಾಣುತ್ತಿತ್ತು. ಅನಂತರ ಶುಭಾವತೀ ಎಂಬುವಳು ಮನೋಹರವಾದ ಮಂದಹಾಸದಿಂದ ಕೂಡಿದ ಮುಖವುಳ್ಳವಳಾಗಿ ಆ ದೇವಿಯ ಮುಂದುಗಡೆಯಲ್ಲಿ ಕೂತುಕೊಂಡು ಪಗಡೆಯಾಟದ ವಿನೋದವನ್ನು ಹೇಳುತ್ತಾ ಸಂತೋಷಪಡಿಸುತ್ತಿದ್ದಳು.

೨೫-೨೭. ಸುಯಶಾ ಎಂಬುವಳು ದೇವಿಯ ರತ್ನಖಚಿತವಾದ ಎರಡು ಪಾದುಕೆಗಳನ್ನು ತನ್ನ ಸ್ತನಗಳ ಮಧ್ಯದಲ್ಲಿರಿಸಿಕೊಂಡು ದೇವಿಯ ಸೇವೆಯನ್ನು ಮಾಡುತ್ತಿದ್ದಳು. ಚಿನ್ನದಂತಿರುವ ಮನೋಹರಾಂಗಿಯಾದ ಇನ್ನೋರ್ವಳು ಹೊಳೆಯುತ್ತಿರುವ ಕನ್ನಡಿಯನ್ನೂ, ಮತ್ತೊಬ್ಬಳು ತಾಂಬೂಲದ ಪೆಟ್ಟಿಗೆಯನ್ನೂ ಹಿಡಿದುಕೊಂಡಿದ್ದರು. ಇನ್ನೊಬ್ಬ ದೂತಿಯು ಮನೋಹರವಾಗಿ ಮಾತನಾಡುತ್ತಿರುವ ಗಿಣಿಯನ್ನು ತನ್ನ ಕೈಯಿನಲ್ಲಿ ಧರಿಸಿಕೊಂಡಿದ್ದಳು.

**ಕಾಚಿತ್ತು ಸುಮನೋಜ್ಞಾನಿ ಪುಷ್ಪಾಣಿ ಸುರಭೀಣಿ ಚ ।**
**ಕಾಚಿದಾಭರಣಾಧಾರಂ ಬಭಾರ ಕಮಲೇಕ್ಷಣಾ　　　॥ ೨೮ ॥**

**ಕಾಚಿಚ್ಚ ಪುನರಾಲೇಪಂ ಸುಪ್ರಸೂನಂ ಶುಭಾಂಜನಂ ।**
**ಅನ್ಯಾಶ್ಚ ಸದೃಶಾಸ್ತಾಸ್ತಾ ಯಥಾ ಸ್ವಮುಚಿತಕ್ರಿಯಾಃ　　　॥ ೨೯ ॥**

**ಆವೃತ್ಯ ತಾಂ ಮಹಾದೇವೀಮುಸೇವಂತ ಸಮಂತತಃ ।**
**ಅತೀವ ಶುಶುಭೇ ತಾಸಾಮಂತರೇ ಪರಮೇಶ್ವರೀ　　　॥ ೩೦ ॥**

**ತಾರಾಪರಿಷದೋ ಮಧ್ಯೇ ಚಂದ್ರಲೇಖೇವ ಶಾರದೀ ।**
**ತತಃ ಶಂಖಸಮುತ್ಥಸ್ಯ ನಾದಸ್ಯ ಸಮನಂತರಂ　　　॥ ೩೧ ॥**

**ಪ್ರಾಸ್ಥಾನಿಕೋ ಮಹಾನಾದಃ ಪಟಹಃ ಸಮತಾಡಯತ್ ।**
**ತತೋ ಮಧುರವಾದ್ಯಾನಿ ಸಹ ತಾಲೋದ್ಯತೈಃ ಸ್ವನೈಃ　　　॥ ೩೨ ॥**

**ಅನಾಹತಾನಿ ಸನ್ನೇದುಃ ಕಾಹಲಾನಾಂ ಶತಾನಿ ಚ ।**
**ಸಾಯುಧಾನಾಂ ಗಣೇಶಾನಾಂ ಮಹೇಶಸಮತೇಜಸಾಂ　　　॥ ೩೩ ॥**

೨೮. ಮಗದೊಬ್ಬ ದೂತಿಯು ಮನೋಹರವಾದ ಸುವಾಸನೆಯುಳ್ಳ ಹೂವುಗಳ ಪಾತ್ರೆಯನ್ನೂ, ಮತ್ತೊಬ್ಬಳು ಆಭರಣದ ಪೆಟ್ಟಿಗೆಯನ್ನೂ ಕೈಯಲ್ಲಿ ಹಿಡಿದುಕೊಂಡು ದೇವಿಯನ್ನು ಸೇವಿಸುತ್ತಿದ್ದರು.

೨೯-೩೦. ಇನ್ನೊಬ್ಬ ದೂತಿಯು, ಸುವಾಸನೆಯುಳ್ಳ ಗಂಧದ ಪಾತ್ರೆಯನ್ನೂ ಕಾಡಿಗೆಯ ಡಬ್ಬಿಯನ್ನೂ ಹಿಡಿದುಕೊಂಡು ಸೇವಿಸುತ್ತಿದ್ದಳು. ಹೀಗೆಯೇ ಅನೇಕ ಜನ ಸ್ತ್ರೀಯರು ತಮತಮಗೆ ಯೋಗ್ಯವಾದ ದೇವಿಯ ಉಪಚಾರ ಸಾಮಗ್ರಿಗಳನ್ನು ಧರಿಸಿ, ದೇವಿಯ ಸುತ್ತಲೂ ಇದ್ದುಕೊಂಡು ಸೇವೆಯನ್ನು ಮಾಡುತ್ತಿದ್ದರು. ಆಗ ಅವರ ಮಧ್ಯದಲ್ಲಿದ್ದ ಪರಮೇಶ್ವರಿಯಾದ ಸತೀದೇವಿಯು ನಕ್ಷತ್ರಗಳ ಮಧ್ಯದಲ್ಲಿರುವ ಶರತ್ಕಾಲದ ಚಂದ್ರನಂತೆ ಹೊಳೆಯುತ್ತಿದ್ದಳು.

೩೧-೩೩. ಅನಂತರ ಪ್ರಯಾಣಸೂಚಕವಾದ ಶಂಖಧ್ವನಿಯಾಯಿತು. ನಗಾರಿಯ ಧ್ವನಿಯೂ, ತಾಳವೇ ಮೊದಲಾದ ಅನೇಕ ವಿಧವಾದ ವಾದ್ಯಗಳ ಧ್ವನಿಯೂ ಮೊಳಗಿದವು. ಇತರರು ಬಾಜಿಸದಿದ್ದರೂ ಕಾಹಳೆಗಳು ತಮ್ಮಷ್ಟಕ್ಕೆ ತಾವೇ ಧ್ವನಿ ಮಾಡುತ್ತಿದ್ದವು. ಈಶ್ವರನ ತೇಜಸ್ಸಿಗೆ ಸಮನಾದ ತೇಜಸ್ಸುಳ್ಳ ಎಂಟುಲಕ್ಷ ಗಣೇಶ್ವರರು ಆಗ ಆ ಸತೀದೇವಿಯ ಮುಂದುಗಡೆಯಲ್ಲಿ ತಮ್ಮ ತಮ್ಮ ಆಯುಧಗಳನ್ನು ಹಿಡಿದುಕೊಂಡು ಹೊರಟರು.

ಸಹಸ್ರಾಣಿ ಶತಾನ್ಯಷ್ಟೌ ತದಾನೀಂ ಪುರತೋ ಯಯುಃ ।
ತೇಷಾಂ ಮಧ್ಯೇ ವೃಷಾರೂಢೋ ಗಜಾರೂಢೋ ಯಥಾ ಗುರುಃ ॥ ೩೪ ॥

ಜಗಾಮ ಗಣಪಃ ಶ್ರೀಮಾನ್ಸೋಮನಂದೀಶ್ವರಾರ್ಚಿತಃ ।
ದೇವದುಂದುಭಯೋ ನೇದುರ್ದಿವಿ ದಿವ್ಯಸುಖಾ ಘನಾಃ ॥ ೩೫ ॥

ನನೃತುರ್ಮುನಯಸ್ಸರ್ವೇ ಮುಮುದುಃ ಸಿದ್ಧಯೋಗಿನಃ ।
ಸಸೃಜುಃ ಪುಷ್ಪವೃಷ್ಟಿಂ ಚ ವಿತಾನೋಪರಿ ವಾರಿದಾಃ ॥ ೩೬ ॥

ತದಾ ದೇವಗಣೈಶ್ಚಾನ್ಯೈಃ ಪಥಿ ಸರ್ವತ್ರ ಸಂಗತಾಃ ।
ಕ್ಷಣಾದಿವ ಪಿತುರ್ಗೇಹಂ ಪ್ರವಿವೇಶ ಮಹೇಶ್ವರೀ ॥ ೩೭ ॥

ತಾಂ ದೃಷ್ಟ್ವಾ ಕುಪಿತೋ ದಕ್ಷಶ್ಚಾತ್ಮನಃ ಕ್ಷಯಕಾರಣಾತ್ ।
ತಸ್ಯಾ ಯವೀಯಸೀಭ್ಯೋಽಪಿ ಚಕ್ರೇ ಪೂಜಾಮಸತ್ಕೃತಾಂ ॥ ೩೮ ॥

---

೩೪-೩೫ ಅವರ ಮಧ್ಯದಲ್ಲಿ ಶುಭ್ರವಾದ ಎತ್ತಿನಮೇಲೆ ಕುಳಿತುಕೊಂಡಿರುವ ಗಣಪತಿಯು, ಆನೆಯಮೇಲೆ ಕೂತಿರುವ ಬೃಹಸ್ಪತಿಯಂತೆ ಬೆಳಗುತ್ತಾ ನಂದೀಶ್ವರ, ಸೋಮ ಇವರಿಂದ ಪೂಜಿಸಲ್ಪಟ್ಟವನಾಗಿ ತಾನೂ ಹೊರಟನು.

೩೬. ಆಗ ಅಂತರಿಕ್ಷದಲ್ಲಿ ದೇವದುಂದುಭಿಗಳು ಮೊಳಗಿದವು. ಋಷಿಗಳು ಆನಂದಾತಿಶಯದಿಂದ ನರ್ತನಮಾಡಿದರು. ಸಿದ್ಧರಾದ ಯೋಗಿಗಳು ದೇವಿಯ ದರ್ಶನದಿಂದ ಆನಂದಪಟ್ಟರು. ಮೇಘಗಳು ದೇವಿಯ ವಿಮಾನದ ಮೇಲುಗಡೆಯಲ್ಲಿ ಹೂಮಳೆಯನ್ನು ಕರೆದುವು.

೩೭. ಆಗ ದಾರಿಯಲ್ಲಿ ದೇವತೆಗಳು ಗುಂಪುಗುಂಪಾಗಿ ಬಂದು ಸೇರಿದರು. ಮಹೇಶ್ವರಿಯಾದ ಸತೀದೇವಿಯು ಈ ವಿಧವಾದ ಮಹಾವೈಭವದಿಂದ ಪ್ರಯಾಣ ಮಾಡುತ್ತಾ ಕ್ಷಣಮಾತ್ರದಲ್ಲಿ ತನ್ನ ತಂದೆಯ ಮನೆಯನ್ನು ಸೇರಿದಳು.

೩೮. ಆಗ ದಕ್ಷಬ್ರಹ್ಮನಿಗೆ ಬಹು ಕೋಪ ಬಂದಿತು. ಇವಳಿಂದಲೇ ತನಗೆ ನಾಶವುಂಟಾಗುವುದೆಂದು ತಿಳಿದು ಸಣ್ಣಮಕ್ಕಳಿಗೆ ತೋರುವ ಮರ್ಯಾದೆಯನ್ನೂ ಮಾಡದೆ ಬಹು ತಿರಸ್ಕಾರಭಾವದಿಂದ ಅವಳನ್ನು ಕಂಡನು.

ತದಾ ಶಶಿಮುಖೀ ದೇವೀ ಪಿತರಂ ಸದಸಿ ಸ್ಥಿತಂ ।
ಅಂಬಿಕಾ ಯುಕ್ತಮವ್ಯಗ್ರಮುವಾಚ ಕೃಪಣಂ ವಚಃ ॥ ೩೯ ॥

॥ ದೇವ್ಯುವಾಚ ॥

ಬ್ರಹ್ಮಾದಯಃ ಪಿಶಾಚಾಂತಾ ಯಸ್ಯಾಜ್ಞಾವಶವರ್ತಿನಃ ।
ಸ ದೇವಸ್ಸಾಂಪ್ರತಂ ತಾತ ವಿಧಿನಾ ನಾರ್ಚಿತಃ ಕಿಲ ॥ ೪೦ ॥

ತದಾಸ್ತಾಂ ಮಮ ಜ್ಯಾಯಸ್ಯಾಃ ಪುತ್ರ್ಯಾಃ ಪೂಜಾಂ ಕಿಮೀದೃಶೀಂ ।
ಅಸತ್ಕೃತಾಮವಜ್ಞಾಯ ಕೃತವಾನಸಿ ಗರ್ಹಿತಂ ॥ ೪೧ ॥

ಏವಮುಕ್ತೋಽಬ್ರವಿದೇನಾಂ ದಕ್ಷಃ ಕ್ರೋಧಾದಮರ್ಷಿತಃ ।
ತ್ವತ್ತಃ ಶ್ರೇಷ್ಠಾ ವಿಶಿಷ್ಟಾಶ್ಚ ಪೂಜ್ಯಾ ಬಾಲಾಃ ಸುತಾ ಮಮ ॥ ೪೨ ॥

ತಾಸಾಂ ತು ಯೇ ಚ ಭರ್ತಾರಸ್ತೇ ಮೇ ಬಹುಮತಾ ಮುದಾ ।
ಗುಣೈಶ್ಚಾಪ್ಯಧಿಕಾಸ್ಸರ್ವೇ ಭರ್ತುಸ್ತೇ ತ್ರ್ಯಂಬಕಾದಪಿ ॥ ೪೩ ॥

---

೩೯-೪೧. ಆಗ ಚಂದ್ರನಂತೆ ಮುಖವುಳ್ಳ ಸತೀದೇವಿಯು ಸಭೆಯಲ್ಲಿರುವ ತನ್ನ ತಂದೆಯನ್ನು ಕುರಿತು ಎಲೈ ತಂದೆಯೇ ! ಕೇಳು. ನನ್ನ ಪತಿಯಾದ ಮಹಾ ದೇವನು ಬ್ರಹ್ಮನೇ ಮೊದಲಾಗಿ ಪಿಶಾಚಿಗಳೇ ಕೊನೆಯಾಗಿರುವವರೆಲ್ಲರನ್ನೂ ತನ್ನ ಹತೋಟಿಯಲ್ಲಿರಿಸಿಕೊಂಡಿರುವನು. ಇಂತಹ ದೇವದೇವನನ್ನು ನ್ಯಾಯವಾಗಿ ನೀನು ಪೂಜಿಸಬೇಕಾಗಿತ್ತು. ಆದರೆ ನೀನು ಅವನನ್ನು ಪೂಜೆಮಾಡಲಿಲ್ಲ. ಅದಿರಲಿ. ನಾನು ನಿನಗೆ ಹಿರಿಯ ಮಗಳಾಗಿರುತ್ತೇನೆ. ಇದನ್ನು ನೀನು ತಿಳಿದಿದ್ದರೂ ನಿಂದ್ಯ ವಾದ ಅಪಮರ್ಯಾದೆಯನ್ನು ಮಾಡಿರುತ್ತೀಯೆ. ಈ ಪ್ರಕಾರವಾಗಿರುವ ನಿಂದ್ಯ ವಾದ ಕೆಲಸವು ನಿನಗೆ ಸರಿಯಾದುದಲ್ಲ ಎಂದಳು.

೪೨-೪೪. ದಕ್ಷನು, ಆ ಸತೀದೇವಿಯು ಹೇಳಿದ ಈ ಮಾತನ್ನು ಕೇಳಿ ಕೋಪದಿಂದ ಜ್ಞಾನಶೂನ್ಯನಾಗಿಂತೆಂದನು–ನನ್ನ ಇತರ ಮಕ್ಕಳುಗಳು ನಿನಗಿಂತಲೂ ಚಿಕ್ಕವರಾಗಿದ್ದಾಗ್ಯೂ ಅವರೇ ಶ್ರೇಷ್ಠರೆಂದು ಭಾವಿಸುವೆನು. ಅವರು ಪೂಜೆಗೆ ಯೋಗ್ಯರಾಗಿಯೂ ಇರುವರು. ಅವರ ಗಂಡಂದಿರೂ ಬಹಳ ಮಾನಮರ್ಯಾದೆಗೆ ಯೋಗ್ಯರು. ಅವರ ಗುಣಗಳೂ ಕೂಡ ನಿನ್ನ ಪತಿಯಾದ ಈಶ್ವರನ ಗುಣಗಳಿಗಿಂತ ಹೆಚ್ಚಾಗಿಯೇ ಇರುವವು. ಆದುದರಿಂದ ಈಶ್ವರನಿಗಿಂತಲೂ ಇವರೇ ನನಗೆ ಹೆಚ್ಚು

ಸ್ತ್ರಬ್ಧಾತ್ಮಾ ತಾಮಸಶ್ಶರ್ವಸ್ತ್ವಮಿಮಂ ಸಮುಪಾಶ್ರಿತಾ ।
ತೇನ ತ್ವಾಮವಮನ್ಯೇಽಹಂ ಪ್ರತಿಕೂಲೋ ಹಿ ಮೇ ಭವಃ ॥ ೪೪ ॥

ತಥೋಕ್ತಾ ಪಿತರಂ ದಕ್ಷಂ ಕ್ರುದ್ಧಾ ದೇವೀ ತಮಬ್ರವೀತ್ ।
ಶೃಣ್ವತಾಮೇವ ಸರ್ವೇಷಾಂ ಯೇ ಯಜ್ಞಸದಸಿ ಸ್ಥಿತಾಃ ॥ ೪೫ ॥

ಅಕಸ್ಮಾನ್ಮಮ ಭರ್ತಾರಮಜಾತಾಶೇಷದೂಷಣಂ ।
ವಾಚಾ ದೂಷಯಸೇ ದಕ್ಷ ಸಾಕ್ಷಾಲ್ಲೋಕಮಹೇಶ್ವರಂ ॥ ೪೬ ॥

ವಿದ್ಯಾಚೌರೋ ಗುರುದ್ರೋಹೀ ವೇದೇಶ್ವರವಿದೂಷಕಃ ।
ತ ಏತೇ ಬಹುಪಾಪ್ಮಾನಸ್ಸರ್ವೇ ದಂಡ್ಯಾ ಇತಿ ಶ್ರುತಿಃ ॥ ೪೭ ॥

ತಸ್ಮಾದತ್ಯುತ್ಕಟಸ್ಯಾಸ್ಯ ಪಾಪಸ್ಯ ಸದೃಶೋ ಭೃಶಂ ।
ಸಹಸಾ ದಾರುಣೋ ದಂಡಸ್ತವ ದೈವಾದ್ಭವಿಷ್ಯತಿ ॥ ೪೮ ॥

---

ಮರ್ಯಾದೆಗೆ ಯೋಗ್ಯರಾಗಿರುವರು. ಈಶ್ವರನು ತಮೋಗುಣದಿಂದಿರುವನು ಅವನಿಗೆ ಏನೂ ತಿಳಿಯದು. ನನಗೆ ಈಶ್ವರನು ಪ್ರತಿಕೂಲನಾಗಿರುವನು. ನೀನು ಅವನನ್ನು ಪತಿಯನ್ನಾಗಿ ವರಿಸಿರುವೆ ಆದುದರಿಂದ ನಿನಗೆ ನಾನು ಅವಮಾನವನ್ನು ಮಾಡಿರುವೆನು ಎಂದನು.

೪೫. ತನ್ನ ತಂದೆಯಾದ ದಕ್ಷನು ಹೇಳಿದ ಆ ಮಾತನ್ನು ಕೇಳಿ ಸತೀದೇವಿಯು ಮಹಾಕೋಪದಿಂದ ಇಂತು ನುಡಿದಳು—ಈ ಯಜ್ಞಶಾಲೆಯ ಸಭೆಯಲ್ಲಿರುವವರೆಲ್ಲರೂ ಕೇಳಿರಿ. ಎಲೈ ದಕ್ಷನೆ ! ನೀನು ಲೋಕಕ್ಕೆಲ್ಲಕ್ಕೂ ಮಹೇಶ್ವರನಾದ, ಯಾವ ವಿಧವಾದ ದೂಷಣೆಗೂ ಒಳಪಡದ ನನ್ನ ಗಂಡನನ್ನು ಕಾರಣವಿಲ್ಲದೆ ನಿಂದೆಮಾಡಿರುವೆ.

೪೬ ವಿದ್ಯೆಯನ್ನು ಕದಿಯುವವನು, ಗುರುವಿಗೆ ದ್ರೋಹವನ್ನು ಮಾಡುವವನು, ವೇದ, ಈಶ್ವರ ಇವರನ್ನು ನಿಂದೆಮಾಡುವವನು, ಇವರೆಲ್ಲರೂ ಬಹಳ ಪಾತಕವನ್ನು ಮಾಡಿದವರು. ಇವರೆಲ್ಲರೂ ಶಿಕ್ಷೆಗೆ ಅರ್ಹರಾದವರೆಂದು ವೇದವು ಹೇಳುವುದು.

೪೭–೪೯. ಆದ್ದರಿಂದ ನೀನು ಈಗ ಮಾಡಿರುವ ಪಾಪಕೆಲಸಕ್ಕೆ ಬಹು ಕ್ರೂರವಾದ ಶಿಕ್ಷೆಯನ್ನು ದೈವಗತಿಯಿಂದ ಬೇಗನೆ ಹೊಂದುತ್ತೀಯೆ ನೀನು ದೇವ

ತ್ವಯಾ ನ ಪೂಜಿತೋ ಯಾಸ್ಮಾದ್ದೇವದೇವಸ್ತ್ರಿಯಂಬಕಃ ।
ತಸ್ಮಾತ್ತ್ವವ ಕುಲಂ ದುಷ್ಟಂ ನಷ್ಟಮಿತ್ಯವಧಾರಯಃ ॥ ೪೯ ॥

ಇತ್ಯುಕ್ತ್ವಾ ಪಿತರಂ ರುಷ್ಟಾ ಸತೀ ಸಂತ್ಯಕ್ತಸಾಧ್ವಸಾ ।
ತದೀಯಾಂ ಚ ತನುಂ ತ್ಯಕ್ತ್ವಾ ಹಿಮವಂತಂ ಯಯೌ ಗಿರಿಂ ॥ ೫೦ ॥

ಸ ಪರ್ವತವರಃ ಶ್ರೀಮಾಂಲ್ಲಬ್ಧಪುಣ್ಯಫಲೋದಯಃ ।
ತದರ್ಥಮೇವ ಕೃತವಾನ್ಸುಚಿರಂ ದುಶ್ಚರಂ ತಪಃ ॥ ೫೧ ॥

ತಸ್ಮಾತ್ತಮನುಗೃಹ್ಣಾತಿ ಭೂಧರೇಶ್ವರಮೀಶ್ವರೀ ।
ಸ್ವೇಚ್ಛಯಾ ಪಿತರಂ ಚಕ್ರೇ ಸ್ವಾತ್ಮನೋ ಯೋಗಮಾಯಯಾ ॥ ೫೨ ॥

ಯದಾ ಗತಾ ಸತೀ ದಕ್ಷಂ ವಿನಿಂದ್ಯ ಭಯವಿಹ್ವಲಾ ।
ತದಾ ತಿರೋಹಿತಾ ಮಂತ್ರಾ ವಿಹತಶ್ಚ ತತೋಽಧ್ವರಃ ॥ ೫೩ ॥

---

ದೇವನಾದ ಪರಮೇಶ್ವರನನ್ನು ಪೂಜೆಮಾಡಲಿಲ್ಲ. ಆದುದರಿಂದ ನಿನ್ನ ವಂಶವು ಅತಿ ನೀಚವಾದದ್ದು. ಮತ್ತು ಅದೂ ಬೇಗನೆ ನಾಶವಾಗುವುದು ಎಂದು ಖಂಡಿತ ತಿಳಿದುಕೋ ಎಂದಳು.

೫೦. ಸತೀದೇವಿಯು ತನ್ನ ತಂದೆಯ ಸಂಗಡ ಧೈರ್ಯದಿಂದ ಈ ಮಾತನ್ನು ಹೇಳಿ, ಅವನಿಂದ ಉತ್ಪನ್ನವಾದ ಪಾಂಚಭೌತಿಕ ಶರೀರವನ್ನು ಆ ಯಾಗಶಾಲೆ ಯಲ್ಲಿಯೇ ತ್ಯಜಿಸಿ ಹಿಮವತ್ಪರ್ವತಕ್ಕೆ ಹೊರಟುಹೋದಳು.

೫೧-೫೨. ಆಗ ಹಿಮವತ್ಪರ್ವತರಾಜನಿಗೆ ಪುಣ್ಯಪರಿಪಾಕವು ಒದಗಿಬಂದಿತ್ತು. ಅವನೂ ಮಕ್ಕಳಿಲ್ಲದೆ ಯಾರೂ ಮಾಡಲಾಗದಿರುವ ಉಗ್ರತಪಸ್ಸನ್ನು ಬಹಳ ಕಾಲ ದಿಂದ ಆಚರಿಸುತ್ತಿದ್ದನು. ಆದ್ದರಿಂದಲೇ ಮಹೇಶ್ವರಿಯಾದ ದೇವಿಯು ತನ್ನ ಯೋಗಮಾಯೆಯಿಂದ ತನ್ನ ಇಚ್ಛಾನುಸಾರವಾಗಿ ಹಿಮವಂತನನ್ನು ತನ್ನ ತಂದೆ ಯನ್ನಾಗಿ ತಿಳಿದು, ಅವನಿಗೆ ಅನುಗ್ರಹವನ್ನು ಮಾಡಿದಳು.

೫೩. ಸತೀದೇವಿಯು ಯಾವಾಗ ತನ್ನ ತಂದೆಯನ್ನು ನಿಂದಿಸಿ ಭಯವಿಹ್ವಲ ಳಾದಳೋ ಆ ಕ್ಷಣದಲ್ಲಿಯೇ ಯಜ್ಞದಲ್ಲಿ ಪ್ರವೃತ್ತರಾದ ಋತ್ವಿಕ್ಕುಗಳಿಗೆ ಮಂತ್ರಗಳು ಮರೆತುಹೋದುವು. ಯಜ್ಞವು ಕೆಟ್ಟುಹೋಯಿತು.

ತದುಪಶ್ರುತ್ಯ ಗಮನಂ ದೇವ್ಯಾಸ್ತ್ರಿಪುರಮರ್ದನಃ ।
ದಕ್ಷಾಯ ಚ ಋಷಿಭ್ಯಶ್ಚ ಚುಕೋಪ ಚ ಶಶಾಪ ತಾನ್ ॥ ೫೪ ॥

ಯಸ್ಮಾದವಮತಾ ದಕ್ಷ ಮತ್ಕೃತೇಽನಾಗಸಾ ಸತೀ ।
ಪೂಜಿತಾಶ್ಚೇತರಾಃ ಸರ್ವಾಃ ಸ್ವಸುತಾ ಭರ್ತೃಭಿಃ ಸಹ ॥ ೫೫ ॥

ವೈವಸ್ವತೇಂಽತರೇ ತಸ್ಮಾತ್ತವ ಜಾಮಾತರಸ್ತ್ವಮೀ ।
ಉತ್ಪತ್ಸ್ಯಂತೇ ಸಮಂ ಸರ್ವೇ ಬ್ರಹ್ಮಯಜ್ಞೇಷ್ವಯೋನಿಜಾಃ ॥ ೫೬ ॥

ಭವಿತಾ ಮಾನುಷೋ ರಾಜಾ ಚಾಕ್ಷುಷಸ್ಯ ತ್ವಮನ್ವಯೇ ।
ಪ್ರಾಚೀನಬರ್ಹಿಷಃ ಪೌತ್ರಃ ಪುತ್ರಶ್ಚಾಪಿ ಪ್ರಚೇತಸಃ ॥ ೫೭ ॥

ಅಹಂ ತತ್ರಾಪಿ ತೇ ವಿಘ್ನಮಾಚರಿಷ್ಯಾಮಿ ದುರ್ಮತೇ ।
ಧರ್ಮಾರ್ಥಕಾಮಯುಕ್ತೇಷು ಕರ್ಮಸ್ವಪಿ ಪುನಃ ಪುನಃ ॥ ೫೮ ॥

---

೫೪. ತ್ರಿಪುರನಾಶಕನಾದ ಮಹೇಶ್ವರನು, ದೇವಿಯು ಹಿಮವತ್ಪರ್ವತಕ್ಕೆ ಹೋದ ವರ್ತಮಾನವನ್ನು ತಿಳಿದು, ದಕ್ಷಬ್ರಹ್ಮನ ಮೇಲೂ ಅವನ ಸಹಾಯಕರಾದವರಮೇಲೂ ಕೋಪಗೊಂಡು ಅವರನ್ನು ಶಪಿಸಿದನು.

೫೫-೫೬. ಎಲೈ ದಕ್ಷನೇ! ನೀನು ನಿರಪರಾಧಿಯಾದ ಸತೀದೇವಿಗೆ ಅವಮಾನ ಮಾಡಿರುವೆ ನನ್ನ ಮೇಲಿನ ದ್ವೇಷಬುದ್ಧಿಯಿಂದ ಅವಳನ್ನು ತಿರಸ್ಕಾರ ಮಾಡಿರುವುದಲ್ಲದೆ ಅವಳಿಗಿಂತಲೂ ಚಿಕ್ಕವರಾದ ನಿನ್ನ ಪುತ್ರಿಯರನ್ನೂ, ಅವರ ಪತಿಗಳನ್ನೂ ಸತ್ಕಾರಮಾಡಿರುತ್ತೀಯೆ. ಆದ್ದರಿಂದ, ನಿನ್ನ ಯಜ್ಞಕ್ಕೆ ಬಂದಿರುವ ನಿನ್ನ ಅಳಿಯಂದಿರುಗಳೆಲ್ಲರೂ ವೈವಸ್ವತಮನ್ವಂತರದಲ್ಲಿ ಬ್ರಹ್ಮನು ಯಜ್ಞಮಾಡುವಾಗ ಅಯೋನಿಜರಾಗಿ ಹುಟ್ಟುವರು.

೫೭-೫೮. ನೀನು ಚಾಕ್ಷುಷಮನ್ವಂತರದಲ್ಲಿ ಪ್ರಾಚೀನಬರ್ಹಿಷರ ಮೊಮ್ಮಗನಾಗಿ, ಪ್ರಾಚೇತಸರ ಮಗನಾಗಿ ಹುಟ್ಟುತ್ತೀಯೆ. ಎಲೈ ದುರ್ಬುದ್ಧಿಯೇ! ಕೇಳು. ನಾನು ಆಗಲೂ ಕೂಡ ನಿನ್ನ ಯಜ್ಞಕ್ಕೆ ವಿಘ್ನವನ್ನುಂಟುಮಾಡುವೆನು ಮತ್ತು ನೀನು ಆಚರಿಸುವ ಧರ್ಮಾರ್ಥಕಾಮಯುಕ್ತವಾದ ಕಾರ್ಯಗಳೆಲ್ಲಕ್ಕೂ ನಾನು ಪದೇ ಪದೇ ವಿಘ್ನವನ್ನುಂಟುಮಾಡುವೆನು ಎಂದನು.

**ತೇನೈವಂ ವ್ಯಾಹೃತೋ ದಕ್ಷೋ ರುದ್ರೇಣಾಮಿತತೇಜಸಾ ।**
**ಸ್ವಾಯಂಭುವೀಂ ತನು ತ್ಯಕ್ತ್ವಾ ಪಪಾತ ಭುವಿ ದುಃಖಿತಃ ॥ ೫೯ ॥**

**ತತಃ ಪ್ರಾಚೇತಸೋ ದಕ್ಷೋ ಜಜ್ಞೇ ವೈ ಚಾಕ್ಷುಷೇಂತರೇ ।**
**ಪ್ರಾಚೀನಬರ್ಹಿಷಃ ಪೌತ್ರಃ ಪುತ್ರಶ್ಚೈವ ಪ್ರಚೇತಸಾಂ ॥ ೬೦ ॥**

**ಭೃಗ್ವಾದಯೋಽಪಿ ಜಾತಾ ವೈ ಮನೋರ್ವೈವಸ್ವತಸ್ಯ ತು ।**
**ಅಂತರೇ ಬ್ರಹ್ಮಣೋ ಯಜ್ಞೇ ವಾರುಣೀ ಬಿಭ್ರತಸ್ತನುಂ ॥ ೬೧ ॥**

**ತದಾ ದಕ್ಷಸ್ಯ ಧರ್ಮಾರ್ಥಂ ಯಜ್ಞೇ ತಸ್ಯ ದುರಾತ್ಮನಃ ।**
**ಮಹೇಶಃ ಕೃತವಾನ್ವಿಘ್ನಂ ಮನೌ ವೈವಸ್ವತೇ ಸತಿ ॥ ೬೨ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ಸತೀದೇಹತ್ಯಾಗೋ ನಾಮಾಷ್ಟಾದಶೋಽಧ್ಯಾಯಃ**

---

೫೯. ಅಪರಿಮಿತ ತೇಜಶ್ಶಾಲಿಯಾದ ರುದ್ರನು ದಕ್ಷನಿಗೆ ಹೀಗೆ ಶಾಪವನ್ನು ಕೊಡಲು, ದಕ್ಷಬ್ರಹ್ಮನು ತನ್ನ ತಂದೆಯಾದ ಸ್ವಾಯಂಭುವಮನುವಿನಿಂದ ಉಂಟಾದ ಆ ಶರೀರವನ್ನು ತ್ಯಜಿಸಿ ಅತಿ ದುಃಖದಿಂದ ಭೂಮಿಯಲ್ಲಿ ಬಿದ್ದನು.

೬೦. ಅನಂತರ ಚಾಕ್ಷುಷಮನ್ವಂತರವು ಬರಲು ಆಗ ದಕ್ಷನು ಪ್ರಾಚೀನ ಬರ್ಹಿಷರ ಮೊಮ್ಮಗನಾಗಿಯೂ ಪ್ರಚೇತಸರಿಗೆ ಮಗನಾಗಿಯೂ ಹುಟ್ಟಿದನು. ಭೃಗ್ವಾದಿ ಮಹರ್ಷಿಗಳೆಲ್ಲರೂ, ವೈವಸ್ವತಮನ್ವಂತರದಲ್ಲಿ ಬ್ರಹ್ಮನು ಯಜ್ಞಮಾಡಿದಾಗ ವರುಣನಿಂದ ದೇಹವನ್ನು ಧರಿಸಿ ಜನಿಸಿದರು.

೬೧-೬೨. ಆಗ ದಕ್ಷಬ್ರಹ್ಮನು ಧರ್ಮವೃದ್ಧಿಗಾಗಿ ಯಜ್ಞಮಾಡುತ್ತಿದ್ದನು. ದುಷ್ಟನಾದ ಇವನ ಯಜ್ಞವು ನಡೆಯದಿರುವಂತೆ ವೈವಸ್ವತಮನ್ವಂತರದಲ್ಲಿಯೂ ಮಹೇಶ್ವರನು ಇವನ ಯಜ್ಞಕ್ಕೆ ವಿಘ್ನವನ್ನುಂಟುಮಾಡಿದನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯ ಸಂಹಿತೆಯ ಪೂರ್ವಖಂಡದಲ್ಲಿ ಸತೀದೇಹತ್ಯಾಗವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ಏಕೋನವಿಂಶೋಽಧ್ಯಾಯಃ

---

॥ ಋಷಯ ಊಚುಃ ॥

**ಕಥಂ ದಕ್ಷಸ್ಯ ಧರ್ಮಾರ್ಥಂ ಪ್ರವೃತ್ತಸ್ಯ ದುರಾತ್ಮನಃ ।**
**ಮಹೇಶಃ ಕೃತವಾನ್ವಿಘ್ನಮೇತದಿಚ್ಛಾಮ ವೇದಿತುಂ ॥ ೧ ॥**

॥ ವಾಯುರುವಾಚ ॥

**ವಿಶ್ವಸ್ಯ ಜಗತೋ ಮಾತುರಪಿ ದೇವ್ಯಾಸ್ತಪೋಬಲಾತ್ ।**
**ಪಿತೃಭಾವಮುಪಾಗಮ್ಯ ಮುದಿತೇ ಹಿಮವದ್ಗಿರೌ ॥ ೨ ॥**

## ಹತ್ತೊಂಭತ್ತನೆಯ ಅಧ್ಯಾಯವು

೧. ಋಷಿಗಳು ಕೇಳುವರು.—ದುಷ್ಟನಾದ ದಕ್ಷಬ್ರಹ್ಮನು ಧರ್ಮಾಚರಣೆಗಾಗಿ ಪ್ರಯತ್ನಮಾಡಿ ನಡೆಸಿದ ಯಜ್ಞಕ್ಕೆ ಮಹೇಶ್ವರನು ಹೇಗೆ ವಿಘ್ನವನ್ನುಂಟುಮಾಡಿದನು? ಇದನ್ನು ಕೇಳಬೇಕೆಂದು ನಮಗೆ ಕುತೂಹಲವಿರುವುದು. ಆದುದರಿಂದ ಆ ವಿಷಯವನ್ನು ದಯವಿಟ್ಟು ಹೇಳಬೇಕೆಂದು ಕೇಳಲು,

೨-೫. ವಾಯುದೇವನು ಹೇಳುವನು.—ಪ್ರಪಂಚಕ್ಕೆಲ್ಲಕ್ಕೂ ತಾಯಿಯಾದ ದೇವಿಯು ತನ್ನ ತಪಸ್ಸಿನ ಬಲದಿಂದ ಹಿಮವಂತನನ್ನು ತಂದೆಯನ್ನಾಗಿ ಭಾವಿಸಿ ಅವನಲ್ಲಿ ಜನ್ಮವನ್ನೆತ್ತಿದಳು. ಪರಮೇಶ್ವರನೂ ಕೂಡ ಅವಳನ್ನು ಮದುವೆ ಮಾಡಿ

ದೇವೋಽಪಿ ತತ್ಕೃತೋದ್ವಾಹೇ ಹಿಮವಚ್ಛಿಖರಾಲಯೇ ।
ಸಂಕ್ರೀಡತಿ ತಯಾ ಸಾರ್ಧಂ ಕಾಲೇ ಬಹುತರೇ ಗತೇ ॥ ೩ ॥

ವೈವಸ್ವತೇಽನ್ತರೇ ಪ್ರಾಪ್ತೇ ದಕ್ಷಃ ಪ್ರಾಚೇತಸಸ್ಸ್ವಯಂ ।
ಅಶ್ವಮೇಧೇನ ಯಜ್ಞೇನ ಯಕ್ಷ್ಯಮಾಣೋಽನ್ವಪದ್ಯತ ॥ ४ ॥

ತತೋ ಹಿಮವತಃ ಪೃಷ್ಠೇ ದಕ್ಷೋ ವೈ ಯಜ್ಞಮಾಹರತ್ ।
ಗಂಗಾದ್ವಾರೇ ಶುಭೇ ದೇಶೇ ಋಷಿಸಿದ್ಧನಿಷೇವಿತೇ ॥ ೫ ॥

ತಸ್ಯ ತಸ್ಮಿನ್ಮಖೇ ದೇವಾಃ ಸರ್ವೇ ಶಕ್ರಪುರೋಗಮಾಃ ।
ಗಮನಾಯ ಸಮಾಗಮ್ಯ ಬುದ್ಧಿಮಾಪೇದಿರೇ ತದಾ ॥ ೬ ॥

ಆದಿತ್ಯಾ ವಸವೋ ರುದ್ರಾಸ್ಸಾಧ್ಯಾಸ್ಸಹ ಮರುದ್ಗಣೈಃ ।
ಊಷ್ಮಪಾಃ ಸೋಮಪಾಶ್ಚೈವ ಆಜ್ಯಪಾ ಧೂಮಪಾಸ್ತಥಾ ॥ ೭ ॥

ಅಶ್ವಿನೌ ಪಿತರಶ್ಚೈವ ತಥಾ ಚಾನ್ಯೇ ಮಹರ್ಷಯಃ ।
ವಿಷ್ಣುನಾ ಸಹಿತಾಃ ಸರ್ವೇ ಸ್ವಾಗತಾ ಯಜ್ಞಭಾಗಿನಃ ॥ ೮ ॥

---

ಕೊಂಡು ಹಿಮವತ್ಪರ್ವತದ ಶಿಖರದಲ್ಲಿ ಅವಳೊಡನೆ ಆನಂದದಿಂದ ವಿಹರಿಸುತ್ತಿದ್ದನು. ಹೀಗೆಯೇ ಬಹಳ ಕಾಲವು ಕಳೆದುಹೋಯಿತು. ವೈವಸ್ವತಮನ್ವಂತರವು ಬಂದಿತು. ಪ್ರಾಚೇತಸರ ವಂಶದಲ್ಲಿ ದಕ್ಷಬ್ರಹ್ಮನು ಹುಟ್ಟಿ ಅಶ್ವಮೇಧ ಯಜ್ಞವನ್ನು ಮಾಡಬೇಕೆಂದು ನಿಶ್ಚಯಿಸಿ ಅದನ್ನು ಹಿಮವತ್ಪರ್ವತದ ತಪ್ಪಲಿನಲ್ಲಿ ಮಾಡಲು ಪ್ರಾರಂಭಿಸಿದನು. ಆ ಪ್ರದೇಶವು ಗಂಗೆಗೆ ಉತ್ಪತ್ತಿ ಸ್ಥಾನವಾಗಿ ಋಷಿಗಳು, ಸಿದ್ಧರು ಇವರಿಂದ ಸೇವಿತವಾಗಿತ್ತು.

೬. ಆಗ ಅವನ ಯಜ್ಞಕ್ಕಾಗಿ ಇಂದ್ರನೇ ಮೊದಲಾದ ದೇವತೆಗಳು ಬರಲು ಸಿದ್ಧರಾದರು. ಆದಿತ್ಯರು, ವಸುಗಳು, ರುದ್ರರು, ಸಾಧ್ಯರು, ಇವರೆಲ್ಲರೂ ದೇವತೆಗಳೊಡನೆ ಆ ಯಜ್ಞಕ್ಕೆ ಬಂದರು.

೭-೮. ಊಷ್ಮಪರು ಎಂದರೆ ಅಗ್ನಿಯ ಉಷ್ಣವನ್ನು ಪಾನಮಾಡುವ ದೇವತೆಗಳು, ಸೋಮಪಾನ ಮಾಡುವವರು, ಘೃತವನ್ನು ಪಾನಮಾಡುವವರು, ಹೊಗೆಯನ್ನು ಪಾನಮಾಡುವವರು, ಅಶ್ವಿನೀ ದೇವತೆಗಳು, ಪಿತೃದೇವತೆಗಳು, ಇನ್ನೂ ಇತರರಾದ ಅನೇಕ ಮಹರ್ಷಿಗಳು, ವಿಷ್ಣುವಿನ ಸಂಗಡ ಯಜ್ಞದಲ್ಲಿ ತಮ್ಮ ತಮ್ಮ ಭಾಗಗಳನ್ನು ಸ್ವೀಕರಿಸುವುದಕ್ಕಾಗಿ ಆ ಯಜ್ಞಕ್ಕೆ ಬಂದರು.

ದೃಷ್ಟ್ವಾ ದೇವಕುಲಂ ಸರ್ವಮೀಶ್ವರೇಣ ವಿನಾ ಗತಂ ।
ದಧೀಚೋ ಮನ್ಯುನಾವಿಷ್ಟೋ ದಕ್ಷಮೇವಮಭಾಷತ ॥ ೯ ॥

॥ ದಧೀಚ ಉವಾಚ ॥

ಅಪ್ಯಪೂಜ್ಯೇ ಚೈವ ಪೂಜಾ ಪೂಜ್ಯಾನಾಂ ಚಾಪ್ಯಪೂಜನೇ ।
ನರಃ ಪಾಪಮವಾಪ್ನೋತಿ ಮಹದ್ವೈ ನಾತ್ರ ಸಂಶಯಃ ॥ ೧೦ ॥

ಅಸತಾಂ ಸಂಮತಿರ್ಯತ್ರ ಸತಾಮವಮತಿಸ್ತಥಾ ।
ದಂಡೋ ದೇವಕೃತಸ್ತತ್ರ ಸದ್ಯಃ ಪತತಿ ದಾರುಣಃ ॥ ೧೧ ॥

ಏವಮುಕ್ತ್ವಾ ತು ವಿಪ್ರರ್ಷಿಃ ಪುನರ್ದಕ್ಷಮಭಾಷತ ।
ಪೂಜ್ಯಂ ತು ಪಶುಭರ್ತಾರಂ ಕಸ್ಮಾನ್ನಾರ್ಚಯಸೇ ಪ್ರಭುಂ ॥ ೧೨ ॥

॥ ದಕ್ಷ ಉವಾಚ ॥

ಸಂತಿ ಮೇ ಬಹವೋ ರುದ್ರಾಃ ಶೂಲಹಸ್ತಾಃ ಕಪರ್ದಿನಃ ।
ಏಕಾದಶಾವಸ್ಥಿತಾ ಯೇ ನಾನ್ಯಂ ವೇದ್ಮಿ ಮಹೇಶ್ವರಂ ॥ ೧೩ ॥

---

೯-೧೧. ಈಶ್ವರನೊಬ್ಬನು ಮಾತ್ರ ಆ ಯಜ್ಞಕ್ಕೆ ಬಂದಿರಲಿಲ್ಲ. ಮಿಕ್ಕ ದೇವತೆಗಳೆಲ್ಲರೂ ಬಂದಿದ್ದರು. ಅದನ್ನು ಕಂಡು ದಧೀಚಿಋಷಿಯು ಕೋಪದಿಂದ ದಕ್ಷನನ್ನು ಕುರಿತು ಎಲೈ, ದಕ್ಷನೇ ಕೇಳು! ಪೂಜೆಗೆ ಯೋಗ್ಯರಾದವರಿಗೆ ಪೂಜೆಯನ್ನು ಮಾಡದೆ ಪೂಜೆಗೆ ಯೋಗ್ಯರಲ್ಲದಿರುವವರಿಗೆ ಪೂಜೆ ಮಾಡುವವನು ಬಹಳ ಪಾಪವನ್ನು ಹೊಂದುವನು. ಇದರಲ್ಲಿ ಸಂಶಯವಿಲ್ಲ. ಸತ್ಪುರುಷರಿಗೆ ಅವಮಾನವೂ, ನೀಚರಿಗೆ ಪುರಸ್ಕಾರವೂ ಇರುವ ಕಡೆಯಲ್ಲಿ ದೇವರಿಂದ ಆ ಕ್ಷಣದಲ್ಲಿಯೆ ತೊಂದರೆಯು ಉಂಟಾಗುವುದು. ಎಲೈ, ದಕ್ಷನೇ ನೀನು ಪೂಜೆಗೆ ಯೋಗ್ಯನಾಗಿರುವ ಪಶುಪತಿಯನ್ನು ಏತಕ್ಕೆ ಪೂಜಿಸುವುದಿಲ್ಲ? ಎನ್ನಲು,

೧೨. ದಕ್ಷಬ್ರಹ್ಮನಿಂತೆಂದನು–ಶೂಲಾಯುಧವನ್ನು ಧರಿಸಿ ಜಟಾಧಾರಿಗಳಾದ ರುದ್ರರು ಬಹು ಮಂದಿ ಇರುವರು, ಇವರಲ್ಲಿ ಏಕಾದಶ ರುದ್ರರೆಂದು ಹನ್ನೊಂದು ಮಂದಿ ರುದ್ರರು ಪ್ರಸಿದ್ಧರಾಗಿರುವರು. ಈ ರುದ್ರರಲ್ಲದೆ ಬೇರೆ ರುದ್ರನಿರುವನೆಂದು ಹೇಳುವಿಯಲ್ಲಾ, ಅವನಾರೋ ನನಗೆ ಬೇರೆ ತಿಳಿಯದು ಎಂದನು.

೧೩. ದಧೀಚಋಷಿಯಿಂತೆಂದನು.— ಬೇರೆ ಬೇರೆಯಾಗಿರುವ ಇತರ ದೇವತೆಗಳನ್ನು ಪೂಜಿಸಿ ಪ್ರಯೋಜನವೇನು? ಈ ಯಜ್ಞಕ್ಕೆಲ್ಲಕ್ಕೂ ಅಧಿಪತಿಯಾದ ರುದ್ರನನ್ನೇ ನೀನು ಪೂಜೆ ಮಾಡಿರುವುದಿಲ್ಲ.

॥ ದಧೀಚ ಉವಾಚ ॥

ಕಿಮೇಭಿರಮರ್ರೈರನ್ಯೈಃ ಪೂಜಿತ್ರೈರಧ್ವರೇ ಫಲಂ ।
ರಾಜಾ ಚೇದಧ್ವರಸ್ಯಾಸ್ಯ ನ ರುದ್ರಃ ಪೂಜ್ಯತೇ ತ್ವಯಾ ॥ ೧೪ ॥

ಬ್ರಹ್ಮವಿಷ್ಣುಮಹೇಶಾನಾಂ ಸ್ರಷ್ಟಾ ಯಃ ಪ್ರಭುರವ್ಯಯಃ ।
ಬ್ರಹ್ಮಾದಯಃ ಪಿಶಾಚಾಂತಾ ಯಸ್ಯ ಕೈಂಕರ್ಯವಾದಿನಃ ॥ ೧೫ ॥

ಪ್ರಕೃತೀನಾಂ ಪರಶ್ಚೈವ ಪುರುಷಸ್ಯ ಚ ಯಃ ಪರಃ ।
ಚಿಂತ್ಯತೇ ಯೋಗವಿದ್ವದ್ಭಿಃ ಋಷಿಭಿಸ್ತತ್ತ್ವದರ್ಶಿಭಿಃ ॥ ೧೬ ॥

ಅಕ್ಷರಂ ಪರಮಂ ಬ್ರಹ್ಮ ಹ್ಯಸಚ್ಚ ಸದಸಚ್ಚ ಯತ್ ।
ಅನಾದಿಮಧ್ಯನಿಧನಮಪ್ರತರ್ಕ್ಯಂ ಸನಾತನಂ ॥ ೧೭ ॥

ಯಃ ಸ್ರಷ್ಟಾ ಚೈವ ಸಂಹರ್ತಾ ಭರ್ತಾ ಚೈವ ಮಹೇಶ್ವರಃ ।
ತಸ್ಮಾದನ್ಯಂ ನ ಪಶ್ಯಾಮಿ ಶಂಕರಾತ್ಮಾನಮಧ್ವರೇ ॥ ೧೮ ॥

॥ ದಕ್ಷ ಉವಾಚ ॥

ಏತನ್ಮಖೇಶಸ್ಯ ಸುವರ್ಣಪಾತ್ರೇ
ಹವಿಃ ಸಮಸ್ತಂ ವಿಧಿಮಂತ್ರಪೂತಂ ।

---

೧೪-೧೭. ಈ ರುದ್ರನು ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳನ್ನು ಸೃಷ್ಟಿಮಾಡಿರುವವನು. ಎಲ್ಲಕ್ಕೂ ಅಧಿಪತಿಯಾಗಿರುವನು. ಮತ್ತು ಪರಿಪೂರ್ಣನಾಗಿರುವನು. ಬ್ರಹ್ಮನೇ ಮೊದಲಾಗಿ ಪಿಶಾಚಿಯೇ ಕೊನೆಯಾಗಿರುವವರೆಲ್ಲರೂ ಅವನಿಗೆ ಕಿಂಕರನೆನಿಸಿಕೊಳ್ಳುವರು ಇವನು ಪ್ರಕೃತಿಗಿಂತಲೂ ಬೇರೆಯಾಗಿರುವವನು ಮತ್ತು ಎಲ್ಲಕ್ಕಿಂತಲೂ ಉತ್ಕೃಷ್ಟನೆಂದು ಯೋಗಶಾಸ್ತ್ರವನ್ನು ತಿಳಿದವರೂ ತತ್ವವನ್ನು ತಿಳಿದ ಋಷಿಗಳೂ ಇವನನ್ನೇ ಧ್ಯಾನಮಾಡುವರು.

೧೮. ಇವನು ನಾಶರಹಿತನು, ಪರಬ್ರಹ್ಮಸ್ವರೂಪದಿಂದ ಇರುವವನು, ಸತ್ಪದಾರ್ಥ ಅಸತ್ಪದಾರ್ಥ ಇವುಗಳ ರೂಪದಿಂದಲೂ, ಇರುವವನು. ಆದಿ, ಮಧ್ಯ, ಅಂತ್ಯ, ಇವುಗಳು ಯಾವುದೂ ಇವನಿಗಿಲ್ಲ. ಊಹಿಸುವುದಕ್ಕೂ ಅಶಕ್ಯನಾಗಿಯೂ, ನಿತ್ಯನಾಗಿಯೂ, ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುತ್ತಿರುವ ಮಹೇಶ್ವರನನ್ನು ಹೊರತು ಈ ಯಜ್ಞದಲ್ಲಿ ಶಿವರೂಪದಿಂದ ಇಲ್ಲದಿರುವ ವಸ್ತುವನ್ನೇ ನಾನು ತಿಳಿದಿಲ್ಲ ಎಂದನು.

ವಿಷ್ಣೋರ್ನಿರ್ಯಾಮ್ಯಪ್ರತಿಮಸ್ಯ ಭಾಗಂ
ಪ್ರಭೋರ್ವಿಭಜ್ಯಾವಹನೀಯಮದ್ಯ ॥ ೧೯ ॥

॥ ದಧೀಚ ಉವಾಚ ॥

ಯಸ್ಮಾನ್ನಾರಾಧಿತೋ ರುದ್ರಸ್ಸರ್ವದೇವೇಶ್ವರೇಶ್ವರಃ ।
ತಸ್ಮಾದ್ದಕ್ಷ ತವಾಶೇಷೋ ಯಜ್ಞೋಽಯಂ ನ ಭವಿಷ್ಯತಿ ॥ ೨೦ ॥

ಇತ್ಯುಕ್ತ್ವಾ ವಚನಂ ಕ್ರುದ್ಧೋ ದಧೀಚೋ ಮುನಿಸತ್ತಮಃ ।
ನಿರ್ಗಮ್ಯ ಚ ತತೋ ದೇಶಾಜ್ಜಗಾಮ ಸ್ವಕಮಾಶ್ರಮಂ ॥ ೨೧ ॥

ನಿರ್ಗತೇಽಪಿ ಮುನೌ ತಸ್ಮಿನ್ದೇವಾ ದಕ್ಷಂ ನ ತತ್ಯಜುಃ ।
ಅವಶ್ಯಮನುಭಾವಿತ್ವಾದನರ್ಥಸ್ಯ ತು ಭಾವಿನಃ ॥ ೨೨ ॥

೧೯. ದಕ್ಷನು ಹೇಳಿದನು.—ಈ ಯಜ್ಞಕ್ಕೆ ವಿಷ್ಣುವು ಅಧಿಪತಿಯು. ಅವನು ಅಪ್ರತಿಮನು, ಸರ್ವಶ್ರೇಷ್ಠನು. ಇಂತಹ ಈ ವಿಷ್ಣುವಿಗೆ ಹವಿರ್ಭಾಗವನ್ನು ಚಿನ್ನದ ಪಾತ್ರೆಯಲ್ಲಿ ಶಾಸ್ತ್ರಕ್ರಮದಿಂದ ಹೇಳಿರುವ ಮಂತ್ರಗಳಿಂದ ಸಂಸ್ಕಾರಮಾಡಿ, ಪರಿಶುದ್ಧವಾದ ಅಹವನೀಯಾಗ್ನಿಯ ಮೂಲಕವಾಗಿ ಈಗಲೇ ತಲಪಿಸುವೆನು ಎನ್ನಲು,

೨೦ ದಧೀಚಿಋಷಿಯು ಮತ್ತಿಂತೆಂದನು.—ಎಲೈ, ದಕ್ಷನೇ ಕೇಳು. ಈಶ್ವರನು ಎಲ್ಲಾ ದೇವತೆಗಳಿಗೂ ಪ್ರಭುವು ವಿಷ್ಣುವಿಗೂ ಅವನೇ ಅಧಿಪತಿಯು. ಇಂತಹ ಈಶ್ವರನನ್ನು ನೀನು ಪೂಜಿಸದೆ ಇರುವಕಾರಣ ನಿನ್ನ ಈ ಯಜ್ಞವೆಲ್ಲವೂ ನಾಶವಾಗಿ ಹೋಗುವುದು ಎಂದನು.

೨೧-೨೨ ಋಷಿಶ್ರೇಷ್ಠನಾದ ದಧೀಚನು ಕೋಪದಿಂದ ಈ ಮಾತನ್ನು ಹೇಳಿ ಆ ಯಾಗಶಾಲೆಯನ್ನು ಬಿಟ್ಟು ಹೊರಕ್ಕೆ ಬಂದು ತನ್ನ ಆಶ್ರಮಕ್ಕೆ ಹೊರಟು ಹೋದನು. ದೇವತೆಗಳಾದರೋ ಮುಂದೆ ಉಂಟಾಗುವ (ಅನರ್ಥ) ತೊಂದರೆಯನ್ನು ಅವಶ್ಯವಾಗಿ ಅನುಭವಿಸಬೇಕಾಗಿರುವಕಾರಣ, ದಧೀಚಿಋಷಿಯು ಆ ಪ್ರದೇಶವನ್ನು ಬಿಟ್ಟು ಹೊರಟು ಹೋದುದನ್ನು ನೋಡಿಯೂ, ಆ ದಕ್ಷನನ್ನು ಬಿಡದೆ ಅಲ್ಲಿಯೇ ಇದ್ದರು.

ಏತಸ್ಮಿನ್ನೇವ ಕಾಲೇ ತು ಜ್ಞಾತ್ವೈತತ್ಸರ್ವಮೀಶ್ವರಾತ್ ।
ದಗ್ಧುಂ ದಕ್ಷಾಧ್ವರಂ ವಿಪ್ರಾ ದೇವೀ ದೇವಮಚೋದಯತ್ ॥ ೨೩ ॥

ದೇವ್ಯಾ ಸಂಚೋದಿತೋ ದೇವೋ ದಕ್ಷಾಧ್ವರಜಿಘಾಂಸಯಾ ।
ಸಸರ್ಜ ಸಹಸಾ ವೀರಂ ವೀರಭದ್ರಂ ಗಣೇಶ್ವರಂ ॥ ೨೪ ॥

ಸಹಸ್ರವದನಂ ದೇವಂ ಸಹಸ್ರಕಮಲೇಕ್ಷಣಂ ।
ಸಹಸ್ರಮುದ್ಗರಧರಂ ಸಹಸ್ರಶರಪಾಣಿಕಂ ॥ ೨೫ ॥

ಶೂಲಟಂಕಗದಾಹಸ್ತಂ ದೀಪ್ತಕಾರ್ಮುಕಧಾರಿಣಂ ।
ಚಕ್ರವಜ್ರಧರಂ ಘೋರಂ ಚಂದ್ರಾರ್ಧಕೃತಶೇಖರಂ ॥ ೨೬ ॥

ಕುಲಿಶೋದ್ಯೋತಿತಕರಂ ತಡಿಜ್ಜ್ವಲಿತಮೂರ್ಧಜಂ ।
ದಂಷ್ಟ್ರಾಕರಾಲಂ ಬಿಭ್ರಾಣಂ ಮಹಾವಕ್ತ್ರಂ ಮಹೋದರಂ ॥ ೨೭ ॥

೨೩. ಈ ಕಾಲದಲ್ಲಿಯೇ ಪಾರ್ವತೀದೇವಿಯು ಈಶ್ವರನಿಂದ ಈ ವರ್ತಮಾನವೆಲ್ಲವನ್ನೂ ತಿಳಿದು ದಕ್ಷಬ್ರಹ್ಮನ ಯಜ್ಞವನ್ನು ನಾಶಮಾಡಲು ತನ್ನ ಪತಿಯಾದ ಶಿವನನ್ನು ಪ್ರೇರಿಸಿದಳು.

೨೪. ದೇವನು ಪಾರ್ವತಿದೇವಿಯಿಂದ ಪ್ರೇರಿತನಾಗಿ ದಕ್ಷಬ್ರಹ್ಮನ ಯಜ್ಞವನ್ನು ಹಾಳುಮಾಡುವ ಇಚ್ಛೆಯಿಂದ ವೀರಭದ್ರನೆಂಬ ಗಣೇಶನನ್ನು ಬೇಗನೆ ಸೃಷ್ಟಿಮಾಡಿದನು.

೨೫-೩೦. ಶೂರನಾದ ವೀರಭದ್ರನೆಂಬ ಈ ಗಣೇಶನಿಗೆ ಸಾವಿರ ಮುಖಗಳೂ ಕಮಲದಹಾಗೆ ಇರುವ ಸಾವಿರ ಕಣ್ಣುಗಳೂ ಇದ್ದವು. ತನ್ನ ಸಾವಿರ ಕೈಗಳಲ್ಲಿ ಸಾವಿರ ಮುದ್ಗರಾಯುಧಗಳನ್ನೂ, ಸಾವಿರ ಬಾಣಗಳನ್ನೂ ಧರಿಸಿದ್ದನು. ಶೂಲ, ಟಂಕ, ಗದಾ, ಇವುಗಳನ್ನೂ ಪ್ರಕಾಶಮಾನವಾದ ಧನುಸ್ಸನ್ನೂ ಹಿಡಿದಿದ್ದನು. ಅವನು ಚಕ್ರಾಯುಧವನ್ನೂ, ವಜ್ರಾಯುಧವನ್ನೂ ಧರಿಸಿಕೊಂಡು ಭಯಂಕರನಾಗಿ ಕಾಣುತ್ತಿದ್ದನು. ಅರ್ಧಚಂದ್ರನನ್ನು ತನ್ನ ತಲೆಯಲ್ಲಿ ಆಭರಣವಾಗಿ ಧರಿಸಿಕೊಂಡಿದ್ದನು. ಇವನ ಹಸ್ತದಲ್ಲಿದ್ದ ವಜ್ರಾಯುಧವು ಥಳಥಳನೆ ಹೊಳೆಯುತ್ತಿತ್ತು. ಈ ವೀರಭದ್ರನ ತಲೆಯಕೂದಲು ಮಿಂಚಿನಂತೆ ಹೊಳೆಯುತ್ತಿತ್ತು. ಇವನಿಗೆ ಕೋರದಾಡೆಗಳಿಂದ ಕೂಡಿರುವ ಭಯಂಕರವಾದ ದೊಡ್ಡ ಮುಖ, ದಪ್ಪನಾದ ದೊಡ್ಡ

**ವಿದ್ಯುಜ್ಜಿಹ್ವಂ ಪ್ರಲಂಬೋಷ್ಠಂ ಮೇಘಸಾಗರನಿಃಸ್ವನಂ ।**
**ವಸಾನಂ ಚರ್ಮ ವೈಯಾಘ್ರಂ ಮಹದ್ರುಧಿರನಿಸ್ರವಂ ॥ ೨೮ ॥**

**ಗಂಡದ್ವಿತಯಸಂಸ್ಪೃಷ್ಟಮಂಡಲೀಕೃತಕುಂಡಲಂ ।**
**ವರಾಮರಶಿರೋಮಾಲಾವಲೀಕಲಿತಶೇಖರಂ ॥ ೨೯ ॥**

**ರಣನ್ನೂಪುರಕೇಯೂರಮಹಾಕನಕಭೂಷಿತಂ ।**
**ರತ್ನಸಂಚಯಸಂದೀಪ್ತಂ ತಾರಹಾರಾವೃತೋರಸಂ ॥ ೩೦ ॥**

**ಮಹಾಶರಭಶಾರ್ದೂಲಸಿಂಹೈಃ ಸದೃಶವಿಕ್ರಮಂ ।**
**ಪ್ರಶಸ್ತಮತ್ತಮಾತಂಗಸಮಾನಗಮನಾಲಸಂ ॥ ೩೧ ॥**

**ಶಂಖಚಾಮರಕುಂದೇಂದುಮೃಣಾಲಸದೃಶಪ್ರಭಂ ।**
**ಸತುಷಾರಮಿವಾದ್ರೀಂದ್ರಂ ಸಾಕ್ಷಾಜ್ಜಂಗಮತಾಂ ಗತಂ ॥ ೩೨ ॥**

---

ಹೊಟ್ಟೆ, ಮಿಂಚಿನಂತೆ ಇರುವ ನಾಲಿಗೆ, ಜೋಲಾಡುತ್ತಿರುವ ತುಟಿ, ಮೇಘ ಮತ್ತು ಸಮುದ್ರ ಇವುಗಳಿಗೆ ಸಮನಾದ ಕಠೋರಧ್ವನಿ ಇವುಗಳಿಂದ ಬಹು ಭಯಂಕರನಾಗಿ ಕಾಣುತ್ತಿದ್ದನು. ರಕ್ತಸುರಿಯುತ್ತಿರುವ ಹುಲಿಯ ಚರ್ಮವನ್ನು ಹೊದ್ದಿದ್ದನು. ಎರಡು ಕಪೋಲಗಳಿಗೂ ವತ್ತಿಕೊಂಡಿರುವ ದುಂಡಾದ ಕುಂಡಲಗಳನ್ನು ಧರಿಸಿದ್ದನು ಶ್ರೇಷ್ಠವಾದ ದೇವತೆಗಳ ತಲೆಬುರುಡೆಯ ಹಾರವನ್ನು ತನ್ನ ತಲೆಯ ಸುತ್ತಲೂ ಹಾಕಿಕೊಂಡಿದ್ದನು. ಆ ವೀರಭದ್ರನು ಝಣಝಣನೆ ಧ್ವನಿಮಾಡುತ್ತಿರುವ ಕಾಲಂದಿಗೆ, ಬಾಹುಪುರಿ ಇವೇ ಮೊದಲಾದ ಚಿನ್ನದ ಆಭರಣಗಳನ್ನೂ ಎದೆಯಲ್ಲಿ ರತ್ನಖಚಿತವಾದ ಹೊಳೆಯುತ್ತಿರುವ ದಪ್ಪನಾದ ಹಾರವನ್ನೂ ಧರಿಸಿದ್ದನು. ದೊಡ್ಡದಾದ ಶರಭ, ಸಿಂಹ, ಹುಲಿ ಇವುಗಳಿಗೆ ಸಮನಾದ ಪರಾಕ್ರಮದಿಂದ ಒಪ್ಪುತ್ತಿದ್ದನು.

೩೧-೩೪. ಉತ್ತಮವಾದ ಮದಿಸಿದ ಆನೆಯು ನಡೆಯುವಂತೆ ನಡೆಯುತ್ತಿದ್ದನು. ಇವನ ಶರೀರಕಾಂತಿಯು ಶಂಖ, ಚಾಮರ, ಮಘಮಲ್ಲಿಗೆ, ಚಂದ್ರ, ತಾವರೆಯದಿಂಡು, ಇವುಗಳಂತೆ ಬೆಳ್ಳಗಿದ್ದುದರಿಂದ ಓಡಾಡುತ್ತಿರುವ ಹಿಮದ ಬೆಟ್ಟದ ಹಾಗೆ ಕಾಣುತ್ತಿದ್ದನು. ಇಂತಹ ಆ ವೀರಭದ್ರನು ಅಗ್ನಿಯ ಜ್ವಾಲೆಯ ಮಾಲೆಯಿಂದ ಕೂಡಿದವನಾಗಿ, ಹೊಳೆಯುತ್ತಿರುವ ಮುತ್ತಿನ ಆಭರಣಗಳನ್ನು ಧರಿಸಿಕೊಂಡು,

**ಜ್ವಾಲಾಮಾಲಾಪರಿಕ್ಷಿಪ್ತಂ ದೀಪ್ತಮೌಕ್ತಿಕಭೂಷಣಂ ।**
**ತೇಜಸಾ ಚೈವ ದೀವ್ಯಂತಂ ಯುಗಾಂತ ಇವ ಪಾವಕಂ ॥ ೩೩ ॥**

**ಸ ಜಾನುಭ್ಯಾಂ ಮಹೀಂ ಗತ್ವಾ ಪ್ರಣತಃ ಪ್ರಾಂಜಲಿಸ್ತತಃ ।**
**ಪಾರ್ಶ್ವತೋ ದೇವದೇವಸ್ಯ ಪ್ರರ್ಯತಿಷ್ಠದ್ಗಣೇಶ್ವರಃ ॥ ೩೪ ॥**

**ಮನ್ಯುನಾ ಚಾಸೃಜದ್ಭದ್ರಾಂ ಭದ್ರಕಾಲೀಂ ಮಹೇಶ್ವರೀಂ ।**
**ಆತ್ಮನಃ ಕರ್ಮಸಾಕ್ಷಿತ್ವೇ ತೇನ ಗಂತುಂ ಸಹೈವ ತು ॥ ೩೫ ॥**

**ತಂ ದೃಷ್ಟ್ವಾವಸ್ಥಿತಂ ವೀರಭದ್ರಂ ಕಾಲಾಗ್ನಿಸನ್ನಿಭಂ ।**
**ಭದ್ರಯಾ ಸಹಿತಂ ಪ್ರಾಹ ಭದ್ರಮಸ್ತ್ವಿತಿ ಶಂಕರಃ ॥ ೩೬ ॥**

**ಸ ಚ ವಿಜ್ಞಾಪಯಾಮಾಸ ಸಹ ದೇವ್ಯಾ ಮಹೇಶ್ವರಂ ।**
**ಆಜ್ಞಾಪಯ ಮಹಾದೇವ ಕಿಂ ಕಾರ್ಯಂ ಕರವಾಣ್ಯಹಂ ॥ ೩೭ ॥**

ತನ್ನ ತೇಜಸ್ಸಿನಿಂದ ಪ್ರಳಯಕಾಲದ ಬೆಂಕಿಯಂತೆ ಹೊಳೆಯುತ್ತಾ ಶಿವನ ಸಮೀಪಕ್ಕೆ ಬಂದು ಮಂಡಿಯನ್ನು ಭೂಮಿಯಲ್ಲಿ ಊರಿ ಶಿವನಿಗೆ ನಮಸ್ಕಾರವನ್ನು ಮಾಡಿ ಕೈಮುಗಿದುಕೊಂಡು ದೇವದೇವನಾದ ಆ ಶಿವನ ಪಕ್ಕದಲ್ಲಿ ನಿಂತುಕೊಂಡಿದ್ದನು

೩೫. ಮತ್ತು ಆ ವೀರಭದ್ರನು ತಾನು ಮಾಡುವ ಕೆಲಸಕ್ಕೆ ಸಾಕ್ಷಿಯಾಗಿರುವುದಕ್ಕೂ ತನ್ನ ಜೊತೆಯಲ್ಲಿ ಸಹಾಯಮಾಡಲು ಬರುವುದಕ್ಕೂ ಕೂಡ ಮಂಗಳಕರಳೂ, ಮಹೇಶ್ವರಿಯೂ ಆದ ಭದ್ರಕಾಳಿಯನ್ನು ತನ್ನ ಕೋಪದಿಂದ ಸೃಷ್ಟಿಮಾಡಿದನು.

೩೬. ತನ್ನ ಪಾರ್ಶ್ವದಲ್ಲಿ ಕಾಲಾಗ್ನಿಗೆ ಸಮನಾಗಿರುವ ಆ ವೀರಭದ್ರನು ಭದ್ರಕಾಳಿಯೊಡನೆ ನಿಂತಿರುವುದನ್ನು ಶಿವನು ನೋಡಿ ಅವನಿಗೆ ಮಂಗಳವಾಗಲೆಂದು ಹರಸಿದನು.

೩೭. ಆಗ ವೀರಭದ್ರನು ಪಾರ್ವತೀದೇವಿಯೊಡನೆ ಇರುವ ಮಹೇಶ್ವರನನ್ನು ನೋಡಿ ಎಲೈ, ಮಹಾದೇವನೆ ಈಗ ನಾನು ಯಾವ ಕೆಲಸವನ್ನು ಮಾಡಬೇಕಾದಿದೆಯೋ, ಅದನ್ನು ನನಗೆ ಆಜ್ಞಾಪಿಸು ಎಂದನು.

ತತಸ್ತ್ರಿಪುರಹಾ ಪ್ರಾಹ ಹೈಮವತ್ಯಾಃ ಪ್ರಿಯೇಚ್ಛಯಾ ।
ವೀರಭದ್ರಂ ಮಹಾಬಾಹುಂ ವಾಚಾ ವಿಪುಲನಾದಯಾ ॥ ೩೮ ॥

॥ ದೇವದೇವ ಉವಾಚ ॥

ಪ್ರಾಚೇತಸಸ್ಯ ದಕ್ಷಸ್ಯ ಯಜ್ಞಂ ಸದ್ಯೋ ವಿನಾಶಯ ।
ಭದ್ರಕಾಲ್ಯಾ ಸಹಾಸಿ ತ್ವಮೇತತ್ಕೃತ್ಯಂ ಗಣೇಶ್ವರಃ ॥ ೩೯ ॥

ಅಹಮಪ್ಯನಯಾ ಸಾರ್ಧಂ ರೈಭ್ಯಾಶ್ರಮಸಮೀಪತಃ ।
ಸ್ಥಿತ್ವಾ ವೀಕ್ಷೇ ಗಣೇಶಾನ ವಿಕ್ರಮಂ ತವ ದುಃಸಹಂ ॥ ೪೦ ॥

ವೃಕ್ಷಾಃ ಕನಖಲೇ ಯೇ ತು ಗಂಗಾದ್ವಾರಸಮೀಪಗಾಃ ।
ಸುವರ್ಣಶೃಂಗಸ್ಯ ಗಿರೇರ್ಮೇರುಮಂದರಸಂನಿಭಃ ॥ ೪೧ ॥

ತಸ್ಮಿನ್ಪ್ರದೇಶೇ ದಕ್ಷಸ್ಯ ಯಜ್ಞಃ ಸಂಪ್ರತಿ ವರ್ತತೇ ।
ಸಹಸಾ ತಸ್ಯ ಯಜ್ಞಸ್ಯ ವಿಘಾತಂ ಕುರು ಮಾ ಚಿರಂ ॥ ೪೨ ॥

---

೩೮. ಅನಂತರದಲ್ಲಿ ತ್ರಿಪುರನಾಶಕನಾದ ಪರಮೇಶ್ವರನು ಹಿಮವತ್ಪುತ್ರಿಯಾದ ಪಾರ್ವತಿಯ ಇಷ್ಟವನ್ನು ನೆರವೇರಿಸುವುದಕ್ಕಾಗಿ ಮಹಾ ಬಾಹುವಾದ ವೀರಭದ್ರನ ಸಂಗಡ ಗಂಭೀರವಾದ ಧ್ವನಿಯಿಂದಿಂತೆಂದನು

೩೯. ಎಲೈ, ಗಣೇಶ್ವರನೆ, ನೀನು ಭದ್ರಕಾಳಿಯ ಜೊತೆಯಲ್ಲಿ ಹೊರಟು ಪ್ರಾಚೇತಸನಾದ ದಕ್ಷಬ್ರಹ್ಮನ ಯಜ್ಞವನ್ನು ಈಗಲೇ ನಾಶಮಾಡು. ಈ ಕೆಲಸವನ್ನು ನೀನು ಈಗಲೇ ಮಾಡಬೇಕಾಗಿರುವುದು.

೪೦ ನಾನೂಕೂಡ ಪಾರ್ವತಿಯೊಡನೆ ರೈಭ್ಯಾಶ್ರಮದ ಹತ್ತಿರದಲ್ಲಿದ್ದುಕೊಂಡು ನಿನ್ನ ದುಃಸಹವಾದ ಪರಾಕ್ರಮವನ್ನು ನೋಡುತ್ತಿರುತ್ತೇನೆ.

೪೧-೪೨ ಕನಖಲವೆಂಬ ಪ್ರದೇಶವು ಗಂಗಾದ್ವಾರಕ್ಕೆ ಹತ್ತಿರದಲ್ಲಿರುವುದು. ಅಲ್ಲಿ ವೃಕ್ಷಗಳು ಸೊಂಪಾಗಿ ಬೆಳೆದು ರಮ್ಯವಾಗಿರುವುದು. ಸುವರ್ಣಶೃಂಗದಿಂದ ಶೋಭಿಸುವ ಮೇರುಪರ್ವತಕ್ಕೂ, ಮಂದರಪರ್ವತಕ್ಕೂ, ಸರಿಯಾಗಿರುವ ಆ ಪ್ರದೇಶದಲ್ಲಿ ದಕ್ಷಬ್ರಹ್ಮನ ಯಜ್ಞವು ಈಗ ನಡೆಯುತ್ತಿರುವುದು. ನೀನು ಬೇಗನೆ ಹೋಗಿ ಆ ಯಜ್ಞಕ್ಕೆ ವಿಘ್ನವನ್ನುಂಟುಮಾಡು, ತಡಮಾಡಬೇಡ ಎಂದನು.

**ಇತ್ಯುಕ್ತೇ ಸತಿ ದೇವೇನ ದೇವೀ ಹಿಮಗಿರೀಂದ್ರಜಾ ।**
**ಭದ್ರಂ ಭದ್ರಾಂ ಚ ಸಂಪ್ರೇಕ್ಷ್ಯ ವತ್ಸಂ ಧೇನುರಿವೌರಸಂ ॥ ೪೩ ॥**

**ಆಲಿಂಗ್ಯ ಚ ಸಮಾಘ್ರಾಯ ಮೂರ್ಧ್ನಿ ಷಡ್ವದನಂ ಯಥಾ ।**
**ಸಸ್ಮಿತಾ ವಚನಂ ಪ್ರಾಹ ಮಧುರಂ ಮಧುರಂ ಸ್ವಯಂ ॥ ೪೪ ॥**

**॥ ದೇವ್ಯುವಾಚ ॥**

**ವತ್ಸ ಭದ್ರ ಮಹಾಭಾಗ ಮಹಾಬಲಪರಾಕ್ರಮ ।**
**ಮತ್ಪ್ರಿಯಾರ್ಥಂ ತ್ವಮುತ್ಪನ್ನೋ ಮಮ ಮನ್ಯುಂ ಪ್ರಮಾರ್ಜಯ ॥೪೫॥**

**ಯಜ್ಞೇಶ್ವರಮನಾಹೂಯ ಯಜ್ಞಕರ್ಮರತೋಽಭವತ್ ।**
**ದಕ್ಷೋ ವೈರೇಣ ತಂ ತಸ್ಮಾದ್ಭಿಂಧಿ ಯಜ್ಞಂ ಗಣೇಶ್ವರ ॥ ೪೬ ॥**

**ಯಜ್ಞಲಕ್ಷ್ಮೀಮಲಕ್ಷ್ಮೀಂ ತ್ವಂ ಭದ್ರ ಕೃತ್ವಾ ಮಮಾಜ್ಞಯಾ ।**
**ಯಜಮಾನಂ ಚ ತಂ ಹತ್ವಾ ವತ್ಸ ಹಿಂಸಯ ಭದ್ರಯಾ ॥ ೪೭ ॥**

೪೩. ಮಹಾದೇವನು ವೀರಭದ್ರನ ಸಂಗಡ ಹೀಗೆ ಹೇಳಿದನಂತರ, ಹಸುವು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಕರುವನ್ನು ಪ್ರೀತಿಯಿಂದ ನೋಡುವಂತೆ ಹಿಮವತ್ಪುತ್ರಿಯಾದ ಪಾರ್ವತಿಯು ಭದ್ರಕಾಳಿಯೊಡನೆ ಇರುವ ವೀರಭದ್ರನನ್ನು ನೋಡಿ, ತನ್ನ ಮಗನಾದ ಷಣ್ಮುಖನನ್ನು ಪ್ರೀತಿಯಿಂದ ಆಲಂಗಿಸುವಂತೆ ಆಲಂಗಿಸಿ ನೆತ್ತಿಯನ್ನು ಆಘ್ರಾಣಮಾಡಿ, ಮಂದಹಾಸದಿಂದ ಮಧುರವಾದ ಮಾತಿನಿಂದಿಂತೆಂದಳು.

೪೪–೪೬. ಅಪ್ಪಾ ಮಗುವೆ, ವೀರಭದ್ರನೇ ಕೇಳು. ನೀನು ಬಹಳ ಶಕ್ತಿ ಪರಾಕ್ರಮಗಳುಳ್ಳವನಾಗಿರುತ್ತೀಯೆ. ನೀನು ನನಗೆ ಹಿತವನ್ನುಂಟುಮಾಡುವುದಕ್ಕಾಗಿಯೇ ಹುಟ್ಟಿರುತ್ತೀಯೆ. ಆದ್ದರಿಂದ ನೀನು ನನ್ನ ದುಃಖವನ್ನು ನಾಶಮಾಡು ದಕ್ಷನು ದ್ವೇಷಬುದ್ಧಿಯಿಂದ ಯಜ್ಞಕ್ಕೆ ಅಧಿಪತಿಯಾದ ಶಿವನನ್ನು ಕರೆಯದೇ ಯಜ್ಞವನ್ನು ಮಾಡಲುಪಕ್ರಮಿಸಿರುವನು ಆದುದರಿಂದ ಎಲೈ, ಗಣೇಶ್ವರನಾದ ವೀರಭದ್ರನೇ, ನೀನು ಅವನ ಯಜ್ಞವನ್ನು ನಾಶಮಾಡು.

೪೭. ನೀನು ಭದ್ರಕಾಳಿಯೊಡನೆ ಹೊರಟು ಅವನ ಯಜ್ಞವಾಟವನ್ನು ಪ್ರವೇಶಿಸಿ ಅದರ ಯಜ್ಞದ ವೈಭವಗಳನ್ನೆಲ್ಲಾ ಹಾಳುಮಾಡಿ, ಯಜಮಾನನಾದ ಅವನನ್ನು ಕೊಂದು ಅವನನ್ನು ಹಿಂಸೆಗೆ ಗುರಿಮಾಡು ಎಂದಳು.

ಅಶೇಷಾಮಿವ ತಾಮಾಜ್ಞಾಂ ಶಿವಯೋಶ್ಶಿತ್ರಕೃತ್ಯಯೋಃ ।
ಮೂರ್ಧ್ನಿ ಕೃತ್ವಾ ನಮಸ್ಕೃತ್ಯ ಭದ್ರೋ ಗಂತುಂ ಪ್ರಚಕ್ರಮೇ ॥ ೪೮ ॥

ಅಥೈಷ ಭಗವಾನ್ಕ್ರುದ್ಧಃ ಪ್ರೇತಾವಾಸಕೃತಾಲಯಃ ।
ವೀರಭದ್ರೋ ಮಹಾದೇವೋ ದೇವ್ಯಾ ಮನ್ಯುಪ್ರಮಾರ್ಜಕಃ ॥ ೪೯ ॥

ಸಸರ್ಜ ರೋಮಕೂಪೇಭ್ಯೋ ರೋಮಜಾಖ್ಯಾನ್ಗಣೇಶ್ವರಾನ್ ।
ದಕ್ಷಿಣಾದ್ಭುಜದೇಶಾತ್ತು ಶತಕೋಟಿಗಣೇಶ್ವರಾನ್ ॥ ೫೦ ॥

ಪಾದಾತ್ತಥೋರುದೇಶಾಚ್ಚ ಪೃಷ್ಠಾತ್ಪಾರ್ಶ್ವಾನ್ಮುಖಾದ್ಗಲಾತ್ ।
ಗುಹ್ಯಾದ್ಗುಲ್ಫಾಚ್ಛಿರೋಮಧ್ಯಾತ್ಕಂಠಾದಾಸ್ಯಾತ್ತಥೋದರಾತ್ ॥ ೫೧ ॥

ತದಾ ಗಣೇಶ್ವರೈರ್ಭದ್ರೈರ್ಭದ್ರತುಲ್ಯಪರಾಕ್ರಮೈಃ ।
ಸಂಛಾದಿತಮಭೂತ್ಸರ್ವಂ ಸಾಕಾಶವಿವರಂ ಜಗತ್ ॥ ೫೨ ॥

೪೮. ಆಗ ವೀರಭದ್ರನು ಪಾರ್ವತೀ ಪರಮೇಶ್ವರರ ಆ ಪ್ರಕಾರವಾದ ಅಪ್ಪಣೆಯನ್ನು ಶಿರಸಾವಹಿಸಿ ಅವರಿಗೆ ನಮಸ್ಕಾರವನ್ನು ಮಾಡಿ ಪ್ರಯಾಣಮಾಡಲುಪಕ್ರಮಿಸಿದನು.

೪೯-೫೦. ಅನಂತರ ಸ್ಮಶಾನದಲ್ಲಿ ವಾಸಮಾಡುವ ಭಗವಾನ್ ವೀರಭದ್ರನು ದೇವಿಯಾದ ಪಾರ್ವತಿಯ ದುಃಖವನ್ನು ನಾಶಗೊಳಿಸುವುದಕ್ಕಾಗಿ ತನ್ನ ರೋಮಕೂಪಗಳಿಂದ ರೋಮಜರೆಂದು ಹೆಸರುಳ್ಳ ಗಣೇಶ್ವರರನ್ನೂ ತನ್ನ ಬಲಗಡೆಯ ತೋಳಿನಿಂದ ನೂರು ಕೋಟಿ ಗಣೇಶ್ವರರನ್ನೂ ನಿರ್ಮಿಸಿದನು.

೫೧-೫೨. ಆಗ ವೀರಭದ್ರನು ತನ್ನ ಪಾದ, ತೊಡೆ, ಪೃಷ್ಠ, ಪಾರ್ಶ್ವ, ಮುಖ, ಕುತ್ತಿಗೆ, ಗುಹ್ಯಪ್ರದೇಶ, ತಲೆಯ ಮಧ್ಯಪ್ರದೇಶ, ಹೊಟ್ಟೆ ಮುಂತಾದ ಶರೀರದ ಪ್ರದೇಶಗಳಿಂದ ಅನೇಕ ಗಣೇಶ್ವರರನ್ನು ನಿರ್ಮಿಸಿದನು. ಆಗ ಹುಟ್ಟಿದ ಆ ಗಣೇಶ್ವರರೆಲ್ಲರೂ ವೀರಭದ್ರನಿಗೆ ಸಮನಾದ ಪರಾಕ್ರಮವುಳ್ಳವರಾಗಿ ಜಗತ್ತಿನ ಮತ್ತು ಆಕಾಶದ ಎಲ್ಲಾ ಭಾಗಗಳನ್ನೂ ಆವರಿಸಿಕೊಂಡು ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿದ್ದರು.

ಸರ್ವೇ ಸಹಸ್ರಹಸ್ತಾಸ್ತೇ ಸಹಸ್ರಾಯುಧಪಾಣಯಃ ।
ರುದ್ರಸ್ಯಾನುಚರಾಸ್ಸರ್ವೇ ಸರ್ವೇ ರುದ್ರಸಮಪ್ರಭಾಃ ॥ ೫೩ ॥

ಶೂಲಶಕ್ತಿಗದಾಹಸ್ತಾಷ್ಟಂಕೋಪಲಶಿಲಾಧರಾಃ ।
ಕಾಲಾಗ್ನಿರುದ್ರಸದೃಶಾಸ್ತ್ರಿನೇತ್ರಾಶ್ಚ ಜಟಾಧರಾಃ ॥ ೫೪ ॥

ನಿಪೇತುರ್ಭೃಶಮಾಕಾಶೇ ಶತಶಸ್ಸಿಂಹವಾಹನಾಃ ।
ವಿನೇದುಶ್ಚ ಮಹಾನಾದಾಞ್ಜಲದಾ ಇವ ಭದ್ರಜಾಃ ॥ ೫೫ ॥

ತೈರ್ಭದ್ರೈರ್ಭಗವಾನ್ಭದ್ರಸ್ತಥಾ ಪರಿವೃತೋ ಬಭೌ ।
ಕಾಲಾನಲಶತೈರ್ಯುಕ್ತೋ ಯಥಾಂತೇ ಕಾಲಭೈರವಃ ॥ ೫೬ ॥

ತೇಷಾಂ ಮಧ್ಯೇ ಸಮಾರುಹ್ಯ ವೃಷೇಂದ್ರಂ ವೃಷಭಧ್ವಜಃ ।
ಜಗಮ ಭಗವಾನ್ಭದ್ರಶ್ಶುಭ್ರಮಭ್ರಂ ಯಥಾ ಭವಃ ॥ ೫೭ ॥

೫೩-೫೫. ಇವರೆಲ್ಲರಿಗೂ ಸಾವಿರ ತೋಳುಗಳಿದ್ದವು. ಅವುಗಳಲ್ಲಿ ಸಾವಿರ ಆಯುಧಗಳನ್ನು ಹಿಡಿದುಕೊಂಡಿದ್ದರು. ಇವರೆಲ್ಲರೂ ರುದ್ರನ ಅನುಚರರು-ರುದ್ರನಿಗೆ ಸಮನಾದ ಕಾಂತಿಯುಳ್ಳವರು. ಶೂಲ, ಶಕ್ತಿ, ಗದೆ, ಟಂಕ, ಕಲ್ಲು ಇವೇ ಮೊದಲಾದುವುಗಳನ್ನು ಹಿಡಿದುಕೊಂಡಿದ್ದರು. ಪ್ರಳಯಕಾಲದ ಕಾಲಾಗ್ನಿ ರುದ್ರದೇವನಿಗೆ ಸಮನಾಗಿದ್ದರು. ಎಲ್ಲರೂ ಮೂರು ಕಣ್ಣುಳ್ಳವರಾಗಿ ಜಟೆಗಳನ್ನು ಧರಿಸಿದ್ದರು. ಅನೇಕ ಗುಂಪು ಗುಂಪುಗಳಾಗಿ ಸಿಂಹವಾಹನವನ್ನೇರಿ ಆಕಾಶದಲ್ಲಿ ನಿಬಿಡವಾಗಿ ತುಂಬಿ ಮೋಡಗಳಂತೆ ದೊಡ್ಡ ದೊಡ್ಡ ಧ್ವನಿಯಿಂದ ಆರ್ಭಟವನ್ನು ಮಾಡುತ್ತಿದ್ದರು.

೫೬. ಆ ವೀರಭದ್ರನು ಮಂಗಳಕರವಾದ ಆ ಗಣಗಳಿಂದ ಕೂಡಿ ಪ್ರಳಯಕಾಲದಲ್ಲಿ ಆಕಾಶದಲ್ಲಿ ಹುಟ್ಟುವ ಅನೇಕ ವಿಧವಾದ ಅಗ್ನಿಜ್ವಾಲೆಯಿಂದ ಸುತ್ತುವರಿಯಲ್ಪಟ್ಟ ಕಾಲಭೈರವನಂತೆ ಪ್ರಕಾಶಿಸುತ್ತಿದ್ದನು.

೫೭. ಆಗ ವೀರಭದ್ರನು ಎತ್ತರವಾದ ಒಂದು ವೃಷಭವನ್ನು ಹತ್ತಿಕೊಂಡು ಹೊರಟನು. ಆಗ ಅವನು ಬೆಳ್ಳಗಿರುವ ಮೋಡದಮೇಲೆ ಇರುವ ಶಿವನ ಹಾಗೆ ಆ ಗಣೇಶ್ವರರ ಮಧ್ಯದಲ್ಲಿ ಪ್ರಕಾಶಿಸುತ್ತಿದ್ದನು.

ತಸ್ಮಿನ್ವೃಷಭಮಾರೂಢೇ ಭದ್ರೇ ತು ಭಸಿತಪ್ರಭಃ ।
ಬಭಾರ ಮೌಕ್ತಿಕಂ ಛತ್ರಂ ಗೃಹೀತಸಿತಚಾಮರಃ ॥ ೫೮ ॥

ಸ ತದಾ ಶುಶುಭೇ ಪಾರ್ಶ್ವೇ ಭದ್ರಸ್ಯ ಭಸಿತಪ್ರಭಃ ।
ಭಗವಾನಿವ ಶೈಲೇಂದ್ರಃ ಪಾರ್ಶ್ವೇ ವಿಶ್ವಜಗದ್ಗುರೋಃ ॥ ೫೯ ॥

ಸೋಽಪಿ ತೇನ ಬಭೌ ಭದ್ರಃ ಶ್ವೇತಚಾಮರಪಾಣಿನಾ ।
ಬಾಲಸೋಮೇನ ಸೌಮ್ಯೇನ ಯಥಾ ಶೂಲವರಾಯುಧಃ ॥ ೬೦ ॥

ದಧ್ಮೌ ಶಂಖಂ ಸಿತಂ ಭದ್ರಂ ಭದ್ರಸ್ಯ ಪುರತಃ ಶುಭಂ ।
ಭಾನುಕಂಪೋ ಮಹಾತೇಜಾ ಹೇಮರತ್ನೈರಲಂಕೃತಃ ॥ ೬೧ ॥

ದೇವದುಂದುಭಯೋ ನೇದುರ್ದಿವ್ಯಸಂಕುಲನಿಃಸ್ವನಾಃ ।
ವವೃಷುಶ್ಶತಶೋ ಮೂರ್ಧ್ನಿ ಪುಷ್ಪವರ್ಷಂ ಬಲಾಹಕಾಃ ॥ ೬೨ ॥

---

೫೮. ವೀರಭದ್ರನು ವೃಷಭವನ್ನು ಹತ್ತಿದಕೂಡಲೆ ಭಸಿತಪ್ರಭನೆಂಬ ಗಣೇಶ್ವರನು ಅವನಿಗೆ ಮುತ್ತಿನ ಛತ್ರಿಯನ್ನು ಹಿಡಿದು ಶುಭ್ರವಾದ ಚಾಮರದಿಂದ ಬೀಸುತ್ತಿದ್ದನು.

೫೯. ವೀರಭದ್ರನ ಪಾರ್ಶ್ವದಲ್ಲಿ ಚಾಮರ ಹಾಕುತ್ತಿದ್ದ ಆ ಭಸಿತಪ್ರಭನು ಪ್ರಪಂಚಕ್ಕೆಲ್ಲಕ್ಕೂ ಗುರುವಾದ ಪರಮೇಶ್ವರನ ಪಕ್ಕದಲ್ಲಿ ಇರುವ ಹಿಮವಂತನಂತೆ ಹೊಳೆಯುತ್ತಿದ್ದನು.

೬೦. ಶೂಲಾಯುಧವನ್ನು ಹಿಡಿದಿರುವ ಪರಮೇಶ್ವರನು ಶಿರಸ್ಸಿನಲ್ಲಿರುವ ಬಾಲಚಂದ್ರನಿಂದ ಪ್ರಕಾಶಿಸುವಂತೆ ವೀರಭದ್ರನು ಛತ್ರ, ಚಾಮರಗಳನ್ನು ಧರಿಸಿರುವ ಭಸಿತಪ್ರಭನಿಂದ ಪ್ರಕಾಶಿಸುತ್ತಿದ್ದನು.

೬೧. ಚಿನ್ನದ ಮತ್ತು ರತ್ನದ ಅಭರಣಗಳನ್ನು ಧರಿಸಿರುವ ಭಾನುಕುಂಭನೆಂಬ ಗಣೇಶ್ವರನು ಶುಭ್ರವಾದ ಶಂಖವನ್ನು ವೀರಭದ್ರನ ಮುಂದುಗಡೆಯಲ್ಲಿ ಊದುತ್ತಿದ್ದನು.

೬೨. ದೇವದುಂದುಭಿಗಳು ವಿಶೇಷಶಬ್ದದೊಡನೆ ಮೊಳಗಿದವು. ಮೇಘಗಳು ವೀರಭದ್ರನಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದವು.

ಫುಲ್ಲಾನಾಂ ಮಧುಗರ್ಭಾಣಾಂ ಪುಷ್ಪಾಣಾಂ ಗಂಧಬಂಧವಃ ।
ಮಾರ್ಗಾನುಕೂಲಸಂವಾಹಾ ವವುಶ್ಚ ಪಥಿ ಮಾರುತಾಃ ॥ ೬೩ ॥

ತತೋ ಗಣೇಶ್ವರಾಃ ಸರ್ವೇ ಮತ್ತಾ ಯುದ್ಧಬಲೋದ್ಧತಾಃ ।
ನನೃತುರ್ಮುಮುದುರ್ನೇದುರ್ಜಹಸುರ್ಜಗದುರ್ಜಗುಃ ॥ ೬೪ ॥

ತದಾ ಭದ್ರಗಣಾಂತಸ್ಥೋ ಬಭೌ ಭದ್ರಃ ಸಭದ್ರಯಾ ।
ಯಥಾ ರುದ್ರಗಣಾಂತಸ್ಥಸ್ತ್ರ್ಯಂಬಕೋಽಂಬಿಕಯಾ ಸಹ ॥ ೬೫ ॥

ತತ್ಕ್ಷಣಾದೇವ ದಕ್ಷಸ್ಯ ಯಜ್ಞವಾಟಂ ಹಿರಣ್ಮಯಂ ।
ಪ್ರವಿವೇಶ ಮಹಾಬಾಹುರ್ವೀರಭದ್ರೋ ಮಹಾನುಗಃ ॥ ೬೬ ॥

ತತಸ್ತು ದಕ್ಷಪ್ರತಿಪಾದಿತಸ್ಯ
ಕ್ರತುಪ್ರಧಾನಸ್ಯ ಗಣಪ್ರಧಾನಃ ।

---

೬೩. ಆಗ ಚೆನ್ನಾಗಿ ಅರಳಿರುವ ಮೃದುವಾದ ಹೂವಿನ ವಾಸನೆಯಿಂದ ಕೂಡಿದ ಮಂದಮಾರುತಗಳು ಅವನ ದಾರಿಯಲ್ಲಿ ಅನುಕೂಲವಾಗಿರುವಂತೆ ತಂಪಾಗಿ ಬೀಸುತ್ತಿದ್ದವು.

೬೪. ಅನಂತರ ಯುದ್ಧವಿದ್ಯಾವಿಶಾರದರೂ, ಬಹು ಪರಾಕ್ರಮಶಾಲಿಗಳೂ ಆದ ಗಣೇಶ್ವರರೆಲ್ಲರೂ ಸಂತೋಷದಿಂದ ನರ್ತನಮಾಡಿದರು. ಕೆಲವರು ಗರ್ಜಿಸಿದರು, ಕೆಲವರು ಸಂತೋಷದಿಂದ ನಗುತ್ತಿದ್ದರು, ಮತ್ತೆ ಕೆಲವರು ಘಟ್ಟಿಯಾಗಿ ಕೂಗುತ್ತಿದ್ದರು, ಕೆಲವರು ಗಾನಮಾಡುತ್ತಿದ್ದರು.

೬೫. ಕ್ರೂರಗಣಗಳ ಮಧ್ಯದಲ್ಲಿ ಪಾರ್ವತಿಯೊಡನಿರುವ ಪರಮೇಶ್ವರನಂತೆ, ಆ ವೀರಭದ್ರನು ತನ್ನ ಗಣಗಳ ಮಧ್ಯದಲ್ಲಿ ಭದ್ರಕಾಳಿಯೊಡನೆ ಪ್ರಕಾಶಿಸುತ್ತಿದ್ದನು.

೬೬. ಈರೀತಿಯಾಗಿ ಮಹಾಬಾಹುವಾದ ವೀರಭದ್ರನು ತನ್ನ ಗಣಗಳೊಡನೆ ಆ ಕ್ಷಣದಲ್ಲಿಯೇ ಹೊರಟು ದಕ್ಷಬ್ರಹ್ಮನು ಯಜ್ಞಮಾಡುತ್ತಿರುವ ಸುವರ್ಣಮಯವಾದ ಯಾಗಶಾಲೆಯನ್ನು ತಲಪಿದನು.

೬೭. ಪ್ರಳಯಕಾಲದಲ್ಲಿ ಪ್ರಪಂಚವೆಲ್ಲವನ್ನೂ ಸುಡಲು ಉದ್ಯುಕ್ತನಾದ

**ಪ್ರಯೋಗಭೂಮಿಂ ಪ್ರವಿವೇಶ ಭದ್ರೋ ।**
**ರುದ್ರೋ ಯಥಾಂತೇ ಭುವನಂ ದಿಧಕ್ಷುಃ ॥ ೬೭ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾಂ**
**ಪೂರ್ವಭಾಗೇ ವೀರಭದ್ರೋತ್ಪತ್ತಿವರ್ಣನಂ**
**ನಾಮ್ನೈಕೋನವಿಂಶೋಽಧ್ಯಾಯಃ**



ರುದ್ರನು ಲೋಕವನ್ನು ಪ್ರವೇಶಿಸುವಂತೆ, ಗಣಗಳಿಗೆ ಮುಖ್ಯನಾದ ಆ ವೀರಭದ್ರನು ದಕ್ಷಬ್ರಹ್ಮನು ಯಜ್ಞಮಾಡುತ್ತಿರುವ ಆ ಪ್ರದೇಶವನ್ನು ಪ್ರವೇಶಿಸಿದನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯ ಸಂಹಿತೆಯ ಪೂರ್ವಭಾಗದಲ್ಲಿ
ವೀರಭದ್ರನ ಉತ್ಪತ್ತಿವರ್ಣನವೆಂಬ ಹತ್ತೊಂಬತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ
## ವಾಯವೀಯಸಂಹಿತಾಯಾಂ ಪೂರ್ವಭಾಗೇ
## ವಿಂಶೋऽಧ್ಯಾಯಃ

---

॥ ವಾಯುರುವಾಚ ॥

ತತೋ ವಿಷ್ಣುಪ್ರಧಾನಾನಾಂ ಸುರಾಣಾಮಮಿತೌಜಸಾಂ ।
ದದರ್ಶ ಚ ಮಹತ್ಸತ್ರಂ ಚಿತ್ರಧ್ವಜಪರಿಚ್ಛದಂ ॥ ೧ ॥

ಸುದರ್ಭಋಜುಸಂಸ್ತೀರ್ಣಂ ಸುಸಮಿದ್ಧಹುತಾಶನಂ ।
ಕಾಂಚನೈರ್ಯಜ್ಞಭಾಂಡೈಶ್ಚ ಭ್ರಾಜಿಷ್ಣುಭಿರಲಂಕೃತಂ ॥ ೨ ॥

ಋಷಿಭಿರ್ಯಜ್ಞಪಟುಭಿರ್ಯಥಾವತ್ಕರ್ಮಕರ್ತೃಭಿಃ ।
ವಿಧಿನಾ ವೇದದೃಷ್ಟೇನ ಸ್ವನುಷ್ಠಿತಬಹುಕ್ರಮಂ ॥ ೩ ॥

---

## ಇಪ್ಪತ್ತನೆಯ ಅಧ್ಯಾಯವು

೧-೪. ವಾಯುದೇವನಿಂತೆಂದನು —ಅನಂತರದಲ್ಲಿ ಆ ವೀರಭದ್ರನು ಅಪರಿಮಿತವಾದ ಶಕ್ತಿಯುಳ್ಳ ವಿಷ್ಣುವೇ ಮೊದಲಾದ ದೇವತೆಗಳಿಂದ ನಿಬಿಡವಾದ ದಕ್ಷಬ್ರಹ್ಮನ ಯಾಗಶಾಲೆಯನ್ನು ನೋಡಿದನು. ಆ ದೊಡ್ಡದಾದ ಯಾಗಶಾಲೆಯು ಅನೇಕ ವಿಧವಾದ ಧ್ವಜಪಟಗಳಿಂದ ಅಲಂಕೃತವಾಗಿತ್ತು. ಅದರಲ್ಲಿ ಉತ್ತಮವಾದ ದರ್ಭೆಗಳಿಂದ ಪರಿಸ್ತೀರ್ಣನಾಗಿ ಯಜ್ಞೇಶ್ವರನು ಪ್ರಕಾಶಿಸುತ್ತಿದ್ದನು. ಚಿನ್ನದ ಅನೇಕ ಪಾತ್ರೆಗಳಿಂದಲೂ, ಶಾಸ್ತ್ರದಲ್ಲಿ ಹೇಳಿರುವ ಕ್ರಮವನ್ನು ಅನುಸರಿಸಿ ಕರ್ಮವನ್ನು ಮಾಡಬಲ್ಲವರಾದ ಮತ್ತು ಮಂತ್ರಗಳನ್ನು ತಿಳಿದವರಾದ ಅನೇಕ ಮಂದಿ ಋಷಿಗಳಿಂದಲೂ ಕೂಡಿ ಆ ಯಜ್ಞವು ವೇದೋಕ್ತಕ್ರಮವನ್ನನುಸರಿಸಿ ನಡೆಯು

ದೇವಾಂಗನಾಸಹಸ್ರಾಢ್ಯಮಪ್ಸರೋಗಣಸೇವಿತಂ ।
ವೇಣುವೀಣಾರವೈರ್ಜುಷ್ಟಂ ವೇದಘೋಷೈಶ್ಚ ಬೃಂಹಿತಂ ॥ ೪ ॥

ದೃಷ್ಟ್ವಾ ದಕ್ಷಾಧ್ವರೇ ವೀರೋ ವೀರಭದ್ರಃ ಪ್ರತಾಪವಾನ್ ।
ಸಿಂಹನಾದಂ ತದಾ ಚಕ್ರೇ ಗಂಭೀರೋ ಜಲದೋ ಯಥಾ ॥ ೫ ॥

ತತಃ ಕಿಲಕಿಲಾಶಬ್ದ ಆಕಾಶಂ ಪೂರಯನ್ನಿವ ।
ಗಣೇಶ್ವರೈಃ ಕೃತೋ ಯಜ್ಞೇ ಮಹಾನ್ಯಕ್ಕೃತಸಾಗರಃ ॥ ೬ ॥

ತೇನ ಶಬ್ದೇನ ಮಹತಾ ಗ್ರಸ್ತಾಃ ಸರ್ವೇ ದಿವೌಕಸಃ ।
ದುದ್ರುವುಃ ಪರಿತೋ ಭೀತಾ ಸ್ರಸ್ತವಸ್ತ್ರವಿಭೂಷಣಾಃ ॥ ೭ ॥

ಕಿಂ ಸ್ವಿದ್ಭಗ್ನೋ ಮಹಾಮೇರುಃ ಕಿಂಸ್ವಿತ್ಸಂದೀರ್ಯತೇ ಮಹೀ ।
ಕಿಮಿದಂ ಕಿಮಿದಂ ವೇತಿ ಜಜಲ್ಪುಸ್ತ್ರಿದಶಾ ಭೃಶಂ ॥ ೮ ॥

---

ತ್ತಿತ್ತು. ಆ ಯಾಗಶಾಲೆಗೆ ಅನೇಕಮಂದಿ ದೇವಸ್ತ್ರೀಯರೂ, ಅಪ್ಸರಸ್ತ್ರೀಯರೂ ಆ ಯಾಗವನ್ನು ನೋಡಲು ಬಂದಿದ್ದರು. ಕೊಳಲು, ವೀಣೆ ಇವುಗಳ ಧ್ವನಿಯ ಜೊತೆಗೆ ವೇದಘೋಷವೂ ಕೇಳಿಬರುತ್ತಿತ್ತು.

೫-೭. ಆಗ ಶೂರನಾದ ವೀರಭದ್ರನು ಮೇಘವು ಗರ್ಜಿಸುವಂತೆ ಸಿಂಹನಾದವನ್ನು ಮಾಡಿದನು. ಅವನ ಜೊತೆಯಲ್ಲಿದ್ದ ಗಣೇಶ್ವರರೆಲ್ಲರೂ ಕಿಲಕಿಲನೆ ಧ್ವನಿಯನ್ನುಮಾಡಲು ಪ್ರಾರಂಭಿಸಿದರು ಆ ಧ್ವನಿಯು ಸಮುದ್ರದ ಆರ್ಭಟವನ್ನು ತಿರಸ್ಕರಿಸುವಂತಿತ್ತು. ಗಣೇಶ್ವರರೊಡನೆ ಇರುವ ಆ ವೀರಭದ್ರನುಮಾಡಿದ ಸಿಂಹನಾದವನ್ನು ಕೇಳಿ ದೇವತೆಗಳೆಲ್ಲರೂ ಹೆದರಿಕೆಯಿಂದ ತಮ್ಮ ತಮ್ಮ ವಸ್ತ್ರಾಭರಣಗಳ ಮೇಲಿನ ಎಚ್ಚರವೂ ಇಲ್ಲದೆ ಯಾಗಶಾಲೆಯಿಂದ ಓಡಿಹೋದರು.

೮-೯. ಅಯ್ಯೋ! ಇದೇನು ಮೇರುಪರ್ವತವು ಮುರಿದು ಹೋಗುವುದೋ ಅಥವಾ ಭೂಮಿಯು ಸೀಳುವುದೋ, ಎಂದು ದೇವತೆಗಳು ಗಾಬರಿಯಿಂದ ಕೂಗಿಕೊಂಡರು. ದಟ್ಟವಾದ ಕಾಡಿನಲ್ಲಿ ಸಿಂಹಗಳ ಧ್ವನಿಯನ್ನು ಕೇಳಿದ ಆನೆಗಳು

**ಮೃಗೇಂದ್ರಾಣಾಂ ಯಥಾ ನಾದಂ ಗಜೇಂದ್ರಾ ಗಹನೇ ವನೇ ।**
**ಶ್ರುತ್ವಾ ತಥಾವಿಧಂ ಕೇಚಿತ್ತತ್ಯಜುರ್ಜೀವಿತಂ ಭಯಾತ್ ॥ ೯ ॥**

**ಪರ್ವತಾಶ್ಚ ವ್ಯಶೀರ್ಯಂತ ಚಕಂಪೇ ಚ ವಸುಂಧರಾ ।**
**ಮರುತಶ್ಚ ವ್ಯಘೂರ್ಣಂತ ಚುಕ್ಷುಭೇ ಮಕರಾಲಯಃ ॥ ೧೦ ॥**

**ಅಗ್ನಯೋ ನೈವ ದೀಪ್ಯಂತೇ ನ ಚ ದೀಪ್ಯತಿ ಭಾಸ್ಕರಃ ।**
**ಗ್ರಹಾಶ್ಚ ನ ಪ್ರಕಾಶಂತೇ ನಕ್ಷತ್ರಾಣಿ ಚ ತಾರಕಾಃ ॥ ೧೧ ॥**

**ಏತಸ್ಮಿನ್ನೇವ ಕಾಲೇ ತು ಯಜ್ಞವಾಟಂ ತದುಜ್ಜ್ವಲಂ ।**
**ಸಂಪ್ರಾಪ ಭಗವಾನ್ಭದ್ರೋ ಭದ್ರೈಶ್ಚ ಸಹ ಭದ್ರಯಾ ॥ ೧೨ ॥**

**ತಂ ದೃಷ್ಟ್ವಾ ಭೀತಭೀತೋಽಪಿ ದಕ್ಷೋ ದೃಢ ಇವ ಸ್ಥಿತಃ ।**
**ಕ್ರುದ್ಧವದ್ವಚನಂ ಪ್ರಾಹ ಕೋ ಭವಾನ್ಕಿಮಿಹೇಚ್ಛಸಿ ॥ ೧೩ ॥**

---

ಪ್ರಾಣವನ್ನು ಬಿಡುವಂತೆ ಕೆಲವರು ಆ ಧ್ವನಿಯನ್ನು ಕೇಳಿದಕೂಡಲೇ ಹೆದರಿಕೆಯಿಂದ ಅಲ್ಲಿಯೇ ಪ್ರಾಣವನ್ನು ಬಿಟ್ಟರು.

೧೦-೧೧. ಆಗ ವೀರಭದ್ರನ ಘರ್ಜನೆಯಿಂದ ಪರ್ವತಗಳು ಸೀಳಿಹೋದವು, ಭೂಮಿಯು ನಡುಗಿತು. ಸುಂಟರಗಾಳಿಯು ಭಯಂಕರವಾಗಿ ಬೀಸಿತು. ಸಮುದ್ರವು ಅಲ್ಲೋಲಕಲ್ಲೋಲವಾಯಿತು. ಅಗ್ನಿಯು ಚೆನ್ನಾಗಿ ಉರಿಯಲಿಲ್ಲ. ಸೂರ್ಯನ ಪ್ರಕಾಶವು ಕಡಿಮೆಯಾಯಿತು. ನಕ್ಷತ್ರ ಮೊದಲಾದವುಗಳು ಆಗ ಪ್ರಕಾಶಹೀನವಾದವು.

೧೨-೧೩. ಈ ಪ್ರಕಾರವಾಗಿ ದುರ್ನಿಮಿತ್ತಗಳಾಗುತ್ತಿರಲು ವೀರಭದ್ರನು ಭದ್ರಕಾಳಿಯೊಡನೆ ಆ ಯಾಗಶಾಲೆಗೆ ಬಂದನು. ದಕ್ಷಬ್ರಹ್ಮನು ಆತನನ್ನು ನೋಡಿ ಬಹಳ ಹೆದರಿದರೂ ಹೆದರದೆ ಇದ್ದವನಂತೆ ಇದ್ದುಕೊಂಡು, ಬಹಳ ಕೋಪವನ್ನು ಮಾಡುವವನಹಾಗೆ ಆತನನ್ನು ಕುರಿತು, ಎಲೋ ನೀನು ಯಾರು ? ಈ ಯಾಗಶಾಲೆಯಲ್ಲಿ ನಿನಗೇನು ಕೆಲಸ ? ಇಲ್ಲಿಗೆ ಏತಕ್ಕಾಗಿ ಬಂದೆ ? ಎಂದು ವೀರಭದ್ರನನ್ನು ಗದರಿಸಿ ಕೇಳಿದನು.

ತಸ್ಯ ತದ್ವಚನಂ ಶ್ರುತ್ವಾ ದಕ್ಷಸ್ಯ ಚ ದುರಾತ್ಮನಃ ।
ವೀರಭದ್ರೋ ಮಹಾತೇಜಾ ಮೇಘಗಂಭೀರನಿಃಸ್ವನಃ ॥ ೧೪ ॥

ಸ್ಮಯನ್ನಿವ ತಮಾಲೋಕ್ಯ ದಕ್ಷಂ ದೇವಾಶ್ಚ ಋತ್ವಿಜಃ ।
ಅರ್ಥಗರ್ಭಮಸಂಭ್ರಾಂತಮವೋಚದುಚಿತಂ ವಚಃ ॥ ೧೫ ॥

॥ ವೀರಭದ್ರ ಉವಾಚ ॥

ವಯಂ ಹ್ಯನುಚರಾಃ ಸರ್ವೇ ಶರ್ವಸ್ಯಾಮಿತತೇಜಸಃ ।
ಭಾಗಾಭಿಲಿಪ್ಸಯಾ ಪ್ರಾಪ್ತಾ ಭಾಗೋ ನಸ್ಸಂಪ್ರದೀಯತಾಂ ॥ ೧೬ ॥

ಅಥ ಚೇದಧ್ವರೇಽಸ್ಮಾಕಂ ನ ಭಾಗಃ ಪರಿಕಲ್ಪಿತಃ ।
ಕಥ್ಯತಾಂ ಕಾರಣಂ ತತ್ರ ಯುಧ್ಯತಾಂ ವಾ ಮಯಾಮರೈಃ ॥ ೧೭ ॥

ಇತ್ಯುಕ್ತಾಸ್ತೇ ಗಣೇಂದ್ರೇಣ ದೇವಾ ದಕ್ಷಪುರೋಗಮಾಃ ।
ಊಚುರ್ಮಂತ್ರಾಃ ಪ್ರಮಾಣಂ ನೋ ನ ವಯಂ ಪ್ರಭವಸ್ತ್ವಿತಿ ॥ ೧೮ ॥

---

೧೪-೧೫. ಮಹಾತೇಜಶ್ಶಾಲಿಯಾದ ಆ ವೀರಭದ್ರನು ಪಾಪಿಯಾದ ದಕ್ಷಬ್ರಹ್ಮನ ಆ ಮಾತನ್ನು ಕೇಳಿ ಅವನ ಮಾತಿಗೆ ನಗುತ್ತಾ ಅಲ್ಲಿದ್ದ ದಕ್ಷಬ್ರಹ್ಮ, ದೇವತೆಗಳು, ಋತ್ವಿಕ್ಕುಗಳು, ಋಷಿಗಳು ಮುಂತಾದವರನ್ನು ದ್ದೇಶಿಸಿ, ಮೇಘದಂತೆ ಗಂಭೀರವಾದ ಧ್ವನಿಯಿಂದ ಅರ್ಥಗರ್ಭಿತವೂ ಸಮಯೋಚಿತವೂ ಆದ ಮಾತುಗಳನ್ನಾಡಿದನು.

೧೬-೧೭. ವೀರಭದ್ರನು ಹೇಳಿದನು.—ನಾವೆಲ್ಲರೂ ಅಪರಿಮಿತ ತೇಜಶ್ಶಾಲಿಯಾದ ಶಿವನ ಅನುಚರರು. ಈ ಯಜ್ಞದಲ್ಲಿ ಹವಿರ್ಭಾಗವನ್ನು ಅಪೇಕ್ಷಿಸಿ ಬಂದಿರುವೆವು. ನಮ್ಮ ಹವಿರ್ಭಾಗವನ್ನು ಈಗ ನೀವು ನಮಗೆ ಕೊಡತಕ್ಕದ್ದು. ಹಾಗೆ ಕೊಡದಿದ್ದರೆ ಅದಕ್ಕೆ ಸರಿಯಾದ ಕಾರಣವನ್ನು ತಿಳಿಸಬೇಕು. ಇಲ್ಲದಿದ್ದರೆ ನೀವೆಲ್ಲರೂ ದೇವತೆಗಳೊಡನೆ ನಮ್ಮ ಸಂಗಡ ಯುದ್ಧಮಾಡಲು ಸಿದ್ಧರಾಗಿರಿ ಎಂದನು.

೧೮. ದಕ್ಷಬ್ರಹ್ಮನೇ ಮೊದಲಾದವರು ಗಣೇಶ್ವರನಾದ ವೀರಭದ್ರನು ಹೀಗೆ ಹೇಳಿದ ಮಾತುಗಳನ್ನು ಕೇಳಿ ನಮಗೆ ವೇದ, ಮಂತ್ರಗಳು ಮುಖ್ಯಪ್ರಮಾಣವು. ಅವುಗಳು ಹೇಳುವಂತೆ ನಾವು ನಡೆಯುವವರು. ನಮ್ಮ ಸ್ವೇಚ್ಛೆಯಿಂದ ನಡೆಯತಕ್ಕವರಲ್ಲ ಎಂದರು.

ಮಂತ್ರಾ ಊಚುಸ್ಸುರಾ ಯೂಯಂ ತಮೋಽಪಹತಚೇತಸಃ ।
ಯೇನ ಪ್ರಥಮಭಾಗಾರ್ಹಂ ನ ಯಜಧ್ವಂ ಮಹೇಶ್ವರಂ ॥ ೧೯ ॥

ಮಂತ್ರೋಕ್ತಾ ಅಪಿ ತೇ ದೇವಾಃ ಸರ್ವೇ ಸಂಮೂಢಚೇತಸಃ ।
ಭದ್ರಾಯ ನ ದದುರ್ಭಾಗಂ ತತ್ಪ್ರಹಾಣಮಭೀಪ್ಸವಃ ॥ ೨೦ ॥

ಯದಾ ತಥ್ಯಂ ಚ ಪಥ್ಯಂ ಚ ಸ್ವವಾಕ್ಯಂ ತದ್ವ್ಯಥಾಽಭವತ್ ।
ತದಾ ತತೋ ಯಯುರ್ಮಂತ್ರಾ ಬ್ರಹ್ಮಲೋಕಂ ಸನಾತನಂ ॥ ೨೧ ॥

ಅಥೋವಾಚ ಗಣೋಽಧ್ಯಕ್ಷೋ ದೇವಾನ್ವಿಷ್ಣುಪುರೋಗಮಾನ್ ।
ಮಂತ್ರಾಃ ಪ್ರಮಾಣಂ ನ ಕೃತಾ ಯುಷ್ಮಾಭಿರ್ಬಲಗರ್ವಿತೈಃ ॥ ೨೨ ॥

ಯಸ್ಮಾದಸ್ಮಿನ್ಮಖೇ ದೇವೈರಿತ್ಥಂ ವಯಮಸತ್ಕೃತಾಃ ।
ತಸ್ಮಾದ್ವೋ ಜೀವಿತೈಸ್ಸಾರ್ಧಮಪನೇಷ್ಯಾಮಿ ಗರ್ವಿತಂ ॥ ೨೩ ॥

೧೯. ಆಗ ವೇದಮಂತ್ರಗಳು.—ಎಲೈ, ದೇವತೆಗಳಿರಾ, ಕೇಳಿರಿ. ನೀವು ಯಜ್ಞದಲ್ಲಿ ಮೊದಲು ಹವಿರ್ಭಾಗಕ್ಕೆ ಅರ್ಹನಾಗಿರುವ ಮಹೇಶ್ವರನನ್ನು ಪೂಜಿಸಲಿಲ್ಲ ಮತ್ತು ಅಜ್ಞಾನದಿಂದ ವಿವೇಕಶೂನ್ಯರಾಗಿ ಮಹೇಶ್ವರನ ವಿಷಯವನ್ನೇ ಮರೆತಿರುವಿರಿ ಎಂದು ಹೇಳಿದವು.

೨೦-೨೧. ಮಂತ್ರಗಳು ಹೀಗೆ ಹೇಳಿದಾಗ್ಯೂ ದಡ್ಡರಾದ ಆ ದೇವತೆಗಳೆಲ್ಲರೂ ಆ ವೀರಭದ್ರನಿಗೆ ಯಜ್ಞದಲ್ಲಿ ಭಾಗವನ್ನು ಕೊಡಲು ಒಪ್ಪಲಿಲ್ಲ. ದೇವತೆಗಳಿಗೆ ಹಿತ ಕರವಾಗಿಯೂ, ಸತ್ಯವಾಗಿಯೂ ಇರುವ ಮಾತುಗಳನ್ನು ಹೇಳಿದಾಗ್ಯೂ ಆ ಮಾತು ಗಳು ವ್ಯರ್ಥವಾದುದನ್ನು ನೋಡಿ ವೇದಮಂತ್ರಗಳು ಯಜ್ಞಶಾಲೆಯನ್ನು ತ್ಯಜಿಸಿ ಬ್ರಹ್ಮಲೋಕಕ್ಕೆ ಹೊರಟುಹೋದುವು.

೨೨-೨೩. ಅನಂತರ ಗಣೇಶ್ವರನಾದ ವೀರಭದ್ರನು, ವಿಷ್ಣುವೇ ಮೊದಲಾದ ವರನ್ನುದ್ದೇಶಿಸಿ, ಎಲೈ ದೇವತೆಗಳೇ ಕೇಳಿರಿ, ನೀವೆಲ್ಲರೂ ನಿಮ್ಮ ನಿಮ್ಮ ಸಾಮರ್ಥ್ಯದ ಹೆಮ್ಮೆಯಿಂದ ಮಂತ್ರಗಳನ್ನು ಪ್ರಮಾಣವೆಂದು ತಿಳಿದಿರುವುದಿಲ್ಲ. ಈ ಯಜ್ಞದಲ್ಲಿ ನಮಗೆ ಹೀಗೆ ಅವಮಾನವನ್ನು ಮಾಡಿರುತ್ತೀರಿ. ಆದ್ದರಿಂದ ನಿಮ್ಮ ಅಹಂಕಾರ ವನ್ನು ಮುರಿದು ನಿಮ್ಮ ಪ್ರಾಣಗಳನ್ನು ತೆಗೆದುಬಿಡುತ್ತೇನೆ ಎಂದನು.

ಇತ್ಯುಕ್ತ್ವಾ ಭಗವಾನ್ಕ್ರುದ್ಧೋ ವ್ಯದಹನ್ನೇತ್ರವಹ್ನಿನಾ ।
ಯಜ್ಞವಾಟಂ ಮಹಾಕೂಟಂ ಯಥಾ ತಿಸ್ರಃ ಪುರೋ ಹರಃ ॥ ೨೪ ॥

ತತೋ ಗಣೇಶ್ವರಾಸ್ಸರ್ವೇ ಪರ್ವತೋದಗ್ರವಿಗ್ರಹಾಃ ।
ಯೂಪಾನುತ್ಪಾಟ್ಯ ಹೋತೄಣಾಂ ಕಂಠೇಷ್ವಾಬಧ್ಯ ರಜ್ಜುಭಿಃ ॥ ೨೫ ॥

ಯಜ್ಞಪಾತ್ರಾಣಿ ಚಿತ್ರಾಣಿ ಭಿತ್ವಾ ಸಂಚೂರ್ಣ್ಯ ವಾರಿಣಿ ।
ಗೃಹೀತ್ವಾ ಚೈವ ಯಜ್ಞಾಂಗಂ ಗಂಗಾಸ್ರೋತಸಿ ಚಿಕ್ಷಿಪುಃ ॥ ೨೬ ॥

ತತ್ರ ದಿವ್ಯಾನ್ನಪಾನಾನಾಂ ರಾಶಯಃ ಪರ್ವತೋಪಮಾಃ ।
ಕ್ಷೀರನದ್ಯೋಽಮೃತಸ್ರಾವಾಃ ಸುಸ್ನಿಗ್ಧದಧಿಕರ್ದಮಾಃ ॥ ೨೭ ॥

ಉಚ್ಚಾವಚಾನಿ ಮಾಂಸಾನಿ ಭಕ್ಷ್ಯಾಣಿ ಸುರಭೀಣಿ ಚ ।
ರಸವಂತಿ ಚ ಪಾಪಾನಿ ಲೇಹ್ಯಚೋಷ್ಯಾಣಿ ತಾನಿ ವೈ ॥ ೨೮ ॥

---

೨೪. ಭಗವಾನ್ ವೀರಭದ್ರನು ಕೋಪದಿಂದ ಹೀಗೆಂದು ದೇವತೆಗಳಿಗೆ ಹೇಳಿ ಮಹಾದೇವನು ತ್ರಿಪುರವನ್ನು ನಾಶಮಾಡಿದಂತೆ ತನ್ನ ನೇತ್ರದಿಂದ ಹೊರಡುತ್ತಿರುವ ಅಗ್ನಿಜ್ವಾಲೆಯಿಂದ ದೊಡ್ಡದಾದ ಆ ಯಾಗಶಾಲೆಯನ್ನು ಸುಟ್ಟನು.

೨೫-೨೬. ಅನಂತರ ಬೆಟ್ಟದಂತೆ ದೊಡ್ಡ ಶರೀರವುಳ್ಳ ಅವನ ಜೊತೆಯಲ್ಲಿದ್ದ ಗಣೇಶ್ವರರೆಲ್ಲರೂ, ಆ ಯಾಗಶಾಲೆಯಲ್ಲಿದ್ದ ಯೂಪಸ್ತಂಬಗಳನ್ನು ಕಿತ್ತು ಹೋತೃಗಳ ಕುತ್ತಿಗೆಗೆ ಅವುಗಳನ್ನು ಹಗ್ಗಗಳಿಂದ ಬಿಗಿದರು. ಯಜ್ಞಗಳನ್ನು ನಡೆಸಲು ಉಪಯುಕ್ತವಾಗಿರುವ ಅನೇಕ ವಿಧವಾದ ಯಜ್ಞಪಾತ್ರೆಗಳನ್ನು ಒಡೆದುಹಾಕಿದರು. ಯಜ್ಞಸಾಮಗ್ರಿಗಳನ್ನೆಲ್ಲಾ ಗಂಗಾನದಿಯ ನೀರಿನಲ್ಲಿ ಎಸೆದರು.

೨೭-೨೮. ಆಗ ಆ ಯಾಗಶಾಲೆಯಲ್ಲಿ ಸಿದ್ಧವಾಗಿದ್ದ ಬೆಟ್ಟದಂತೆ ಇರುವ ಅನ್ನದ ರಾಶಿಗಳು, ಅಮೃತದಂತೆ ಇರುವ ಹಾಲಿನ ಹೊಳೆಗಳು, ಬಹಳ ರುಚಿಕರವಾದ ಮೊಸರಿನ ಮಡಕೆಗಳು, ಉತ್ತಮವಾದ ಸುವಾಸನೆಯುಳ್ಳ, ರುಚಿಕರವಾದ ಮಾಂಸಗಳು, ಉತ್ತಮವಾದ ತಿಂಡಿಯ ಪದಾರ್ಥಗಳು, ರುಚಿಕರವಾದ ಪೇಯದ್ರವ್ಯಗಳೇ ಮೊದಲಾದ ವಿಧವಿಧವಾದ ಭಕ್ಷ್ಯಭೋಜ್ಯಗಳನ್ನು ಶೂರರಾದ ಆ ಗಣೇಶ್ವರರು ತಮ್ಮ ತಮ್ಮ ಇಷ್ಟಬಂದಂತೆ ತೆಗೆದುಕೊಂಡು ತಿನ್ನುತ್ತಿದ್ದರು. ಮತ್ತು ಸಿಕ್ಕಿದಕಡೆ ಎಸೆಯುತ್ತಿದ್ದರು.

**ವೀರಾಸ್ತದ್ಭುಂಜತೇ ವಕ್ತ್ರೈರ್ನಿಲುಂಪಂತಿ ಕ್ಷಿಪಂತಿ ಚ ।**
**ವಜ್ರೈಶ್ಚಕ್ರೈರ್ಮಹಾಶೂಲೈಶ್ಶಕ್ತಿಭಿಃ ಪಾಶಪಟ್ಟಿಶೈಃ ॥ ೨೯ ॥**

**ಮುಸಲೈರಸಿಭಿಷ್ಟಂಕೈರ್ಭಿಂದಿಪಾಲೈಃ ಪರಶ್ವಧೈಃ ।**
**ಉದ್ಧತಾಂಸ್ತ್ರಿದಶಾನ್ಸರ್ವಾಂಲ್ಲೋಕಪಾಲಪುರಸ್ಸರಾನ್ ॥ ೩೦ ॥**

**ಬಿಭಿದುರ್ಬಲಿನೋ ವೀರಾ ವೀರಭದ್ರಾಂಗಸಂಭವಾಃ ।**
**ಛಿಂಧಿ ಭಿಂಧಿ ಕ್ಷಿಪ ಕ್ಷಿಪ್ರಂ ಮಾರ್ಯತಾಂ ದಾರ್ಯತಾಮಿತಿ ॥ ೩೧ ॥**

**ಹರಸ್ವ ಪ್ರಹರಸ್ವೇತಿ ಪಾಷಯೋತ್ಪಾಟಯೇತಿ ಚ ।**
**ಸಂರಂಭಪ್ರಭವಾಃ ಕ್ರೂರಾಶ್ಶಬ್ದಾಃ ಶ್ರವಣಶಂಕವಃ ॥ ೩೨ ॥**

**ತತ್ರ ತತ್ರ ಗಣೇಶಾನಾಂ ಜಜ್ಞಿರೇ ಸಮರೋಚಿತಾಃ ।**
**ವಿವೃತ್ತನಯನಾಃ ಕೇಚಿದ್ದಷ್ಟದಂಷ್ಟ್ರೋಷ್ಠತಾಲವಃ ॥ ೩೩ ॥**

**ಆಶ್ರಮಸ್ಥಾನ್ಸಮಾಕೃಷ್ಯ ಮಾರಯಂತಿ ತಪೋಧನಾನ್ ।**
**ಸ್ರುವಾನಪಹರಂತಶ್ಚ ಕ್ಷಿಪಂತೋಽಗ್ನಿಂ ಜಲೇಷು ಚ ॥ ೩೪ ॥**

---

೨೯-೩೦. ವೀರಭದ್ರನಿಂದ ಹುಟ್ಟಿದ ಶೂರರಾದ ಆ ಗಣೇಶ್ವರರು ವಜ್ರಾಯುಧ, ಚಕ್ರ, ದೊಡ್ಡದಾದ ಶೂಲಾಯುಧ, ಶಕ್ತ್ಯಾಯುಧ, ಪಾಶ, ಪಟ್ಟಿಶ, ವನಕೆ, ಕತ್ತಿ, ಟಂಕ, ಭಿಂದಿವಾಲ, ಕೊಡಲಿ, ಈ ಆಯುಧಗಳಿಂದ ಬಲಿಷ್ಠರಾದ, ಲೋಕಪಾಲಕರೇ ಮೊದಲಾದ ದೇವತೆಗಳನ್ನು ಅನೇಕ ವಿಧವಾಗಿ ಹೊಡೆದರು.

೩೧-೩೨. ಆ ಕಾಲದಲ್ಲಿ—ಕತ್ತರಿಸು, ಕಡಿದುಹಾಕು, ಬೇಗನೆ ಎಸೆದುಬಿಡು, ಕೊಂದುಬಿಡು, ಸೀಳಿಹಾಕು, ತೆಗದುಕೊಂಡು ಹೋಗು, ಚನ್ನಾಗಿ ಹೊಡಿ, ಚೂರು ಚೂರುಮಾಡು, ಕಿತ್ತುಮೇಲಕ್ಕೆ ಎಸಿ, ಎಂಬ ಇವೇ ಮೊದಲಾದ ಯುದ್ಧೋಚಿತವಾದ ಮತ್ತು ಕಿವಿಯಿಂದ ಕೇಳಲು ಕಠಿಣವಾದ ಮಾತುಗಳನ್ನು ಅಲ್ಲಲ್ಲಿ ಆ ಗಣೇಶ್ವರರು ಆಡುತ್ತಿದ್ದರು.

೩೩. ಕೆಲವು ಗಣೇಶ್ವರರು ಕೋಪದಿಂದ ತಮ್ಮ ಕೋರೆ ಹಲ್ಲುಗಳಿಂದ ತಮ್ಮ ತುಟಿಗಳನ್ನು ಕಚ್ಚುತ್ತಾ, ಕಣ್ಣನ್ನು ಬಿರಬಿರನೆ ತಿರಗಿಸುತ್ತಾ ಅಲ್ಲಿಯೇ ಸಮಾಪದ ಆಶ್ರಮಗಳಲ್ಲಿಡಗಿಕೊಂಡಿದ್ದ ಋಷಿಗಳನ್ನು ಎಳೆದೆಳೆದು ಕೊಲ್ಲುತ್ತಿದ್ದರು.

೩೪-೩೫. ಆಗ ಆ ಗಣೇಶ್ವರರು ಸ್ರುವಗಳನ್ನು ಎಸೆಯುವುದು, ರತ್ನಖಚಿತವಾದ ವೇದಿಕೆಗಳನ್ನು ಒಡೆದುಹಾಕುವುದು, ಬೆಂಕಿಗೆ ನೀರನ್ನು ಹುಯ್ಯುವುದು,

ಕಲಶಾನಪಿ ಭಿಂದಂತಶ್ಛಿದಂತೋ ಮಣಿವೇದಿಕಾಃ ।
ಗಾಯಂತಶ್ಚ ನದಂತಶ್ಚ ಹಸಂತಶ್ಚ ಮುಹುರ್ಮುಹುಃ ॥ ೩೫ ॥

ರಕ್ತಾಸವಂ ಪಿಬಂತಶ್ಚ ನನೃತುರ್ಗಣಪುಂಗವಾಃ ॥ ೩೬ ॥

ನಿರ್ಮಥ್ಯ ಸೇಂದ್ರಾನಮರಾನ್ಗಣೇಂದ್ರಾನ್
ವೃಷೇಂದ್ರನಾಗೇಂದ್ರಮೃಗೇಂದ್ರಸಾರಾಃ ।
ಚಕ್ರುರ್ಬಹೂನ್ಯಪ್ರತಿಮಪ್ರಭಾವಾಃ
ಸಹರ್ಷರೋಮಾಣಿ ವಿಚೇಷ್ಟಿತಾನಿ ॥ ೩೭ ॥

ನಂದಂತಿ ಕೇಚಿತ್ಪ್ರಹರಂತಿ ಕೇಚಿತ್
ಧಾವಂತಿ ಕೇಚಿತ್ಪ್ರಲಪಂತಿ ಕೇಚಿತ್ ।
ನೃತ್ಯಂತಿ ಕೇಚಿದ್ವಿಹಸಂತಿ ಕೇಚಿ
ದ್ವಲ್ಗಂತಿ ಕೇಚಿತ್ಪ್ರಮಥಾ ಬಲೇನ ॥ ೩೮ ॥

ಕೇಚಿಜ್ಜಿಘೃಕ್ಷಂತಿ ಘನಾನ್ಸತೋಯಾನ್
ಕೇಚಿದ್ಗ್ರಹೀತುಂ ರವಿಮುತ್ಪತಂತಿ ।

---

ನೀರಿನ ಕಲಶಗಳನ್ನು ಒಡೆಯುವುದು, ಮುಂತಾದ ಚೇಷ್ಟೆಗಳಲ್ಲಿ ತೊಡಗಿದ್ದರು. ಮತ್ತೆ ಕೆಲವರು ಸಂಗೀತವನ್ನು ಹಾಡುತ್ತಲೂ, ಕೆಲವರು ಘರ್ಜಿಸುತ್ತಲೂ, ಸುಮ್ಮನೆ ಆಗಾಗ್ಗೆ ನಗುತ್ತಲೂ, ಮದ್ಯದಂತೆ ರಕ್ತವನ್ನು ಕುಡಿಯುತ್ತಲೂ, ಇದ್ದರು.

೩೬. ಗೂಳಿ, ಮದಿಸಿದ ಆನೆ, ಸಿಂಹ, ಮುಂತಾದ ಮೃಗಗಳ ಬಲವನ್ನು ಹೊಂದಿರುವ ಗಣೇಶ್ವರರು ಇಂದ್ರನನ್ನೂ ಇತರ ದೇವತೆಗಳನ್ನೂ ನಾನಾವಿಧವಾಗಿ ತೊಂದರೆಪಡಿಸಿದರು. ಮಹಾಪರಾಕ್ರಮಶಾಲಿಗಳಾದ ಆ ಗಣೇಶ್ವರರು ಯುದ್ಧದಲ್ಲಿ ಮಾಡುತ್ತಿದ್ದ ಹಿಂಸೆಯನ್ನು ನೋಡಿದರೆ ಮೈಜುಮ್ಮೆನ್ನುವಂತಿತ್ತು.

೩೭-೩೯. ಈ ಪ್ರಮಥಗಣೇಶ್ವರರಲ್ಲಿ ಕೆಲವರು ಇನ್ನೊಬ್ಬರನ್ನು ಶ್ಲಾಘಿಸುತ್ತಲೂ, ಕೆಲವರು ಹೊಡೆಯುತ್ತಲೂ ಇದ್ದರು. ಕೆಲವರು ಓಡುತ್ತಿದ್ದರು, ಕೆಲವರು ಹುಚ್ಚುಹುಚ್ಚಾಗಿ ಮಾತಾಡುತ್ತಿದ್ದರು, ಕೆಲವರು ಕುಣಿಯುತ್ತಿದ್ದರು, ಕೆಲವರು ನಗುತ್ತಿದ್ದರು, ಮತ್ತೆ ಕೆಲವರು ತಮ್ಮ ಬಲದ ಹೆಮ್ಮೆಯನ್ನು ತೋರಿಸಿಕೊಳ್ಳುತ್ತಿದ್ದರು, ಕೆಲವರು ನೀರಿನಿಂದ ಕೂಡಿದ ಮೋಡಗಳನ್ನು ಹಿಡಿಯಲು ಮೇಲಕ್ಕೆ ಹಾರುತ್ತಿದ್ದರು,

ಕೇಚಿತ್ಪ್ರಸರ್ತುಂ ಪವನೇನ ಸಾರ್ಧ-
ಮಿಚ್ಛಂತಿ ಭೀಮಾಃ ಪ್ರಮಥಾ ವಿಯತ್ಸ್ಥಾಃ ॥ ೩೯ ॥

ಆಕ್ಷಿಪ್ಯ ಕೇಚಿಚ್ಚ ವರಾಯುಧಾನಿ
ಮಹಾಭುಜಂಗಾನಿವ ವೈನತೇಯಾಃ ।
ಭ್ರಮಂತಿ ದೇವಾನಪಿ ವಿದ್ರವಂತಃ
ಖಮಂಡಲೇ ಪರ್ವತಕೂಟಕಲ್ಪಾಃ ॥ ೪೦ ॥

ಉತ್ಪಾಟ್ಯ ಚೋತ್ಪಾಟ್ಯ ಗೃಹಾಣಿ ಕೇಚಿ-
ತ್ಸಜಾಲವಾತಾಯನವೇದಿಕಾನಿ ।
ವಿಕ್ಷಿಪ್ಯ ವಿಕ್ಷಿಪ್ಯ ಜಲಸ್ಯ ಮಧ್ಯೇ
ಕಾಲಾಂಬುದಾಭಾಃ ಪ್ರಮಥಾ ನಿನೇದುಃ ॥ ೪೧ ॥

ಉದ್ವರ್ತಿತದ್ವಾರಕಪಾಟಕುಡ್ಯಂ
ವಿಧ್ವಸ್ತಶಾಲಾವಲಮೀಗವಾಕ್ಷಂ ।
ಅಹೋ ಬತಾಭಜ್ಯತ ಯಜ್ಞವಾಟ-
ಮನಾಥವದ್ವಾಕ್ಯಮಿವಾಯಥಾರ್ಥಂ ॥ ೪೨ ॥

---

ಕೆಲವರು ಸೂರ್ಯನನ್ನು ಹಿಡಿಯಲು ಪ್ರಯತ್ನಪಡುತ್ತಿದ್ದರು, ಮತ್ತೆ ಕೆಲವರು ಅಂತರಿಕ್ಷದಲ್ಲಿದ್ದುಕೊಂಡು ಬೀಸುವ ಗಾಳಿಯನ್ನು ಅನುಸರಿಸಿ ಹೋಗಲು ಅಪೇಕ್ಷಿಸುತ್ತಿದ್ದರು.

೪೦-೪೧. ಪರ್ವತದ ಶಿಖರದಂತಿರುವ ಕೆಲವರು ಅಂತರಿಕ್ಷದಲ್ಲಿ ಗರುಡನು ಹಾವುಗಳನ್ನು ಮೇಲಕ್ಕೆಸೆಯುವಂತೆ ತಮ್ಮ ಉತ್ತಮವಾದ ಆಯುಧಗಳನ್ನು ಮೇಲಕ್ಕೆಸೆಯುತ್ತಾ ತಾವೂ ಓಡುತ್ತಾ ದೇವತೆಗಳನ್ನು ಓಡಾಡಿಸುತ್ತಿದ್ದರು. ಪ್ರಳಯಕಾಲದ ಮೇಘಗಳಿಗೆ ಸಮನಾದ ಶರೀರವುಳ್ಳ ಮತ್ತೆ ಕೆಲವರು ಮನೆಗಳನ್ನೂ, ಮನೆಯ ಕಿಟಕಿಗಳನ್ನೂ, ಜಗುಲಿಗಳನ್ನೂ ಕಿತ್ತು ಅವುಗಳನ್ನು ನೀರಿನಲ್ಲಿ ಹಾಕುತ್ತಾ ಸಿಂಹದಂತೆ ಘರ್ಜಿಸುತ್ತಿದ್ದರು.

೪೨. ಎಲ್ಲೆಲ್ಲೂ ಮುರಿದಿರುವ ಬಾಗಿಲು, ಬಿದ್ದುಹೋಗಿರುವ ಗೋಡೆ, ಕೆಟ್ಟುಹೋಗಿರುವ ಅಂಗಳ, ಕಿತ್ತುಹಾಕಿರುವ ಕಿಟಕಿ, ಇವುಗಳಿಂದಕೂಡಿರುವ ಯಜ್ಞಶಾಲೆಯು, ದಿಕ್ಕಿಲ್ಲದ ಮನುಷ್ಯನಂತೆಯೂ, ಸುಳ್ಳುಮಾತಿನಂತೆಯೂ ಕೊಂಚ ಮಟ್ಟಿಗೂ ಉಳಿಯದೆ ಹಾಳಾಯಿತು.

**ಹಾ ನಾಥ ತಾತೇತಿ ಪಿತಃ ಸುತೇತಿ**
**ಭ್ರಾತರ್ಮಮಾಂಬೇತಿ ಚ ಮಾತುಲೇತಿ ।**
**ಉತ್ಪಾಟ್ಯಮಾನೇಷು ಗೃಹೇಷು ನಾರ್ಯೋ**
**ಹ್ಯನಾಥಶಬ್ದಾನ್ಬಹುಶಃ ಪ್ರಚಕ್ರುಃ ॥ ೪೩ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾಂ ಪೂರ್ವಭಾಗೇ ಯಜ್ಞವಿಧ್ವಂಸೋ ನಾಮ ವಿಂಶೋಽಧ್ಯಾಯಃ**



೪೩. ಈರೀತಿ ವೀರಭದ್ರಗಣೇಶ್ವರನ ಕಡೆಯವರು ಮನೆಗಳೆಲ್ಲವನ್ನೂ ಕಿತ್ತು ಹಾಕುತ್ತಿರುವಾಗ—ಅಯ್ಯೋ! ನಾಥನೇ, ನೀನೆಲ್ಲಿ ಹೋದೆ? ಹಾ ತಂದೆಯೇ, ನೀವುಗಳು ಏನಾದಿರಿ? ಅಪ್ಪಾ ಮಗನೇ, ಓ ಸಹೋದರರೇ, ನೀವೆಲ್ಲರೂ ಎಲ್ಲಿರುವಿರಿ? ಹಾ ಮಾತೆಯೇ, ಹಾ ಮಾವನೇ, ನೀವು ಎಲ್ಲಿಗೆ ಹೋದಿರಿ? ನಮ್ಮ ಗತಿಯು ಹೀಗಾಯಿತಲ್ಲಾ ಎಂದು ಹೆಂಗಸರು ತಮ್ಮ ಪೋಷಕರಿಗೆ ಮೊರೆಯಿಡುತ್ತಾ ದಿಕ್ಕಿಲ್ಲದವರಹಾಗೆ ಕೂಗಿಕೊಳ್ಳುತ್ತಿದ್ದರು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಪೂರ್ವಭಾಗದಲ್ಲಿ ಯಜ್ಞವಿಧ್ವಂಸನವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ
## ವಾಯುವೀಯಸಂಹಿತಾಯಾಂ ಪೂರ್ವಭಾಗೇ
## ಏಕವಿಂಶೋऽಧ್ಯಾಯಃ

---

॥ ವಾಯುರುವಾಚ ॥

ತತಸ್ತ್ರಿದಶಮುಖ್ಯಾಸ್ತೇ ವಿಷ್ಣುಶಕ್ರಪುರೋಗಮಾಃ ।
ಸರ್ವೇ ಭಯಪರಿತ್ರಸ್ತಾ ದುದ್ರುವುರ್ಭಯವಿಹ್ವಲಾಃ ॥ ೧ ॥

ನಿರ್ಜರದೂಷಿತೈರಂಗೈರ್ದೃಷ್ಟ್ವಾ ದೇವಾನುಪದ್ರುತಾನ್ ।
ದಂಡ್ಯಾನದಂಡಿತಾನ್ಮತ್ವಾ ಚುಕೋಪ ಗಣಪುಂಗವಃ ॥ ೨ ॥

---

## ಇಪ್ಪತ್ತೊಂದನೆಯ ಅಧ್ಯಾಯವು

೧. ವಾಯುದೇವನಿಂತೆಂದನು.—ಅನಂತರ ದೇವತೆಗಳಲ್ಲಿ ಮುಖ್ಯರಾದ ವಿಷ್ಣು, ಇಂದ್ರ, ಮೊದಲಾದವರು ಭಯದಿಂದ ಹೆದರಿ ಜ್ಞಾನವಿಲ್ಲದವರಾಗಿ ಓಡುವುದಕ್ಕೆ ಪ್ರಾರಂಭಮಾಡಿದರು.

೨. ಆಗ ಆ ಗಣಾಧಿಪತಿಯಾದ ವೀರಭದ್ರನು, ದೇವತೆಗಳೆಲ್ಲರೂ, ಶಿಕ್ಷೆಗೆ ಅರ್ಹರಾಗಿದ್ದಾಗ್ಯೂ ಅವರಲ್ಲಿ ಅನೇಕರಿಗೆ ಇನ್ನೂ ಶಿಕ್ಷೆಯಾಗದೆ ಇರುವುದನ್ನೂ, ಅವರೆಲ್ಲರೂ ಹಿಂದಿನಂತೆಯೇ ಗಾಯ ಮುಂತಾದವುಗಳಿಲ್ಲದೆ ಗಟ್ಟಿಮುಟ್ಟಾಗಿದ್ದು ತಪ್ಪಿಸಿಕೊಂಡು ಓಡಿಹೋಗುತ್ತಿರುವುದನ್ನೂ ನೋಡಿ ಅವರಮೇಲೆ ಬಹಳ ಕೋಪಗೊಂಡನು.

**ತತಸ್ತ್ರಿಶೂಲಮಾದಾಯ ಶರ್ವಶಕ್ತಿನಿಬರ್ಹಣಂ ।**
**ಊರ್ಧ್ವದೃಷ್ಟಿರ್ಮಹಾಬಾಹುರ್ಮುಖಾಜ್ಜ್ವಾಲಾಃ ಸಮುತ್ಸೃಜನ್ ॥ ೩ ॥**

**ಅಮರಾನಪಿ ದುದ್ರಾವ ದ್ವಿರದಾನಿವ ಕೇಸರೀ ।**
**ತಾನಭಿದ್ರವತಸ್ತಸ್ಯ ಗಮನಂ ಸುಮನೋಹರಂ ॥ ೪ ॥**

**ವಾರಣಸ್ಯೇವ ಮತ್ತಸ್ಯ ಜಗಾಮ ಪ್ರೇಕ್ಷಣೀಯತಾಂ ।**
**ತತಸ್ತತ್ಕ್ಷೋಭಯಾಮಾಸ ಮಹತ್ಸುರಬಲಂ ಬಲೀ ॥ ೫ ॥**

**ಮಹಾಸರೋವರಂ ಯದ್ವನ್ಮತ್ತೋ ವಾರಣಯೂಥಪಃ ।**
**ವಿಕುರ್ವನ್ಬಹುಧಾ ವರ್ಣಾನ್ನೀಲಪಾಂಡುರಲೋಹಿತಾನ್ ॥ ೬ ॥**

**ಬಿಭ್ರದ್ವ್ಯಾಘ್ರಾಜಿನಂ ವಾಸೋ ಹೇಮಪ್ರವರತಾರಕಂ ।**
**ಛಿಂದನ್ಭಿಂದನ್ರುದನ್ಕ್ಲಿಂದನ್ದಾರಯನ್ಪ್ರಮಥನ್ನಪಿ ॥ ೭ ॥**

೩-೫. ಇವರಿಗೆ ತಕ್ಕ ಶಿಕ್ಷೆಯನ್ನು ಮಾಡಬೇಕೆಂದೆಣಿಸಿ, ಶಿವನ ಶಕ್ತಿಯೆನಿಸಿ ಕೊಂಡಿರುವ ತ್ರಿಶೂಲಾಯುಧವನ್ನು ತೆಗೆದುಕೊಂಡು, ಊರ್ಧ್ವಮುಖವಾದ ದೃಷ್ಟಿಯಿಂದ ಅವರನ್ನು ನೋಡುತ್ತಾ ಮುಖದಿಂದ ಅಗ್ನಿಜ್ವಾಲೆಯನ್ನುಗುಳುತ್ತಾ ಸಿಂಹವು ಆನೆಗಳನ್ನು ಹರಿಸಿಕೊಂಡು ಹೋಗುವಹಾಗೆ, ಆ ದೇವತೆಗಳನ್ನು ಹಿಂಬಾಲಿಸಿದನು. ಆಗ ಅವನು ದೇವತೆಗಳನ್ನು ಹರಿಸಿಕೊಂಡುಹೋಗುತ್ತಿರುವುದು, ಮದಿಸಿದ ಆನೆಯು ಹೋಗುವಂತೆ ನೋಡಲು ಬಹಳ ಅಂದವಾಗಿತ್ತು. ಶೂರನಾದ ಆ ವೀರಭದ್ರನು ಒಂದು ಕ್ಷಣವೆನ್ನುವುದರೊಳಗಾಗಿ ದೊಡ್ಡದಾದ ಆ ದೇವಸೇನೆಯೆಲ್ಲವನ್ನೂ, ಅಲ್ಲೋಲಕಲ್ಲೋಲಮಾಡಿ ಚದುರಿಸಿದನು.

೬. ಮದಿಸಿದ ಆನೆಯು ದೊಡ್ಡ ಸರೋವರನ್ನು ಪ್ರವೇಶಿಸಿ, ನೀರನ್ನು ಬೆಳ್ಳಗೂ, ಕೆಂಪಗೂ, ಕಪ್ಪಗೂ, ಇರುವಹಾಗೆ ಕದಡುವಂತೆ ಚಿನ್ನದ ಬೊಟ್ಟುಗಳನ್ನು ಹಾಕಿರುವ ಹುಲಿಯ ಚರ್ಮವನ್ನು ಧರಿಸಿದ ಆ ವೀರಭದ್ರನು ದೇವಸೇನೆಯನ್ನು ಪ್ರವೇಶಿಸಿ ಅದನ್ನು ಅಲ್ಲೋಲಕಲ್ಲೋಲಮಾಡಿದನು

೭-೯. ಆಗ ಅವನು ದೇವತೆಗಳ ಸಮೂಹದಲ್ಲಿ ಕತ್ತರಿಸುವುದು, ಭೇದಿಸುವುದು, ತಳ್ಳುವುದು, ರಕ್ತ ಸುರಿಯುವಂತೆ ಮಾಡುವುದು, ಸೀಳುವುದು, ಕೊಲ್ಲುವುದು ಇವೇ ಮೊದಲಾದ ಕೆಲಸಗಳನ್ನು ಮಾಡುತ್ತಾ, ಕಾಡಿನ ಪೊದೆಗಳ ಮಧ್ಯ

ವ್ಯಚರದ್ದೇವಸಂಘೇಷು ಭದ್ರೋಽಗ್ನಿರಿವ ಕಕ್ಷಗಃ ।
ತತ್ರ ತತ್ರ ಮಹಾವೇಗಾಚ್ಚರಂತಂ ಶೂಲಧಾರಿಣಂ ॥ ೮ ॥

ತಮೇಕಂ ತ್ರಿದಶಾಃ ಸರ್ವೇ ಸಹಸ್ರಮಿವ ಮೇನಿರೇ ।
ಭದ್ರಕಾಲೀ ಚ ಸಂಕ್ರುದ್ಧಾ ಯುದ್ಧವೃದ್ಧಮದೋದ್ಧತಾ ॥ ೯ ॥

ಮುಕ್ತಜ್ವಾಲೇನ ಶೂಲೇನ ನಿರ್ಬಿಭೇದ ರಣೇ ಸುರಾನ್ ।
ಸ ತಯಾ ರುರುಚೇ ಭದ್ರೋ ರುದ್ರಕೋಪಸಮುದ್ಭವಃ ॥ ೧೦ ॥

ಪ್ರಭಯೇವ ಯುಗಾಂತಾಗ್ನಿಶ್ಚಲಯಾ ಧೂಮಧೂಮ್ರಯಾ ।
ಭದ್ರಕಾಲೀ ತದಾ ಯುದ್ಧೇ ವಿದ್ರುತತ್ರಿದಶಾ ಬಭೌ ॥ ೧೧ ॥

ಕಲ್ಪೇ ಶೇಷಾನಲಜ್ವಾಲಾದಗ್ಧವಿಶ್ವಜಗದ್ಯಥಾ ।
ತದಾ ಸವಾಜಿನಂ ಸೂರ್ಯಂ ರುದ್ರಾನ್ರುದ್ರಗಣಾಗ್ರಣೀಃ ॥ ೧೨ ॥

ದಲ್ಲಿರುವ ಬೆಂಕಿಯಂತೆ ಎಲ್ಲಾ ಕಡೆಗಳಲ್ಲಿಯೂ ಸಂಚರಿಸುತ್ತಿದ್ದನು ಆಗ ಶೂಲವನ್ನು ಹಿಡಿದುಕೊಂಡು ಅಲ್ಲಲ್ಲಿ ಬಹಳ ವೇಗದಿಂದ ಓಡಾಡುತ್ತಿರುವ ಆ ವೀರಭದ್ರನು ಒಬ್ಬನೇ ಆಗಿದ್ದರೂ ದೇವತೆಗಳ ಕಣ್ಣಿಗೆ ಸಾವಿರಜನ ವೀರಭದ್ರರು ಇರುವಂತೆ ಕಾಣುತ್ತಿತ್ತು. ಯುದ್ಧಾಸಕ್ತಳಾದ ಭದ್ರಕಾಳಿಯು ತಾನೂ ಕೋಪಗೊಂಡು ಬೆಂಕಿಯ ಉರಿಯನ್ನು ಕಾರುತ್ತಿರುವಂತೆ ತ್ರಿಶೂಲಾಯುಧವನ್ನು ಧರಿಸಿ ಅದರಿಂದ ಯುದ್ಧದಲ್ಲಿ ದೇವತೆಗಳನ್ನು ನಾಶಮಾಡುತ್ತಿದ್ದಳು.

೧೦-೧೧. ರುದ್ರನ ಕೋಪದಿಂದ ಹುಟ್ಟಿದ ಆ ವೀರಭದ್ರನು ಭದ್ರಕಾಳಿಯೊಡನೆ ಯುದ್ಧಮಾಡುತ್ತಿರುವಾಗ, ಹೊಗೆಯಿಂದ ಕೂಡಿದ ಪ್ರಳಯಾಗ್ನಿಯಂತೆ ಪ್ರಕಾಶಿಸುತ್ತಿದ್ದನು. ಆಗ ನಡೆಯುತ್ತಿರುವ ಯುದ್ಧದಲ್ಲಿ ದೇವತೆಗಳನ್ನು ಓಡಿಸುತ್ತಿರುವ ಭದ್ರಕಾಳಿಯು, ಪ್ರಳಯ ಕಾಲದಲ್ಲಿ ಸಂಕರ್ಷಣನ ಮುಖದಿಂದ ಹೊರಟ ಅಗ್ನಿಜ್ವಾಲೆಯು ಪ್ರಪಂಚವೆಲ್ಲವನ್ನೂ ಸುಟ್ಟು ಬೆಳಗುವಂತೆ ತನ್ನ ತೇಜಸ್ಸಿನಿಂದ ಬೆಳಗುತ್ತಿದ್ದಳು.

೧೨-೧೩. ಆಗ ಗಣೇಶ್ವರನಾದ ಆ ವೀರಭದ್ರನು, ಕುದುರೆಯೊಡನೆ ಇರುವ ಸೂರ್ಯನನ್ನೂ, ರುದ್ರರನ್ನೂ ಅವರ ತಲೆಯ ಮೇಲೆ ತನ್ನ ಎಡಗಾಲಿನಿಂದ

ಭದ್ರೋ ಮೂರ್ಧ್ನಿ ಜಘಾನಾಶು ವಾಮಪಾದೇನ ಲೀಲಯಾ ।
ಅಸಿಭಿಃ ಪಾವಕಂ ಭದ್ರಃ ಪಟ್ಟಿಶೈಸ್ತು ಯಮಂ ಯಮೀ ॥ ೧೩ ॥

ರುದ್ರಾನ್ದೃಢೇನ ಶೂಲೇನ ಮುದ್ಗರೈರ್ವರುಣಂ ದೃಢೈಃ ।
ಪರಿಘೈರ್ನಿಋತಿಂ ವಾಯುಂ ಟಂಕೈಷ್ಟಂಕಧರಃ ಸ್ವಯಂ ॥ ೧೪ ॥

ನಿರ್ಬಿಭೇದ ರಣೇ ವೀರೋ ಲೀಲಯೈವ ಗಣೇಶ್ವರಃ ।
ಸರ್ವಾನ್ದೇವಗಣಾನ್ಸದ್ಯೋ ಮುನೀನ್ಶಂಭೋರ್ವಿರೋಧಿನಃ ॥ ೧೫ ॥

ತತೋ ದೇವಃ ಸರಸ್ವತ್ಯಾ ನಾಸಿಕಾಗ್ರಂ ಸುಶೋಭನಂ ।
ಚಿಚ್ಛೇದ ಕರಜಾಗ್ರೇಣ ದೇವಮಾತುಸ್ತಥೈವ ಚ ॥ ೧೬ ॥

ಚಿಚ್ಛೇದ ಚ ಕುಠಾರೇಣ ಬಾಹುದಂಡಂ ವಿಭಾವಸೋಃ ।
ಅಗ್ರತೋ ದ್ವ್ಯಂಗುಲಾಂ ಜಿಹ್ವಾಂ ಮಾತುರ್ದೇವ್ಯಾ ಲುಲಾವ ಚ ॥ ೧೭ ॥

---

ಒದ್ದನು. ಅಗ್ನಿಯನ್ನು ಕತ್ತಿಯಿಂದಲೂ, ಯಮನನ್ನು ಪಟ್ಟಸವೆಂಬ ಆಯುಧ ದಿಂದಲೂ ಹೊಡೆದನು.

೧೪-೧೫. ರುದ್ರರನ್ನು ಬಲವಾಗಿರುವ ತ್ರಿಶೂಲಾಯುಧದಿಂದಲೂ, ವರುಣ ನನ್ನು ಮುದ್ಗರವೆಂಬ ಆಯುಧದಿಂದಲೂ, ನಿರುರುತಿ ಎಂಬ ದಿಕ್ಪಾಲಕನನ್ನು ಪರಿಘಾ ಯುಧದಿಂದಲೂ, ವಾಯುದೇವನನ್ನು ಟಂಕವೆಂಬ ಆಯುಧದಿಂದಲೂ ಅನಾಯಾಸ ವಾಗಿ ಹೊಡೆದನು. ಮತ್ತು ಆ ವೀರಭದ್ರನು ಶಿವನ ವಿಷಯದಲ್ಲಿ ಭಕ್ತಿಭಾವವಿಲ್ಲದೆ ಶಿವದ್ವೇಷಿಗಳಾದ ದೇವತೆಗಳೆಲ್ಲರನ್ನೂ ಋಷಿಗಳನ್ನೂ ಕ್ರೂರವಾಗಿ ಶಿಕ್ಷಿಸಿದನು.

೧೬-೧೭. ದೇವತೆಗಳ ತಾಯಿಯಾದ ಅದಿತಿದೇವಿಯ ಮತ್ತು ಸರಸ್ವತೀ ದೇವಿಯ ಮೂಗಿನ ತುದಿಯನ್ನು ತನ್ನ ಉಗುರಿನ ತುದಿಯಿಂದ ಕತ್ತರಿಸಿದನು. ಅಗ್ನಿಯ ತೋಳನ್ನು ಕೊಡಲಿಯಿಂದ ಕತ್ತರಿಸಿದನು. ಅಗ್ನಿಯ ನಾಲಿಗೆಯ ತುದಿ ಯನ್ನು ಎರಡು ಅಂಗುಲಮಟ್ಟಿಗೆ ಕತ್ತರಿಸಿ, ಸ್ವಾಹಾದೇವಿಯ ಮೂಗಿನ ಬಲಗಡೆಯ ಹೊಳ್ಳೆಯನ್ನೂ, ಎಡಗಡೆಯ ಸ್ತನದ ಮುಂಭಾಗವನ್ನೂ, ತನ್ನ ಉಗುರಿನಿಂದ ಚಿಗುಟ ಹಾಕಿದನು.

**ಸ್ವಾಹಾದೇವ್ಯಾಸ್ತಥಾ ದೇವ್ಯೋ ದಕ್ಷಿಣಂ ನಾಸಿಕಾಪುಟಂ ।**
**ಚಕರ್ತ ಕರಚಾಗ್ರೇಣ ವಾಮಂ ಚ ಸ್ತನಚೂಚುಕಂ ॥ ೧೮ ॥**

**ಭಗಸ್ಯ ವಿಪುಲೇ ನೇತ್ರೇ ಶತಪತ್ರಸಮಪ್ರಭೇ ।**
**ಪ್ರಸಹ್ಯೋತ್ಪಾಟಯಾಮಾಸ ಭದ್ರಃ ಪರಮವೇಗವಾನ್ ॥ ೧೯ ॥**

**ಪೂಷ್ಣೋ ದಶನರೇಖಾಂ ಚ ದೀಪ್ತಾಂ ಮುಕ್ತಾವಲೀಮಿವ ।**
**ಜಘಾನ ಧನುಷಃ ಕೋಟ್ಯಾ ಸ ತೇನಾಸ್ಪಟವಾಗಭೂತ್ ॥ ೨೦ ॥**

**ತತಶ್ಚಂದ್ರಮಸಂ ದೇವಃ ಪಾದಾಂಗುಷ್ಠೇನ ಲೀಲಯಾ ।**
**ಕ್ಷಣಂ ಕೃಮಿವದಾಕ್ರಮ್ಯ ಘರ್ಷಯಾಮಾಸ ಭೂತಲೇ ॥ ೨೧ ॥**

**ಶಿರಶ್ಚಿಚ್ಛೇದ ದಕ್ಷಸ್ಯ ಭದ್ರಃ ಪರಮಕೋಪತಃ ।**
**ಕ್ರೋಶಂತ್ಯಾಮೇವ ವೈರಿಣ್ಯಾಂ ಭದ್ರಕಾಲ್ಯೈ ದದೌ ಚ ತತ್ ॥ ೨೨ ॥**

**ತತ್ಪ್ರಹೃಷ್ಟಾ ಸಮಾದಾಯ ಶಿರಸ್ತಾಲಫಲೋಪಮಂ ।**
**ಸಾ ದೇವೀ ಕಂದುಕಕ್ರೀಡಾಂ ಚಕಾರ ಸಮರಾಂಗಣೇ ॥ ೨೩ ॥**

---

೧೮. ಪರಾಕ್ರಮಿಯಾದ ಆ ವೀರಭದ್ರನು ಭಗನೆಂಬ ಸೂರ್ಯನ ಕಮಲದಂತೆ ಪ್ರಕಾಶಮಾನವಾದ ಎರಡು ಕಣ್ಣನ್ನೂ ಬಲವಂತವಾಗಿ ಕಿತ್ತುಹಾಕಿದನು.

೧೯–೨೦. ಮುತ್ತಿನಂತೆ ಹೊಳೆಯುತ್ತಿರುವ ಪೂಷದೇವನ ಹಲ್ಲುಗಳ ಸಾಲನ್ನು ತನ್ನ ಧನುಸ್ಸಿನ ತುದಿಯಿಂದ ಕತ್ತರಿಸಿದನು. ಅದರಿಂದ ಅವನು ಮಾತಾಡುವಾಗ ಅಕ್ಷರಗಳು ಸ್ಪಷ್ಟವಾಗಿ ಹೊರಡಲು ಆಗಲಿಲ್ಲ. ತೊದಲು ಮಾತಾಡಬೇಕಾಯಿತು.

೨೧–೨೨. ಮತ್ತು ಆ ವೀರಭದ್ರದೇವನು ಒಂದು ಕ್ಷಣದಲ್ಲಿ ಹುಳುವನ್ನು ಕಾಲಿನಿಂದ ಮೆಟ್ಟುವಂತೆ ಚಂದ್ರನನ್ನು ತನ್ನ ಕಾಲಿನ ಹೆಬ್ಬೆಟ್ಟಿನಿಂದ ತುಳಿದು ನೆಲದಲ್ಲಿ ಹೊಸಗಿದನು. ಬಹಳ ಕೋಪದಿಂದ ದಕ್ಷಬ್ರಹ್ಮನ ತಲೆಯನ್ನು ಕತ್ತರಿಸಿದನು. ಅವನ ಹೆಂಡತಿಯಾದ ವೈರಿಣಿದೇವಿಯು ಅರುಚುತ್ತಿದ್ದರೂ ಅದನ್ನು ಗಮನಿಸದೆ ಭದ್ರಕಾಳಿಗೆ ದಕ್ಷಬ್ರಹ್ಮನ ತಲೆಯನ್ನು ಕೊಟ್ಟನು.

೨೩–೨೪. ಆಗ ಭದ್ರಕಾಳಿಯು ತಾಳೆಯಹಣ್ಣಿನಂತೆ ಇರುವ ದಕ್ಷಬ್ರಹ್ಮನ ಆ ತಲೆಯನ್ನು ಹಿಡಿದುಕೊಂಡು ಯುದ್ಧರಂಗದಲ್ಲಿ ಸಂತೋಷದಿಂದ ಚೆಂಡಾಟವನ್ನು

ತತೋ ದಕ್ಷಸ್ಯ ಯಜ್ಞಸ್ತ್ರೀ ಕುಶೀಲಾ ಭರ್ತೃಭಿರ್ಯಥಾ ।
ಪಾದಾಭ್ಯಾಂ ಚೈವ ಹಸ್ತಾಭ್ಯಾಂ ಹನ್ಯತೇ ಸ್ಮ ಗಣೇಶ್ವರೈಃ ॥ ೨೪ ॥

ಅರಿಷ್ಟನೇಮಿನಂ ಸೋಮಂ ಧರ್ಮಂ ಚೈವ ಪ್ರಜಾಪತಿಂ ।
ಬಹುಪುತ್ರಂ ಚಾಂಗಿರಸಂ ಕೃಶಾಶ್ವಂ ಕಾಶ್ಯಪಂ ತಥಾ ॥ ೨೫ ॥

ಗಲೇ ಪ್ರಗೃಹ್ಯ ಬಲಿನೋ ಗಣಪಾಃ ಸಿಂಹವಿಕ್ರಮಾಃ ।
ಭರ್ತ್ಸಯಂತೋ ಭೃಶಂ ವಾಗ್ಭಿರ್ನಿಜಘ್ನುರ್ಮೂರ್ಧ್ನಿ ಮುಷ್ಟಿಭಿಃ ॥ ೨೬ ॥

ಧರ್ಷಿತಾ ಭೂತವೇತಾಲೈರ್ದಾರಾಸ್ತು ತಪರಿಗ್ರಹಾಃ ।
ಯಥಾ ಕಲಿಯುಗೇ ಜಾರೈರ್ಬಲೇನ ಕುಲಯೋಷಿತಃ ॥ ೨೭ ॥

ತಚ್ಚ ವಿಧ್ವಸ್ತಕಲಶಂ ಭಗ್ನಯೂಪಂ ಗತೋತ್ಸವಂ ।
ಪ್ರದೀಪಿತಮಹಾಶಾಲಂ ಪ್ರಭಿನ್ನದ್ವಾರತೋರಣಂ ॥ ೨೮ ॥

ಉತ್ಪಾಟಿತಸುರಾನೀಕಂ ಹನ್ಯಮಾನಂ ತಪೋಧನಂ ।
ಪ್ರಶಾಂತಬ್ರಹ್ಮನಿರ್ಘೋಷಂ ಪ್ರಕ್ಷೀಣಜನಸಂಚಯಂ ॥ ೨೯ ॥

---

ಆಡುತ್ತಿದ್ದಳು. ಇತ್ತ ದಕ್ಷಬ್ರಹ್ಮನ ಯಜ್ಞಸ್ತ್ರೀಯನ್ನು ಗಣೇಶ್ವರರು ಹಿಡಿದುಕೊಂಡು ಕೆಟ್ಟನಡತೆಯುಳ್ಳ ಹೆಂಗಸನ್ನು ಗಂಡನು ಶಿಕ್ಷೆಮಾಡುವಂತೆ ಕಾಲಿನಿಂದ ಒದ್ದರು. ಕೈಯ್ಯಿಂದ ಚೆನ್ನಾಗಿ ಹೊಡೆದರು.

೨೫-೨೭. ಸಿಂಹದಂತೆ ಪರಾಕ್ರಮಶಾಲಿಗಳೂ ಬಹಳ ಶಕ್ತಿವಂತರೂ ಆದ ಗಣೇಶ್ವರರು, ಭೂತ, ಪ್ರೇತಪಿಶಾಚಗಳನ್ನು ತಮ್ಮ ಜೊತೆಗೆ ಸೇರಿಸಿಕೊಂಡು ಅರಿಷ್ಟನೇಮಿ, ಸೋಮ, ಧರ್ಮ, ಬ್ರಹ್ಮ ಬಹಳ ಮಕ್ಕಳುಳ್ಳವಂದಿಗನಾದ ಅಂಗಿರಸ್ಸು, ಕೃಶಾಶ್ವ, ಕಾಶ್ಯಪ ಇವರುಗಳನ್ನು ಹಿಡಿದುಕೊಂಡು ಕೆಟ್ಟಮಾತುಗಳಿಂದ ಬೈಯುತ್ತಾ, ಹಂಗಿಸುತ್ತಾ, ತಲೆಯಮೇಲೆ ಮುಷ್ಟಿಯಿಂದ ಹೊಡೆಯುತ್ತಿದ್ದರು.

೨೮-೩೦. ಕಲಿಯುಗದಲ್ಲಿ ಕುಲಸ್ತ್ರೀಯರು ಜಾರಪುರುಷರ ಬಲಾತ್ಕಾರಕ್ಕೆ ಸಿಕ್ಕಿ ಕೆಟ್ಟುಹೋಗುವಂತೆ ಆಗ ದಕ್ಷಬ್ರಹ್ಮನ ಯಾಗಶಾಲೆಯು ಕಾಣುತ್ತಿತ್ತು. ಎಲ್ಲೆಲ್ಲಿಯೂ ಮುರಿದು ಹೋದ ಕಲಶಗಳು, ಮುರಿದು ಬಿದ್ದ ಯೂಪಸ್ತಂಬಗಳು, ಉರಿಯುತ್ತಿರುವ ದೊಡ್ಡ ಅಂಗಳ, ಒಡೆದಿರುವ ಹೆಬ್ಬಾಗಿಲು, ಹರಿದುಹೋದ ತೋರಣಗಳು, ಇವುಗಳಿಂದ ಆ ಯಾಗಶಾಲೆಯು ಪಾಳುಬಿದ್ದಿತ್ತು. ದೇವತೆಗಳೂ ಜನಗಳೂ

**ಕ್ರಂದಮಾನಾತುರಸ್ತ್ರೀಕಂ ಹತಾಶೇಷಪರಿಚ್ಛದಂ ।**
**ಶೂನ್ಯಾರಣ್ಯನಿಭಂ ಜಜ್ಞೇ ಯಜ್ಞವಾಟಂ ತದಾರ್ದಿತಂ ॥ ೩೦ ॥**

**ಶೂಲವೇಗಪ್ರರುಗ್ಣಾಶ್ಚ ಭಿನ್ನಬಾಹೂರುವಕ್ಷಸಃ ।**
**ವಿನಿಕೃತ್ತೋತ್ತಮಾಂಗಾಶ್ಚ ಪೇತುರುರ್ವ್ಯಾಂ ಸುರೋತ್ತಮಾಃ ॥ ೩೧ ॥**

**ಹತೇಷು ತೇಷು ದೇವೇಷು ಪತಿತೇಷು ಸಹಸ್ರಶಃ ।**
**ಪ್ರವಿವೇಶ ಗಣೇಶಾನಃ ಕ್ಷಣಾದಾಹವನೀಯಕಂ ॥ ೩೨ ॥**

**ಪ್ರವಿಷ್ಟಮಥ ತಂ ದೃಷ್ಟ್ವಾ ಭದ್ರಂ ಕಾಲಾಗ್ನಿಸನ್ನಿಭಂ ।**
**ದುದ್ರಾವ ಮರಣಾದ್ಭೀತೋ ಯಜ್ಞೋ ಮೃಗವಪುರ್ಧರಃ ॥ ೩೩ ॥**

---

ದಿಕ್ಕೆಟ್ಟು ಓಡಿಹೋದರು. ವೇದಘೋಷವು ನಿಂತುಹೋಗಿ ನಿಶಬ್ದವಾಗಿತ್ತು. ಏಟನ್ನು ತಿಂದು ಋಷಿಗಳೂ ಋಷಿಪತ್ನಿಯರೂ ದೀನಧ್ವನಿಯಿಂದ ಕಿರಿಚಿಕೊಳ್ಳುತ್ತಿದ್ದರು. ಎಲ್ಲೆಲ್ಲಿಯೂ ಹಾಹಾಕಾರ, ಯಜ್ಞಸಾಮಗ್ರಿಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಸಿಕ್ಕಿದವರು ಸಿಕ್ಕಿದ್ದನ್ನು ಹೊತ್ತುಕೊಂಡು ಹೋಗುತ್ತಿದ್ದರು. ಒಟ್ಟಿನಲ್ಲಿ ಆ ಯಜ್ಞಶಾಲೆಯು ನಿರ್ಜನವಾದ ಕಾಡಿನಂತೆ ಕಾಣುತ್ತಿತ್ತು.

೩೧. ದೇವತೆಗಳು ಶೂಲಾಯುಧದ ಏಟಿನಿಂದ ಗಾಯಗೊಂಡು ಭೂಮಿಯಲ್ಲಿ ಬಿದ್ದಿದ್ದರು. ತೋಳುಗಳು, ತೊಡೆಗಳು, ಎದೆಯ ಪ್ರದೇಶಗಳು, ಅಲ್ಲಲ್ಲಿ ಕತ್ತರಿಸಿ ಬಿದ್ದಿದ್ದವು. ಕೆಲವರಿಗೆ ತಲೆಯೇ ಕತ್ತರಿಸಿಹೋಗಿ ನೆಲದಮೇಲೆ ಸತ್ತು ಬಿದ್ದಿದ್ದರು.

೩೨ ಹೀಗೆ ದೇವತೆಗಳು ಸಾವಿರಗಟ್ಟಲೆಯಾಗಿ ನಾಶವನ್ನು ಹೊಂದಿ ಭೂಮಿಗೆ ಬಿದ್ದನಂತರ ಗಣೇಶ್ವರನಾದ ವೀರಭದ್ರನು, ಕ್ಷಣಮಾತ್ರದಲ್ಲಿ ಆಹವನೀಯಾಗ್ನಿಯ ಸಮೀಪಕ್ಕೆ ಬರಲು ಅದನ್ನು ಕಂಡು ಆ ಯಜ್ಞವು ಮರಣಕ್ಕೆ ಹೆದರಿಕೊಂಡು ಜಿಂಕೆಯ ರೂಪವನ್ನು ಹೊಂದಿ ಓಡುವುದಕ್ಕೆ ಪ್ರಾರಂಭಿಸಿತು.

೩೩. ಆಗ ವೀರಭದ್ರನು ತನ್ನ ದೊಡ್ಡ ಧನುಸ್ಸಿಗೆ ಹೆದೆಯನ್ನೇರಿಸಿ ಭಯಂಕರವಾಗಿ ಧ್ವನಿಮಾಡುತ್ತಾ, ಅನೇಕ ಬಾಣಗಳನ್ನು ಬಿಡುತ್ತಾ ಜಿಂಕೆಯ ರೂಪದಿಂದಿರುವ ಯಜ್ಞವನ್ನು ಅಟ್ಟಿಸಿಕೊಂಡು ಹೋದನು.

ಸ ವಿಸ್ಫಾರ್ಯ ಮಹಚ್ಚಾಪಂ ದೃಢಜ್ಯಾಘೋಷಭೀಷಣಂ ।
ಭದ್ರಸ್ತಮಭಿದುದ್ರಾವ ವಿಕ್ಷಿಪನ್ನೇವ ಸಾಯಕಾನ್ ॥ ೩೪ ॥

ಆಕರ್ಣಪೂರ್ಣಮಾಕೃಷ್ಟಂ ಧನುರಂಬುದಸಂನಿಭಂ ।
ನಾದಯಾಮಾಸ ಚ ಜ್ಯಾಂ ದ್ಯಾಂ ಖಂ ಚ ಭೂಮಿಂ ಚ ಸರ್ವಶಃ ॥ ೩೫ ॥

ತಮುಪಶ್ರುತ್ಯ ಸನ್ನಾದಂ ಹತೋಽಸ್ಮೀತ್ಯೇವ ವಿಹ್ವಲಂ ।
ಶರೇಣಾರ್ಧೇನ ವಕ್ರೇಣ ಸ ವೀರೋಽಧ್ವರಪೂರುಷಂ ॥ ೩೬ ॥

ಮಹಾಭಯಸ್ಖಲತ್ಪಾದಂ ವೇಪಂತಂ ವಿಗತತ್ವಿಷಂ ।
ಮೃಗರೂಪೇಣ ಧಾವಂತಂ ವಿಶಿರಸ್ಕಂ ತದಾಕರೋತ್ ॥ ೩೭ ॥

ತಮೀದೃಶಮವಜ್ಞಾತಂ ದೃಷ್ಟ್ವಾ ವೈ ಸೂರ್ಯಸಂಭವಂ ।
ವಿಷ್ಣುಃ ಪರಮಸಂಕ್ರುದ್ಧೋ ಯುದ್ಧಾಯಾಭವದುದ್ಯತಃ ॥ ೩೮ ॥

೩೪. ವೀರಭದ್ರನು ಧನುಸ್ಸಿನ ಹೆದೆಯನ್ನು ಕಿವಿಯವರೆಗೂ ಎಳೆದು ಧನುಷ್ಟಂಕಾರವನ್ನು ಮಾಡಿದಾಗ ಆ ಧ್ವನಿಯು ಭೂಮ್ಯಂತರಿಕ್ಷಸ್ವರ್ಗಗಳನ್ನು ಭೇದಿಸಿ ಪ್ರತಿಧ್ವನಿಗೈಯುತ್ತಿತ್ತು.

೩೫–೩೭. ಆಗ ಮೃಗರೂಪದಿಂದ ಇರುವ ಯಜ್ಞಪುರುಷನು ವೀರಭದ್ರನ ಸನ್ನಾಹವನ್ನು ನೋಡಿ, ಇನ್ನು ನಾನು ಉಳಿಯುವುದಿಲ್ಲವೆಂದು ತಿಳಿದು ಬಹಳ ಭಯದಿಂದ ತಪ್ಪು ಹೆಜ್ಜೆಯನ್ನು ಹಾಕುತ್ತಾ ಕಾಂತಿಹೀನನಾಗಿ, ನಡುಗುತ್ತಾ ದಿಕ್ಕೆಟ್ಟು ಓಡುತ್ತಿದ್ದನು. ಆಗ ವೀರಭದ್ರನು ಈ ಅವಸ್ಥೆಯಲ್ಲಿರುವ ಅವನನ್ನು ಕಂಡು ಒಂದು ವಕ್ರವಾದ ಬಾಣದಿಂದ ಮೃಗರೂಪದಿಂದಿರುವ ಅವನ ತಲೆಯನ್ನು ಕತ್ತರಿಸಿದನು.

೩೮. ಸೂರ್ಯನಿಂದ ಹುಟ್ಟಿದ ಯಜ್ಞಪುರುಷನು ಈರೀತಿ ಅವಮಾನ ಹೊಂದಿ ನಾಶವಾಗುವುದನ್ನು ನೋಡಿ ವಿಷ್ಣುವು ಬಹಳ ಕೋಪದಿಂದ ಯುದ್ಧಕ್ಕೆ ಸಿದ್ಧನಾದನು.

**ತಮುವಾಹ ಮಹಾವೇಗಾತ್ಸ್ಕಂಧೇನ ನತಸಂಧಿನಾ ।**
**ಸರ್ವೇಷಾಂ ವಯಸಾಂ ರಾಜಾ ಗರುಡಃ ಪನ್ನಗಾಶನಃ ॥ ೩೯ ॥**

**ದೇವಾಶ್ಚ ಹತಶಿಷ್ಟಾ ಯೇ ದೇವರಾಜಪುರೋಗಮಾಃ ।**
**ಪ್ರಚಕ್ರುಸ್ತಸ್ಯ ಸಾಹಾಯ್ಯಂ ಪ್ರಾಣಾಂಸ್ತ್ಯಕ್ತುಮಿವೋದ್ಯತಾಃ ॥ ೪೦ ॥**

**ವಿಷ್ಣುನಾ ಸಹಿತಾನ್ದೇವಾನ್ಮೃಗೇಂದ್ರಃ ಕ್ರೋಷ್ಟುಕಾನಿವ ।**
**ದೃಷ್ಟ್ವಾ ಜಹಾಸ ಭೂತೇಂದ್ರೋ ಮೃಗೇಂದ್ರ ಇವ ನಿರ್ವ್ಯಥಃ ॥ ೪೧ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ದೇವದಂಡವರ್ಣನಂ ನಾಮೈಕವಿಂಶೋಽಧ್ಯಾಯಃ**



೩೯. ಆಗ ಸರ್ಪಭಕ್ಷಕನೂ, ಪಕ್ಷಿರಾಜನೂ ಆದ ಗರುಡನು ಶರೀರವನ್ನು ಬಗ್ಗಿಸಿ ತನ್ನ ಹೆಗಲಿನಮೇಲೆ ಯುದ್ಧಕ್ಕೆ ಸಿದ್ಧನಾದ ವಿಷ್ಣುವನ್ನು ಕೂರಿಸಿಕೊಂಡನು.

೪೦. ವೀರಭದ್ರನು ನಾಶಮಾಡಿ ಅಳಿದುಳಿದ ಇಂದ್ರನೇ ಮೊದಲಾದ ಕೆಲವು ದೇವತೆಗಳು ಪ್ರಾಣಗಳನ್ನು ಬಿಡುವುದಕ್ಕೂ ಸಿದ್ಧರಾಗಿ ಆಗ ವಿಷ್ಣುವಿನ ಸಹಾಯಕ್ಕಾಗಿ ಬಂದು ನಿಂತರು.

೪೧. ವಿಷ್ಣುವೂ, ದೇವತೆಗಳೂ ವಿವೇಕಹೀನರಾಗಿ ಯುದ್ಧಮಾಡಲು ಮುಂದೆ ಬಂದಿರುವುದನ್ನು ಭೂತಪತಿಯಾದ ಆ ವೀರಭದ್ರನು ನೋಡಿ, ನಿರ್ಭಯವಾದ ಸಿಂಹವು ತನ್ನಮೇಲೆ ಬೀಳಲು ಬರುವ ನರಿಗಳ ಗುಂಪನ್ನು ನೋಡಿ ಹಾಸ್ಯಮಾಡುವಂತೆ ಆ ದೇವತೆಗಳನ್ನು ಹಾಸ್ಯಮಾಡಿಕೊಂಡು ನಗುತ್ತಿದ್ದನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಪೂರ್ವಭಾಗದಲ್ಲಿ ದೇವತೆಗಳಿಗೆ ಆದ ಶಿಕ್ಷೆಯವರ್ಣನವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ದ್ವಾವಿಂಶೋಽಧ್ಯಾಯಃ

---

॥ ವಾಯುರುವಾಚ ॥

ತಸ್ಮಿನ್ನವಸರೇ ವ್ಯೋಮ್ನಿ ಸಮಾವಿರಭವದ್ರಥಃ ।
ಸಹಸ್ರಸೂರ್ಯಸಂಕಾಶಶ್ಚಾರುಚೀರವೃಷಧ್ವಜಃ ॥ ೧ ॥

ಅಶ್ವರತ್ನದ್ವಯೋದಾರೋ ರಥಚಕ್ರಚತುಷ್ಟಯಃ ।
ಸಂಚಿತಾನೇಕದಿವ್ಯಾಸ್ತ್ರಶಸ್ತ್ರರತ್ನಪರಿಷ್ಕೃತಃ ॥ ೨ ॥

ತಸ್ಯಾಪಿ ರಥವರ್ಯಸ್ಯ ಸ್ಯಾತ್ಸ ಏವ ಹಿ ಸಾರಥಿಃ ।
ಯಥಾ ಚ ತ್ರೈಪುರೇ ಯುದ್ಧೇ ಪೂರ್ವಂ ಶಾರ್ವರಥೇ ಸ್ಥಿತಃ ॥ ೩ ॥

---

## ಇಪ್ಪತ್ತೆರಡನೆಯ ಅಧ್ಯಾಯವು

೧-೨. ಆ ಸಮಯಕ್ಕೆ ಸರಿಯಾಗಿ ಸಹಸ್ರ ಸೂರ್ಯರ ಕಾಂತಿಯಿಂದ ಬೆಳಗುವ ಮನೋಹರವಾದ ಒಂದು ರಥವು ವೀರಭದ್ರನಿಗೋಸ್ಕರ ಸಿದ್ಧವಾಗಿ ಬಂದಿತು. ಆ ರಥವು ವೃಷಭಧ್ವಜದಿಂದ ಪ್ರಕಾಶಿಸುತ್ತಿತ್ತು. ಅದಕ್ಕೆ ಶ್ರೇಷ್ಠವಾದ ಎರಡು ಕುದುರೆಗಳನ್ನು ಕಟ್ಟಿದ್ದರು, ನಾಲ್ಕು ಚಕ್ರಗಳಿದ್ದವು, ಉತ್ತಮವಾದ ಅನೇಕ ಅಸ್ತ್ರ, ಶಸ್ತ್ರಗಳನ್ನು ಅದರಲ್ಲಿ ಸಜ್ಜುಗೊಳಿಸಿಟ್ಟಿದ್ದರು. ಇಂತಹ ಅನುಗುಣವಾದ ರಥವು ಅಂತರಿಕ್ಷದಲ್ಲಿ ವೀರಭದ್ರನಿಗೋಸ್ಕರ ಸಿದ್ಧವಾಗಿ ಬಂದಿತು.

೩. ಹಿಂದೆ ತ್ರಿಪುರವನ್ನು ನಾಶಮಾಡುವ ಕಾಲದಲ್ಲಿ ಯಾವನು ಸಾರಥಿಯಾಗಿದ್ದನೋ, ಈಗಲೂ ಅವನೇ ಈ ಉತ್ತಮವಾದ ರಥವನ್ನು ನಡೆಸಲು ಸಾರಥಿಯಾಗಿ ಬಂದಿದ್ದನು.

**ಸ ತಂ ರಥವರಂ ಬ್ರಹ್ಮಾ ಶಾಸನಾದೇವ ಶೂಲಿನಃ ।**
**ಹರೇಸ್ಸಮೀಪಮಾನೀಯ ಕೃತಾಂಜಲಿರಭಾಷತ ॥ ೪ ॥**

**ಭಗವನ್ಭದ್ರ ಭದ್ರಾಂಗ ಭಗವಾನಿಂದುಭೂಷಣಃ ।**
**ಆಜ್ಞಾಪಯತಿ ವೀರಸ್ತ್ವಾಂ ರಥಮಾರೋಢುಮವ್ಯಯಃ ॥ ೫ ॥**

**ರೈಭ್ಯಾಶ್ರಮಸಮೀಪಸ್ಥಸ್ತ್ರ್ಯಂಬಕೋಽಂಬಿಕಯಾ ಸಹ ।**
**ಸಂಪಶ್ಯತೇ ಮಹಾಬಾಹೋ ದುಸ್ಸಹಂ ತೇ ಪರಾಕ್ರಮಂ ॥ ೬ ॥**

**ತಸ್ಯ ತದ್ವಚನಂ ಶ್ರುತ್ವಾ ಸ ವೀರೋ ಗಣಕುಂಜರಃ ।**
**ಆರುರೋಹ ರಥಂ ದಿವ್ಯಮನುಗೃಹ್ಯ ಪಿತಾಮಹಂ ॥ ೭ ॥**

**ತಥಾ ರಥವರೇ ತಸ್ಮಿನ್ಸ್ಥಿತೇ ಬ್ರಹ್ಮಣಿ ಸಾರಥೌ ।**
**ಭದ್ರಸ್ಯ ವವೃಧೇ ಲಕ್ಷ್ಮೀ ರುದ್ರಸ್ಯೇವ ಪುರದ್ವಿಷಃ ॥ ೮ ॥**

**ತತಃ ಶಂಖವರಂ ದೀಪ್ತಂ ಪೂರ್ಣಚಂದ್ರಸಮಪ್ರಭಂ ।**
**ಪ್ರದಧ್ಮೌ ವದನೇ ಕೃತ್ವಾ ಭಾನುಕಂಪೋ ಮಹಾಬಲಃ ॥ ೯ ॥**

---

೪-೬. ತ್ರಿಶೂಲಧಾರಿಯಾದ ಶಿವನ ಅಪ್ಪಣೆಯ ಪ್ರಕಾರ ಬ್ರಹ್ಮನು ಆ ರಥವನ್ನು ವೀರಭದ್ರನ ಸಮೀಪಕ್ಕೆ ತಂದು ನಿಲ್ಲಿಸಿ ಕೈಮುಗಿದುಕೊಂಡು ಎಲೈ, ಷಡ್ಗುಣೈಶ್ವರ್ಯ ಸಂಪನ್ನನಾದ ವೀರಭದ್ರನೇ, ನೀನು ಈ ರಥವನ್ನು ಹತ್ತಿ ಯುದ್ಧಮಾಡಬೇಕೆಂದು ಪೂಜ್ಯನಾದ ಶಿವನು ಅಪ್ಪಣೆಮಾಡಿರುವನು. ಅವನು ದೇವಿಯಾದ ಪಾರ್ವತಿಯೊಡನೆ ರೈಭ್ಯಾಶ್ರಮದ ಸಮೀಪದಲ್ಲಿದ್ದುಕೊಂಡು ದುಸ್ಸಾಧ್ಯವಾದ ನಿನ್ನ ಪರಾಕ್ರಮವನ್ನು ನೋಡುತ್ತಿರುವನು ಎಂದು ಹೇಳಿದನು.

೭-೮. ಗಣೇಶ್ವರನಾದ ವೀರಭದ್ರನು ಬ್ರಹ್ಮನ ಪ್ರಾರ್ಥನೆಯಂತೆ ಉತ್ತಮವಾದ ಆ ರಥವನ್ನು ಹತ್ತಿದನು. ಆಗ ಆ ರಥಕ್ಕೆ ಬ್ರಹ್ಮನೇ ಸಾರಥಿಯಾಗಿರಲು, ವೀರಭದ್ರನ ಕಾಂತಿಯು, ತ್ರಿಪುರಗಳನ್ನು ನಾಶಮಾಡಿದ ಶಿವನ ಕಾಂತಿಯಂತೆ ಬೆಳಗುತ್ತಿತ್ತು.

೯. ಆಗ ಭಾನುಕಂಪನೆಂಬ ಗಣೇಶ್ವರನು ಪೂರ್ಣಚಂದ್ರನಂತೆ ಹೊಳೆಯುತ್ತಿರುವ ಉತ್ತಮವಾದ ಶಂಖವನ್ನು ತೆಗೆದುಕೊಂಡು ಘಟ್ಟಿಯಾಗಿ ಊದಿದನು.

ತಸ್ಯ ಶಂಖಸ್ಯ ತಂ ನಾದಂ ಭಿನ್ನಸಾರಸಸನ್ನಿಭಂ ।
ಶ್ರುತ್ವಾ ಭಯೇನ ದೇವಾನಾಂ ಜಜ್ವಾಲ ಜಠರಾನಲಃ ॥ ೧೦ ॥

ಯಕ್ಷವಿದ್ಯಾಧರಾಹೀಂದ್ರೈಃ ಸಿದ್ಧೈರ್ಯುದ್ಧದಿದೃಕ್ಷುಭಿಃ ।
ಕ್ಷಣೇನ ನಿಬಿಡೀಭೂತಾಃ ಸಾಕಾಶವಿವರಾ ದಿಶಃ ॥ ೧೧ ॥

ತತಃ ಶಾಂಗೇರ್ಣ ಚಾಪಾಂಕಾತ್ಸ ನಾರಾಯಣನೀರದಃ ।
ಮಹತಾ ಬಾಣವರ್ಷೇಣ ತುತೋದ ಗಣಗೋವೃಷಂ ॥ ೧೨ ॥

ತಂ ದೃಷ್ಟ್ವಾ ವಿಷ್ಣುಮಾಯಾಂತಂ ಶತಧಾ ಬಾಣವರ್ಷಿಣಂ ।
ಸ ಚಾದದೇ ಧನುರ್ಜೈತ್ರಂ ಭದ್ರೋ ಬಾಣಸಹಸ್ರಮುಕ್ ॥ ೧೩ ॥

೧೦-೧೧. ಸರೋವರದ ಕಟ್ಟೆಯು ಒಡೆದು ಹೋಗಿ ನೀರು ರಭಸದಿಂದ ನುಗ್ಗುವಾಗ ಆಗುವ ಧ್ವನಿಯಂತಿರುವ ಆ ಶಂಖದ ಧ್ವನಿಯನ್ನು ದೇವತೆಗಳೆಲ್ಲರೂ ಕೇಳಿದರು. ಅದರಿಂದ ಅವರ ಹೊಟ್ಟೆಯಲ್ಲಿದ್ದ ಜಾಠರಾಗ್ನಿಯು ಅವರನ್ನು ಸುಡುವ ಮಟ್ಟಿಗೂ ಹೆಚ್ಚಾಯಿತು. ಆ ಕಾಲದಲ್ಲಿ ಯುದ್ಧವನ್ನು ನೋಡಬೇಕೆಂಬ ಅಪೇಕ್ಷೆಯಿಂದ ಯಕ್ಷರೂ, ವಿದ್ಯಾಧರರೂ, ಉತ್ತಮರಾದ ನಾಗಕುಮಾರರೂ, ಸಿದ್ಧರೂ ಇವರೆಲ್ಲರೂ ಅಂತರಿಕ್ಷದಲ್ಲಿ ಬಂದು ನೆರೆದಿದ್ದರು.

೧೨. ಅನಂತರ ವಿಷ್ಣುವು ಶಾರ್ಙ್ಗವೆಂಬ ತನ್ನ ಧನಸ್ಸನ್ನು ತೆಗೆದುಕೊಂಡು ಮಳೆಯು ಹುಯ್ಯುವಾಗ ನೀರಿನ ಹನಿಗಳು ಬೀಳುವಂತೆ ವೀರಭದ್ರನಮೇಲೆ ಬಾಣಗಳನ್ನು ಬಿಡುತ್ತಿದ್ದನು.

೧೩. ವಿಷ್ಣುವು ಅನೇಕ ಪ್ರಕಾರವಾಗಿ ಬಾಣಗಳನ್ನು ತನ್ನ ಮೇಲೆ ಬಿಡುತ್ತಿರುವುದನ್ನು ವೀರಭದ್ರನು ನೋಡಿ ಒಂದು ಸಾರಿಗೆ ಸಾವಿರ ಬಾಣಗಳನ್ನು ಬಿಡಲು ಸಮರ್ಥವಾಗಿರುವ ಧನುಸ್ಸನ್ನು ತೆಗೆದುಕೊಂಡನು. ಅದು ಉತ್ತಮವಾಗಿಯೂ ಯುದ್ಧದಲ್ಲಿ ಭಯವನ್ನುಂಟುಮಾಡುವುದಾಗಿಯೂ ಇದ್ದಿತು. ಹಿಂದೆ ಶಿವನು ಮೇರುಪರ್ವತವನ್ನು ಧನುಸ್ಸಾಗಿ ಮಾಡಿಕೊಂಡು ಅದನ್ನು ಎಳೆಯುತ್ತಿದ್ದಂತೆ ವೀರಭದ್ರನು ತನ್ನ ಧನುಸ್ಸಿಗೆ ಹೆದೆಯನ್ನೇರಿಸಿ ಧನುಷ್ಟಂಕಾರಮಾಡಿದನು.

ಸಮಾದಾಯ ಚ ತದ್ದಿವ್ಯಂ ಧನುಸ್ಸಮರಭೈರವಂ ।
ಶನೈರ್ವಿಸ್ಫಾರಯಾಮಾಸ ಮೇರುಂ ಧನುರಿವೇಶ್ವರಃ ॥ ೧೪ ॥

ತಸ್ಯ ವಿಸ್ಫಾರ್ಯಮಾಣಸ್ಯ ಧನುಷೋಽಭೂನ್ಮಹಾಸ್ವನಃ ।
ತೇನ ಸ್ವನೇನ ಮಹತಾ ಪೃಥಿವೀಂ ಸಮಕಂಪಯತ್ ॥ ೧೫ ॥

ತತಃ ಶತವರಂ ಘೋರಂ ದೀಪ್ತಮಾಶೀವಿಷೋಪಮಂ ।
ಜಗ್ರಾಹ ಗಣಪಃ ಶ್ರೀಮಾನ್ಸ್ವಯಮುಗ್ರಪರಾಕ್ರಮಃ ॥ ೧೬ ॥

ಬಾಣೋದ್ಧಾರೇ ಭುಜೋ ಹ್ಯಸ್ಯ ತೂಣೀವದನಸಂಗತಃ ।
ಪ್ರತ್ಯದೃಶ್ಯತ ವಲ್ಮೀಕಂ ವಿವೇಕ್ಷುರಿವ ಪನ್ನಗಃ ॥ ೧೭ ॥

ಸಮುದ್ಧೃತಃ ಕರೇ ತಸ್ಯ ತತ್ಕ್ಷಣಂ ರುರುಚೇ ಶರಃ ।
ಮಹಾಭುಜಂಗಸಂದಷ್ಟೋ ಯಥಾ ಬಾಲಭುಜಂಗಮಃ ॥ ೧೮ ॥

ಶರೇಣ ಘನತೀವ್ರೇಣ ಭದ್ರೋ ರುದ್ರಪರಾಕ್ರಮಃ ।
ವಿವ್ಯಾಧ ಕುಪಿತೋ ಗಾಢಂ ಲಲಾಟೇ ವಿಷ್ಣುಮವ್ಯಯಂ ॥ ೧೯ ॥

---

೧೪-೧೫. ಆ ವೀರಭದ್ರನು ಧನುಸ್ಸನ್ನು ಎಳೆಯುತ್ತಿರುವಾಗ ಅದರಿಂದ ಹುಟ್ಟಿದ ದೊಡ್ಡ ಧ್ವನಿಯು ಭೂಮಿಯನ್ನು ನಡುಗಿಸಿತು.

೧೬-೧೮. ಅನಂತರ ಮಹಾಪರಾಕ್ರಮಶಾಲಿಯಾದ ಆ ವೀರಭದ್ರಗಣೇಶ್ವರನು ಹಾವಿನಂತೆ ಕ್ರೂರವಾಗಿ ಹೊಳೆಯುತ್ತಿರುವ ಉತ್ತಮವಾದ ಬಾಣಗಳನ್ನು ತೆಗೆದುಕೊಂಡನು. ಬಾಣವನ್ನು ಬತ್ತಳಿಕೆಯಿಂದ ತೆಗೆಯುವುದಕ್ಕಾಗಿ ನೀಡಿರುವ ಅವನ ತೋಳು ಹುತ್ತವನ್ನು ಪ್ರವೇಶಿಸುತ್ತಿರುವ ಹಾವಿನಂತೆ ಕಾಣುತ್ತಿತ್ತು. ಅವನು ತೋಳಿನಲ್ಲಿ ಹಿಡಿದಿದ್ದ ಬಾಣವೂ ಹಾವಿನ ಮರಿಯನ್ನು ಹಿಡಿದಿರುವ ದೊಡ್ಡ ಹಾವಿನಂತೆ ಪ್ರಕಾಶಿಸುತ್ತಿತ್ತು.

೧೯. ರುದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಆ ವೀರಭದ್ರನು ಬಲವಾಗಿಯೂ, ಮೊನಚಾಗಿಯೂ ಇರುವ ಆ ಬಾಣದಿಂದ ನಾಶರಹಿತನಾದ ವಿಷ್ಣುವಿನ ಹಣೆಗೆ ಬಲವಾಗಿ ಹೊಡೆದನು.

ಲಲಾಟೇಽಭಿಹತೋ ವಿಷ್ಣುಃ ಪೂರ್ವಮೇವಾವಮಾನಿತಃ ।
ಚುಕೋಪ ಗಣಪೇಂದ್ರಾಯ ಮೃಗೇಂದ್ರಾಯೇವ ಗೋವೃಷಃ ॥ ೨೦ ॥

ತತಸ್ತ್ವಶನಿಕಲ್ಪೇನ ಕ್ರೂರಾಸ್ಯೇನ ಮಹೇಷುಣಾ ।
ವಿವ್ಯಾಧ ಗಣರಾಜಸ್ಯ ಭುಜೇ ಭುಜಗಸನ್ನಿಭೇ ॥ ೨೧ ॥

ಸೋಽಪಿ ತಸ್ಯ ಭುಜೇ ಭೂಯಃ ಸೂರ್ಯಾಯುತಸಮಪ್ರಭಂ ।
ವಿಸಸರ್ಜ ಶರಂ ವೇಗಾದ್ವೀರಭದ್ರೋ ಮಹಾಬಲಃ ॥ ೨೨ ॥

ಸ ಚ ವಿಷ್ಣುಃ ಪುನರ್ಭದ್ರಂ ಭದ್ರೋ ವಿಷ್ಣುಂ ತಥಾ ಪುನಃ ।
ಸ ಚ ತಂ ಸ ಚ ತಂ ವಿಪ್ರಾಶ್ಶರೈಃ ಸ್ತಾವನುಜಘ್ನತುಃ ॥ ೨೩ ॥

ತಯೋಃ ಪರಸ್ಪರಂ ವೇಗಾಚ್ಛರಾನಾಶು ವಿಮುಂಚತೋಃ ।
ದ್ವಯೋಸ್ಸಮಭವದ್ಯುದ್ಧಂ ತುಮುಲಂ ರೋಮಹರ್ಷಣಂ ॥ ೨೪ ॥

ತದ್ದೃಷ್ಟ್ವಾ ತುಮುಲಂ ಯುದ್ಧಂ ತಯೋರೇವ ಪರಸ್ಪರಂ ।
ಹಾಹಾಕಾರೋ ಮಹಾನಾಸೀದಾಕಾಶೇ ಖೇಚರೇರಿತಃ ॥ ೨೫ ॥

೨೦. ವಿಷ್ಣುವಿನ ಹಣೆಗೆ ಮೊದಲಿನ ಸಾರಿಯೇ ಏಟುಬಿದ್ದಕಾರಣ ವಿಷ್ಣುವಿಗೆ ಅವಮಾನವಾಯಿತು. ಆದರಿಂದ ಗೂಳಿಯು ಸಿಂಹದಮೇಲೆ ರೇಗುವಂತೆ ವಿಷ್ಣುವು ವೀರಭದ್ರನಮೇಲೆ ಕೋಪಿಸಿಕೊಂಡನು.

೨೧. ಬಳಿಕ ವಿಷ್ಣುವು ವಜ್ರಾಯುಧಕ್ಕೆ ಸಮವಾದ ಕ್ರೂರವಾದ ದೊಡ್ಡ ಬಾಣದಿಂದ, ದೊಡ್ಡ ಹಾವಿನಂತೆ ನೀಳವಾಗಿರುವ ವೀರಭದ್ರನ ತೋಳಿಗೆ ಗುರಿಯಿಟ್ಟು ಹೊಡೆದನು.

೨೨–೨೪. ಬಹಳ ಬಲಿಷ್ಠನಾದ ವೀರಭದ್ರನೂ ಕೂಡ ಹತ್ತುಸಾವಿರ ಸೂರ್ಯರಂತೆ ಹೊಳೆಯುತ್ತಿರುವ ಬಾಣದಿಂದ ವಿಷ್ಣುವಿನ ತೋಳಿಗೆ ಹೊಡೆದನು. ವಿಷ್ಣುವು ವೀರಭದ್ರನನ್ನೂ ವೀರಭದ್ರನು ವಿಷ್ಣುವನ್ನೂ ಬಾರಿ ಬಾರಿಗೂ ಬಾಣಗಳಿಂದ ಪರಸ್ಪರವಾಗಿ ಹೊಡೆದಾಡುತ್ತಿದ್ದರು. ಅವರಿಬ್ಬರೂ ಅನ್ಯೋನ್ಯವಾಗಿ ಬಾಣಗಳನ್ನು 'ವೇಗದಿಂದ ಬೇಗನೆ ಬಿಡುತ್ತಾ ಯುದ್ಧಮಾಡುತ್ತಿರಲು ಆ ಯುದ್ಧವು ಇತರರಿಗೆ ರೋಮಾಂಚವನ್ನುಂಟುಮಾಡುತ್ತಾ ಬಹು ಭಯಂಕರವಾಗಿದ್ದಿತು.

೨೫. ಅವರಿಬ್ಬರೂ ಒಬ್ಬರಮೇಲೊಬ್ಬರು ಬಾಣಗಳನ್ನು ಬಿಡುತ್ತಾ ದ್ವಂದ್ವ ಯುದ್ಧವನ್ನು ಮಾಡುತ್ತಿರುವುದನ್ನು ನೋಡಿ, ಅಂತರಿಕ್ಷದಲ್ಲಿದ್ದುಕೊಂಡು ಯುದ್ಧವನ್ನು ನೋಡುತ್ತಿದ್ದ ದೇವತೆಗಳು ಹಾಹಾಕಾರವನ್ನು ಮಾಡುತ್ತಿದ್ದರು.

ತತಸ್ತ್ವನಲತುಂಡೇನ ಶರೇಣಾದಿತ್ಯವರ್ಚಸಾ ।
ವಿವ್ಯಾಧ ಸುದೃಢಂ ಭದ್ರಂ ವಿಷ್ಣೋರ್ಮಹತಿ ವಕ್ಷಸಿ ॥ ೨೬ ॥

ಸ ತು ತೀವ್ರಪ್ರಪಾತೇನ ಶರೇಣ ದೃಢಮಾಹತಃ ।
ಮಹತೀಂ ರುಜಮಾಸಾದ್ಯ ನಿಪಪಾತ ವಿಮೋಹಿತಃ ॥ ೨೭ ॥

ಪುನಃ ಕ್ಷಣಾದಿವೋತ್ಥಾಯ ಲಬ್ಧಸಂಜ್ಞಸ್ತಥಾ ಹರಿಃ ।
ಸರ್ವಾಣ್ಯಪಿ ಚ ದಿವ್ಯಾಸ್ತ್ರಾಣ್ಯಥೈನಂ ಪ್ರತ್ಯವಾಸೃಜತ್ ॥ ೨೮ ॥

ಸ ಚ ವಿಷ್ಣೋರ್ಧನುರ್ಮುಕ್ತಾನ್ಸರ್ವಾಞ್ಛರ್ವಚಮೂಪತಿಃ ।
ಸಹಸಾ ವಾರಯಾಮಾಸ ಘೋರೈಃ ಪ್ರತಿಶರೈಃ ಶರಾನ್ ॥ ೨೯ ॥

ತತೋ ವಿಷ್ಣುಸ್ಸ್ವನಾಮಾಂಕಂ ಬಾಣಮುವ್ಯಾಹತಂ ಕ್ವಚಿತ್ ।
ಸಸರ್ಜ ಕ್ರೋಧರಕ್ತಾಕ್ಷಸ್ತಮುದ್ದಿಶ್ಯ ಗಣೇಶ್ವರಂ ॥
ತಂ ಬಾಣಂ ಬಾಣವರ್ಯೇಣ ಭದ್ರೋ ಭದ್ರಾಹ್ವಯೇಣ ತು ॥ ೩೦ ॥

---

೨೬-೨೮. ಅನಂತರ ವೀರಭದ್ರನು ಸೂರ್ಯನಂತೆ ಹೊಳೆಯುತ್ತಾ ಬೆಂಕಿಯನ್ನು ಉಗುಳುತ್ತಿರುವ ಒಂದು ಬಾಣದಿಂದ ವಿಷ್ಣುವಿನ ದೊಡ್ಡದಾದ ಎದೆಗೆ ಗುರಿಯಿಟ್ಟು ಬಲವಾಗಿ ಹೊಡೆದನು. ಆ ಬಾಣದ ಬಲವಾದ ಏಟಿನಿಂದ ವಿಷ್ಣುವು ಬಹಳ ಗಾಯವನ್ನು ಹೊಂದಿ ಮೂರ್ಛಿತನಾದನು. ಆದರೂ ಒಂದು ಕ್ಷಣದಲ್ಲಿಯೇ ಮೂರ್ಛೆಯಿಂದ ತಿಳಿದೆದ್ದು ಪುನಃ ಯುದ್ಧಕ್ಕೆ ಸಿದ್ಧನಾಗಿ ಉತ್ತಮವಾದ ಅನೇಕ ಅಸ್ತ್ರಗಳನ್ನು ವೀರಭದ್ರನಮೇಲೆ ಬಿಟ್ಟನು.

೨೯. ಶಿವನ ಸೇನಾಪತಿಯಾದ ವೀರಭದ್ರನೂ ಸಹ ವಿಷ್ಣುವಿನ ಧನುಸ್ಸಿನಿಂದ ತನ್ನ ಕಡೆಗೆ ಬರುತ್ತಿರುವ ಅಸ್ತ್ರಗಳೆಲ್ಲಕ್ಕೂ ಪ್ರತಿಯಾದ ಅಸ್ತ್ರಗಳನ್ನು ಬಿಡುತ್ತಾ ಅವೆಲ್ಲವನ್ನೂ ತನಗೆ ತೊಂದರೆಯಾಗದಂತೆ ತಪ್ಪಿಸಿಕೊಳ್ಳುತ್ತಿದ್ದನು.

೩೦-೩೧. ಅನಂತರದಲ್ಲಿ ವಿಷ್ಣುವು ತನ್ನ ಹೆಸರನ್ನು ಕೆತ್ತಿರುವ ಒಂದು ಬಾಣವನ್ನು ತೆಗೆದುಕೊಂಡು ಕೋಪದಿಂದ ಕಣ್ಣನ್ನು ಕೆಂಪಗೆ ಮಾಡಿಕೊಂಡು ಗಣೇಶ್ವರನಾದ ವೀರಭದ್ರನನ್ನು ಆ ಬಾಣದಿಂದ ಹೊಡೆದನು. ವೀರಭದ್ರನೂ ತನ್ನ ಹೆಸರನ್ನು ಕೆತ್ತಿರುವ ಅದಕ್ಕೆ ಸಮನಾದ ಬಾಣವನ್ನು ಬಿಟ್ಟು, ಅದು ತನ್ನ ಹತ್ತಿರಕ್ಕೆ ಬರುವುದಕ್ಕೆ ಮುಂಚಿತವಾಗಿ ದಾರಿಯಲ್ಲಿಯೇ ಅದನ್ನು ಚೂರು ಚೂರಾಗಿ ಕತ್ತರಿ

ಆಸ್ಪ್ರಾಪ್ತಮೇವ ಭಗವಾಞ್ಛಿಚ್ಛೇದ ಶತಧಾ ಪಥಿ ।
ಅಥೈಕೇನೇಷುಣಾ ಶಾರ್ಙ್ಗಂ ದ್ವಾಭ್ಯಾಂ ಪಕ್ಷೌ ಗರುತ್ಮತಃ ॥ ೩೧ ॥

ನಿಮೇಷಾದೇವ ಚಿಚ್ಛೇದ ತದದ್ಭುತಮಿವಾಭವತ್ ।
ತತೋ ಯೋಗಬಲಾದ್ವಿಷ್ಣುರ್ದೇಹಾದ್ದೇವಾನ್ಸುದಾರುಣಾನ್ ॥ ೩೨ ॥

ಶಂಖಚಕ್ರಗದಾಹಸ್ತಾನ್ವಿಸಸರ್ಜ ಸಹಸ್ರಶಃ ।
ಸರ್ವಾಂಸ್ತಾನ್ಕ್ಷಣಮಾತ್ರೇಣ ತ್ರೈಪುರಾನಿವ ಶಂಕರಃ ॥ ೩೩ ॥

ನಿರ್ದದಾಹ ಮಹಾಬಾಹುರ್ನೇತ್ರಸೃಷ್ಟೇನ ವಹ್ನಿನಾ ।
ತತಃ ಕ್ರುದ್ಧತರೋ ವಿಷ್ಣುಶ್ಚಕ್ರಮುದ್ಯಮ್ಯ ಸತ್ವರಃ ॥ ೩೪ ॥

ತಸ್ಮಿನ್ವೀರೇ ಸಮುತ್ಸ್ರಷ್ಟುಂ ತದಾನೀಮುದ್ಯತೋಽಭವತ್ ।
ತಂ ದೃಷ್ಟ್ವಾ ಚಕ್ರಮುದ್ಯಮ್ಯ ಪುರತಃ ಸಮುಪಸ್ಥಿತಂ ॥ ೩೫ ॥

---

ಸಿದನು. ಬಳಿಕ ವೀರಭದ್ರನು ಒಂದು ಬಾಣದಿಂದ ವಿಷ್ಣುವಿನ ಧನುಸ್ಸನ್ನೂ, ಎರಡು ಬಾಣಗಳಿಂದ ಗರುಡನ ರೆಕ್ಕೆಯನ್ನೂ, ಒಂದು ರೆಪ್ಪೆ ಹೊಡೆಯುವುದರೊಳಗಾಗಿ ಕತ್ತರಿಸಿದನು. ಇದು ನೋಡುವವರಿಗೆ ಬಹಳ ಆಶ್ಚರ್ಯವನ್ನುಂಟು ಮಾಡಿತು.

೩೨-೩೩. ಅನಂತರ ವಿಷ್ಣುವು ತನ್ನ ಯೋಗಸಾಮರ್ಥ್ಯದಿಂದ ತನ್ನೊಡನೆ ಯುದ್ಧಮಾಡುವುದಕ್ಕಾಗಿ ಕ್ರೂರರಾಗಿಯೂ, ತನ್ನಂತೆ ಶಂಖ, ಚಕ್ರ, ಗಧಾಯುಧಗಳನ್ನು ಹಿಡಿದಿರುವವರಾಗಿಯೂ, ಇರುವ ದೇವತೆಗಳನ್ನು ಸಾವಿರಗಟ್ಟಲೆಯಾಗಿ ಸೃಷ್ಟಿಮಾಡಿದನು. ಹಿಂದೆ ಶಿವನು ತ್ರಿಪುರವನ್ನು ಸುಟ್ಟ ಹಾಗೆ ವೀರಭದ್ರನು ತನ್ನ ಕಣ್ಣಿನಿಂದ ಹೊರಹೊರಟ ಅಗ್ನಿಯಿಂದಲೇ ಒಂದು ಕ್ಷಣದ ಒಳಗೆ ಅವರೆಲ್ಲರನ್ನೂ ಸುಟ್ಟು ನಾಶಮಾಡಿದನು.

೩೪-೩೮. ಅನಂತರ ವಿಷ್ಣುವು ಮೊದಲಿಗಿಂತಲೂ ಹೆಚ್ಚಾಗಿ ಕೋಪಗೊಂಡು ಬೇಗನೆ ತನ್ನ ಚಕ್ರಾಯುಧವನ್ನು ತೆಗೆದುಕೊಂಡು ಆದರಿಂದ ವೀರನಾದ ಆ ವೀರಭದ್ರನನ್ನು ಹೊಡೆಯುವುದಕ್ಕೆ ಸಿದ್ಧನಾದನು. ಇದನ್ನು ವೀರಭದ್ರನು ನೋಡಿ

ಸ್ಮಯನ್ನಿವ ಗಣೇಶಾನೋ ವ್ಯಷ್ಟಂಭಯದಯತ್ನತಃ ।
ಸ್ತಂಭಿತಾಂಗಸ್ತು ತಚ್ಚಕ್ರಂ ಘೋರಮಪ್ರತಿಮಂ ಕ್ವಚಿತ್ ॥ ೩೬ ॥

ಇಚ್ಛನ್ನಪಿ ಸಮುತ್ಸ್ರಷ್ಟುಂ ನ ವಿಷ್ಣುರಭವತ್ಕ್ಷಮಃ ।
ಶ್ವಸನ್ನಿವೈಕಮುದ್ಧೃತ್ಯ ಬಾಹುಂ ಚಕ್ರಸಮನ್ವಿತಂ ॥ ೩೭ ॥

ಅತಿಷ್ಠದಲಸೋ ಭೂತ್ವಾ ಪಾಷಾಣಮಿವ ನಿಶ್ಚಲಃ ।
ವಿಶರೀರೋ ಯಥಾ ಜೀವೋ ವಿಶೃಂಗೋ ವಾ ಯಥಾ ವೃಷಃ ।
ವಿದಂಷ್ಟ್ರಶ್ಚ ಯಥಾ ಸಿಂಹಸ್ತಥಾ ವಿಷ್ಣುರವಸ್ಥಿತಃ ॥ ೩೮ ॥

ತಂ ದೃಷ್ಟ್ವಾ ದುರ್ದಶಾಪನ್ನಂ ವಿಷ್ಣುಮಿಂದ್ರಾದಯಃ ಸುರಾಃ ।
ಸಮುನ್ನದ್ಧಾ ಗಣೇಂದ್ರೇಣ ಮೃಗೇಂದ್ರೇಣೇವ ಗೋವೃಷಾಃ ॥ ೩೯ ॥

ಪ್ರಗೃಹೀತಾಯುಧಾ ಯೋದ್ಧುಂ ಕ್ರುದ್ಧಾಃ ಸಮುಪತಸ್ಥಿರೇ ।
ತಾನ್ದೃಷ್ಟ್ವಾ ಸಮರೇ ಭದ್ರಃ ಕ್ಷುದ್ರಾನಿವ ಹರಿರ್ಮೃಗಾನ್ ॥ ೪೦ ॥

---

ಆಶ್ಚರ್ಯಪಡುತ್ತಾ, ಅನಾಯಾಸವಾಗಿಯೇ ಆ ವಿಷ್ಣುವಿನ ತೋಳುಗಳನ್ನು ಅಲುಗಾಡದಂತೆ ಸ್ತಂಭಿಸಿದನು. ಆಗ ವಿಷ್ಣುವು ತನ್ನ ಶರೀರವು ಅಲುಗಾಡುವುದಕ್ಕೂ ಆಗದೆ ಇದ್ದಾಗ್ಯೂ ಅಸದೃಶವಾದ ಆ ಚಕ್ರಾಯುಧವನ್ನು ವೀರಭದ್ರನಮೇಲೆ ಉಪಯೋಗಿಸುವ ಇಚ್ಛೆಯನ್ನು ಮಾತ್ರ ಬಿಡಲಿಲ್ಲ. ಆದುದರಿಂದ ಚಕ್ರಾಯುಧವನ್ನು ಹಿಡಿದಿರುವ ಒಂದು ತೋಳನ್ನು ಮಾತ್ರ ಮೇಲಕ್ಕೆತ್ತಿಕೊಂಡು ನಿಟ್ಟುಸುರುಬಿಡುತ್ತಾ ಅಲ್ಲಾಡದಿರುವ ಕಲ್ಲಿನ ಹಾಗೆಯೂ, ಶರೀರ ಸಂಬಂಧವಿಲ್ಲದಿರುವ ಜೀವನಂತೆಯೂ, ಕೊಂಬಿಲ್ಲದ ಗೂಳಿಯಂತೆಯೂ, ಕೋರೆ ಹಲ್ಲುಗಳಿಲ್ಲದಿರುವ ಸಿಂಹದಂತೆಯೂ, ನಿಶ್ಚೇಷ್ಟಿತನಾಗಿ ಏನನ್ನೂ ಮಾಡಲಾರದೆ ಸುಮ್ಮನೆ ನಿಂತಿದ್ದನು.

೩೯. ವಿಷ್ಣುವಿನ ಈ ದುರವಸ್ಥೆಯನ್ನು ನೋಡಿ ಇಂದ್ರನೇ ಮೊದಲಾದ ದೇವತೆಗಳು, ತಮ್ಮ ತಮ್ಮ ಆಯುಧಗಳನ್ನು ಹಿಡಿದುಕೊಂಡು ಗೂಳಿಗಳು ಸಿಂಹದ ಸಂಗಡ ಹೋರಾಡಲು ಸಿದ್ಧವಾಗುವಂತೆ ಕೋಪದಿಂದ ಗಣೇಶ್ವರನಾದ ವೀರಭದ್ರನೊಡನೆ ಯುದ್ಧಮಾಡಲು ಸಿದ್ಧರಾದರು.

೪೦-೪೧. ರುದ್ರನ ಸಾಕ್ಷಾದ್ರೂಪದಿಂದಿರುವ ಆ ವೀರಭದ್ರನು ಕ್ಷುದ್ರ

ಸಾಕ್ಷಾದ್ರುದ್ರತನುರ್ವೀರೋ ವರವೀರಗಣಾವೃತಃ ।
ಅಟ್ಟಹಾಸೇನ ಘೋರೇಣ ವ್ಯಷ್ಟಂಭಯದನಿಂದಿತಃ ॥ ೪೧ ॥

ತಥಾ ಶತಮುಖಸ್ಯಾಪಿ ಸವಜ್ರೋ ದಕ್ಷಿಣಃ ಕರಃ ।
ಸಿಸೃಕ್ಷೋರಿವ ಉದ್ವಜ್ರಂ ಚಿತ್ರೀಕೃತ ಇವಾಭವತ್ ॥ ೪೨ ॥

ಅನ್ಯೇಷಾಮಪಿ ಸರ್ವೇಷಾಂ ಸರಕ್ತಾ ಅಪಿ ಬಾಹವಃ ।
ಅಲಸಾನಾಮಿವಾರಂಭಾಸ್ತಾದೃಶಃ ಪ್ರತಿಯಾಂತ್ಯತ ॥ ೪೩ ॥

ಏವಂ ಭಗವತಾ ತೇನ ವ್ಯಾಹತಾಶೇಷವೈಭವಾತ್ ।
ಅಮರಾಃ ಸಮರೇ ತಸ್ಯ ಪುರತಃ ಸ್ಥಾತುಮಕ್ಷಮಾಃ ॥ ೪೪ ॥

ಸ್ತಬ್ಧೈರವಯವೈರೇವ ದುದ್ರುವುರ್ಭಯವಿಹ್ವಲಾಃ ।
ಸ್ಥಿತಿಂ ನ ಚಕ್ರಿರೇ ಯುದ್ಧೇ ವೀರತೇಜೋಭಯಾಕುಲಾಃ ॥ ೪೫ ॥

ವಿದ್ರುತಾಂಸ್ತ್ರಿದಶಾನ್ವೀರಾನ್ವೀರಭದ್ರೋ ಮಹಾಭುಜಃ ।
ವಿವ್ಯಾಧ ನಿಶಿತೈರ್ಬಾಣೈರ್ಮೇಘೋ ವರ್ಷೈರಿವಾಚಲಾನ್ ॥ ೪೬ ॥

---

ಮೃಗಗಳನ್ನು ಸಿಂಹವು ನೋಡುವಂತೆ ಅವರನ್ನು ನೋಡುತ್ತಾ ಘೋರಾಟ್ಟಹಾಸದಿಂದ ಅವರೆಲ್ಲರನ್ನೂ ಕೊಂಚವೂ ಆಯಾಸವಿಲ್ಲದೆ ಸ್ತಂಭಿಸಿದನು.

೪೨-೪೩. ಇಂದ್ರನ ಬಲಗೈಯ್ಯಿಯು ವಜ್ರಾಯುಧವನ್ನು ಹಿಡಿದಿದ್ದರೂ ಅದನ್ನು ಬಿಡಲಸಮರ್ಥವಾಗಿ ಚಿತ್ರದಲ್ಲಿ ಬರೆದ ಬೊಂಬೆಯಂತೆ ಸುಮ್ಮನೆ ನಿಂತು ಹೋಯಿತು. ಆಯಾಯ ಆಯುಧಗಳನ್ನು ಹಿಡಿದಿದ್ದ ಇತರ ದಿಕ್ಪಾಲಕರ ತೋಳುಗಳೂ ಸೋಮಾರಿಗಳ ಕಾರ್ಯದಂತೆ ಹಾಗೆಯೇ ನಿಂತುಹೋದುವು.

೪೪–೪೫. ಷಡ್ಗುಣೈಶ್ವರ್ಯ ಸಂಪನ್ನನಾದ ಆ ವೀರಭದ್ರನ ತೇಜಸ್ಸಿನಿಂದ ಆ ದೇವತೆಗಳ ಮಹಿಮೆಯೆಲ್ಲವೂ ನಾಶವಾಗಿ ಅವರೆಲ್ಲರೂ ಆ ವೀರಭದ್ರನ ಮುಂದೆ ಯುದ್ಧದಲ್ಲಿ ನಿಲ್ಲುವುದಕ್ಕೂ ಆಗದಂತಾಯಿತು. ತಮ್ಮ ತಮ್ಮ ಅಂಗಗಳು ಸ್ತಂಭಿತವಾಗಲು, ಆ ವೀರಭದ್ರನ ತೇಜಸ್ಸನ್ನು ತಡೆಯಲಾರದೆ ಯುದ್ಧದಲ್ಲಿ ಅವನ ಮುಂದೆ ನಿಲ್ಲಲು ಹೆದರಿಕೆಯಿಂದ ಹಾಗೆಯೇ ಪಲಾಯನಮಾಡಿದರು.

೪೬. ಮಹಾಬಾಹುವಾದ ಆ ವೀರಭದ್ರನು ಶೂರರಾದ ದೇವತೆಗಳೆಲ್ಲರೂ ಓಡಿಹೋಗುತ್ತಿರುವುದನ್ನು ನೋಡಿ ಮೇಘವು ಬೆಟ್ಟದಮೇಲೆ ಮಳೆಯನ್ನು ಸುರಿಸುವಂತೆ ಅವರಮೇಲೆ ಹರಿತವಾದ ಬಾಣಗಳ ಮಳೆಯನ್ನು ಸುರಿಸಿದನು

ಬಹವಸ್ತಸ್ಯ ವೀರಸ್ಯ ಬಾಹವಃ ಪರಿಘೋಪಮಾಃ ।
ಶಸ್ತ್ರೈಶ್ಚಕಾಶಿರೇ ದೀಪ್ತೈಃ ಸಾಗ್ನಿಜ್ವಾಲಾ ಇವೋರಗಾಃ ॥ ೪೭ ॥

ಅಸ್ತ್ರಶಸ್ತ್ರಾಣ್ಯನೇಕಾನಿ ಸ ವೀರೋ ವಿಸೃಜನ್ಬಭೌ ।
ವಿಸೃಜನ್ಸರ್ವಭೂತಾನಿ ಯಥಾದೌ ವಿಶ್ವಸಂಭವಃ ॥ ೪೮ ॥

ಯಥಾ ರಶ್ಮಿಭಿರಾದಿತ್ಯಃ ಪ್ರಚ್ಛಾದಯತಿ ಮೇದಿನೀಂ ।
ತಥಾ ವೀರಃ ಕ್ಷಣಾದೇವ ಶರೈಃ ಪ್ರಾಚ್ಛಾದಯದ್ದಿಶಃ ॥ ೪೯ ॥

ಖಮಂಡಲೇ ಗಣೇಂದ್ರಸ್ಯ ಶರಾಃ ಕನಕಭೂಷಿತಾಃ ।
ಉತ್ಪತಂತಸ್ತಡಿದ್ರೂಪೈರುಪಮಾನಪದಂ ಯಯುಃ ॥ ೫೦ ॥

ಮಹಾಂತಸ್ತೇ ಸುರಗಣಾನ್ಮಂಡೂಕಾನಿವ ಡುಂಡುಭಾಃ ।
ಪ್ರಾಣೈರ್ವಿಯೋಜಯಾಮಾಸುಃ ಪಪುಶ್ಚ ರುಧಿರಾಸವಂ ॥ ೫೧ ॥

೪೭. ಪರಿಘಾಯುಧದಂತಿರುವ ಆ ವೀರಭದ್ರನ ಅನೇಕ ತೋಳುಗಳು ಅಗ್ನಿಜ್ವಾಲೆಯನ್ನು ಗುಳುತ್ತಿರುವ ಸರ್ಪಗಳಂತೆ ತೋರುತ್ತಿದ್ದವು.

೪೮. ಅನೇಕ ಆಯುಧಗಳನ್ನು ಹಿಡಿದು ಯುದ್ಧಮಾಡುತ್ತಿದ್ದ ವೀರಭದ್ರನು ಪ್ರಪಂಚವನ್ನು ಸೃಷ್ಟಿಮಾಡುವ ಕಾಲದಲ್ಲಿ ಪ್ರಾಣಿಗಳೆಲ್ಲವನ್ನೂ ಸೃಷ್ಟಿಮಾಡುತ್ತಿರುವ ಬ್ರಹ್ಮನಂತೆ ಒಪ್ಪುತ್ತಿದ್ದನು.

೪೯. ಸೂರ್ಯನು ತನ್ನ ಕಿರಣಗಳಿಂದ ಭೂಮಿಯೆಲ್ಲವನ್ನೂ ಆವರಿಸುವ ಹಾಗೆ ಶೂರನಾದ ಆ ವೀರಭದ್ರನು ಕ್ಷಣಮಾತ್ರದಲ್ಲಿ ತನ್ನ ಬಾಣಗಳಿಂದ ಎಲ್ಲಾ ದಿಕ್ಕುಗಳನ್ನೂ ಮುಚ್ಚಿದನು.

೫೦. ಗಣೇಶ್ವರನಾದ ವೀರಭದ್ರನು ಬಿಡುತ್ತಿದ್ದ ಚಿನ್ನದ ಬಾಣಗಳು ಮೇಲಕ್ಕೆ ಹಾರಿ ಆಕಾಶದಲ್ಲಿ ಮಿಂಚಿನಲ್ಲಿ ಹೊಳೆಯುತ್ತಿದ್ದವು.

೫೧. ಆ ಬಾಣಗಳಿಂದ ಏಟುತಿಂದ ದೇವತೆಗಳು, ಹಾವಿನಿಂದ ಹಿಡಿಯಲ್ಪಟ್ಟ ಕಪ್ಪೆಗಳಂತೆ ರಕ್ತವನ್ನು ಕಾರುತ್ತಾ ಭೂಮಿಯಮೇಲೆ ಬಿದ್ದು ಮೃತರಾದರು.

ನಿಕೃತ್ತಬಾಹವಃ ಕೇಚಿತ್ಕೇಚಿಲ್ಲೂನವರಾನನಾಃ ।
ಪಾರ್ಶ್ವೇ ವಿದಾರಿತಾಃ ಕೇಚಿನ್ನಿಪೇತುರಮರಾ ಭುವಿ ॥ ೫೨ ॥

ವಿಶಿಖೋನ್ಮಥಿತೈರ್ಗಾತ್ರೈರ್ಬಹುಭಿಶ್ಛಿನ್ನಸಂಧಿಭಿಃ ।
ವಿವೃತ್ತನಯನಾಃ ಕೇಚಿನ್ನಿಪೇತುರ್ಭೂತಲೇ ಮೃತಾಃ ।
ಗಾಂ ಪ್ರವೇಷ್ಟುಮಿವೇಚ್ಛಂತಃ ಖಂ ಗಂತುಮಿವ ಲಿಪ್ಸವಃ ॥ ೫೩ ॥

ಅಲಬ್ಧಾತ್ಮನಿರೋಧಾನಾಂ ವ್ಯಲೀಯಂತ ಪರಸ್ಪರಂ ।
ಭೂಮೌ ಕೇಚಿತ್ಪ್ರವಿವಿಶುಃ ಪರ್ವತಾನಾಂ ಗುಹಾಃ ಪರೇ ॥ ೫೪ ॥

ಅಪರೇ ಜಗ್ಮುರಾಕಾಶಂ ಪರೇ ಚ ವಿವಿಶುರ್ಜಲಂ ।
ತಥಾ ಸಂಭಿನ್ನಸರ್ವಾಂಗೈಸ್ಸ ವೀರಃ ಸ್ತ್ರಿದಶೈರ್ಬಭೌ ॥ ೫೫ ॥

೫೨. ಆಗ ದೇವತೆಗಳಲ್ಲಿ ಕೆಲವರಿಗೆ ತೋಳುಗಳು ಕತ್ತರಿಸಿಹೋದುವು, ಕೆಲವರಿಗೆ ಮುಖಗಳು ಕತ್ತರಿಸಿ ಹೋದುವು, ಕೆಲವರಿಗೆ ಪಾರ್ಶ್ವಗಳು ಸೀಳಿದವು. ಕೆಲವು ದೇವತೆಗಳು ಭೂಮಿಯಲ್ಲಿ ಬಿದ್ದರು.

೫೩. ಕೆಲವು ದೇವತೆಗಳ ಶರೀರಗಳು ಬಾಣಗಳಿಂದ ಕತ್ತರಿಸಿ ಹೋಗಿದ್ದವು. ಸಂಧಿ ಕೀಲುಗಳೆಲ್ಲವೂ ಕಿತ್ತುಹೋಗಿದ್ದವು. ತೋಳುಗಳು ಕತ್ತರಿಸಿಹೋಗಿದ್ದವು, ಕಣ್ಣುಗಳನ್ನು ಮೇಲಕ್ಕೆ ಬಿಟ್ಟುಕೊಂಡು ಮೃತರಾಗಿ ಭೂಮಿಯಲ್ಲಿ ಬಿದ್ದಿರುವುದನ್ನು ನೋಡಿದರೆ ಆಕಾಶಕ್ಕೆ ಹೋಗುವುದಕ್ಕಾಗಿ ಆಕಾಶವನ್ನು ನೋಡುತ್ತಿರುವಂತೆ ಭಾಸವಾಗುತ್ತಿತ್ತು.

೫೪. ದೇವತೆಗಳಲ್ಲಿ ಓಡಿಹೋಗಿ ಅವಿತುಕೊಳ್ಳಲು ಅವಕಾಶವಿಲ್ಲದವರು ಅಲ್ಲಲ್ಲಿಯೇ ಒಬ್ಬರೊಬ್ಬರಿಗೆ ಮರೆಮಾಡಿಕೊಂಡು ಅವಿತುಕೊಂಡರು. ಕೆಲವರು ಭೂಮಿಯಲ್ಲಿ ಅವಿತುಕೊಂಡರು, ಕೆಲವರು ಪರ್ವತದ ಗುಹೆಗಳಲ್ಲಿ ನಿಂತರು, ಮತ್ತೆ ಕೆಲವರು ಆಕಾಶಕ್ಕೆ ನೆಗೆದರು, ಇನ್ನೂ ಕೆಲವರು ನೀರಿನಲ್ಲಿ ಮುಳುಗಿದರು.

೫೫. ವೀರನಾದ ವೀರಭದ್ರನು ದೇವತೆಗಳ ಅವಯವಗಳನ್ನು ಕತ್ತರಿಸಿ ಪ್ರಳಯಕಾಲದ ಕಾಲಭೈರವನಂತೆ ಪ್ರಕಾಶಿಸುತ್ತಿದ್ದನು. ಮತ್ತು ಅವನು ತ್ರಿಪುರವನ್ನು ನಾಶಪಡಿಸಿದ ಶಿವನಂತೆಯೂ ಕಾಣಿಸುತ್ತಿದ್ದನು.

ಪರಿಗ್ರಸ್ತಾಃ ಪ್ರಜಾವರ್ಗೋ ಭಗವಾನಿವ ಭೈರವಃ ।
ದಗ್ಧತ್ರಿಪುರಸಂವ್ಯೂಹಸ್ತ್ರಿಪುರಾರಿರ್ಯಥಾಭವತ್ ॥ ೫೬ ॥

ಏವಂ ದೇವಬಲಂ ಸರ್ವಂ ದೀನಂ ಬೀಭತ್ಸದರ್ಶನಂ ।
ಗಣೇಶ್ವರಸಮುತ್ಪನ್ನಂ ಕೃಪಣಂ ವಪುರಾದದೇ ॥ ೫೭ ॥

ತದಾ ತ್ರಿದಶವೀರಾಣಾಮಸೃಕ್ಸಲಿಲವಾಹಿನೀ ।
ಪ್ರಾವರ್ತತ ನದೀ ಘೋರಾ ಪ್ರಾಣಿನಾಂ ಭಯಶಂಸಿನೀ ॥ ೫೮ ॥

ರುಧಿರೇಣ ಪರಿಕ್ಲಿನ್ನಾ ಯಜ್ಞಭೂಮಿಸ್ತದಾ ಬಭೌ ।
ರಕ್ತಾರ್ದ್ರವಸನಾ ಶ್ಯಾಮಾ ಹತಶುಂಭೇವ ಕೌಶಿಕೀ ॥ ೫೯ ॥

ತಸ್ಮಿನ್ಮಹತಿ ಸಂವೃತ್ತೇ ಸಮರೇ ಭೃಶದಾರುಣೇ ।
ಭಯೇನೇವ ಪರಿತ್ರಸ್ತಾ ಪ್ರಚಚಾಲ ವಸುಂಧರಾ ॥ ೬೦ ॥

೫೬-೫೭. ಇವನು ನಾಶಮಾಡಿದ ಯಜ್ಞವು ಇತರರು ನೋಡುವುದಕ್ಕೆ ಬಹು ದುಃಖಕರವಾದ ರೀತಿಯಲ್ಲಿತ್ತು. ಅಳಿದುಳಿದ ದೇವಸೇನೆಯು ಬಹು ಶೋಚನೀಯ ಸ್ಥಿತಿಯಲ್ಲಿದ್ದಿತು. ದೇವತೆಗಳ ಅವಯವಗಳು ಛಿನ್ನಾಭಿನ್ನವಾಗಿ ಎಲ್ಲೆಲ್ಲಿಯೂ ಬಿದ್ದಿರುವುದನ್ನು ನೋಡಲು ಬಹು ಅಸಹ್ಯವಾಗಿತ್ತು. ಗಣೇಶ್ವರನಾದ ಇವನಿಂದ ಕತ್ತರಿಸಲ್ಪಟ್ಟ ಅವಯವಗಳನ್ನು ಹೊಂದಿರುವ ದೇವತೆಗಳ ಸೇನೆಯು ನೋಡಲು ಅಸಹ್ಯಕರವಾದ ಸ್ಥಿತಿಯನ್ನು ಹೊಂದಿತ್ತು.

೫೮. ಆಗ ಶೂರರಾದ ದೇವತೆಗಳ ಶರೀರದಿಂದ ಹೊರಹೊರಟ ರಕ್ತವು ದೊಡ್ಡ ನದಿಯಾಗಿ ಪ್ರಾಣಿಗಳಿಗೆ ಭಯವನ್ನುಂಟುಮಾಡುತ್ತಾ ಆ ಯುದ್ಧ ಭೂಮಿಯಲ್ಲಿ ಹರಿಯುತ್ತಿದ್ದಿತು.

೫೯. ರಕ್ತದಿಂದ ನೆನೆದುಹೋಗಿದ್ದ ಯಜ್ಞಭೂಮಿಯು, ಹಿಂದೆ ಕೌಶಿಕಿಯು ಶುಂಭನನ್ನು ಸಂಹಾರಮಾಡಿ ಬಂದಾಗ ರಕ್ತದಿಂದ ನೆನೆದಿರುವ ಬಟ್ಟೆಯನ್ನು ಧರಿಸಿಕೊಂಡಿರುವಂತೆ ಕಾಣುತ್ತಿತ್ತು.

೬೦-೬೧. ಆ ಮಹಾಘೋರವಾದ ಯುದ್ಧದಲ್ಲಿ ಯೋಧರು ಮಾಡುತ್ತಿದ್ದ ಆರ್ಭಟದಿಂದ ಭೂಮಿಯು ಹೆದರಿದಂತೆ ನಡುಗಿತು. ಸಮುದ್ರವು ತನ್ನ ದೊಡ್ಡ

ಮಹೋರ್ಮಿಕಲಿಲಾವರ್ತಶ್ಚುಕ್ಷುಭೇ ಚ ಮಹೋದಧಿಃ ।
ಪೇತುಶ್ಚೋಲ್ಕಾ ಮಹೋತ್ಪಾತಾಃ ಶಾಖಾಶ್ಚ ಮುಮುಚುರ್ದ್ರುಮಾಃ ॥ ೬೧ ॥

ಅಪ್ರಸನ್ನಾ ದಿಶಃ ಸರ್ವಾಃ ಪವನಶ್ಚಾಶಿವೋ ವವೌ ।
ಅಹೋ ವಿಧಿವಿಪರ್ಯಾಸಸ್ತ್ವಶ್ವಮೇಧೋಽಯಮಧ್ವರಃ ॥
ಯಜಮಾನಸ್ತ್ವಯಂ ದಕ್ಷೋ ಬ್ರಹ್ಮಪುತ್ರಃ ಪ್ರಜಾಪತಿಃ ॥ ೬೨ ॥

ಧರ್ಮಾದಯಸ್ಸದಸ್ಯಾಶ್ಚ ರಕ್ಷಿತಾ ಗರುಡಧ್ವಜಃ ।
ಭಾಗಾಂಶ್ಚ ಪ್ರತಿಗೃಹ್ಣಂತಿ ಸಾಕ್ಷಾದಿಂದ್ರಾದಯಃ ಸುರಾಃ ॥ ೬೩ ॥

ತಥಾಪಿ ಯಜಮಾನಸ್ಯ ಯಜ್ಞಸ್ಯ ಚ ಸಹರ್ತ್ವಿಜಃ ।
ಸದ್ಯ ಏವ ಶಿರಶ್ಛೇಧಸ್ಸಾಧು ಸಂಪದ್ಯತೇ ಫಲಂ ॥ ೬೪ ॥

ತಸ್ಮಾನ್ನಾವೇದನಿರ್ದಿಷ್ಟಂ ನ ಚೇಶ್ವರಬಹಿಷ್ಕೃತಂ ।
ನಾಸತ್ಪರಿಗೃಹೀತಂ ಚ ಕರ್ಮ ಕುರ್ಯಾತ್ಕದಾಚನ ॥ ೬೫ ॥

---

ಅಲೆಗಳೊಡನೆಯೂ, ಸುಳಿಗಳೊಡನೆಯೂ, ಅಲ್ಲೋಲಕಲ್ಲೋಲವಾಯಿತು. ದೊಡ್ಡ ಉತ್ಪಾತಗಳನ್ನು ಸೂಚಿಸುವ ಕೊಳ್ಳಿಗಳು ನೆಲಕ್ಕೆ ಬಿದ್ದುವು.

೬೨. ದಿಕ್ಕುಗಳೆಲ್ಲವೂ ಮಲಿನವಾಗಿದ್ದವು. ಗಾಳಿಗಳು ಇತರರಿಗೆ ದುಃಖವನ್ನುಂಟುಮಾಡುವಂತೆ ವೇಗವಾಗಿ ಬೀಸುತ್ತಿದ್ದವು.

೬೩-೬೪. ಆಹಾ ! ವಿಧಿವಿಪರ್ಯಾಸವನ್ನೇನೆಂದು ಹೇಳಲಿ ? ಆಗ ನಡೆಯುತ್ತಿದ್ದ ಯಜ್ಞವು ಅಶ್ವಮೇಧ ಯಜ್ಞವು. ಇದನ್ನು ನಡೆಸುವವನು ಬ್ರಹ್ಮನ ಮಗನಾದ ದಕ್ಷಬ್ರಹ್ಮನು. ಧರ್ಮನೇ ಮೊದಲಾದ ದೇವತೆಗಳೇ ಇದರಲ್ಲಿ ಸದಸ್ಯರು. ಇದನ್ನು ವಿಷ್ಣುವೇ ಕಾಪಾಡುವವನು. ಇಂದ್ರನೇ ಮೊದಲಾದ ದೇವತೆಗಳೇ ಪ್ರತ್ಯಕ್ಷವಾಗಿ ಬಂದು ತಮ್ಮ ಹವಿರ್ಭಾಗಗಳನ್ನು ತೆಗೆದುಕೊಳ್ಳುತ್ತಿದ್ದರು. ಹೀಗಿದ್ದಾಗ್ಯೂ ದೈವಗತಿಯು ಅನುಕೂಲವಾಗಿಲ್ಲದ್ದರಿಂದ ಋತ್ವಿಕ್ಕುಗಳಿಗೂ ಯಜ್ಞದ ಯಜಮಾನನಿಗೂ ಶಿರಚ್ಛೇದವೇ ಆ ಕ್ಷಣದಲ್ಲಿ ಯಜ್ಞದ ಫಲವಾಗಿ ಪರಿಣಮಿಸಿತು.

೬೫. ಆದ್ದರಿಂದ ವೇದದಲ್ಲಿ ಹೇಳದೆ ಇರುವುದನ್ನೂ, ಈಶ್ವರನ ಪೂಜೆಯಿಲ್ಲದ್ದನ್ನೂ, ಸತ್ಪುರುಷರು ಮಾಡದಿರುವುದನ್ನೂ, ಯಾವಾಗಲೂ ಮಾಡಬಾರದು.

ಕೃತ್ವಾಪಿ ಸುಮಹತ್ಪುಣ್ಯಮಿಷ್ಟ್ವಾ ಯಜ್ಞಶತೈರಪಿ ।
ನ ತತ್ಫಲಮವಾಪ್ನೋತಿ ಭಕ್ತಿಹೀನೋ ಮಹೇಶ್ವರೇ ॥ ೬೬ ॥

ಕೃತ್ವಾಪಿ ಸುಮಹತ್ಪಾಪಂ ಭಕ್ತ್ಯಾ ಯಜತಿ ಯಶ್ಶಿವಂ ।
ಮುಚ್ಯತೇ ಪಾತಕೈಃ ಸರ್ವೈರ್ನಾತ್ರ ಕಾರ್ಯಾ ವಿಚಾರಣಾ ॥ ೬೭ ॥

ಬಹುನಾತ್ರ ಕಿಮುಕ್ತೇನ ವೃಥಾ ದಾನಂ ವೃಥಾ ತಪಃ ।
ವೃಥಾ ಯಜ್ಞೋ ವೃಥಾ ಹೋಮಃ ಶಿವನಿಂದಾರತಸ್ಯ ತು ॥ ೬೮ ॥

ತತಃ ಸನಾರಾಯಣಕಾಸ್ಸರುದ್ರಾಃ
ಸಲೋಕಪಾಲಾಸ್ಸಮರೇ ಸುರೌಘಾಃ ।
ಗಣೇಂದ್ರಚಾಪಚ್ಯುತಬಾಣವಿದ್ಧಾಃ
ಪ್ರದುದ್ರುವುರ್ಗಾಢರುಜಾಭಿಭೂತಾಃ ॥ ೬೯ ॥

ಚೇಲುಃ ಕ್ವಚಿತ್ಕೇಚನ ಶೀರ್ಣಕೇಶಾಃ
ಸೇದುಃ ಕ್ವಚಿತ್ಕೇಚನ ದೀರ್ಘಗಾತ್ರಾಃ ।

---

೬೬. ಬಹಳ ಪುಣ್ಯವನ್ನುಂಟುಮಾಡುವ ಕೆಲಸವನ್ನು ಮಾಡಿದಾಗ್ಯೂ, ಅನೇಕ ಯಜ್ಞಗಳಿಂದ ಯಾಗಮಾಡಿದಾಗ್ಯೂ ಮಹೇಶ್ವರನಲ್ಲಿ ಭಕ್ತಿಯಿಲ್ಲದವನು ಅದರ ಫಲವನ್ನು ಹೊಂದಲಾರನು.

೬೭. ಅನೇಕ ಪಾತಕಗಳನ್ನು ಮಾಡಿದವನಾದರೂ ಭಕ್ತಿಯಿಂದ ಶಿವನನ್ನು ಪೂಜೆಮಾಡುವವನು ತನ್ನ ಎಲ್ಲಾ ವಿಧವಾದ ಪಾತಕಗಳಿಂದ ಬಿಡುಗಡೆಯನ್ನು ಹೊಂದುವನು ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ.

೬೮. ಶಿವನಿಂದೆಯನ್ನು ಮಾಡುವವನು ಮಾಡುವ ಯಜ್ಞ, ದಾನ, ತಪಸ್ಸು, ಹೋಮ ಇವೆಲ್ಲವೂ ವ್ಯರ್ಥವಾದುವುಗಳು. ಈ ವಿಷಯದಲ್ಲಿ ಹೆಚ್ಚಾಗಿ ಹೇಳಬೇಕಾದುದಿಲ್ಲ.

೬೯. ಅನಂತರ ವಿಷ್ಣುವೂ, ರುದ್ರರೂ, ಲೋಕಪಾಲಕರಾವ ದೇವತೆಗಳೂ ಮತ್ತು ಇತರ ದೇವತೆಗಳೂ ಯುದ್ಧದಲ್ಲಿ ಗಣೇಶ್ವರನಾದ ವೀರಭದ್ರನ ಧನುಸ್ಸಿನಿಂದ ಹೊರಹೊರಟ ಬಾಣಗಳ ಏಟಿನಿಂದ ಬಹಳ ಗಾಯಗೊಂಡು ರಣಭೂಮಿಯಿಂದ ಬೇಗನೆ ಓಡಿಹೋದರು.

ಪೇತುಃ ಕ್ವಚಿತ್ಕೇಚನ ಭಿನ್ನವಕ್ತ್ರಾ
ನೇಶುಃ ಕ್ವಚಿತ್ಕೇಚನ ದೇವವೀರಾಃ ॥ ೭೦ ॥

ಕೇಚಿಚ್ಚ ತತ್ರ ತ್ರಿದಶಾ ವಿಪನ್ನಾ
ವಿಸ್ರಸ್ತವಸ್ತ್ರಾಭರಣಾಸ್ತ್ರಶಸ್ತ್ರಾಃ ।
ನಿಪೇತುರುದ್ಭಾಸಿತದೀನವಮುದ್ರಾ
ಮದಂ ಚ ದರ್ಪಂ ಚ ಬಲಂ ಚ ಹಿತ್ವಾ ॥ ೭೧ ॥

ಸಮುತ್ಪಥಪ್ರಸ್ಥಿತಮುಪ್ರಧೃಷ್ಯೋ
ವಿಕ್ಷಿಪ್ಯ ದಕ್ಷಾಧ್ವರಮುಕ್ಷತಾಸ್ತ್ರೈಃ ।
ಬಭೌ ಗಣೇಶಸ್ಸಗಣೇಶ್ವರಾಣಾಂ
ಮಧ್ಯೇ ಸ್ಥಿತಃ ಸಿಂಹ ಇವರ್ಷಭಾಣಾಂ ॥ ೭೨ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾಂ
ಪೂರ್ವಭಾಗೇ ದಕ್ಷಯಜ್ಞವಿಧ್ವಂಸವರ್ಣನಂ
ನಾಮ ದ್ವಾವಿಂಶೋಽಧ್ಯಾಯಃ

---

೭೦. ಅವರಲ್ಲಿ ಕೆಲವರು ತಲೆಯಕೂದಲುಗಳೆಲ್ಲಾ ಕಿತ್ತುಹೋಗಿ ಓಡುತ್ತಿದ್ದರು. ಉದ್ದವಾದ ಶರೀರವುಳ್ಳವರು ಮತ್ತೆ ಕೆಲವರು ಓಡಲಾರದೆ ಅಲ್ಲಿಯೇ ಒಂದುಕಡೆ ಕೂತುಕೊಂಡರು. ಇನ್ನು ಕೆಲವರಿಗೆ ಮುಖವೆಲ್ಲಾ ಒಡೆದು ಘಾಯವಾಗಿ ನಡೆಯಲಾರದೆ ಎಲ್ಲೆಯೋ ಒಂದುಕಡೆಯಲ್ಲಿ ಬಿದ್ದರು. ಮತ್ತೆ ಕೆಲವು ಶೂರರು ಎಲ್ಲಂದರಲ್ಲಿ ಬಿದ್ದು ಮೃತರಾದರು.

೭೧. ಅಲ್ಲಿ ಕೆಲವು ದೇವತೆಗಳು ವಸ್ತ್ರಾದಿಗಳನ್ನು ಕಳೆದುಕೊಂಡು ಒಂದುಕಡೆಯಲ್ಲಿ ಬಿದ್ದಿದ್ದರು. ತಮ್ಮ ಹಿಂದಿನ ಅಹಂಕಾರ, ಪರಾಕ್ರಮ, ದರ್ಪ ಇವುಗಳೊಂದೂ ಇಲ್ಲದೆ ದುರವಸ್ಥೆಗೀಡಾಗಿ ಒಂದುಕಡೆಯಲ್ಲಿ ಬಿದ್ದಿದ್ದರು.

೭೨. ಹೀಗೆ ದುಷ್ಟಮಾರ್ಗಪ್ರವರ್ತಕನಾದ ದಕ್ಷಬ್ರಹ್ಮನ ಯಜ್ಞವನ್ನು ಆ ವೀರಭದ್ರನು ನಾಶಗೊಳಿಸಿ ವೃಷಭಗಳ ಮಧ್ಯದಲ್ಲಿರುವ ಸಿಂಹದಂತೆ ಪ್ರಕಾಶಿಸುತ್ತಿದ್ದನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯಸಂಹಿತೆಯ ಪೂರ್ವಭಾಗದಲ್ಲಿ ದಕ್ಷಯಜ್ಞವಿಧ್ವಂಸನವೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ತ್ರಯೋವಿಂಶೋಽಧ್ಯಾಯಃ

॥ ವಾಯುರುವಾಚ ॥

ಇತಿ ಸಂಭಿನ್ನಭಿನ್ನಾಂಗಾ ದೇವಾ ವಿಷ್ಣುಪುರೋಗಮಾಃ ।
ಕ್ಷಣಾತ್ಕಷ್ಟಾಂ ದಶಾಮೇತ್ಯ ತ್ರೇಸುಃ ಸ್ತೋಕಾವಶೇಷಿತಾಃ ॥ ೧ ॥

ತ್ರಸ್ತಾಂಸ್ತಾನ್ಸಮರೇ ವೀರಾನ್ದೇವಾನಾನ್ಯಾಂಶ್ಚ ವೈ ಗಣಾಃ ।
ಪ್ರಮಥಾಃ ಪರಮಕ್ರುದ್ಧಾ ವೀರಭದ್ರಪ್ರಣೋದಿತಾಃ ॥ ೨ ॥

ಪ್ರಗೃಹ್ಯ ಚ ತಥಾ ದೋಷಂ ನಿಗಡೈರಾಯಸೈರ್ದೃಢೈಃ ।
ಬಬಂಧುಃ ಪಾಣಿಪಾದೇಷು ಕಂಧರೇಷೂದರೇಷು ಚ ॥ ೩ ॥

---

## ಇಪ್ಪತ್ತಮೂರನೆಯ ಅಧ್ಯಾಯವು

೧. ವಾಯುದೇವನಿಂತೆಂದನು.—ವಿಷ್ಣುವೇ ಮೊದಲಾದ ದೇವತೆಗಳು ಹಿಂದೆ ಹೇಳಿದ ರೀತಿಯಂತೆ ತಮ್ಮ ಅವಯವಗಳು ಛಿನ್ನಭಿನ್ನವಾಗಿ ಹೋಗಲು, ಸ್ವಲ್ಪ ಹೊತ್ತಿನಲ್ಲಿಯೇ ಹೇಗೋ ಚೇತರಿಸಿಕೊಂಡು ತಮಗುಂಟಾದ ದುರವಸ್ಥೆಯಿಂದ ದುಃಖಪಡುತ್ತಿದ್ದರು.

೨-೩. ಆಗ ಪ್ರಮಥಗಣಗಳು, ಶೂರರಾದ ದೇವತೆಗಳು ಯುದ್ಧದಲ್ಲಿ ಹೆದರಿರುವುದನ್ನು ನೋಡಿ ಅವರನ್ನೂ, ಇತರರನ್ನೂ ಕೂಡ ಬಲಾತ್ಕಾರದಿಂದ ಹಿಡಿದುಕೊಂಡು ಅವರು ಮಾಡಿದ ತಪ್ಪಿಗೋಸ್ಕರ ಅವರ ಕಾಲು, ಕೈಯ್ಯಿ, ಕುತ್ತಿಗೆಗಳಿಗೆ ಬಲವಾದ ಕಬ್ಬಿಣದ ಸಂಕೋಲೆಗಳನ್ನು ಹಾಕಿ ಬಲವಾಗಿ ಕಟ್ಟಿದರು.

ತಸ್ಮಿನ್ನವಸರೇ ಬ್ರಹ್ಮಾ ಭದ್ರಮದ್ರೀಂದ್ರಜಾನುತಂ ।
ಸಾರಥ್ಯಾಲ್ಲಬ್ಧವಾತ್ಸಲ್ಯಃ ಪ್ರಾರ್ಥಯನ್ಪ್ರಣತೋಽಬ್ರವೀತ್ ॥ ೪ ॥

ಅಲಂ ಕ್ರೋಧೇನ ಭಗವನ್ನಷ್ಟಾಶ್ಚೈತೇ ದಿವೌಕಸಃ ।
ಪ್ರಸೀದ ಕ್ಷಮ್ಯತಾಂ ಸರ್ವಂ ರೋಮಜೈಸ್ಸಹ ಸುವ್ರತ ॥ ೫ ॥

ಏವಂ ವಿಜ್ಞಾಪಿತಸ್ತೇನ ಬ್ರಹ್ಮಣಾ ಪರಮೇಷ್ಠಿನಾ ।
ಶಮಂ ಜಗಾಮ ಸಂಪ್ರೀತೋ ಗಣಪಸ್ತಸ್ಯ ಗೌರವಾತ್ ॥ ೬ ॥

ದೇವಾಶ್ಚ ಲಬ್ಧಾವಸರಾ ದೇವದೇವಸ್ಯ ಮಂತ್ರಿಣಃ ।
ಧಾರಯಂತೋಽಜಲೀನ್ಮೂರ್ಧ್ನಿ ತುಷ್ಟುವುರ್ವಿವಿಧೈಃ ಸ್ತವೈಃ ॥ ೭ ॥

॥ ದೇವಾ ಊಚುಃ ॥

ನಮಃ ಶಿವಾಯ ಶಾಂತಾಯ ಯಜ್ಞಹಂತ್ರೇ ತ್ರಿಶೂಲಿನೇ ।
ರುದ್ರಭದ್ರಾಯ ರುದ್ರಾಣಾಂ ಪತಯೇ ರುದ್ರಭೂತಯೇ ॥ ೮ ॥

೪ ಅಷ್ಟರಲ್ಲಿ ಬ್ರಹ್ಮನು ತಾನು ಹಿಂದೆ ವೀರಭದ್ರನಿಗೆ ಸಾರಥಿಯಾಗಿದ್ದ ವಾತ್ಸಲ್ಯದಿಂದ ಅವನಿಗೆ ನಮಸ್ಕರಿಸಿ ಇಂತು ಪ್ರಾರ್ಥಿಸಿದನು.

೫. ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ವೀರಭದ್ರನೆ! ನೀನು ಈ ದೇವತೆಗಳಮೇಲೆ ಇನ್ನು ಕೋಪಮಾಡಬೇಡ. ಇವರೆಲ್ಲರೂ ಈಗ ನಾಶವಾಗಿರುವರು. ಎಲೈ ಪೂಜ್ಯನೆ, ಇವರ ತಪ್ಪನ್ನು ಮನ್ನಿಸು. ನನ್ನ ರೋಮಗಳಿಂದ ಹುಟ್ಟಿದ ಇವರೊಡನೆ ನೀನು ಕೋಪಮಾಡುವುದು ನಿನಗೆ ಸರಿಯಲ್ಲ.

೬. ಬ್ರಹ್ಮನು ಹೀಗೆಂದು ವಿಜ್ಞಾಪನೆಮಾಡಲು ಅದನ್ನು ಕೇಳಿ ವೀರಭದ್ರನು ಬ್ರಹ್ಮನಲ್ಲಿ ಗೌರವಬುದ್ಧಿಯಿಂದ ಆ ದೇವತೆಗಳ ವಿಷಯದಲ್ಲಿದ್ದ ಕೋಪವನ್ನು ಬಿಟ್ಟು ಶಾಂತನಾದನು.

೭. ದೇವತೆಗಳು ತಮಗೆ ಇಷ್ಟುಮಟ್ಟಿಗೆ ಅವಕಾಶ ದೊರತದ್ದಕ್ಕೆ ಸಂತೋಷಪಟ್ಟು ದೇವದೇವನಾದ ಶಿವನಮೂರ್ತಿಗೆ ಎದುರಾಗಿ ನಿಂತುಕೊಂಡು ಅಂಜಲಿಬದ್ಧರಾಗಿ ತಮ್ಮ ಕೈಗಳನ್ನು ತಲೆಯಮೇಲೆ ಇರಿಸಿಕೊಂಡು ಅವನನ್ನು ಬಹಳ ವಿಧವಾಗಿ ಸ್ತೋತ್ರಮಾಡಿದರು.

೮. ಶಿವನಿಗೆ ನಮಸ್ಕಾರವು. ಉಪಶಾಂತನೂ, ತ್ರಿಶೂಲವನ್ನು ಧರಿಸಿ ಯಜ್ಞವನ್ನು ನಾಶಮಾಡಿದವನೂ, ರುದ್ರರೂಪದಿಂದ ಇರುವವನೂ ಆದ ವೀರಭದ್ರನಿಗೆ

**ಕಾಲಾಗ್ನಿರುದ್ರರೂಪಾಯ ಕಾಲಕಾಮಾಂಗಹಾರಿಣೇ ।**
**ದೇವತಾನಾಂ ಶಿರೋಹಂತ್ರೇ ದಕ್ಷಸ್ಯ ಚ ದುರಾತ್ಮನಃ ॥ ೯ ॥**

**ಸಂಸರ್ಗಾದಸ್ಯ ಪಾಪಸ್ಯ ದಕ್ಷಸ್ಯಾಕ್ಲಿಷ್ಟಕರ್ಮಣಃ ।**
**ಶಾಸಿತಾಃ ಸಮರೇ ವೀರ ತ್ವಯಾ ವಯಮನಿಂದಿತಾಃ ॥ ೧೦ ॥**

**ದಗ್ಧಾಶ್ಚಾಮೀ ವಯಂ ಸರ್ವೇ ತ್ವತ್ತೋ ಭೀತಾಶ್ಚ ಭೋ ಪ್ರಭೋ ।**
**ತ್ವಮೇವ ಗತಿರಸ್ಮಾಕಂ ತ್ರಾಹಿ ನಶ್ಶರಣಾಗತಾನ್ ॥ ೧೧ ॥**

**॥ ವಾಯುರುವಾಚ ॥**

**ತುಷ್ಟಸ್ತ್ವೇವಂ ಸ್ತುತೋ ದೇವಾನ್ವಿಸೃಜ್ಯ ನಿಗಡಾತ್ಪ್ರಭುಃ ।**
**ಆಸಯದ್ದೇವದೇವಸ್ಯ ಸಮೀಪಮುಮಾನಿಹ ॥ ೧೨ ॥**

---

ನಮಸ್ಕಾರವು. ರುದ್ರರೆಲ್ಲರಿಗೂ ಅಧಿಪತಿಯಾಗಿ ರುದ್ರನ ಆಕಾರವನ್ನು ಧರಿಸಿರುವ ನಿನಗೆ ನಮಸ್ಕಾರವು

೯. ಎಲೈ ವೀರಭದ್ರನೇ ನೀನು ಕಾಲಾಗ್ನಿರುದ್ರಸ್ವರೂಪನು. ಕಾಲಪುರುಷನ ಮತ್ತು ಕಾಮನ ಗರ್ವವನ್ನು ನಾಶಮಾಡಿದವನು, ನಿನಗೆ ನಮಸ್ಕಾರವು. ದುಷ್ಟನಾದ ದಕ್ಷಬ್ರಹ್ಮನ ತಲೆಯನ್ನು ಕತ್ತರಿಸಿ ದೇವತೆಗಳನ್ನು ನಾಶಮಾಡಿದ ನಿನಗೆ ನಮಸ್ಕಾರವು.

೧೦. ಕ್ರೂರಕರ್ಮಿಯಾದ ಈ ದಕ್ಷಬ್ರಹ್ಮನ ಸಂಬಂಧದಿಂದ ನಮಗೆ ಇಂತಹ ದುರವಸ್ಥೆಯು ಪ್ರಾಪ್ತವಾಯಿತು. ನಾವುಗಳು ಯುದ್ಧದಲ್ಲಿ ವೀರನಾದ ನಿನ್ನ ಶಿಕ್ಷೆಗೆ ಗುರಿಯಾಗಬೇಕಾಯಿತು.

೧೧. ಎಲೈ, ಪ್ರಭುವೆ! ಈಗ ನಾವೆಲ್ಲರೂ ಸುಟ್ಟು ಭಸ್ಮವಾಗಿ ಹೋಗಿದ್ದೇವೆ. ನಿನ್ನನ್ನು ಕಂಡರೆ ನಮಗೆ ಬಹಳ ಭಯವಾಗುತ್ತದೆ. ಆದುದರಿಂದ ನೀನೇ ನಮಗೆ ಗತಿಯೆಂದು ತಿಳಿದು ನಿನಗೆ ಶರಣುಬಂದಿದ್ದೇವೆ. ಶರಣಾಗತರಾದ ನಮ್ಮನ್ನು ನೀನು ರಕ್ಷಿಸು ಎಂದು ದೀನರಾಗಿ ಬೇಡಿಕೊಂಡರು.

೧೨. ವಾಯುದೇವನು ಹೇಳಿದನು.—ದೇವತೆಗಳು ಹೀಗೆ ತನ್ನನ್ನು ಸ್ತೋತ್ರ ಮಾಡುತ್ತಿರುವುದನ್ನು ಕೇಳಿ, ಅದರಿಂದ ಪ್ರಭುವಾದ ವೀರಭದ್ರನು ಸಂತುಷ್ಟನಾಗಿ ಅವರಿಗೆ ಹಾಕಿದ್ದ ಸಂಕೋಲೆಗಳನ್ನು ತೆಗೆದು ದೇವದೇವನಾದ ಪರಮೇಶ್ವರ ಸಮೀಪಕ್ಕೆ ಆ ದೇವತೆಗಳನ್ನು ಕರೆದುಕೊಂಡು ಹೋದನು.

ದೇವೋಽಪಿ ತತ್ರ ಭಗವಾನಂತರಿಕ್ಷೇ ಸ್ಥಿತಃ ಪ್ರಭುಃ ।
ಸಗಣಃ ಸರ್ವಗಃ ಶರ್ವಸ್ಸರ್ವಲೋಕಮಹೇಶ್ವರಃ ॥ ೧೩ ॥

ತಂ ದೃಷ್ಟ್ವಾ ಪರಮೇಶಾನಂ ದೇವಾ ವಿಷ್ಣುಪುರೋಗಮಾಃ ।
ಪ್ರೀತಾ ಅಪಿ ಚ ಭೀತಾಶ್ಚ ನಮಶ್ಚಕ್ರುರ್ಮಹೇಶ್ವರಂ ॥ ೧೪ ॥

ದೃಷ್ಟ್ವಾ ತಾನಮರಾನ್ಭೀತಾನ್ಪ್ರಣತಾರ್ತಿಹರೋ ಹರಃ ।
ಇದಮಾಹ ಮಹಾದೇವಃ ಪ್ರಹಸನ್ಪ್ರೇಕ್ಷ್ಯ ಪಾರ್ವತೀಂ ॥ ೧೫ ॥

॥ ಮಹಾದೇವ ಉವಾಚ ॥

ಮಾ ಭೈಷ್ಟ ತ್ರಿದಶಾಸ್ಸರ್ವೇ ಯೂಯಂ ವೈ ಮಾಮಕಾಃ ಪ್ರಜಾಃ ।
ಅನುಗ್ರಹಾರ್ಥಮೇವೇಹ ಧೃತೋ ದಂಡಃ ಕೃಪಾಲುನಾ ॥ ೧೬ ॥

ಭವತಾಂ ನಿರ್ಜರಾಣಾಂ ಹಿ ಕ್ಷಾಂತೋಽಸ್ಮಾಭಿರ್ವ್ಯತಿಕ್ರಮಃ ।
ಕ್ರುದ್ಧೇಷ್ವಸ್ಮಾಸು ಯುಷ್ಮಾಕಂ ನ ಸ್ಥಿತಿರ್ನ ಚ ಜೀವಿತಂ ॥ ೧೭ ॥

೧೩. ಸರ್ವವ್ಯಾಪಿಯಾದ ಭಗವಾನ್ ಪರಮೇಶ್ವರನೂ ಕೂಡ ತನ್ನ ಗಣಗಳೊಡನೆ ಅಂತರಿಕ್ಷದಲ್ಲಿದ್ದುಕೊಂಡು ಎಲ್ಲವನ್ನೂ ನೋಡುತ್ತಿದ್ದನು.

೧೪. ವಿಷ್ಣುವೇ ಮೊದಲಾದ ದೇವತೆಗಳಿಗೆ ಆ ಪರಮೇಶ್ವರನನ್ನು ನೋಡಿದ್ದರಿಂದ ಸಂತೋಷವಾಯಿತು. ಆದರೂ ಮಹೇಶ್ವರನಿಗೆ ಹೆದರಿ ಅವನಿಗೆ ಭಕ್ತಿಯಿಂದ ನಮಸ್ಕರಿಸಿದರು.

೧೫. ನಮಸ್ಕಾರಮಾಡಿದವರ ಕಷ್ಟವನ್ನು ನಾಶಮಾಡುವವನಾದ ಶಿವನು ದೇವತೆಗಳು ತನಗೆ ಹೆದರಿರುವುದನ್ನು ನೋಡಿ, ಪಾರ್ವತಿಯನ್ನು ನೋಡಿ ನಸುನಗುತ್ತಾ ಇಂತೆಂದನು.

೧೬. ಎಲೈ ದೇವತೆಗಳೇ, ನೀವು ಯಾರೂ ನನಗೆ ಹೆದರಬೇಕಾಗಿಲ್ಲ. ನೀವೆಲ್ಲರೂ ನನ್ನ ಮಕ್ಕಳಾಗಿರುತ್ತೀರಿ. ನಾನು ದಯೆಯಿಂದ ನಿಮಗೆ ಅನುಗ್ರಹಮಾಡುವುದಕ್ಕಾಗಿಯೇ ಈ ಶಿಕ್ಷೆಯನ್ನು ಮಾಡಿರುವೆನು.

೧೭. ನೀವು ದೇವತೆಗಳಾದಕಾರಣ ದಾರಿತಪ್ಪಿ ತಪ್ಪುಮಾಡಿರುವುದನ್ನು ನಾನು ಕ್ಷಮಿಸಿರುವೆನು. ನಾನು ಕೋಪಗೊಂಡರೆ, ನಿಮ್ಮ ಸ್ಥಿತಿಯೂ, ನಿಮ್ಮ ಪ್ರಾಣವೂ ಉಳಿಯುವುದಿಲ್ಲ ಎಂದನು.

॥ ವಾಯುರುವಾಚ ॥

ಇತ್ಯುಕ್ತ್ವಾಸ್ತ್ರಿದಶಾಸ್ಸರ್ವೇ ಶರ್ವೇಣಾಮಿತತೇಜಸಾ ।
ಸದ್ಯೋ ವಿಗತಸನ್ದೇಹಾ ನನೃತುರ್ವಿಬುಧಾ ಮುದಾ ॥ ೧೮ ॥

ಪ್ರಸನ್ನಮನಸೋ ಭೂತ್ವಾ ನಂದವಿಹ್ವಲಮಾನಸಾಃ ।
ಸ್ತುತಿಮಾರೇಭಿರೇ ಕರ್ತುಂ ಶಂಕರಸ್ಯ ದಿವೌಕಸಃ ॥ ೧೯ ॥

॥ ದೇವಾ ಊಚುಃ ॥

ತ್ವಮೇವ ದೇವಾಖಿಲಲೋಕಕರ್ತಾ
ಪಾತಾ ಚ ಹರ್ತಾ ಪರಮೇಶ್ವರೋಽಸಿ ।
ಕವಿಷ್ಣುರುದ್ರಾಖ್ಯಸ್ವರೂಪಭೇದೈ
ರಜಸ್ತಮಸ್ಸತ್ತ್ವಧೃತಾತ್ಮಮೂರ್ತೇ ॥ ೨೦ ॥

ಸರ್ವಮೂರ್ತೇ ನಮಸ್ತೇಽಸ್ತು ವಿಶ್ವಭಾವನ ಪಾವನ ।
ಅಮೂರ್ತೇ ಭಕ್ತಹೇತೋರ್ಹಿ ಗೃಹೀತಾಕೃತಿಸೌಖ್ಯದ ॥ ೨೧ ॥

---

೧೮. ಬಹಳ ತೇಜಶ್ಶಾಲಿಯಾದ ಶಿವನು ಹೇಳಿದ ಈ ಮಾತನ್ನು ದೇವತೆಗಳೆಲ್ಲರೂ ಕೇಳಿ ಆ ಕ್ಷಣದಲ್ಲಿಯೇ ಭಯಸಂಶಯಗಳನ್ನು ತೊರೆದು ಸಂತೋಷದಿಂದ ಕುಣಿದಾಡಿದರು.

೧೯. ಆಗ ದೇವತೆಗಳು, ಆನಂದಾತಿಶಯದಿಂದ ಮನಸ್ಸು ಉಕ್ಕಿಬರುತ್ತಿರಲು ಶಿವನನ್ನು ಸ್ತುತಿಮಾಡಲುಪಕ್ರಮಿಸಿದರು.

೨೦. ದೇವತೆಗಳು ಹೇಳಿದರು.—ಎಲೈ ದೇವದೇವನೇ, ನೀನು ಸಕಲ ಲೋಕಗಳನ್ನೂ ನಿರ್ಮಿಸಿದವನು. ಅದನ್ನು ಸಂರಕ್ಷಣೆಮಾಡುವವನೂ, ಅದನ್ನು ನಾಶಮಾಡುವವನೂ, ನೀನೇ ಆಗಿರುವೆ. ಆದುದರಿಂದ ನೀನು ಪರಮೇಶ್ವರನೆನಿಸಿರುವೆ. ನೀನು ರಜಸ್ಸು, ಸತ್ವ, ತಮಸ್ಸು ಎಂಬ ಮೂರು ಗುಣಗಳಿಂದ ಬ್ರಹ್ಮ, ವಿಷ್ಣು, ರುದ್ರ ಎಂಬ ಮೂರು ಆಕಾರಗಳನ್ನು ಬೇರೆ ಬೇರೆಯಾಗಿ ಹೊಂದಿ ಇರುತ್ತೀಯೆ.

೨೧. ನೀನು ಆಕಾರವಿಲ್ಲದವನಾದಾಗ್ಯೂ ಭಕ್ತರಿಗೋಸ್ಕರ ಆಕಾರವನ್ನು ಧರಿಸಿಕೊಂಡು, ಅವರಿಗೆಲ್ಲರಿಗೂ ಸೌಖ್ಯವನ್ನುಂಟುಮಾಡುವೆ. ನೀನು ಇಷ್ಟಬಂದಂತೆ

ಚಂದ್ರೋಽಗದೋ ಹಿ ದೇವೇಶ ಕೃಪಾತಸ್ತವ ಶಂಕರ ।
ನಿಮಜ್ಜನಾನ್ಮೃತಃ ಪ್ರಾಪ ಸುಖಂ ಮಿಹಿರಜಾಜಲಿಃ ॥ ೨೨ ॥

ಸಿಮಂತಿನೀ ಹತಧವಾ ತವ ಪೂಜನತಃ ಪ್ರಭೋ ।
ಸೌಭಾಗ್ಯಮತುಲಂ ಪ್ರಾಪ ಸೋಮವಾರವ್ರತಾತ್ಸುತಾನ್ ॥ ೨೩ ॥

ಶ್ರೀಕರಾಯ ದದೌ ದೇವಃ ಸ್ವೀಯಂ ಪದಮನುತ್ತಮಂ ।
ಸುದರ್ಶನಮರಕ್ಷಸ್ತ್ವಂ ನೃಪಮಂಡಲಭೀತಿತಃ ॥ ೨೪ ॥

ಮೇದುರಂ ತಾರಯಾಮಾಸ ಸದಾರಂ ಘೃಣಾನಿಧಿಃ ।
ಶಾರದಾಂ ವಿಧವಾಂ ಚಕ್ರೇ ಸಧವಾಂ ಕ್ರಿಯಯಾ ಭವಾನ್ ॥ ೨೫ ॥

---

ಯಾವ ಆಕಾರಬೇಕಾದರೂ ಧರಿಸಬಲ್ಲವನು. ಪ್ರಪಂಚವನ್ನು ತನ್ನಂತೆ ಭಾವನೆಯನ್ನು ಮಾಡುವ ಪರಿಶುದ್ಧನಾದ ನಿನಗೆ ನಮಸ್ಕಾರವು

೨೨ ಎಲೈ ಶಂಕರನೆ! ಓ ದೇವಾಧಿಪತಿಯೆ, ನಿನ್ನ ದಯದಿಂದ ಚಂದ್ರನಿಗೆ ಕ್ಷಯರೋಗವು ಹೋಯಿತು. ಮಿಹಿರಜಾಜಲಿ ಎಂಬುವನು ನೀರಿನಲ್ಲಿ ಮುಳುಗಿಕೊಂಡು ಮರಣವನ್ನು ಹೊಂದಿದ್ದರೂ, ನಿನ್ನ ದಯದಿಂದ ಸುಖವನ್ನು ಹೊಂದಿದನು.

೨೩. ಗಂಡನನ್ನು ಕಳೆದುಕೊಂಡಿದ್ದ ಸೀಮಂತಿನೀ ಎಂಬುವಳು ಪ್ರಭುವಾದ ನಿನ್ನ ಪೂಜೆಯನ್ನು ಪ್ರತಿ ಸೋಮವಾರದಲ್ಲಿಯೂ ಮಾಡಿ ಮಕ್ಕಳನ್ನೂ, ಸುಖವನ್ನೂ ಪಡೆದಳು.

೨೪. ದೇವದೇವನಾದ ನೀನು ಶ್ರೀಕರನೆಂಬವನಿಗೆ ನಿನ್ನ ಪದವಿಯನ್ನು ಕೊಟ್ಟಿರುತ್ತೀಯೆ. ಶತ್ರುರಾಜರಿಂದ ಭೀತನಾದ ಸುದರ್ಶನನೆಂಬವನನ್ನು ನೀನು ಕಾಪಾಡಿರುತ್ತೀಯೆ.

೨೫. ದಯಾನಿಧಿಯಾದ ನೀನು ಮೇದುರನೆಂಬವನನ್ನೂ ಅವನ ಹೆಂಡತಿಯನ್ನೂ ಕಾಪಾಡಿರುತ್ತೀಯೆ. ಗಂಡನನ್ನು ಕಳೆದುಕೊಂಡ ಶಾರದೆ ಎಂಬುವಳ ಗಂಡನನ್ನು ನಿನ್ನ ಸಾಮರ್ಥ್ಯದಿಂದ ಪುನಃ ಬದುಕಿಸಿರುತ್ತೀಯೆ, ಅವಳನ್ನು ಕಾಪಾಡಿರುತ್ತೀಯೆ.

ಭದ್ರಾಯುಷೋ ವಿಪತ್ತಿಂ ಚ ವಿಚ್ಛಿದ್ಯ ತ್ವಮುದಾಃ ಸುಖಂ ।
ಸೌಮಿನೀ ಭವಬಂಧಾದ್ವೈ ಮುಕ್ತಾಭೂತ್ತವ ಸೇವನಾತ್ ॥ ೨೬ ॥

॥ ವಿಷ್ಣುರುವಾಚ ॥

ತ್ವಂ ಶಂಭೋ ಕಹರೀಶಾಶ್ಚ ರಜಸ್ಸತ್ತ್ವತನೋಗುಣೈಃ ।
ಕರ್ತಾ ಪಾತಾ ತಥಾ ಹರ್ತಾ ಜನಾನುಗ್ರಹಕಾಂಕ್ಷಯಾ ॥ ೨೭ ॥

ಸರ್ವಗರ್ವಾಪಹಾರೀ ಚ ಸರ್ವತೇಜೋವಿಲಾಸಕಃ ।
ಸರ್ವವಿದ್ಯಾದಿಗೂಢಶ್ಚ ಸರ್ವಾನುಗ್ರಹಕಾರಕಃ ॥ ೨೮ ॥

ತ್ವತ್ತಃ ಸರ್ವಂ ಚ ತ್ವಂ ಸರ್ವಂ ತ್ವಯಿ ಸರ್ವಂ ಗಿರೀಶ್ವರ ।
ತ್ರಾಹಿ ತ್ರಾಹಿ ಪುನಸ್ತ್ರಾಹಿ ಕೃಪಾಂ ಕುರು ಮಮೋಪರಿ ॥ ೨೯ ॥

೨೬ ಭದ್ರಾಯುಸ್ಸೆಂಬುವನ ವಿಪತ್ತನ್ನು ನಾಶಗೊಳಿಸಿ ನೀನು ಅವನಿಗೆ ಸುಖವನ್ನುಂಟುಮಾಡಿರುತ್ತೀಯೆ. ಸೌಮಿನಿ ಎಂಬುವಳು ನಿನ್ನ ಸೇವೆಯಿಂದ ಜನ್ಮ ಮರಣಗಳಿಂದ ಬಿಡುಗಡೆಯನ್ನು ಹೊಂದಿ ಮುಕ್ತಿಯನ್ನು ಹೊಂದಿದಳು. ಎಂದು ಪರಿಪರಿಯಾಗಿ ಸ್ತೋತ್ರಮಾಡಿದರು.

೨೭ ವಿಷ್ಣುವು ಹೇಳಿದನು.—ಎಲೈ ಶಂಭುವೆ! ನೀನು ರಜಸ್ಸು, ಸತ್ವ, ತಮಸ್ಸೆಂಬ ಮೂರು ಗುಣಗಳಿಂದ ಬ್ರಹ್ಮ, ವಿಷ್ಣು, ಈಶ್ವರರ ಆಕಾರವನ್ನು ಧರಿಸಿ ಕೊಂಡು ಪ್ರಪಂಚವನ್ನು ನಿರ್ಮಿಸುವವನೂ, ರಕ್ಷಿಸುವವನೂ, ಪ್ರಪಂಚವನ್ನು ನಾಶ ಮಾಡುವವನೂ ಆಗಿ ಜನಗಳಿಗೆ ಅನುಗ್ರಹವನ್ನು ಮಾಡುವ ಇಚ್ಛೆಯಿಂದ ಕ್ರೀಡಿಸು ತ್ತಿರುತ್ತೀಯೆ

೨೮. ದುರಹಂಕಾರದಿಂದ ಮೆರೆಯುವವರ ಗರ್ವವನ್ನು ನಾಶಮಾಡುವೆ. ನೀನು ಎಲ್ಲರಿಗೂ ತೇಜಸ್ಸನ್ನು ಕೊಡುವವನು, ಎಲ್ಲಾ ವಿದ್ಯೆಗಳಲ್ಲಿಯೂ ಗೂಢ ವಾಗಿರುವವನು, ಎಲ್ಲರಿಗೂ ಅನುಗ್ರಹವನ್ನು ಮಾಡುವವನು.

೨೯. ಎಲೈ, ಗಿರೀಶ್ವರನೆ! ನಿನ್ನಿಂದಲೇ ಎಲ್ಲವೂ ಇರುವುದು. ನೀನೇ ಎಲ್ಲಾ ರೂಪದಿಂದ ಇರುತ್ತೀಯೆ. ನಿನ್ನಲ್ಲಿಯೇ ಎಲ್ಲವೂ ಇರುವುದು. ನೀನು ನನ್ನ ಮೇಲೆ ದಯೆಯನ್ನು ತೋರಿ ನನ್ನನ್ನು ರಕ್ಷಿಸು, ಕಾಪಾಡು. ನೀನೇ ನನಗೆ ರಕ್ಷಕನು ಎಂದನು.

ಅಥಾಸ್ಮಿನ್ನಂತರೇ ಬ್ರಹ್ಮಾ ಪ್ರಣಿಪತ್ಯ ಕೃತಾಂಜಲಿಃ ।
ಏವಂ ತ್ವವಸರಂ ಪ್ರಾಪ್ಯ ವ್ಯಜ್ಞಾಪಯತ ಶೂಲಿನೇ ॥ ೩೦ ॥

॥ ಬ್ರಹ್ಮೋವಾಚ ॥

ಜಯ ದೇವ ಮಹಾದೇವ ಪ್ರಣತಾರ್ತಿವಿಭಂಜನ ।
ಈದೃಶೇಷ್ವಪರಾಧೇಷು ಕೋಽನ್ಯಸ್ತ್ವತ್ತಃ ಪ್ರಸೀದತಿ ॥ ೩೧ ॥

ಲಬ್ಧಾತ್ಮಾನೋ ಭವಿಷ್ಯಂತಿ ಯೇ ಪುರಾ ನಿಹತಾ ಮೃಧೇ ।
ಪ್ರತ್ಯಾಪತ್ತಿರ್ನ ಕಸ್ಯ ಸ್ಯಾತ್ಪ್ರಸನ್ನೇ ಪರಮೇಶ್ವರೇ ॥ ೩೨ ॥

ಯದಿದಂ ದೇವದೇವಾನಾಂ ಕೃತಮಂತುಷು ದೂಷಣಂ ।
ತದಿದಂ ಭೂಷಣಂ ಮನ್ಯೇ ತ ಅಂಗೀಕಾರಗೌರವಾತ್ ॥ ೩೩ ॥

---

೩೦. ಅನಂತರ ವಿಷ್ಣುವೂ ದೇವತೆಗಳೂ ಶಿವನನ್ನು ಹೊಗಳುತ್ತಾ ನಮಸ್ಕರಿಸುತ್ತಿರುವುದನ್ನು ನೋಡಿ ಬ್ರಹ್ಮನು ತಾನೂ ನಮಸ್ಕಾರಮಾಡಿ ಕೈಮುಗಿದುಕೊಂಡು ತ್ರಿಶೂಲಾಯುಧವನ್ನು ಧರಿಸಿರುವ ಶಿವನಿಗೆ ಇಂತು ವಿಜ್ಞಾಪನೆಮಾಡಿಕೊಂಡನು.

೩೧. ಎಲೈ ದೇವನೆ! ಮಹಾದೇವನೆ, ನೀನು ನಮಸ್ಕಾರಮಾಡಿದವರ ಸಂಕಟವನ್ನು ಪರಿಹರಿಸುವೆ. ಈ ಪ್ರಕಾರವಾದ ಅಪರಾಧವನ್ನು ಮಾಡಿದವರನ್ನು ಶಿವನಾದ ನೀನಲ್ಲದೆ ಬೇರೆ ಯಾರಾದರೂ ಕ್ಷಮಿಸುತ್ತಾರೆಯೆ! ಮತ್ತು ಪ್ರಸನ್ನರಾಗುವರೆ ಏನು ?

೩೨. ಹಿಂದೆ ನೀನು ಯುದ್ಧದಲ್ಲಿ ಮಡಿದವರೆಲ್ಲರಿಗೂ ನಿನ್ನ ದಯದಿಂದ ಮತ್ತೆ ಪ್ರಾಣವು ಬಂದು ಅವರೆಲ್ಲರೂ ಹಿಂದಿನಂತೆ ಸುಖವಾಗಿರುವರು. ಪರಮೇಶ್ವರನಾದ ನೀನು ಪ್ರಸನ್ನನಾದರೆ ಯಾರಿಗೆತಾನೇ ದುಃಖ ನಾಶವಾಗಿ ಸುಖವಾಗುವುದಿಲ್ಲ ?

೩೩. ದೇವದೇವನಾದ ನಿನ್ನ ವಿಷಯದಲ್ಲಿ ದೇವತೆಗಳು ತಪ್ಪುಮಾಡಿ ನಿಂದೆಗೀಡಾಗಿರುವರು. ನೀನು ಅವರ ತಪ್ಪನ್ನು ಮನ್ನಿಸುವುದರಿಂದ ಅವರಿಗೆ ಅದೇ ಭೂಷಣವಾಗುವುದೆಂದು ನಾನು ತಿಳಿಯುತ್ತೇನೆ ಎಂದನು.

ಇತಿ ವಿಜ್ಞಾಪ್ಯಮಾನಸ್ತು ಬ್ರಹ್ಮಣಾ ಪರಮೇಷ್ಠಿನಾ ।
ವಿಲೋಕ್ಯ ವದನಂ ದೇವ್ಯಾ ದೇವದೇವಃ ಸ್ಮಯನ್ನಿವ ॥ ೩೪ ॥

ಪುತ್ರಭೂತಸ್ಯ ವಾತ್ಸಲ್ಯಾದ್ಬ್ರಹ್ಮಣಃ ಪದ್ಮಜನ್ಮನಃ ।
ದೇವಾದೀನಾಂ ಯಥಾ ಪೂರ್ವಮಂಗಾನಿ ಪ್ರದದೌ ಪ್ರಭುಃ ॥ ೩೫ ॥

ಪ್ರಮಥಾದ್ಯೈಶ್ಚ ಯಾ ದೇವ್ಯೋ ಮುಂಡಿತಾ ದೇವಮಾತರಃ ।
ತಾಸಾಮಪಿ ಯಥಾಪೂರ್ವಾಣ್ಯಂಗಾನಿ ಗಿರಿಶೋ ದದೌ ॥ ೩೬ ॥

ದಕ್ಷಸ್ಯ ಭಗವಾನೇವ ಸ್ವಯಂ ಬ್ರಹ್ಮಾ ಪಿತಾಮಹಃ ।
ತತ್ಪಾಪಾನುಗುಣಂ ಚಕ್ರೇ ಜರಚ್ಛಾಗಮುಖಂ ಮುಖಂ ॥ ೩೭ ॥

ಸೋಽಪಿ ಸಂಜ್ಞಾಂ ತತೋ ಲಬ್ಧ್ವಾ ಸ ದೃಷ್ಟ್ವಾ ಜೀವಿತಃ ಸುಧೀಃ ।
ಭೀತಃ ಕೃತಾಂಜಲಿಃ ಶಂಭುಂ ತುಷ್ಟಾವ ಪ್ರಲಪನ್ಬಹು ॥ ೩೮ ॥

---

೩೪-೩೫. ಬ್ರಹ್ಮನು ಶಿವನ ಸಂಗಡ ಹೀಗೆ ವಿಜ್ಞಾಪನೆಯನ್ನು ಮಾಡುತ್ತಿರಲು, ದೇವದೇವನೂ ಸರ್ವರಿಗೂ ಪ್ರಭುವೂ ಆದ ಪರಮೇಶ್ವರನು ತನ್ನ ಪುತ್ರನಾದ ಬ್ರಹ್ಮನಲ್ಲಿರುವ ಪ್ರೀತಿಯಿಂದ ಪಾರ್ವತಿಯ ಮುಖವನ್ನು ಮಂದಹಾಸದಿಂದ ನೋಡುತ್ತಾ, ಯುದ್ಧದಲ್ಲಿ ಅಂಗಗಳನ್ನು ಕಳೆದುಕೊಂಡಿದ್ದ ದೇವತೆಗಳೆಲ್ಲರಿಗೂ ಅವರವರ ಅವಯವಗಳು ಹಿಂದಿನ ಹಾಗೆಯೇ ಇರುವಂತೆ ಮಾಡಿದನು.

೩೬. ಪ್ರಮಥರೇ ಮೊದಲಾದವರು ಶಿಕ್ಷೆಮಾಡಿದ್ದ ದೇವಮಾತೃಕೆಯರಿಗೂ ಅವರವರ ಅಂಗಗಳನ್ನು ಹಿಂದಿನಂತೆಯೇ ಕೊಟ್ಟನು.

೩೭. ದಕ್ಷಬ್ರಹ್ಮನಿಗೆ ಅವನ ಪಾಪಕ್ಕೆ ಅನುಗುಣವಾಗಿ ಆಡಿನ ಮುಖದಂತಿರುವ ಮುಖವನ್ನು ಸ್ವಯಂ ಬ್ರಹ್ಮನೇ ಉಂಟುಮಾಡಿದನು.

೩೮. ಮತ್ತೆ ಬದುಕಿದ ದಕ್ಷಬ್ರಹ್ಮನಿಗೆ ಜ್ಞಾನೋದಯವಾಗಿ ಬುದ್ಧಿ ಬಂದಿತು. ಆಗ ಅವನು ಬಹಳವಾಗಿ ಹೆದರಿದವನಾಗಿ ಬಹಳವಾಗಿ ಅಳುತ್ತಾ ಕೈಮುಗಿದುಕೊಂಡು ಶಿವನನ್ನು ಸ್ತುತಿಸಿದನು.

॥ ದಕ್ಷ ಉವಾಚ ॥

ಜಯ ದೇವ ಜಗನ್ನಾಥ ಲೋಕಾನುಗ್ರಹಕಾರಕ ।
ಕೃಪಾಂ ಕುರು ಮಹೇಶಾನಾಪರಾಧಂ ಮೇ ಕ್ಷಮಸ್ವ ಹ ॥ ೩೯ ॥

ಕರ್ತಾ ಭರ್ತಾ ಚ ಹರ್ತಾ ಚ ತ್ವಮೇವ ಜಗತಾಂ ಪ್ರಭುಃ ।
ಮಯಾ ಜ್ಞಾತಂ ವಿಶೇಷೇಣ ವಿಷ್ಣ್ವಾದಿಸಕಲೇಶ್ವರಃ ॥ ೪೦ ॥

ತ್ವಯೈವ ವಿತತಂ ಸರ್ವಂ ವ್ಯಾಪ್ತಂ ಸೃಷ್ಟಂ ಚ ನಾಶಿತಂ ।
ನ ಹಿ ತ್ವದಧಿಕಾಃ ಕೇಚಿದೀಶಾಸ್ತ್ವೇಽಚ್ಯುತಕಾದಯಃ ॥ ೪೧ ॥

॥ ವಾಯುರುವಾಚ ॥

ತಂ ತಥಾ ವ್ಯಾಕುಲಂ ಭೀತಂ ಪ್ರಲಪಂತಂ ಕೃತಾಗಸಂ ।
ಸ್ಮಯನ್ನಿವಾವದತ್ಪ್ರೇಕ್ಷ್ಯ ಮಾ ಭೈರಿತಿ ಘೃಣಾನಿಧಿಃ ॥ ೪೨ ॥

---

೩೯. ದಕ್ಷಬ್ರಹ್ಮನು ಹೇಳಿದನು.—ಎಲೈ ಮಹೇಶ್ವರನೇ, ನೀನು ಲೋಕಕ್ಕೆಲ್ಲಕ್ಕೂ ಅಧಿಪತಿಯು. ಲೋಕಗಳೆಲ್ಲಕ್ಕೂ ಅನುಗ್ರಹವನ್ನು ಮಾಡುವವನು. ಎಲೈ, ದೇವನೆ, ನಿನಗೆ ಜಯವಾಗಲಿ. ನನ್ನ ಅಪರಾಧವನ್ನು ಕ್ಷಮಿಸು. ನನ್ನಲ್ಲಿ ದಯೆಯನ್ನು ತೋರಿ ನನ್ನನ್ನು ರಕ್ಷಿಸು.

೪೦. ನೀನು ಪ್ರಪಂಚವೆಲ್ಲವನ್ನೂ ನಿರ್ಮಿಸುವವನೂ, ರಕ್ಷಿಸುವವನೂ, ಸಂಹಾರಮಾಡುವವನೂ ಆಗಿರುವೆ. ಜಗತ್ಪ್ರಭುವಾದವನು. ನೀನೇ ಎಂಬುದಾಗಿ ತಿಳಿದಿರುವೆನು· ಮತ್ತು ವಿಷ್ಣುವೇ ಮೊದಲಾದ ದೇವತೆಗಳೆಲ್ಲರಿಗೂ ನೀನೇ ಅಧಿಪತಿ ಎಂದು ಈಗ ತಿಳಿಯಿತು.

೪೧. ನೀನೇ ಈ ಪ್ರಪಂಚವೆಲ್ಲವನ್ನೂ ಇಷ್ಟು ದೊಡ್ಡದನ್ನಾಗಿ ಮಾಡಿ ಇದೆಲ್ಲವನ್ನೂ ವ್ಯಾಪಿಸಿಕೊಂಡು ಇರುತ್ತೀಯೆ. ಮತ್ತು ಕೊನೆಯಲ್ಲಿ ಇದನ್ನು ನಾಶ ಮಾಡುತ್ತೀಯೆ. ಇವೆಲ್ಲಕ್ಕೂ ಅಧಿಪತಿ ಎಂದು ಹೇಳಿಸಿಕೊಳ್ಳುವ ಚತುರ್ಮುಖ ಬ್ರಹ್ಮನೇ ಮೊದಲಾದ ಕೆಲವರು ಯಾರೂ ನಿನಗಿಂತ ಹೆಚ್ಚಾದವರಾಗಿಲ್ಲ ಎಂದು ಸ್ತೋತ್ರಮಾಡಿದನು

೪೨. ವಾಯುದೇವನಿಂತೆಂದನು.—ಅಪಾರ ದಯಾಶಾಲಿಯಾದ ಶಿವನು, ಚಿಂತಾಗ್ರಸ್ತನಾಗಿ ಹೀಗೆ ಹೇಳುತ್ತಾ ಅಳುತ್ತಿರುವ ದಕ್ಷಬ್ರಹ್ಮನನ್ನು ನೋಡಿ, ಅವನು ಅಪರಾಧವನ್ನು ಮಾಡಿದವನಾದಾಗ್ಯು ಅವನ ವಿಷಯದಲ್ಲಿ ದಯೆಯಿಟ್ಟು ಮಂದಹಾಸದಿಂದ—ನೀನು ಹೆದರಬೇಡ ಎಂದು ಅವನಿಗೆ ಅಭಯವನ್ನು ಕೊಟ್ಟನು.

ತಥೋಕ್ತ್ವಾ ಬ್ರಹ್ಮಣಸ್ತಸ್ಯ ಪಿತುಃ ಪ್ರಿಯಚಿಕೀರ್ಷಯಾ ।
ಗಾಣಪತ್ಯಂ ದದೌ ತಸ್ಮೈ ದಕ್ಷಾಯಾಕ್ಷಯಮೀಶ್ವರಃ ॥ ೪೩ ॥

ತತೋ ಬ್ರಹ್ಮಾದಯೋ ದೇವಾ ಅಭಿವಂದ್ಯ ಕೃತಾಂಜಲಿಃ ।
ತುಷ್ಟುವುಃ ಪ್ರಶ್ರಯಾ ವಾಚಾ ಶಂಕರ ಗಿರಿಜಾಧಿಪಂ ॥ ೪೪ ॥

॥ ಬ್ರಹ್ಮಾದಯ ಊಚುಃ ॥

ಜಯ ಶಂಕರ ದೇವೇಶ ದೀನಾನಾಥ ಮಹಾಪ್ರಭೋ ।
ಕೃಪಾಂ ಕುರು ಮಹೇಶಾನಾಪರಾಧಂ ನೋ ಕ್ಷಮಸ್ವ ವೈ ॥ ೪೫ ॥

ಮಖಪಾಲ ಮಖಾಧೀಶ ಮಖವಿಧ್ವಂಸಕಾರಕ ।
ಕೃಪಾಂ ಕುರು ಮಹೇಶಾನಾಪರಾಧಂ ನಃ ಕ್ಷಮಸ್ವ ವೈ ॥ ೪೬ ॥

---

೪೩. ಈಶ್ವರನು ದಕ್ಷಬ್ರಹ್ಮನಿಗೆ ಹೀಗೆ ಹೇಳಿದ್ದಲ್ಲದೆ ಆವನ ತಂದೆಯಾದ ಬ್ರಹ್ಮನಿಗೆ ಹಿತವನ್ನು ಮಾಡುವುದಕ್ಕಾಗಿ ದಕ್ಷಬ್ರಹ್ಮನಿಗೆ ಶಾಶ್ವತವಾದ ಗಣೇಶ್ವರನ ಪದವಿಯನ್ನು ಕೊಟ್ಟನು.

೪೪. ಅನಂತರ ಬ್ರಹ್ಮನೇ ಮೊದಲಾದ ದೇವತೆಗಳು, ಶಿವನಿಗೆ ನಮಸ್ಕಾರ ಮಾಡಿ ವಿನಯಭಾವದಿಂದ ಕೂಡಿರುವ ಸ್ತೋತ್ರಗಳಿಂದ ಪಾರ್ವತೀಪತಿಯಾದ ಶಿವನನ್ನು ಇಂತು ಸ್ತುತಿಸಿದರು.

೪೫. ಎಲೈ ಶಂಕರನೇ, ನೀನು ದೇವತೆಗಳಿಗೆ ಅಧಿಪತಿಯು. ದುಃಖದಿಂದ ಬಳಲುವವರಿಗೂ, ದಿಕ್ಕಿಲ್ಲದವರಿಗೂ, ನೀನೇ ಸುಖವನ್ನುಂಟುಮಾಡುವೆ. ಮಹಾ ಪ್ರಭುವಾದ ಮಹೇಶ್ವರನಾದ ಎಲೈ ಶಂಕರನೇ, ನಿನಗೆ ಜಯವಾಗಲಿ ನಮ್ಮ ತಪ್ಪು ಗಳನ್ನು ಕ್ಷಮಿಸು.

೪೬. ಎಲೈ ಮಹೇಶ್ವರನೇ, ನೀನೇ ಯಜ್ಞವನ್ನು ಸಂರಕ್ಷಿಸುವವನು. ಯಜ್ಞಾಧಿಪತಿಯೂ ನೀನೇ. ಯಜ್ಞವನ್ನು ನಾಶಮಾಡುವವನೂ ನೀನೇ. ಆದುದ ರಿಂದ ಎಲೈ ಮಹೇಶ್ವರನೇ! ನಮ್ಮಲ್ಲಿ ದಯೆಯನ್ನು ತೋರಿ ನಮ್ಮ ಅಪರಾಧಗಳನ್ನು ಕ್ಷಮಿಸು.

ದೇವದೇವ ಪರೇಶಾನ ಭಕ್ತಪ್ರಾಣಪ್ರಪೋಷಕ ।
ದುಷ್ಟದಂಡಪ್ರದಸ್ವಾಮಿನ್ಕೃಪಾಂ ಕುರು ನಮೋಽಸ್ತು ತೇ ॥ ೪೭ ॥

ತ್ವಂ ಪ್ರಭೋ ಗರ್ವಹರ್ತಾ ವೈ ದುಷ್ಟಾನಾಂ ತ್ವಾಮಜಾನತಾಂ ।
ರಕ್ಷಕೋ ಹಿ ವಿಶೇಷೇಣ ಸತಾಂ ತ್ವತ್ಸಕ್ತಚೇತಸಾಂ ॥ ೪೮ ॥

ಅದ್ಭುತಂ ಚರಿತಂ ತೇ ಹಿ ನಿಶ್ಚಿತಂ ಕೃಪಯಾ ತವ ।
ಸರ್ವಾಪರಾಧಃ ಕ್ಷಂತವ್ಯೋ ವಿಭವೋ ದೀನವತ್ಸಲಾಃ ॥ ೪೯ ॥

॥ ವಾಯುರುವಾಚ ॥

ಇತಿ ಸ್ತುತೋ ಮಹಾದೇವೋ ಬ್ರಹ್ಮಾದ್ಯೈರಮರೈಃ ಪ್ರಭುಃ ।
ಸ ಭಕ್ತವತ್ಸಲಸ್ವಾಮೀ ತುತೋಷ ಕರುಣೋದಧಿಃ ॥ ೫೦ ॥

ಚಕಾರಾನುಗ್ರಹಂ ತೇಷಾಂ ಬ್ರಹ್ಮಾದೀನಾಂ ದಿವೌಕಸಾಂ ।
ದದೌ ವರಾಂಶ್ಚ ಸುಪ್ರೀತ್ಯಾ ಶಂಕರೋ ದೀನವತ್ಸಲಃ ॥ ೫೧ ॥

---

೪೭. ಎಲೈ ದೇವದೇವನೆ! ಓ ಪ್ರಭುವೆ! ನೀನು ಭಕ್ತರ ಪ್ರಾಣವನ್ನು ಚನ್ನಾಗಿ ಪೋಷಿಸಿ ದುಷ್ಟರಿಗೆ ಶಿಕ್ಷೆಯನ್ನು ಕೊಡುವೆ. ಇಂತಹ ನಿನಗೆ ನಮಸ್ಕಾರ ಮಾಡುವೆವು. ನಮ್ಮಲ್ಲಿ ದಯೆಯನ್ನು ಇರಿಸು.

೪೮. ನೀನು ಸರ್ವರಿಗೂ ಪ್ರಭುವಾಗಿರುವೆ. ನಿನ್ನನ್ನು ತಿಳಿಯದೆ ಇರುವ ದುಷ್ಟರ ಅಹಂಕಾರವನ್ನು ಅಡಗಿಸುತ್ತೀಯೆ. ನಿನ್ನನ್ನು ಯಾವಾಗಲೂ ಸೇವಿಸುತ್ತಿರುವ ಸತ್ಪುರುಷರನ್ನು ವಿಶೇಷವಾದ ಆದರದಿಂದ ರಕ್ಷಿಸುತ್ತೀಯೆ.

೪೯. ನಿನ್ನ ದಯೆಯಿಂದ ಅತ್ಯಾಶ್ಚರ್ಯಕರವಾದ ನಿನ್ನ ಮಹಿಮೆಯನ್ನು ತಿಳಿದುಕೊಂಡೆವು. ನಿನ್ನ ಭಕ್ತರ ವಿಷಯದಲ್ಲಿ ಅಪಾರವಾದ ಕರುಣೆಯನ್ನು ತೋರುವ ಮಹಾಪ್ರಭುವಾದ ನೀನು ನಮ್ಮ ಎಲ್ಲಾ ವಿಧವಾದ ಅಪರಾಧಗಳನ್ನು ಕ್ಷಮಿಸಬೇಕೆಂದು ಬೇಡುವೆವು ಎಂದರು.

೫೦-೫೧. ವಾಯುದೇವನು ಹೇಳಿದನು—ಬ್ರಹ್ಮನೇ ಮೊದಲಾದ ದೇವತೆಗಳು ಪ್ರಭುವಾದ ಮಹಾದೇವನನ್ನು ಹೀಗೆ ಹೊಗಳಿದನಂತರ ದಯಾಸಮುದ್ರನೂ, ಭಕ್ತರಲ್ಲಿ ಪ್ರೀತಿಯುಳ್ಳವನೂ ಆದ ಆ ಶಿವನು ಅವರ ವಿಷಯದಲ್ಲಿ ಸಂತುಷ್ಟನಾಗಿ, ಬ್ರಹ್ಮನೇ ಮೊದಲಾದ ದೇವತೆಗಳಿಗೆ ಅನುಗ್ರಹವನ್ನು ಮಾಡಿ, ಪ್ರೀತಿಯಿಂದ ಅವರಿಗೆ ಬೇಕಾದ ವರಗಳನ್ನು ಕೊಟ್ಟನು.

ಸ ಚ ತತಸ್ತ್ರಿದಶಾಂಛರಣಾಗತಾನ್
ಪರಮಕಾರುಣಿಕಃ ಪರಮೇಶ್ವರಃ ।
ಅನುಗತಸ್ಮಿತಲಕ್ಷಣಯಾ ಗಿರಾ
ಶಮಿತಸರ್ವಭಯಃ ಸಮಭಾಷತ ॥ ೫೨ ॥

॥ ಶಿವ ಉವಾಚ ॥

ಯದಿದಮಾಗ ಇಹಾಚರಿತಂ ಸುರೈ-
ರ್ವಿಧಿನಿಯೋಗವಶಾದಿವ ಯಂತ್ರಿತೈಃ ।
ಶರಣಮೇವ ಗತಾನವಲೋಕ್ಯ ವ-
ಸ್ತದಖಿಲಂ ಕಿಲ ವಿಸ್ಮೃತಮೇವ ನಃ ॥ ೫೩ ॥

ತದಿಹ ಯೂಯಮಪಿ ಪ್ರಕೃತಂ ಮನ-
ಸ್ಯವಿಗಣಯ್ಯ ವಿಮರ್ದಮಪತ್ರಪಾಃ ।
ಹರಿವಿರಿಂಚಿಸುರೇಂದ್ರಮುಖಾಸ್ಸುಖಂ
ವ್ರಜತ ದೇವಪುರಂ ಪ್ರತಿ ಸಂಪ್ರತಿ ॥ ೫೪ ॥

ಇತಿ ಸುರಾನಭಿಧಾಯ ಸುರೇಶ್ವರೋ
ನಿಕೃತದಕ್ಷಕೃತಕ್ರತುರಕ್ರತುಃ ।

---

೫೨ ತನಗೆ ಶರಣು ಬಂದಿರುವ ದೇವತೆಗಳಿಗೆ ತನ್ನಿಂದ ಉಂಟಾಗಬಹುದಾದ ಭಯವೆಲ್ಲವೂ ಹೋಗುವಂತೆ ಅಭಯವನ್ನು ಕೊಟ್ಟು ಮಂದಹಾಸವನ್ನು ಸೂಸುತ್ತಾ ಮೃದುಮಧುರವಾದ ಮಾತುಗಳಿಂದಿಂತೆಂದನು—

೫೩. ವಿಧಿವಶಕ್ಕೆ ಬದ್ಧರಾಗಿ ದೇವತೆಗಳಾದ ನೀವು ನಮ್ಮ ವಿಷಯದಲ್ಲಿ ಅಪರಾಧವನ್ನು ಮಾಡಿದ್ದಾಗ್ಯೂ ಈಗ ನಮಗೆ ಶರಣುಬಂದಿರುವುದರಿಂದ ನಿಮ್ಮ ಅಪರಾಧಗಳೆಲ್ಲವನ್ನೂ ನಾವು ಕ್ಷಮಿಸಿರುತ್ತೇವೆ. ಮತ್ತು ಅವುಗಳನ್ನು ನಾವು ಸ್ಮರಿಸುತ್ತಿಲ್ಲ.

೫೪. ನಾವು ನಿಮ್ಮ ತಪ್ಪನ್ನು ಮನ್ನಿಸಿರುವುದರಿಂದ ವಿಷ್ಣು, ಬ್ರಹ್ಮ, ಇಂದ್ರ ಮೊದಲಾದ ನೀವುಗಳೂ ಕೂಡ ಪ್ರಕೃತ ಸಂದರ್ಭದಲ್ಲಿ ನಾವು ಮಾಡಿದ ಶಿಕ್ಷೆಯನ್ನು ಗಣನೆಗೆ ತಾರದೆ ನಮ್ಮಿಂದ ನಿಮಗೆ ಉಂಟಾದ ಅವಮಾನವನ್ನು ಮರೆತು ಸುಖವಾಗಿ ನಿಮ್ಮ ನಿಮ್ಮ ಪಟ್ಟಣಕ್ಕೆ ಪ್ರಯಾಣಮಾಡಿರಿ ಎಂದನು.

ಸ ಗಿರಿಜಾನುಚರಸ್ಸಪರಿಚ್ಛದಃ
ಸ್ಥಿತ ಇವಾಂಬರತೋಽಂತರದಾದ್ಧರಃ ॥ ೫೫ ॥

ಅಥ ಸುರಾ ಅಪಿ ತೇ ವಿಗತವ್ಯಥಾಃ
ಕಥಿತಭದ್ರಸುಭದ್ರಪರಾಕ್ರಮಾಃ ।
ಸಪದಿ ಖೇನ ಸುಖೇನ ಯಥಾಸುಖಂ
ಯಯುರನೇಕಮುಖಾ ಮುಘವನ್ಮುಖಾಃ ॥ ೫೬ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾಂ ಪೂರ್ವಭಾಗೇ ಗಿರಿಶಾನುನಯೋ ನಾಮ ತ್ರಯೋಽವಿಂಶೋಽಧ್ಯಾಯಃ



---

೫೫. ದಕ್ಷಯಜ್ಞವನ್ನು ನಾಶಮಾಡಿದ ಶಿವನು ದೇವತೆಗಳ ಸಂಗಡ ಹೀಗೆ ಮಾತನಾಡಿ, ಪಾರ್ವತಿಯೊಡನೆಯೂ ತನ್ನ ಅನುಚರರು ಮತ್ತು ಪರಿವಾರದವರೊಡನೆಯೂ ಆ ಕ್ಷಣದಲ್ಲಿಯೇ ಈ ದೇವತೆಗಳ ಕಣ್ಣಿಗೆ ಕಾಣಿಸದಂತೆ ಅಂತರಿಕ್ಷದಲ್ಲಿ ಅದೃಶ್ಯನಾದನು.

೫೬. ಇಂದ್ರನೇ ಮೊದಲಾದ ಆ ದೇವತೆಗಳೂಕೂಡ ದುಃಖರಹಿತರಾಗಿ ವೀರಭದ್ರನ ಅತಿಶಯವಾದ ಪರಾಕ್ರಮದ ವಿಷಯದ ಮಾತುಗಳನ್ನಾಡುತ್ತಾ ಅಂತರಿಕ್ಷಮಾರ್ಗದಿಂದ ತಮ್ಮ ತಮ್ಮ ಸ್ಥಾನಗಳನ್ನು ಕುರಿತು ಎಲ್ಲರೂ ಸುಖದಿಂದ ಪ್ರಯಾಣಮಾಡಿದರು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯ ಸಂಹಿತೆಯ ಪೂರ್ವಭಾಗದಲ್ಲಿ ಶಿವನನ್ನು ಸಮಾಧಾನಮಾಡಿದ ವಿಷಯವನ್ನು ಹೇಳುವ ಗಿರಿಶಾನುನಯವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ಚತುರ್ವಿಂಶೋಽಧ್ಯಾಯಃ

---

॥ ಋಷಯ ಊಚುಃ ॥

ಅಂತರ್ಧಾನಗತೋ ದೇವ್ಯಾ ಸಹ ಸಾನುಚರೋ ಹರಃ !
ಕ್ವ ಯಾತಃ ಕುತ್ರ ವಾ ವಾಃ ಕಿಂ ಕೃತ್ವಾ ವಿರರಾಮ ಹ ॥ ೧ ॥

॥ ವಾಯುರುವಾಚ ॥

ಮಹೀಧರವರಃ ಶ್ರೀಮಾನ್ಮಂದರಶ್ಚಿತ್ರಕಂದರಃ ।
ದಯಿತೋ ದೇವದೇವಸ್ಯ ನಿವಾಸಸ್ತಪಸೋಽಭವತ್ ॥ ೨ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧. ಋಷಿಗಳು ಪ್ರಶ್ನೆಮಾಡಿದರು.--ಹರನು ಪಾರ್ವತಿ ಮತ್ತು ತನ್ನ ಇತರ ಪರಿವಾರದೊಡನೆ ದೇವತೆಗಳ ಎದುರಿಗೆ ಅಂತರ್ಧಾನವನ್ನು ಹೊಂದಿದನಂತರ ಅವನು ಎಲ್ಲಿಗೆ ಹೋದನು ? ಎಲ್ಲಿ ವಾಸಮಾಡಿದನು ? ಯಾವ ಕಾರ್ಯವನ್ನು ಮಾಡಿದನು? ಇದನ್ನೆಲ್ಲಾ ನಮಗೆ ತಿಳಿಸಬೇಕೆನ್ನಲು,

೨. ವಾಯುದೇವನಿಂತೆಂದನು—ಮಂದರವೆಂದು ಹೆಸರುಳ್ಳ ಶ್ರೇಷ್ಠವಾದ ಪರ್ವತವೊಂದಿರುವುದು. ಅದು ನಾನಾವಿಧವಾದ ಗುಹೆಗಳಿಂದ ಮನೋಹರವಾಗಿರುವುದು. ಆ ಪರ್ವತವು ದೇವದೇವನಾದ ಶಿವನಿಗೆ ಬಹಳ ಪ್ರೀತಿಪಾತ್ರವಾಗಿಯೂ ತಪಸ್ವಿಗಳಿಗೆ ತಪಸ್ಸನ್ನು ಮಾಡಲು ಅನುಕೂಲವಾಗಿಯೂ ಇದ್ದಿತು.

**ತಪೋ ಮಹತ್ಕೃತಂ ತೇನ ವೋಢುಂ ಸ್ವಶಿರಸಾ ಶಿವೌ ।**
**ಚಿರೇಣ ಲಬ್ಧಂ ತತ್ಪಾದಪಂಕಜಸ್ಪರ್ಶನಂ ಸುಖಂ ॥ ೩ ॥**

**ತಸ್ಯ ಶೈಲಸ್ಯ ಸೌಂದರ್ಯಂ ಸಹಸ್ರವದನೈರಪಿ ।**
**ನ ಶಕ್ಯಂ ವಿಸ್ತರಾದ್ವಕ್ತುಂ ವರ್ಷಕೋಟಿಶತೈರಪಿ ॥ ೪ ॥**

**ಶಕ್ಯಮಪ್ಯಸ್ಯ ಸೌಂದರ್ಯಂ ನ ವರ್ಣಯಿತುಮುತ್ಸಹೇ ।**
**ಪರ್ವತಾಂತರಸೌಂದರ್ಯಂ ಸಾಧಾರಣವಿಧಾರಣಾತ್ ॥ ೫ ॥**

**ಇದಂ ತು ಶಕ್ಯತೇ ವಕ್ತುಮಸ್ಮಿನ್ ಪರ್ವತಸುಂದರೇ ।**
**ಮುದ್ರಾಖ್ಯ ಕಯಾಪಿ ಸೌಂದರ್ಯಮೀಶ್ವರಾವಾಸಯೋಗ್ಯತಾ ॥ ೬ ॥**

---

೩. ಆ ಮಂದರಗಿರಿಯು ಬಹಳ ಕಾಲದಿಂದಲೂ ಪಾರ್ವತೀಪರಮೇಶ್ವರರ ಪಾದಕಮಲಗಳ ಸ್ಪರ್ಶದಿಂದ ಉಂಟಾಗುವ ಸುಖಾನುಭಕ್ಕಾಗಿಯೂ, ಆ ಶಿವದಂಪತಿಗಳು ತನ್ನ ಶಿಖರದಲ್ಲಿ ಯಾವಾಗಲೂ ವಾಸಮಾಡುವುದಕ್ಕೆ ತಕ್ಕ ಯೋಗ್ಯತೆಯನ್ನು ಹೊಂದುವುದಕ್ಕಾಗಿಯೂ ಬಹಳವಾದ ತಪಸ್ಸನ್ನು ಮಾಡಿದ್ದಿತು.

೪. ಆ ಪರ್ವತದ ಸೌಂದರ್ಯವನ್ನು ಸಾವಿರ ಮುಖಗಳಿಂದ ನೂರುಕೋಟಿ ವರ್ಷಗಳವರೆಗೆ ವರ್ಣನೆಯನ್ನು ಮಾಡಿದರೂ ಅದನ್ನು ವಿಸ್ತಾರವಾಗಿ ವಿವರಿಸಲಸಾಧ್ಯವು.

೫. ಇತರ ಪರ್ವತಗಳಲ್ಲಿರುವ ಮನೋಹರತ್ವವು ಸಾಮಾನ್ಯವೆಂದು ಹೇಳಬಹುದು. ಆದರೆ ಈ ಪರ್ವತದ ಸೌಂದರ್ಯವು ಎಲ್ಲಾ ಪರ್ವತಗಳ ಸೌಂದರ್ಯವನ್ನೂ ಮೀರಿಸಿರುವುದೆಂದು ಮಾತ್ರ ಹೇಳಬಹುದು.

೬. ಮತ್ತು ಈ ಪರ್ವತವು ಈಶ್ವರನು ವಾಸಮಾಡಲು ತಕ್ಕಷ್ಟು ಯೋಗ್ಯತೆಯನ್ನು ಹೊಂದಿರುವುದು. ಬೇರೆ ಪರ್ವತಗಳಲ್ಲಿರುವುದಕ್ಕಿಂತ ಈ ಪರ್ವತದಲ್ಲಿ ಯಾವುದೋ ಒಂದು ವಿಧವಾದ ಅತಿಶಯವಿರುವುದೆಂದೂ ಅದರಿಂದ ಇದರ ಸೌಂದರ್ಯವು ವರ್ಣನಾತೀತವೆಂದೂ ಹೇಳಲು ಮಾತ್ರ ಸಾಧ್ಯವಾಗಿರುವುದು.

ಅತ ಏವ ಹಿ ದೇವೇನ ದೇವ್ಯಾಃ ಪ್ರಿಯಚಿಕೀರ್ಷಯಾ ।
ಅತೀವ ರಮಣೀಯೋಽಯಂ ಗಿರಿರಂತಃಪುರೀಕೃತಃ ॥ ೭ ॥

ಮೇಖಲಾಭೂಮಯಸ್ತಸ್ಯ ವಿಮಲೋಪಲಪಾದಪಾಃ ।
ಶಿವಯೋರ್ನಿತ್ಯಸಾನ್ನಿಧ್ಯಾನ್ನ್ಯಕ್ಕುರ್ವಂತ್ಯಖಿಲಂ ಜಗತ್ ॥ ೮ ॥

ಪಿತೃಭ್ಯಾಂ ಜಗತೋ ನಿತ್ಯಂ ಸ್ನಾನಪಾನೋಪಯೋಗತಃ ।
ಅವಾಪ್ತಪುಣ್ಯಸಂಸ್ಕಾರಃ ಪ್ರಸರದ್ಭಿರಿತಸ್ತತಃ ॥ ೯ ॥

ಲಘುಶೀತಲಸಂಸ್ಪರ್ಶೈರಚ್ಛಾಚ್ಛೈರ್ನಿರ್ಝರಾಂಬುಭಿಃ ।
ಅಧಿರಾಜ್ಯೇನ ಚಾದ್ರೀಣಾಮದ್ರಿರೇಷೋಽಭಿಷಿಚ್ಯತೇ ॥ ೧೦ ॥

ನಿಶಾಸು ಶಿಖರಪ್ರಾಂತವರ್ತಿನಾ ಸ ಶಿಲೋಚ್ಚಯಃ ।
ಚಂದ್ರೇಣಾಚಲಸಾಮ್ರಾಜ್ಯಚ್ಛತ್ರೇಣೇವ ವಿರಾಜತೇ ॥ ೧೧ ॥

---

೭. ಪರಮೇಶ್ವರನ ಮನಸ್ಸನ್ನು ತನ್ನ ಸೌಂದರ್ಯದಿಂದ ಆಕರ್ಷಿಸಿರುವ ಕಾರಣದಿಂದಲೂ ಶಿವನು ಪಾರ್ವತೀದೇವಿಯೊಡನೆ, ಪಾರ್ವತಿಯ ಮನಸ್ಸಿಗೆ ಹಿತವನ್ನು ಮಾಡಲಪೇಕ್ಷೆಯಿಂದಲೂ ಬಹಳ ಸುಂದರವಾದ ಈ ಗಿರಿಯನ್ನು ತನ್ನ ಅಂತಃಪುರವನ್ನಾಗಿ ಮಾಡಿಕೊಂಡಿರುವನು.

೮. ಪರಿಶುದ್ಧವಾದ ಶಿಲೆಗಳಿಂದಲೂ, ವೃಕ್ಷಗಳಿಂದಲೂ ಕೂಡಿ ಈ ಗಿರಿಯ ತಪ್ಪಲಿನ ಪ್ರದೇಶಗಳು ಬಹು ಮನೋಹರವಾಗಿರುವುದಲ್ಲದೆ ಪಾರ್ವತೀಪರಮೇಶ್ವರರು ಯಾವಾಗಲೂ ವಾಸಮಾಡುವುದರಿಂದ ಜಗತ್ತೆಲ್ಲವನ್ನೂ ತಿರಸ್ಕರಿಸುತ್ತಾ ಇರುವುದು.

೯–೧೦. ಅಲ್ಲಲ್ಲಿ ಹರಿಯುತ್ತಿರುವ ಗಿರಿನದಿಗಳು ಜಗತ್ತಿಗೆ ತಾಯಿತಂದೆಗಳಾದ ಪಾರ್ವತೀಪರಮೇಶ್ವರರು ಪ್ರತಿದಿನವೂ ಸ್ನಾನಪಾನಗಳಿಗೆ ಉಪಯೋಗಿಸುವುದರಿಂದ ಪವಿತ್ರವಾಗಿರುವವು. ಆ ನದಿಗಳ ನೀರು ಬಹಳ ನಿರ್ಮಲವಾಗಿಯೂ ಶೀತಲವಾಗಿಯೂ ಇರುವುದು. ಇಂತಹ ನದಿಗಳಿಂದ ಕೂಡಿದ ಈ ಗಿರಿಯನ್ನು ಎಲ್ಲಾ ಪರ್ವತಗಳಿಗೂ ರಾಜನೆಂಬ ಸ್ಥಾನದಲ್ಲಿ ಪಟ್ಟಾಭಿಷೇಕಮಾಡಿರುವುದು ಉಚಿತವಾಗಿರುತ್ತದೆ.

೧೧. ರಾತ್ರಿಯಕಾಲದಲ್ಲಿ ಈ ಪರ್ವತವು ತನ್ನ ಶಿಖರದ ಸಮೀಪದಲ್ಲಿ ಬೆಳಗುತ್ತಿರುವ ಚಂದ್ರನಿಂದ ಪರ್ವತರಾಜನಾದ ತಾನು ರಾಜಚಿಹ್ನೆಯಾದ ಶ್ವೇತ

**ಸ ಶೈಲಶ್ಚಂಚಲೀಭೂತೈರ್ಬಾಲೈಶ್ಚಾಮರಯೋಷಿತಾಂ ।**
**ಸರ್ವಪರ್ವತಸಾಮ್ರಾಜ್ಯಚಾಮರೈರಿವ ವೀಜ್ಯತೇ ॥ ೧೨ ॥**

**ಪ್ರಾತರಭ್ಯುದಿತೇ ಭಾನೌ ಭೂಧರೋ ರತ್ನಭೂಷಿತಃ ।**
**ದರ್ಪಣೇ ದೇಹಸೌಭಾಗ್ಯಂ ದ್ರಷ್ಟುಕಾಮ ಇವ ಸ್ಥಿತಃ ॥ ೧೩ ॥**

**ಕೂಜದ್ವಿಹಂಗವಾಚಾಲೈರ್ವಾತೋದ್ಧೂತಲತಾಭುಜೈಃ ।**
**ವಿಮುಕ್ತಪುಷ್ಪೈಃ ಸತತಂ ವ್ಯಾಲಂಬಿಮೃದುಪಲ್ಲವೈಃ ॥ ೧೪ ॥**

**ಲತಾಪ್ರತಾನಜಟಿಲೈಸ್ತರುಭಿಸ್ತಾಪಸೈರಿವ ।**
**ಜಯಾಶಿಷಾ ಸಹಾಭ್ಯರ್ಚ್ಯ ನಿಷೇವ್ಯತ ಇವಾದ್ರಿರಾಟ್ ॥ ೧೫ ॥**

---

ಚ್ಛತ್ರಿಯನ್ನು ಹಿಡಿಸಿಕೊಂಡಂತೆ ಪ್ರಕಾಶಿಸುತ್ತಿರುವದು ಎಂದರೆ ಈ ಗಿರಿಯು ಶಿಖರದ ಹತ್ತಿರದಲ್ಲಿ ಬೆಳಗುತ್ತಿರುವ ಚಂದ್ರನು ಗಿರಿರಾಜನಾದ ಈ ಗಿರಿಯು ಸಾಮ್ರಾಜ್ಯ ಸೂಚಕವಾದ ಛತ್ರಿಯಂತೆ ಒಪ್ಪುತ್ತಿರುವನು.

೧೨. ಚಂಚಲವಾಗಿ ಇಲ್ಲಿಂದಲ್ಲಿಗೆ ಓಡಾಡುತ್ತಿರುವ ಹೆಣ್ಣು ಚಮರೀಮೃಗಗಳಿಂದ ಆ ಪರ್ವತವು ಸಾಮ್ರಾಜ್ಯಸೂಚಕವಾದ ಚಾಮರಗಳಿಂದ ಬೀಸಲ್ಪಡುವ ಹಾಗೆ ಪ್ರಕಾಶಿಸುತ್ತಿರುವುದು.

೧೩. ಬೆಳಗಾದಕೂಡಲೆ ಸೂರ್ಯನು ಉದಯಿಸಿದಾಗ ರತ್ನಗಳಿಂದ ಕೂಡಿದ ಆ ಪರ್ವತವು ಕನ್ನಡಿಯಲ್ಲಿ ತನ್ನ ಶರೀರದ ಸೌಂದರ್ಯವನ್ನು ನೋಡಿಕೊಳ್ಳಲು ಇಚ್ಛೆಯುಳ್ಳವನಂತೆ ಕಾಣಿಸುವುದು.

೧೪-೧೫. ಮಾತನಾಡುತ್ತಿರುವಂತೆ ಕೂಗುತ್ತಿರುವ ಹಕ್ಕಿಗಳಿಂದಲೂ, ಗಾಳಿಯಿಂದ ಅಲುಗಾಡುತ್ತಿರುವ ಭುಜಗಳಂತಿರುವ ಬಳ್ಳಿಗಳಿಂದಲೂ, ಜೋಲಾಡುತ್ತಿರುವ ಮೃದುವಾದ ಚಿಗುರುಗಳ ಜೊತೆಯಲ್ಲಿ ಯಾವಾಗಲೂ ಉದುರುತ್ತಿರುವ ಹೂವುಗಳಿಂದಲೂ, ತಪಸ್ಸನ್ನು ಮಾಡುವವರಂತೆ ಇರುವ ಬಳ್ಳಿಗಳ ಪೊದೆಗಳಿಂದಲೂ, ಕೂಡಿದ ಈ ಪರ್ವತರಾಜನು ಜಯಧ್ವನಿ ಪೂರ್ವಕವಾಗಿ ಪೂಜಾದಿಗಳಿಂದ ಸೇವಿಸಲ್ಪಡುವ ಹಾಗೆ ಕಾಣಿಸುವನು.

ಅಧೋಮುಖೈರೂರ್ಧ್ವಮುಖೈಶ್ಶೃಂಗೈಸ್ತಿರ್ಯಙ್ಮುಖೈಸ್ತಥಾ ।
ಪ್ರಪತನ್ನಿವ ಪಾತಾಲೇ ಭೂಪೃಷ್ಠಾದುತ್ಪತನ್ನಿವ ॥ ೧೬ ॥

ಪರೀತಃ ಸರ್ವತೋ ದಿಕ್ಷು ಭ್ರಮನ್ನಿವ ವಿಹಾಯಸಿ ।
ಪಶ್ಯನ್ನಿವ ಜಗತ್ಸರ್ವಂ ನೃತ್ಯನ್ನಿವ ನಿರಂತರಂ ॥ ೧೭ ॥

ಗುಹಾಮುಖೈಃ ಪ್ರತಿದಿನಂ ವ್ಯಾತ್ತಾಸ್ಯೋ ವಿಪುಲೋದರೈಃ ।
ಅಜೀರ್ಣಲಾವಣ್ಯತಯಾ ಜೃಂಭಮಾಣ ಇವಾಚಲಃ ॥ ೧೮ ॥

ಗ್ರಸನ್ನಿವ ಜಗತ್ಸರ್ವಂ ಪಿಬನ್ನಿವ ಪಯೋನಿಧಿಂ ।
ವಮನ್ನಿವ ತಮೋಽನ್ತಸ್ಥಂ ಮಾದ್ಯನ್ನಿವ ಖಮಂಬುದೈಃ ॥ ೧೯ ॥

ನಿವಾಸಭೂಮಯಸ್ತಾಸ್ತಾ ದರ್ಪಣಪ್ರತಿಮೋದರಾಃ ।
ತಿರಸ್ಕೃತಾತಪಾಸ್ನಿಗ್ಧಾಶ್ರಮಚ್ಛಾಯಾ ಮಹೀರುಹಾಃ ॥ ೨೦ ॥

೧೬-೧೮ ಆ ಮಂದರಪರ್ವತದ ಶಿಖರಗಳು ನಾನಾದಿಕ್ಕುಗಳಿಗೂ ಪ್ರಸರಿಸಿದ್ದವು. ಕೆಳಮುಖನಾಗಿರುವ, ಶಿಖರಗಳಿಂದ ಪಾತಾಳಕ್ಕೆ ಬೀಳುವಂತೆಯೂ, ಊರ್ಧ್ವಮುಖ ಶಿಖರಗಳಿಂದ ಭೂಮಿಯಿಂದ ಮೇಲಕ್ಕೆ ಹಾರುವಂತೆಯೂ ಅಡ್ಡಲಾಗಿ ಹರಡಿರುವ ಇತರ ಶಿಖರಗಳಿಂದ ಎಲ್ಲಾ ದಿಕ್ಕಿನಿಂದಲೂ ಆಕಾಶಕ್ಕೆ ಹಾರಿ ಅಲ್ಲಿ ಸುತ್ತುವಂತೆಯೂ, ಜಗತ್ತೆಲ್ಲವನ್ನೂ ಮೇಲಿದ್ದುಕೊಂಡು ನೋಡುವವನಂತೆಯೂ, ಯಾವಾಗಲೂ ನರ್ತನಮಾಡುವವನಂತೆಯೂ, ಕಾಣಿಸುತ್ತಿತ್ತು. ಅದರ ವಿಸ್ತಾರವಾದ ಗುಹೆಗಳನ್ನು ನೋಡಿದರೆ ಬಾಯಿತೆರೆದುಕೊಂಡು ಇರುವವನಂತೆಯೂ, ಆಕಳಿಸುವಂತೆಯೂ ಕಾಣುತ್ತಿತ್ತು. ತನ್ನ ಅಪಾರವಾದ ಸೌಂದರ್ಯದಿಂದ ಜಗತ್ತನ್ನೇ ದಿಗ್ಭ್ರಮೆಗೊಳಿಸುತ್ತಿತ್ತು.

೧೯. ಆ ಮಂದರಗಿರಿಯು ಪ್ರಪಂಚವೆಲ್ಲವನ್ನೂ ನುಂಗುವಂತೆಯೂ, ಸಮುದ್ರವನ್ನು ಕುಡಿಯುವಂತೆಯೂ, ತನ್ನವಳಗೆ ಇರುವ ಕಗ್ಗತ್ತಲೆಯನ್ನು ಹೊರಕ್ಕೆ ಎತ್ತಿಹಾಕುವಂತೆಯೂ, ಮೋಡಗಳಿಂದ ಅಂತರಿಕ್ಷವನ್ನು ಮರ್ದಿಸುವಂತೆಯೂ ಕಾಣಿಸುತ್ತಿತ್ತು.

೨೦-೨೧. ಆ ಗಿರಿಯಲ್ಲಿರುವ ವಾಸಕ್ಕೆ ಯೋಗ್ಯವಾದ ಪ್ರದೇಶಗಳು ಕನ್ನಡಿಯಂತೆ ಹೊಳೆಯುತ್ತಾ ಅಂದವಾಗಿದ್ದುವು. ದಟ್ಟವಾದ ಮರಗಳು ಬಿಸಲಿನ ತಾಪ

ಸರಿತ್ಸರಸ್ತಡಾಗಾದಿಸಂಪರ್ಕಶಿಶಿರಾನಿಲಾಃ ।
ತತ್ರ ತತ್ರ ನಿಷಣ್ಣಾಭ್ಯಾಂ ಶಿವಾಭ್ಯಾಂ ಸಫಲೀಕೃತಾಃ ॥ ೨೧ ॥

ತಮಿಮಂ ಸರ್ವತಃ ಶ್ರೇಷ್ಠಂ ಸ್ಮೃತ್ವಾ ಸಾಂಬಸ್ತ್ರಿಯಂಬಕಃ ।
ರೈಭ್ಯಾಶ್ರಮಸಮೀಪಸ್ಥಶ್ಚಾಂತರ್ಧಾನಂ ಗತೋ ಯಯೌ ॥ ೨೨ ॥

ತತ್ರೋದ್ಯಾನಮನುಪ್ರಾಪ್ಯ ದೇವ್ಯಾ ಸಹ ಮಹೇಶ್ವರಃ ।
ರರಾಮ ರಮಣೀಯಾಸು ದಿವ್ಯಾಂತಃಪುರಭೂಮಿಷು ॥ ೨೩ ॥

ತಥಾ ಗತೇಷು ಕಾಲೇಷು ಪ್ರವೃದ್ಧಾಸು ಪ್ರಜಾಸು ಚ ।
ದೈತ್ಯೌ ಶಂಭುನಿಶುಂಭಾಖ್ಯೌ ಭ್ರಾತರೌ ಸಂಬಭೂವತುಃ ॥ ೨೪ ॥

ತಾಭ್ಯಾಂ ತಪೋಬಲಾದ್ದತ್ತಂ ಬ್ರಹ್ಮಣಾ ಪರಮೇಷ್ಠಿನಾ ।
ಅವಧ್ಯತ್ವಂ ಜಗತ್ಯಸ್ಮಿನ್ಪುರುಷೈರಖಿಲೈರಪಿ ॥ ೨೫ ॥

---

ವನ್ನು ಪರಿಹರಿಸುತ್ತಾ ಮನೋಹರಗಳಾಗಿ ಕಂಗೊಳಿಸುತ್ತಿದ್ದವು. ಸರೋವರ, ಕೆರೆ ಮೊದಲಾದ ಜಲಾಶಯ ಪ್ರದೇಶಗಳು ತಂಪಾಗಿರುವ ಗಾಳಿಯಿಂದ ಕೂಡಿ ಅಲ್ಲಲ್ಲಿ ಸಂಚಾರಮಾಡುತ್ತಾ ವಿಹರಿಸುತ್ತಿರುವ ಪಾರ್ವತೀಪರಮೇಶ್ವರರಿಗೆ ಆನಂದ ವನ್ನುಂಟುಮಾಡುತ್ತಿದ್ದವು.

೨೨. ದೇವತೆಗಳಿಗೆ ವರವನ್ನು ಕೊಟ್ಟನಂತರ ರೈಭ್ಯಾಶ್ರಮದ ಸಮೀಪದಲ್ಲಿ ಇದ್ದ ಪರಮೇಶ್ವರನು ಇಷ್ಟು ಮನೋಹರವಾದ ಈ ಪರ್ವತವನ್ನು ಸ್ಮರಿಸಿಕೊಂಡು ಅಲ್ಲಿಂದ ಅದೃಶ್ಯನಾಗಿ ಪಾರ್ವತೀದೇವಿಯೊಡನೆ ಇಲ್ಲಿಗೆ ಬಂದನು.

೨೩. ಆ ಪರ್ವತದಲ್ಲಿರುವ ಉದ್ಯಾನವನ್ನು ಸೇರಿ ಮಹೇಶ್ವರನು ಬಹಳ ಮನೋಹರವಾದ ಅಂತಃಪುರದಂತಿರುವ ಆಯಾಯ ಪ್ರದೇಶಗಳಲ್ಲಿ ಪಾರ್ವತೀ ದೇವಿಯೊಡನೆ ವಿಹಾರಮಾಡುತ್ತಿದ್ದನು.

೨೪-೨೫. ಹೀಗೆ ಕೆಲವುಕಾಲ ಕಳೆದನಂತರ ಶುಂಭ, ನಿಶುಂಭರೆಂಬ ಹೆಸರುಳ್ಳ ಅಣ್ಣತಮ್ಮಂದಿರಾದ ಇಬ್ಬರು ರಾಕ್ಷಸರು ಈ ಪ್ರಪಂಚದಲ್ಲಿ ಹುಟ್ಟಿದರು. ಸತ್ಯಲೋಕ ದಲ್ಲಿ ವಾಸಮಾಡುವ ಬ್ರಹ್ಮನು ಅವರ ಶ್ರೇಷ್ಠವಾದ ತಪಸ್ಸಿಗೆ ಮೆಚ್ಚಿದವನಾಗಿ ಲೋಕದಲ್ಲಿರುವ ಯಾವ ಪುರುಷರಿಂದಲೂ ಇವರಿಗೆ ಮರಣವಾಗದಿರುವಂತೆ ವರವನ್ನು ಕೊಟ್ಟನು.

**ಅಯೋನಿಜಾ ತು ಯಾ ಕನ್ಯಾ ಹ್ಯಂಬಿಕಾಂಶಸಮುದ್ಭವಾ ।**
**ಅಜಾತಪುಂಸ್ಪರ್ಶರತಿರವಿಲಂಘ್ಯಪರಾಕ್ರಮಾ ॥ ೨೬ ॥**

**ತಯಾ ತು ನೌ ವಧಃ ಸಂಖ್ಯೇ ತಸ್ಯಾಂ ಕಾಮಾಭಿಭೂತಯೋಃ ।**
**ಇತಿ ಚಾಭ್ಯರ್ಥಿತೋ ಬ್ರಹ್ಮಾ ತಾಭ್ಯಾಂ ಪ್ರಾಹ ತಥಾಸ್ತ್ವಿತಿ ॥ ೨೭ ॥**

**ತತಃಪ್ರಭೃತಿ ಶಕ್ರಾದೀನ್ವಿಜಿತ್ಯ ಸಮರೇ ಸುರಾನ್ ।**
**ನಿಃಸ್ವಾಧ್ಯಾಯವಷಟ್ಕಾರಂ ಜಗಚ್ಚಕ್ರತುರಕ್ರಮಾತ್ ॥ ೨೮ ॥**

**ತ್ರಯೋವರ್ಧಾಯ ದೇವೇಶಂ ಬ್ರಹ್ಮಾಭ್ಯರ್ಥಿತವಾನ್ಪುನಃ ।**
**ವಿನಿಂದ್ಯಾಪಿ ರಹಸ್ಯಂಬಾಂ ಕ್ರೋಧಯಿತ್ವಾ ಯಥಾ ತಥಾ ॥ ೨೯ ॥**

---

೨೬-೨೭. ಈ ಶುಂಭ ನಿಶಂಭರು ಬ್ರಹ್ಮನಿಂದ ವರವನ್ನು ಕೇಳುವಾಗ ಅಂತು ಯೋಚಿದರು—ನಾವು ಪುರುಷರಿಂದ ಅವಧ್ಯತ್ವವನ್ನೇನೋ ಕೇಳಿದೆವು. ಸ್ತ್ರೀಯರು ಅಬಲೆಯರು. ಅವರಿಂದ ನಮಗೆ ಯಾವ ಭಯವಿರುವುದು ? ಆದರೂ ಈ ವಿಚಾರ ದಲ್ಲಿ ಒಂದುಬುದ್ಧಿವಂತಿಕೆಯನ್ನು ಮಾಡೋಣವೆಂದು ಯೋಚಿಸಿ ಇಂತು ವರವನ್ನು ಬೇಡಿದರು—ಎಲೈ ಬ್ರಹ್ಮನೇ, ಪುರುಷರಿಂದ ನಾವು ಅವಧ್ಯರು. ಆದರೆ ಸ್ತ್ರೀಯರಲ್ಲಿ ಅವಧ್ಯತ್ವವನ್ನು ನಾವು ಬೇಡುವುದಿಲ್ಲ. ಮಹಾಪರಾಕ್ರಮಶಾಲಿಗಳಾದ ನಮಗೆ ಆ ಸ್ತ್ರೀಯರ ವಿಚಾರದಲ್ಲಿ ಭಯವೇನೂ ಇರುವುದಿಲ್ಲ. ಒಂದುವೇಳೆ ಸ್ತ್ರೀಯರಿಂದ ನಮಗೆ ಮರಣವುಂಟಾಗಬೇಕಾಗಿದ್ದಲ್ಲಿ ಆ ಸ್ತ್ರೀಯು ಪಾರ್ವತಿಯ ಅಂಶದಿಂದ ಜನಿಸಿ ಪುರುಷಸಂಪರ್ಕವನ್ನು ಹೊಂದದೆ ಅತಿಶಯ ಪರಾಕ್ರಮದಿಂದ ಕೂಡಿದವಳಾಗಿರ ಬೇಕು. ಇಂತಹ ಸ್ತ್ರೀಯನ್ನು ನಾವು ಕಾಮವಿಕಾರದಿಂದ ಕೆಣಕಿದರೆ ಆಗ ಅವಳು ನಮ್ಮ ಇಚ್ಛೆಯನ್ನು ನಿರಾಕರಿಸಿ ನಮ್ಮೊಡನೆ ಯುದ್ಧಮಾಡಿ ನಮ್ಮನ್ನು ಸಂಹರಿಸ ಬೇಕು. ಇಂತಹ ಸಂದರ್ಭದಲ್ಲಿ ಸ್ತ್ರೀಯಿಂದ ನಮಗೆ ಮರಣವಾಗಬಹುದು. ಆರೀತಿ ವರವನ್ನು ಕೊಡಬೇಕೆಂದು ಬ್ರಹ್ಮನನ್ನು ಪ್ರಾರ್ಥಿಸಲು, ಬ್ರಹ್ಮನು ಅದಕ್ಕೊಪ್ಪಿ ಹಾಗೆಯೇ ಆಗಲೆಂದು ಅವರಿಗೆ ವರವನ್ನು ಕೊಟ್ಟನು.

೨೮. ಅನಂತರ ಅವರಿಬ್ಬರೂ ಇಂದ್ರನೇ ಮೊದಲಾದ ದೇವತೆಗಳನ್ನೆಲ್ಲಾ ಜಯಿಸಿ ಜಗತ್ತಿನಲ್ಲಿ ವೇದಾಧ್ಯಯನವೂ ಯಜ್ಞವೇ ಮೊದಲಾದ ಸತ್ಕರ್ಮಗಳೂ ಯಾವುದೂ ನಡೆಯದಂತೆ ಜಗತ್ತಿನ ಕ್ರಮವನ್ನು (ನಿಯಮವನ್ನು) ಹಾಳು ಮಾಡಿದರು.

**ತದ್ವರ್ಣಕೋಶಜಾಂ ಶಕ್ತಿಮುಕಾಮಾಂ ಕನ್ಯಕಾತ್ಮಿಕಾಂ ।**
**ನಿಶುಂಭಶುಂಭಯೋರ್ಹಂತ್ರೀಂ ಸುರೇಭ್ಯೋ ದಾತುಮರ್ಹಸಿ ॥ ೩೦ ॥**

**ಏವಮಭ್ಯರ್ಥಿತೋ ಧಾತ್ರಾ ಭಗವಾನ್ನೀಲಲೋಹಿತಃ ।**
**ಕಾಲೀತ್ಯಾಹ ರಹಸ್ಯಂಬಾ ನಿಂದಯನ್ನಿವ ಸಸ್ಮಿತಃ ॥ ೩೧ ॥**

**ತತಃ ಕ್ರುದ್ಧಾ ತದಾ ದೇವೀ ಸುವರ್ಣಾ ವರ್ಣಕಾರಣಾತ್ ।**
**ಸ್ಮಯಂತೀ ಚಾಹ ಭರ್ತಾರಮಸಮಾಧೇಯಯಾ ಗಿರಾ ॥ ೩೨ ॥**

**॥ ದೇವ್ಯುವಾಚ ॥**
**ಈದೃಶೇ ಮಮ ವರ್ಣೇಽಸ್ಮಿನ್ನ ರತಿರ್ಭವತೋಽಸ್ತಿ ಚೇತ್ ।**
**ಏತಾವಂತಂ ಚಿರಂ ಕಾಲಂ ಕಥಮೇಷಾ ನಿಯಮ್ಯತೇ ॥ ೩೩ ॥**

೨೯. ಆಗ ಬ್ರಹ್ಮನು ಇವರಿಬ್ಬರ ಸಂಹಾರವನ್ನು ಮಾಡುವುದಕ್ಕಾಗಿ ದೇವ ದೇವನಾದ ಮಹೇಶ್ವರನನ್ನು ಪ್ರಾರ್ಥಿಸಿದನು.

೨೯-೩೦. ಎಲೈ ಮಹೇಶ್ವರನೇ, ನೀನು ರಹಸ್ಯದಲ್ಲಿ ಜಗನ್ಮಾತೆಯಾದ ಪಾರ್ವತೀದೇವಿಯನ್ನು ನಿಂದೆಮಾಡಿ ಅದರಿಂದ ಅವಳಿಗೆ ಕೋಪವು ಬಂದು ಅವಳು, ಕಪ್ಪು ಬಣ್ಣದ ಶರೀರದಿಂದಕೂಡಿ ಕಾಮಾಭಿಲಾಷೆ ಇಲ್ಲದಿರುವ ಓರ್ವ ಕನ್ಯೆಯನ್ನು ಸೃಷ್ಟಿಸುವಂತೆ ಪ್ರಯತ್ನಮಾಡು. ಅದರಿಂದ ಶುಂಭ ನಿಶುಂಭರ ವಧೆಯಾಗಿ ದೇವಕಾರ್ಯವು ಸಿದ್ಧಿಸುವುದು. ಎಂದು ಬ್ರಹ್ಮನು ಶಿವನನ್ನು ಬೇಡಿಕೊಂಡನು.

೩೧. ನೀಲಲೋಹಿತನೆಂದು ಪ್ರಸಿದ್ಧನಾದ ಭಗವಾನ್ ಶಿವನು ನಸುನಗುತ್ತಾ ಬ್ರಹ್ಮನ ಪ್ರಾರ್ಥನೆಯನ್ನು ಮನ್ನಿಸಿ, ಪಾರ್ವತಿಯನ್ನು ರಹಸ್ಯದಲ್ಲಿ ಕಾಳಿ, ಎಂದು ನಿಂದೆಮಾಡುವ ಹಾಗೆ ಕರೆದನು.

೩೨. ಅನಂತರ ದೇವಿಯಾದ ಪಾರ್ವತಿಯು ತನ್ನ ಮೈಯ್ಯಿನ ಬಣ್ಣವು ಸರಿಯಾಗಿದ್ದಾಗ್ಯೂ ತನ್ನ ಪತಿಯೊಡನೆ ವಿಲಾಸದಿಂದ ಇರುವಾಗ ತನ್ನ ಪತಿಯು ತನ್ನನ್ನು ಹಾಗೆ ಕರೆದದ್ದಕ್ಕಾಗಿ ಅಸಮಾಧಾನಗೊಂಡು ಅದನ್ನು ವ್ಯಕ್ತಪಡಿಸಲು ಇಂತು ನುಡಿದಳು.

೩೩. ನನ್ನ ಶರೀರದ ಈ ಕಪ್ಪು ಬಣ್ಣದಿಂದ ನಿನಗೆ ಜುಗುಪ್ಸೆಯುಂಟಾಗಿ ಸುಖವು ತೋರದಿದ್ದಲ್ಲಿ ನಾನು ಮದುವೆಯಾಗಿ ಬಂದ ಕಾಲವೊದಲುಗೊಂಡು

**ಅರತ್ಯಾ ವರ್ತಮಾನೋऽಪಿ ಕಥಂ ಚ ರಮಸೇ ಮಯಾ ।**
**ನ ಹ್ಯಶಕ್ಯಂ ಜಗತ್ಯಸ್ಮಿನ್ನೀಶ್ವರಸ್ಯ ಜಗತ್ಪ್ರಭೋಃ ॥ ೩೪ ॥**

**ಸ್ವಾತ್ಮಾರಾಮಸ್ಯ ಭವತೋ ರತಿರ್ನ ಸುಖಸಾಧನಂ ।**
**ಇತಿ ಹೇತೋಃ ಸ್ಮರೋ ಯಸ್ಮಾತ್ಪ್ರಸಭಂ ಭಸ್ಮಸಾತ್ಕೃತಃ ॥ ೩೫ ॥**

**ಯಾ ಚ ನಾಭಿರತಾ ಭರ್ತುರಪಿ ಸರ್ವಾಂಗಸುಂದರೀ ।**
**ಸಾ ವೃಥೈವ ಹಿ ಜಾಯೇತ ಸರ್ವೈರಪಿ ಗುಣಾಂತರೈಃ ॥ ೩೬ ॥**

**ಭರ್ತುರ್ಭೋಗೈಕಶೇಷೋ ಹಿ ಸರ್ಗ ಏವೈಷ ಯೋಷಿತಾಂ ।**
**ತಥಾಸತ್ಯನ್ಯಥಾಭೂತಾ ನಾರೀ ಕುತ್ರೋಪಯುಜ್ಯತೇ ॥ ೩೭ ॥**

**ತಸ್ಮಾದ್ವರ್ಣಮಿಮಂ ತ್ಯಕ್ತ್ವಾ ತ್ವಯಾ ರಹಸಿ ನಿಂದಿತಂ ।**
**ವರ್ಣಾಂತರಂ ಭಜಿಷ್ಯೇ ವಾ ನ ಭವಿಷ್ಯಾಮಿ ವಾ ಸ್ವಯಂ ॥ ೩೮ ॥**

---

ಇಲ್ಲಿಯವರೆಗೂ, ಈ ಅಸಮಾಧಾನಸ್ಥಿತಿಯನ್ನು ಹೇಗೆ ಸಹಿಸಿಕೊಂಡಿದ್ದೆ ? ನನ್ನೊಡನೆ ರಮಿಸುವುದರಿಂದ ಸುಖವಿಲ್ಲವೆಂದು ತಿಳಿದುಕೊಂಡಿದ್ದರೂ ಇದುವರಿಗೂ ಹೇಗೆ ರಮಿಸುತ್ತಿದ್ದೆ ?

೩೪. ಲೋಕಕ್ಕೆಲ್ಲಕ್ಕೂ ಪ್ರಭುವಾಗಿರುವ ಈಶ್ವರನು ಈ ಜಗತ್ತಿನಲ್ಲಿ ಹೊಂದಬೇಕಾಗಿರುವುದು ಯಾವುದೂ ಇಲ್ಲ. ಒಂದುವೇಳೆ ಹೊಂದಬೇಕಾದ ವಸ್ತುವಿದ್ದರೆ ಅದೂ ಅಸಾಧ್ಯವಾಗಿಲ್ಲ. ಆದರೆ ನೀನು ನಿನ್ನಲ್ಲಿಯೇ ಆನಂದದಿಂದ ಇರುವ ಸ್ವಾತ್ಮಾರಾಮಸ್ವಭಾವವುಳ್ಳವನಾದ್ದರಿಂದ ನಿನಗೆ ಸ್ತ್ರೀ ಸಹವಾಸವು ಸುಖಕರವಾಗಿಲ್ಲ. ಈ ಕಾರಣದಿಂದಲೇ ಮನ್ಮಥನನ್ನು ನೀನು ಸುಟ್ಟು ಬೂದಿಮಾಡಿರುತ್ತೀಯೆ.

೩೫. ಸ್ತ್ರೀಯು ಸರ್ವಾಂಗಸುಂದರಿಯಾಗಿದ್ದರೂ ಬಹಳ ಗುಣವಂತೆಯಾಗಿದ್ದರೂ, ಗಂಡನಿಗೆ ಸುಖವನ್ನು ಉಂಟುಮಾಡದಿದ್ದರೆ ಅವಳು ಹುಟ್ಟಿದ್ದು ವ್ಯರ್ಥವು.

೩೬–೩೭. ಸ್ತ್ರೀಯರಿಗೆ ಗಂಡನ ಸಂಗಡ ಸುಖವನ್ನು ಅನುಭವಿಸುವುದೇ ಮುಖ್ಯವಾದ ಫಲವೆಂದು ಬ್ರಹ್ಮನು ಸ್ತ್ರೀಯರನ್ನು ನಿರ್ಮಿಸಿರುವನು. ಸ್ತ್ರೀಯರಿಗೆ ಇಂತಹ ಭೋಗವೂ ಇಲ್ಲದಿದ್ದರೆ ಅವಳಿಂದ ಆಗಬೇಕಾದ ಪ್ರಯೋಜನವೇನಿರುವುದು ?

೩೮. ಆದ್ದರಿಂದ ನೀನು ರಹಸ್ಯದಲ್ಲಿ ನನ್ನನ್ನು ನಿಂದಿಸುವುದಕ್ಕೆ ಕಾರಣವಾದ ಈ ವರ್ಣವು ಹೋಗಿ ಬೇರೆಯ ಉತ್ತಮವಾದ ಬಣ್ಣವು ಶರೀರದಲ್ಲಿ ಉಂಟಾಗು

**ಇತ್ಯುಕ್ತ್ವೋತ್ಥಾಯ ಶಯನಾದ್ದೇವೀ ಸಾಚಷ್ಟ ಗದ್ಗದಂ ।**
**ಯಯಾಚೇऽನುಮತಿಂ ಭರ್ತುಸ್ತಪಸೇ ಕೃತನಿಶ್ಚಯಾ ॥ ೩೯ ॥**

**ತಥಾ ಪ್ರಣಯಭಂಗೇನ ಭೀತೋ ಭೂತಪತಿಃ ಸ್ವಯಂ ।**
**ಪಾದಯೋಃ ಪ್ರಣಮನ್ನೇವ ಭವಾನೀಂ ಪ್ರತ್ಯಭಾಷತ ॥ ೪೦ ॥**

**॥ ಈಶ್ವರ ಉವಾಚ ॥**

**ಅಜಾನತೀ ಚ ಕ್ರೀಡೋಕ್ತಿಂ ಪ್ರಿಯೇ ಕಿಂ ಕುಪಿತಾಸಿ ಮೇ ।**
**ರತಿಃ ಕುತೋ ವಾ ಜಾಯೇತ ತ್ವತ್ತಶ್ಚೇದರತಿರ್ಮಮ ॥ ೪೧ ॥**

**ಮಾತಾ ತ್ವಮಸ್ಯ ಜಗತಃ ಪಿತಾಹಮಧಿಪಸ್ತಥಾ ।**
**ಕಥಂ ತದುಪಪದ್ಯೇತ ತ್ವತ್ತೋ ನಾಭಿರತಿರ್ಮಮ ॥ ೪೨ ॥**

ವಂತೆ ತಪಸ್ಸನ್ನು ಮಾಡಿ ಅದನ್ನು ಹೊಂದುವೆನು. ಆ ಬಣ್ಣವು ನನಗೆ ಉಂಟಾಗ ದಿದ್ದರೆ ನಾನು ಮರಣವನ್ನೈದುವೆನು.

೩೯. ದೇವಿಯಾದ ಪಾರ್ವತಿಯು ಅಳುವ ಧ್ವನಿಯಿಂದ ಹೀಗೆ ಹೇಳಿ ಹಾಸಿಗೆ ಯಿಂದ ಮೇಲಕ್ಕೆದ್ದು ತಪಸ್ಸನ್ನು ಮಾಡಲು ದೃಢವಾದ ನಿಶ್ಚಯವುಳ್ಳವಳಾಗಿ ಪತಿಯಾದ ಪರಮೇಶ್ವರನ ಅಪ್ಪಣೆಯನ್ನು ಕೇಳಿದಳು.

೪೦. ಎಲ್ಲಾ ಪ್ರಾಣಿಗಳಿಗೂ ತಾನೇ ಅಧಿಪತಿಯಾಗಿದ್ದಾಗ್ಯೂ ಪರಮೇಶ್ವರನು ಪಾರ್ವತಿಯೊಡನೆ ಪ್ರಣಯಭಂಗವಾದುದಕ್ಕಾಗಿ ಚಿಂತಿಸಿ, ಭಯದಿಂದ ಬೇಗನೆ ಆ ಪಾರ್ವತಿಯ ಕಾಲಿಗೆ ಬಿದ್ದು ಇಂತೆಂದನು.

೪೧. ಎಲೈ ಪ್ರೀತಿಪಾತ್ರಳಾದ ಪಾರ್ವತಿಯೆ! ವಿನೋದಕ್ಕಾಗಿ ನಾನು ಈ ಮಾತನ್ನಾಡಿದೆನು. ನನ್ನ ಮೇಲೆ ಏತಕ್ಕಾಗಿ ಸಿಟ್ಟುಮಾಡುವೆ ? ನಿನ್ನಿಂದ ನನಗೆ ಸುಖವು ಉಂಟಾಗದಿದ್ದರೆ ಬೇರೆಯಾರಿಂದ ತಾನೇ ನನಗೆ ಸುಖವು ಉಂಟಾದೀತು ?

೪೨. ನೀನು ಪ್ರಪಂಚಕ್ಕೆಲ್ಲಕ್ಕೂ ತಾಯಿಯಾಗಿರುತ್ತೀಯೆ, ನಾನು ತಂದೆ ಯಾಗಿಯೂ, ಅಧಿಪತಿಯಾಗಿಯೂ ಇರುವೆನು. ಹೀಗಿರುವಾಗ ನಿನಗೆ ನನ್ನಿಂದ ಸುಖವಿಲ್ಲವೆಂಬುವುದು ಹೇಗೆ ತಾನೇ ಒಪ್ಪುವ ಮಾತಾಗಿರುತ್ತದೆ ?

ಆವಯೋರಭಿಕಾವೋಽಪಿ ಕಿಮುಸೌ ಕಾಮುಕಾರಿತಃ ।
ಯತಃ ಕಾಮುಸಮುತ್ಪತ್ತೇಃ ಪ್ರಾಗೇವ ಜಗದುದ್ಭವಃ ॥ ೪೩ ॥

ಪೃಥಗ್ಜನಾನಾಂ ರತಯೇ ಕಾಮಾತ್ಮಾ ಕಲ್ಪಿತೋ ಮಯಾ ।
ತತಃ ಕಥಮುಪಾಲಬ್ಧಃ ಕಾಮುದಾಹಾದಹಂ ತ್ವಯಾ ॥ ೪೪ ॥

ಮಾಂ ವೈ ತ್ರಿದಶಸಾಮಾನ್ಯಂ ಮನ್ಯಮಾನೋ ಮನೋಭವಃ ।
ಮನಾಕ್ಪರಿಭವಂ ಕುರ್ವನ್ಮಯಾ ವೈ ಭಸ್ಮಸಾತ್ಕೃತಃ ॥ ೪೫ ॥

ವಿಹಾರೋಽಪ್ಯಾವಯೋರಸ್ಯ ಜಗತಸ್ತ್ರಾಣಕಾರಣಾತ್ ।
ತತಸ್ತದರ್ಥಂ ತ್ವಯ್ಯದ್ಯ ಕ್ರಿಡೋಕ್ತಿಂ ಕೃತವಾನಹಂ ॥ ೪೬ ॥

ಸ ಚಾಯಮುಚಿರಾದರ್ಥಸ್ತವೈವಾವಿಷ್ಕರಿಷ್ಯತೇ ।
ಕ್ರೋಧಸ್ಯ ಜನಕಂ ವಾಕ್ಯಂ ಹೃದಿ ಕೃತ್ವೇದಮಬ್ರವೀತ್ ॥ ೪೭ ॥

---

೪೩. ನಮ್ಮಿಬ್ಬರಿಗೂ ಭೋಗಾಪೇಕ್ಷೆಯು ಉಂಟಾದಾಗ್ಯೂ, ಅದು ಕಾಮುನಿಂದ ಉಂಟಾದುದಲ್ಲ. ಕಾಮುನು ಹುಟ್ಟುವುದಕ್ಕಿಂತ ಮುಂಚಿತವಾಗಿಯೇ ಈ ಪ್ರಪಂಚವು ಹುಟ್ಟಿರುವುದು

೪೪. ಪ್ರಪಂಚದಲ್ಲಿರುವ ಜನಗಳು ಸುಖವನ್ನು ಅನುಭವಿಸುವುದಕ್ಕಾಗಿ ಕಾಮನೆಂಬುವನನ್ನು ನಾನು ಪ್ರತ್ಯೇಕವಾಗಿ ಸೃಷ್ಟಿಮಾಡಿರುವೆನು. ಹೀಗಿರುವಾಗ ಕಾಮುನನ್ನು ಸುಟ್ಟವನೆಂದು ನೀನು ಮಾಡುವ ನಿಂದೆಯು ಸರಿಯಲ್ಲ.

೪೫. ನನ್ನನ್ನು ಒಬ್ಬ ಸಾಧಾರಣ ದೇವತೆಯೆಂದು ಮನ್ಮಥನು ತಿಳಿದು ನನ್ನನ್ನು ಅವಮಾನಪಡಿಸಲುದ್ಯುಕ್ತನಾಗಿ ಭಸ್ಮವಾದನು.

೪೬. ನಮ್ಮಿಬ್ಬರ ವಿಹಾರವೂ ಕೂಡ ಈ ಜಗತ್ತಿನ ಸಂರಕ್ಷಣೆಗೆ ಕಾರಣವಾಗಿರುವುದು. ಆದ್ದರಿಂದಲೇ ನಾನೂಕೂಡ ಜಗತ್ತನ್ನು ರಕ್ಷಿಸುವುದಕ್ಕಾಗಿ ನಿನ್ನ ಸಂಗಡ ವಿನೋದವಾಗಿ ಮಾತನಾಡಿದೆನು.

೪೭. ನಾನು ಹೀಗೆ ಮಾತನಾಡಲು ಕಾರಣವೂ ಇರುವುದು. ಅದು ನಿನಗೆ ಬೇಗನೆ ಗೊತ್ತಾಗುವುದು ಎಂದನು. ಪರಮೇಶ್ವರನು ಹೀಗೆ ಸಮಾಧಾನಮಾಡುತ್ತಿದ್ದರೂ ಕೋಪಕ್ಕೆ ಕಾರಣವಾದ ಆ ಮಾತನ್ನು ತನ್ನ ಮನಸ್ಸಿನಲ್ಲಿರಿಸಿಕೊಂಡು,

॥ ದೇವ್ಯುವಾಚ ॥

ಶ್ರುತಪೂರ್ವಂ ಹಿ ಭಗವಂಸ್ತವ ಚಾಟು ವಚೋ ಮಯಾ ।
ಯೇನೈವಮತಿಧೀರಾಹಮಪಿ ಪ್ರಾಗಭಿವಂಚಿತಾ ॥ ೪೮ ॥

ಪ್ರಾಣಾನಪ್ಯಪ್ರಿಯಾ ಭರ್ತುರ್ನಾರೀ ಯಾ ನ ಪರಿತ್ಯಜೇತ್ ।
ಕುಲಾಂಗನಾ ಶುಭಾ ಸದ್ಭಿಃ ಕುತ್ಸಿತೈವ ಹಿ ಗಮ್ಯತೇ ॥ ೪೯ ॥

ಭೂಯಸೀ ಚ ತವಾಪ್ರೀತಿರಗೌರಮಿತಿ ಮೇ ವಪುಃ ।
ಕ್ರೀಡೋಕ್ತಿರಪಿ ಕಾಲೀತಿ ಘಟತೇ ಕಥಮನ್ಯಥಾ ॥ ೫೦ ॥

ಸದ್ಭಿರ್ವಿಗರ್ಹಿತಂ ತಸ್ಮಾತ್ತವ ಕಾರ್ಷ್ಣ್ಯಮಸಂಮತಂ ।
ಅನುತ್ಸೃಜ್ಯ ತಪೋಯೋಗಾತ್ಸ್ಥಾತುಮೇವೇಹ ನೋತ್ಸಹೇ ॥ ೫೧ ॥

೪೮. ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ಪ್ರಭುವೆ! ನೀನು ಹಿಂದೆ ಆಡಿದ ವಿನೋದದ ಮಾತುಗಳೆಲ್ಲವನ್ನೂ ನಾನು ಬಹಳಸಾರಿ ಕೇಳಿರುವೆನು. ನಾನು ಅದನ್ನೆಲ್ಲಾ ಗಣನೆಗೆ ತರಲಿಲ್ಲ. ಮೋಸಹೋದೆನು.

೪೯. ಮಂಗಳಕರಳಾದ ಕುಲಸ್ತ್ರೀಯು ತನ್ನ ಗಂಡನಿಗೆ ಪ್ರೀತಿಯನ್ನುಂಟು ಮಾಡಲಶಕ್ತಳಾಗಿದ್ದಲ್ಲಿ ಪ್ರಾಣವನ್ನಾದರೂ ಬಿಡಬೇಕು. ಅದಿಲ್ಲದೆ ಸ್ವಸುಖಕ್ಕಾಗಿ ಬದುಕಿದ್ದರೆ ಅವಳನ್ನು ಸತ್ಪುರುಷರು ಕೆಟ್ಟವಳೆಂದು ಹೇಳುವರು.

೫೦. ನನ್ನ ಶರೀರವು ಬೆಳ್ಳಗಿಲ್ಲವೆಂದು ಈ ಶರೀರದ ವಿಷಯದಲ್ಲಿ ನಿನಗೆ ಬಹಳ ಜುಗುಪ್ಸೆ ಇರುವುದು. ಇಲ್ಲದಿದ್ದರೆ ನನ್ನ ವಿಷಯದಲ್ಲಿ ಕಾಳಿ ಎಂದು ವಿನೋದಕ್ಕಾಗಿಯೂ ಸಹ ಹೇಳುತ್ತಿರಲಿಲ್ಲ.

೫೧. ನಿನಗೆ ಸಮ್ಮತವಾಗದೇ ಇರುವ ಈ ಶರೀರವು ಸತ್ಪುರುಷರಿಂದ ನಿಂದಿತವಾಗಿರುವುದು. ಇಂತಹ ನನ್ನ ಶರೀರದ ಕಪ್ಪು ಬಣ್ಣವನ್ನು ತಪಸ್ಸಿನಿಂದ ಹೋಗಲಾಡಿಸಿಕೊಳ್ಳದೇ ನಿನ್ನ ಸಮೀಪದಲ್ಲಿರಲು ನನ್ನ ಮನಸ್ಸೊಪ್ಪುವುದಿಲ್ಲ ಎಂದಳು.

॥ ಶಿವ ಉವಾಚ ॥

ಯದ್ಯೇವಂವಿಧತಾಪಸ್ತೇ ತಪಸಾ ಕಿಂ ಪ್ರಯೋಜನಂ ।
ಮಮೇಚ್ಛಯಾ ಸ್ವೇಚ್ಛಯಾ ವಾ ವರ್ಣಾಂತರವತೀ ಭವ ॥ ೫೨ ॥

॥ ದೇವ್ಯುವಾಚ ॥

ನೇಚ್ಛಾಮಿ ಭವತೋ ವರ್ಣಂ ಸ್ವಯಂ ವಾ ಕರ್ತುಮನ್ಯಥಾ ।
ಬ್ರಹ್ಮಾಣಂ ತಪಸಾರಾಧ್ಯ ಕ್ಷಿಪ್ರಂ ಗೌರೀ ಭವಾಮ್ಯಹಂ ॥ ೫೩ ॥

॥ ಈಶ್ವರ ಉವಾಚ ॥

ಮತ್ಪ್ರಸಾದಾತ್ಪುರಾ ಬ್ರಹ್ಮಾ ಬ್ರಹ್ಮತ್ವಂ ಪ್ರಾಪ್ತವಾನ್ಪುರಾ ।
ತಮಾಹೂಯ ಮಹಾದೇವಿ ತಪಸಾ ಕಿಂ ಕರಿಷ್ಯಸಿ ॥ ೫೪ ॥

॥ ದೇವ್ಯುವಾಚ ॥

ತ್ವತ್ತೋ ಲಬ್ಧಪದಾ ಏವ ಸರ್ವೇ ಬ್ರಹ್ಮಾದಯಃ ಸುರಾಃ ।
ತಥಾಪ್ಯಾರಾಧ್ಯ ತಪಸಾ ಬ್ರಹ್ಮಾಣಂ ತ್ವನ್ನಿಯೋಗತಃ ॥ ೫೫ ॥

---

೫೨. ಶಿವನು ಹೇಳಿದನು:—ನಿನಗೆ ಶರೀರವರ್ಣ ವಿಚಾರದಲ್ಲಿ ಇಷ್ಟುಮಟ್ಟಿನ ದುಃಖವಿರುವುದಾದರೆ ನನ್ನ ಇಚ್ಛೆಯಿಂದಲಾಗಲಿ, ನಿನ್ನ ಇಚ್ಛೆಯಿಂದಲಾಗಲಿ ಬೇರೆಯ ಬಣ್ಣವನ್ನು ಹೊಂದಬಹುದಲ್ಲಾ? ಇದಕ್ಕಾಗಿ ತಪಸ್ಸನ್ನೇಕೆ ಮಾಡಬೇಕು? ಎಂದನು.

೫೩. ಅದಕ್ಕೆ ದೇವಿಯು—ನಿನ್ನ ಹಂಗು ನನಗೆ ಬೇಕಿಲ್ಲ. ಉತ್ತಮವಾದ ಶರೀರದ ಬಣ್ಣವನ್ನು ಹೊಂದಲು ನನಗೆ ಸಾಮರ್ಥ್ಯವಿದ್ದರೂ ನನಗೆ ಅದೂ ಬೇಡ. ಬ್ರಹ್ಮನನ್ನೇ ತಪಸ್ಸಿನಿಂದ ಮೆಚ್ಚಿಸಿ ನಾನು ಬೇಗನೆ ಬಿಳಿಯ ವರ್ಣವುಳ್ಳವಳಾಗುತ್ತೇನೆ ಎಂದಳು.

೫೪. ಈಶ್ವರನು ಹೇಳಿದನು.—ಎಲೌ ದೇವಿ, ನನ್ನ ಅನುಗ್ರಹದಿಂದಲೇ ಬ್ರಹ್ಮನು ಹಿಂದೆ ಬ್ರಹ್ಮಪದವಿಯನ್ನು ಪಡೆದು ಅದನ್ನನುಭವಿಸುತ್ತಿರುವನು. ಹೀಗಿರುವಾಗ ಆ ಬ್ರಹ್ಮನನ್ನು ಕುರಿತು ತಪಸ್ಸನ್ನು ಮಾಡಿದ್ದರಿಂದ ಏನು ಪ್ರಯೋಜನ?

೫೫-೫೬. ದೇವಿಯಿಂತೆಂದಳು:—ಬ್ರಹ್ಮನೇ ಮೊದಲಾದ ದೇವತೆಗಳೆಲ್ಲರೂ ನಿನ್ನಿಂದಲೇ ಅವರವರ ಸ್ಥಾನಮಾನಗಳನ್ನು ಪಡೆದಿರುವರು. ಆದಾಗ್ಯೂ ನಿನ್ನ

ಪುರಾ ಕಿಲ ಸತೀ ನಾಮ್ನಾ ದಕ್ಷಸ್ಯ ದುಹಿತಾಭವಂ ।
ಜಗತಾಂ ಪತಿಮೇವಂ ತ್ವಾಂ ಪತಿಂ ಪ್ರಾಪ್ತವತೀ ತಥಾ ॥ ೫೭ ॥

ಏವಮದ್ಯಾಪಿ ತಪಸಾ ತೋಷಯಿತ್ವಾ ದ್ವಿಜಂ ವಿಧಿಂ ।
ಗೌರೀ ಭವಿತುಮಿಚ್ಛಾಮಿ ಕೋ ದೋಷಃ ಕಥ್ಯತಾಮಿಹ ॥ ೫೭ ॥

ಏವಮುಕ್ತೋ ಮಹಾದೇವ್ಯಾ ವಾಮದೇವಃ ಸ್ಮಯನ್ನಿವ ।
ನ ತಾಂ ನಿರ್ಬಂಧಯಾಮಾಸ ದೇವಕಾರ್ಯಚಿಕೀರ್ಷಯಾ ॥ ೫೮ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾಂ
ಪೂರ್ವಭಾಗೇ ಶಿವಮಂದಿರಗಿರಿನಿವಾಸಕ್ರೀಡೋಕ್ತಿವರ್ಣನಂ
ಚತುರ್ವಿಂಶೋಽಧ್ಯಾಯಃ

ಅಪ್ಪಣೆಯಮೇರೆ ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ ಪೂರ್ವದಲ್ಲಿ ಸತೀದೇವಿಯೆಂಬ ಹೆಸರಿನಿಂದ ದಕ್ಷಬ್ರಹ್ಮನ ಮಗಳಾದೆನು. ಹಾಗೆಯೇ ಜಗತ್ತಿಗೆಲ್ಲಕ್ಕೂ ಅಧಿಪತಿಯಾದ ನಿನ್ನನ್ನೇ ಪತಿಯನ್ನಾಗಿ ಹೊಂದಿದೆನು.

೫೭. ಈಗಲೂ ಹಿಂದಿನಂತೆಯೇ ಬ್ರಹ್ಮತೇಜೋಬಲದಿಂದ ಇರುವ ಬ್ರಹ್ಮನನ್ನು ತಪಸ್ಸಿನಿಂದ ಸಂತೋಷಪಡಿಸಿ ನಾನು ಗೌರವರ್ಣವುಳ್ಳವಳಾಗುವೆನು. ಹೀಗೆ ನಾನು ಮಾಡುವುದರಲ್ಲಿ ತಪ್ಪೇನಿರುವುದು ? ಹೇಳು ಎಂದಳು.

೫೮. ಮಹಾದೇವಿಯಾದ ಪಾರ್ವತಿಯು ಹೀಗೆ ಹೇಳಿದ ಮಾತನ್ನು ಕೇಳಿ ವಾಮದೇವನಾದ ಶಿವನು ನಸುನಗುತ್ತಾ ದೇವತೆಗಳ ಹಿತಕ್ಕಾಗಿ ಆ ದೇವಿಯನ್ನು ತಪಸ್ಸು ಮಾಡಬೇಡವೆಂದು ನಿರ್ಬಂಧಪಡಿಸಲಿಲ್ಲ.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯ ಸಂಹಿತೆಯ ಪೂರ್ವಭಾಗದಲ್ಲಿ
ಮಂದರಪರ್ವತದಲ್ಲಿ ಶಿವನ ವಾಸ, ಪಾರ್ವತಿಯೊಡನೆ ವಿಹಾರ, ವಿನೋದ
ಸಂಭಾಷಣೆ ಇವುಗಳನ್ನು ವರ್ಣಿಸುವ ಇಪ್ಪತ್ತನಾಲ್ಕನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ
## ವಾಯವೀಯಸಂಹಿತಾಯಾಂ ಪೂರ್ವಭಾಗೇ
## ಪಂಚವಿಂಶೋಽಧ್ಯಾಯಃ

---

॥ ವಾಯುರುವಾಚ ॥

ತತಃ ಪ್ರದಕ್ಷಿಣೀಕೃತ್ಯ ಪತಿಮಂಬಾ ಪತಿವ್ರತಾ ।
ನಿಯಮ್ಯ ಚ ವಿಯೋಗಾರ್ತಿಂ ಜಗಾಮ ಹಿಮವದ್ಗಿರಿಂ ॥ ೧ ॥

ತಪಃ ಕೃತವತೀ ಪೂರ್ವಂ ದೇಶೇ ಯಸ್ಮಿನ್ಸಖೀಜನೈಃ ।
ತಮೇವ ದೇಶಮವೃಣೋತ್ತಪಸೇ ಪ್ರಣಯಾತ್ಮನಃ ॥ ೨ ॥

---

## ಇಪ್ಪತ್ತೈದನೆಯ ಅಧ್ಯಾಯವು

೧. ಅನಂತರದಲ್ಲಿ ಜಗನ್ಮಾತೆಯಾದ ಪಾರ್ವತೀದೇವಿಯು ತಾನು ಪತಿವ್ರತೆಯಾದಕಾರಣ ತನ್ನ ಪತಿಯಾದ ಪರಮೇಶ್ವರನಿಗೆ ಪ್ರದಕ್ಷಿಣೆ ನಮಸ್ಕಾರಮಾಡಿ, ಅವನ ವಿರಹದ ವ್ಯಥೆಯನ್ನು ಮನಸ್ಸಿನಲ್ಲಿ ಸಹಿಸಿಕೊಂಡು ಹಿಮವತ್ಪರ್ವತಕ್ಕೆ ಹೊರಟಳು.

೨. ಮೊದಲು ತಾನು ಯಾವ ಪ್ರದೇಶದಲ್ಲಿ ತನ್ನ ಸಖಿಯರೊಡನೆ ಇದ್ದುಕೊಂಡು ತಪ್ಪಸ್ಸನ್ನು ಮಾಡಿದ್ದಳೋ ಈಗಲೂ ಆ ಪ್ರದೇಶದಲ್ಲಿಯೇ ತಪಸ್ಸು ಮಾಡಲು ನಿಶ್ಚಯಿಸಿದಳು.

ತತಃ ಸ್ವಪಿತರಂ ದೃಷ್ಟ್ವಾ ಮಾತರಂ ಚ ತಯೋರ್ಗೃಹೇ ।
ಪ್ರಣಮ್ಯ ವೃತ್ತಂ ವಿಜ್ಞಾಪ್ಯ ತಾಭ್ಯಾಂ ಚಾನುಮತಾ ಸತೀ ॥ ೩ ॥

ಪುನಸ್ತಪೋವನಂ ಗತ್ವಾ ಭೂಷಣಾನಿ ವಿಸೃಜ್ಯ ಚ ।
ಸ್ನಾತ್ವಾ ತಪಸ್ವಿನೋ ವೇಷಂ ಕೃತ್ವಾ ಪರಮಪಾವನಂ ॥ ೪ ॥

ಸಂಕಲ್ಪ್ಯ ಚ ಮಹಾತೀವ್ರಂ ತಪಃ ಪರಮದುಶ್ಚರಂ ।
ಸದಾ ಮನಸಿ ಸಂಧಾಯ ಭರ್ತುಶ್ಚರಣಪಂಕಜಂ ॥ ೫ ॥

ತಮೇವ ಕ್ಷಣಿಕೇ ಲಿಂಗೇ ಧ್ಯಾತ್ವಾ ಬಾಹ್ಯವಿಧಾನತಃ ।
ತ್ರಿಸಂಧ್ಯಮಭ್ಯರ್ಚಯಂತೀ ವನ್ಯೈಃ ಪುಷ್ಪೈಃ ಫಲಾದಿಭಿಃ ॥ ೬ ॥

ಸ ಏವ ಬ್ರಹ್ಮಣೋ ಮೂರ್ತಿಮಾಸ್ಥಾಯ ತಪಸಃ ಫಲಂ ।
ಪ್ರದಾಸ್ಯತಿ ಮಮೇತ್ಯೇವಂ ನಿತ್ಯಂ ಕೃತ್ವಾಽಕರೋತ್ತಪಃ ॥ ೭ ॥

---

೩. ಬಳಿಕ ತನ್ನ ತಂದೆತಾಯಿಗಳ ಮನೆಗೆ ಹೋಗಿ ಅಲ್ಲಿ ತನ್ನ ತಂದೆಯನ್ನೂ, ತಾಯಿಯನ್ನೂ ನೋಡಿ ಅವರಿಗೆ ನಮಸ್ಕರಿಸಿ ತನ್ನ ವೃತ್ತಾಂತವೆಲ್ಲವನ್ನೂ ತಿಳಿಸಿ ಅವರ ಅನುಮತಿಯನ್ನು ಪಡೆದಳು.

೪. ಮತ್ತು ಪಾರ್ವತಿಯು ತನ್ನ ಆಭರಣಗಳೆಲ್ಲವನ್ನೂ ತೆಗೆದುಹಾಕಿ ಅದಕ್ಕೆ ಬದಲಾಗಿ ತಪೋವನಕ್ಕೆ ಹೋಗಿ ತಪಸ್ಸು ಮಾಡುವವರಿಗೆ ತಕ್ಕ ವೇಷವನ್ನು ಧರಿಸಿಕೊಂಡು ಸ್ನಾನವನ್ನು ಮಾಡಿದಳು.

೫. ಆ ದೇವಿಯು ಯಾರೂ ಮಾಡಲಾರದ ಉತ್ತಮವಾದ ತಪಸ್ಸನ್ನು ಮಾಡಲು ನಿಶ್ಚಯಮಾಡಿದಳು. ತನ್ನ ಪತಿಯಾದ ಪರಮೇಶ್ವರನ ಪಾದಕಮಲವನ್ನು ಯಾವಾಗಲೂ ತನ್ನ ಮನಸ್ಸಿನಲ್ಲಿ ಧ್ಯಾನಮಾಡುತ್ತಿದ್ದಳು.

೬. ಆ ದೇವಿಯು ತನ್ನ ಮನಸ್ಸಿನಲ್ಲಿ ಕ್ಷಣಿಕ ಶಿವಲಿಂಗರೂಪದಿಂದ ಇರುವ ತನ್ನ ಪತಿಯಾದ ಪರಮೇಶ್ವರನನ್ನು ಧ್ಯಾನಮಾಡಿ ಬಾಹ್ಯಪೂಜೆಯ ವಿಧಿಕ್ರಮದಿಂದ ಕಾಡಿನಲ್ಲಿ ಬೆಳೆದ ಹೂವು, ಹಣ್ಣುಗಳಿಂದ ಆ ಶಿವಲಿಂಗವನ್ನು ಪೂಜಿಸಿದಳು.

೭. ಆ ಶಿವಲಿಂಗವನ್ನೇ ಬ್ರಹ್ಮನೆಂದೂ ಭಾವಿಸಿ ತಪಸ್ಸನ್ನು ಮಾಡುವುದಕ್ಕೆ ಪ್ರಾರಂಭಿಸಿದಳು.

**ತಥಾ ತಪಶ್ಚರಂತೀಂ ತಾಂ ಕಾಲೇ ಬಹುತಿಥೇ ಗತೇ ।**
**ದೃಷ್ಟಃ ಕಶ್ಚಿನ್ಮಹಾವ್ಯಾಘ್ರೋ ದುಷ್ಟಭಾವಾದುಪಾಗಮತ್ ॥ ೮ ॥**

**ತಥೈವೋಪಗತಸ್ಯಾಪಿ ತಸ್ಯಾತೀವ ದುರಾತ್ಮನಃ ।**
**ಗಾತ್ರಂ ಚಿತ್ರಾರ್ಪಿತಮಿವ ಸ್ತಬ್ಧಂ ತಸ್ಯಾಸ್ಸಕಾಶತಃ ॥ ೯ ॥**

**ತಂ ದೃಷ್ಟ್ವಾಪಿ ತಥಾ ವ್ಯಾಘ್ರಂ ದುಷ್ಟಭಾವಾದುಪಾಗತಂ ।**
**ನ ಪೃಥಗ್ಜನವದ್ದೇವೀ ಸ್ವಭಾವೇನ ವಿವಿಚ್ಯತೇ ॥ ೧೦ ॥**

**ಸ ತು ವಿಷ್ಟಬ್ಧಸರ್ವಾಂಗೋ ಬುಭುಕ್ಷಾಪರಿಪೀಡಿತಃ ।**
**ಮಮಾಮಿಷಂ ತತೋ ನಾನ್ಯದಿತಿ ಮತ್ವಾ ನಿರಂತರಂ ॥ ೧೧ ॥**

**ನಿರೀಕ್ಷ್ಯಮಾಣಃ ಸತತಂ ದೇವೀಮೇವ ತದಾಽನಿಶಂ ।**
**ಅತಿಷ್ಠದಗ್ರತಸ್ತಸ್ಯಾ ಉಪಾಸನಮಿವಾಚರತ್ ॥ ೧೨ ॥**

೮-೯. ಅವಳು ಹೀಗೆಯೇ ತಪಸ್ಸನ್ನು ಮಾಡುತ್ತಿರುವಾಗ ಬಹಳಕಾಲವು ಕಳೆದುಹೋಯಿತು. ಆಗ ಒಂದು ದೊಡ್ಡ ಹುಲಿಯು ಇವಳನ್ನು ನೋಡಿ ದುರಭಿಪ್ರಾಯದಿಂದ ಈ ದೇವಿಯ ಹತ್ತಿರಕ್ಕೆ ಬಂದು ಸ್ವಲ್ಪವೂ ಶಬ್ದವಾಗದ ಹಾಗೆ ಚಿತ್ರದಲ್ಲಿ ಬರೆದ ಬೊಂಬೆಯಂತೆ ತನ್ನ ಶರೀರವನ್ನು ಸ್ತಂಭಿಸಿಕೊಂಡು ನಿಂತಿತ್ತು.

೧೦. ಆಗ ಪಾರ್ವತಿಯು ಆ ಹುಲಿಯು ಕೆಟ್ಟ ಅಭಿಪ್ರಾಯದಿಂದ ತನ್ನ ಹತ್ತಿರಕ್ಕೆ ಬಂದಿರುವುದನ್ನು ನೋಡಿಯೂ ಅದನ್ನು ಪಶುಪ್ರಾಣಿಯೆಂದು ಭಾವಿಸದೆ ಸಮಧಾನವಾದ ಮನಸ್ಸಿನಿಂದ ತಪಸ್ಸನ್ನು ಮಾಡುತ್ತಿದ್ದಳು.

೧೧-೧೨. ಆದರೆ ಆ ಹುಲಿಯು ಹಸಿವೆಯಿಂದ ಕೂಡಿ ತನ್ನ ಶರೀರವೆಲ್ಲವನ್ನೂ ಸ್ತಂಭಿಸಿಕೊಂಡು ನನಗೆ ಈ ತಪಸ್ವಿನಿಯ ಶರೀರವೇ ಆಹಾರವು. ಇದನ್ನು ಬಿಟ್ಟರೆ ಈಗ ಬೇರೆ ಆಹಾರವಾವುದೂ ಇಲ್ಲ ಎಂದು ತಿಳಿದು ಕ್ಷಣಕಾಲವೂ ಎಡಬಿಡದಂತೆ ದೇವಿಯನ್ನೇ ನೋಡುತ್ತಾ, ದೇವಿಯನ್ನು ಆರಾಧಿಸುವವರ ಹಾಗೆ ದೇವಿಯ ಮುಂದುಗಡೆಯಲ್ಲಿ ಸಿದ್ಧವಾಗಿ ನಿಂತಿತ್ತು.

ದೇವ್ಯಾಶ್ಚ ಹೃದಯಸ್ಥೋ ನಿತ್ಯಂ ಮನ್ಯೈವಾಯುಮುಪಾಸಕಃ ।
ತ್ರಾತಾ ಚ ದುಷ್ಟಸತ್ತ್ವೇಭ್ಯ ಇತಿ ಪ್ರವವೃತೇ ಕೃಪಾ ॥ ೧೩ ॥

ತಸ್ಯಾ ಏವ ಕೃಪಾಯೋಗಾತ್ಸದ್ಯೋ ನಷ್ಟಮಲತ್ರಯಃ ।
ಬಭೂವ ಸಹಸಾ ವ್ಯಾಘ್ರೋ ದೇವೀಂ ಚ ಬುಬುಧೇ ತದಾ ॥ ೧೪ ॥

ನ್ಯವರ್ತತ ಬುಭುಕ್ಷಾ ಚ ತಸ್ಯಾಂಗಸ್ತಂಭನಂ ತಥಾ ।
ದೌರಾತ್ಮ್ಯಂ ಜನ್ಮಸಿದ್ಧಂ ಚ ತೃಪ್ತಿಶ್ಚ ಸಮಜಾಯತ ॥ ೧೫ ॥

ತದಾ ಪರಮಭಾವೇನ ಜ್ಞಾತ್ವಾ ಕಾರ್ತಾರ್ಥ್ಯಮಾತ್ಮನಃ ।
ಸದ್ಯೋಪಾಸಕ ಏವೈಷ ಸಿಷೇವೇ ಪರಮೇಶ್ವರೀಂ ॥ ೧೬ ॥

---

೧೩. ದೇವಿಯು ಮಾತ್ರ—ಈ ಹುಲಿಯು ನನ್ನನ್ನು ಧ್ಯಾನಮಾಡುತ್ತಿರುವುದು. ಇತರ ದುಷ್ಟಪ್ರಾಣಿಗಳಿಂದ ನನ್ನ ಶರೀರವನ್ನು ರಕ್ಷಿಸುವುದು ಎಂಬದಾಗಿ ಆ ಹುಲಿಯ ವಿಷಯದಲ್ಲಿ ತನ್ನ ಮನಸ್ಸಿನಲ್ಲಿ ದಯಾಭಾವವನ್ನೇ ಇಟ್ಟಿದ್ದಳು.

೧೪. ಹುಲಿಯು ತನಗೆ ಆಹಾರಸಿಕ್ಕುತ್ತದೆ ಎಂದು ದೇವಿಯನ್ನು ಕಾದು ಕುಳಿತಿತ್ತು. ತನ್ನ ರಕ್ಷಣೆಗಾಗಿ ಹುಲಿಯು ಇರುವುದು ಎಂದು ದೇವಿಯು ತಿಳಿದಿದ್ದಳು. ಇಬ್ಬರ ಅಭಿಪ್ರಾಯಗಳೂ ಹೀಗೆ ಭಿನ್ನವಾಗಿದ್ದಾಗ್ಯೂ ದೇವಿಯ ದಯೆಯಿಂದ ಆ ಹುಲಿಯ ಮನಸ್ಸಿನ ಮೂರು ವಿಧವಾದ ದೋಷಗಳೂ ಆ ಕ್ಷಣದಲ್ಲಿಯೇ ನಾಶವಾಗಿ ಹೋದುವು. ಆಗ ಆ ಹುಲಿಗೆ—ಎದುರಿಗೆ ಇರುವವಳು ನನ್ನ ದೇವತೆಯು, ನನ್ನ ಆಹಾರವಲ್ಲ ಎಂಬ ಜ್ಞಾನೋದಯವಾಯಿತು.

೧೫. ಅನಂತರ ಆ ಹುಲಿಯ ಜನ್ಮಸಿದ್ಧವಾದ ದುಷ್ಟಸ್ವಭಾವವು ನಾಶವಾದ ಕಾರಣ, ಹಸಿವೆಯೂ, ಆಹಾರವನ್ನು ಹಿಡಿಯುವುದಕ್ಕಾಗಿ ಅದು ಶರೀರವನ್ನು ಸ್ತಂಭಿಸಿಕೊಂಡು ಇರುವುದೂ, ತಪ್ಪಿಹೋಗಿ ಅದಕ್ಕೆ ತೃಪ್ತಿಯು ಉಂಟಾಯಿತು.

೧೬. ಆಗ ಆ ಹುಲಿಯು ತನ್ನ ಜನ್ಮವು ಸಾರ್ಥಕವಾಯಿತೆಂದು ತಿಳಿದು ಆಗಲೇ ಪರಮೇಶ್ವರಿಯಾದ ದೇವಿಯನ್ನು ಸರ್ವದಾ ಮನಸ್ಸಿನಲ್ಲಿ ಧ್ಯಾನಮಾಡುತ್ತಾ ಅವಳನ್ನು ಸೇವಿಸಿತು.

ದುಷ್ಟಾನಾಮಪಿ ಸತ್ತ್ವಾನಾಂ ತಥಾನ್ಯೇಷಾಂ ದುರಾತ್ಮನಾಂ ।
ಸ ಏವ ದ್ರಾವಕೋ ಭೂತ್ವಾ ವಿಚಚಾರ ತಪೋವನೇ ॥ ೧೭ ॥

ತಪಶ್ಚ ವವೃಧೇ ದೇವ್ಯಾಸ್ತೀವ್ರಂ ತೀವ್ರತರಾತ್ಮಕಂ ।
ದೇವಾಶ್ಚ ದೈತ್ಯನಿರ್ಬಂಧಾದ್ಬ್ರಹ್ಮಾಣಂ ಶರಣಂ ಗತಾಃ ॥ ೧೮ ॥

ಚಕ್ರುರ್ನಿವೇದನಂ ದೇವಾಃ ಸ್ವದುಃಖಂ ಶತ್ರುಪೀಡನಾತ್ ।
ಯಥಾ ಚ ದದತುಃ ಶುಂಭುನಿಶುಂಭೌ ವರಸಂಮುದಾತ್ ॥ ೧೯ ॥

ಸೋಽಪಿ ಶ್ರುತ್ವಾ ವಿಧಿರ್ದುಃಖಂ ಸುರಾಣಾಂ ಕೃಪಯಾನ್ವಿತಃ ।
ಆಸೀದ್ದೈತ್ಯವಧಾಯೈವ ಸ್ಮೃತ್ವಾ ಹೇತ್ವಾಶ್ರಯಾಂ ಕಥಾಂ ॥ ೨೦ ॥

ಸಾಮುರಃ ಪ್ರಾರ್ಥಿತೋ ಬ್ರಹ್ಮಾ ಯಯೌ ದೇವ್ಯಾಸ್ತಪೋವನಂ ।
ಸಂಸ್ಮರನ್ಮನಸಾ ದೇವದುಃಖಮೋಕ್ಷಂ ಸ್ವಯತ್ನತಃ ॥ ೨೧ ॥

ದದರ್ಶ ಚ ಸುರಶ್ರೇಷ್ಠಃ ಶ್ರೇಷ್ಠೇ ತಪಸಿ ನಿಷ್ಠಿತಾಂ ।
ಪ್ರತಿಷ್ಠಾಮಿವ ವಿಶ್ವಸ್ಯ ಭವಾನೀಂ ಪರಮೇಶ್ವರೀಂ ॥ ೨೨ ॥

---

೧೭. ದುಷ್ಟಪ್ರಾಣಿಗಳನ್ನೂ ಮತ್ತು ಇತರ ಹಿಂಸೆಮಾಡುವವರನ್ನೂ ದೇವಿಯ ಹತ್ತಿರಕ್ಕೆ ಬರದಂತೆ ಓಡಿಸುತ್ತಾ ಆ ದೇವಿಯ ತಪೋವನದಲ್ಲಿ ಸಂಚಾರ ಮಾಡುತ್ತಾ ಇತ್ತು.

೧೮. ಹೀಗಿರಲು ಪಾರ್ವತೀದೇವಿಯ ತಪಸ್ಸು ದಿನದಿನಕ್ಕೆ ಅಭಿವೃದ್ಧಿಗೊಳ್ಳುತ್ತಾ ಬಹಳ ಉತ್ತಮಸ್ಥಿತಿಯನ್ನು ಹೊಂದಿತು. ಆ ಸಮಯದಲ್ಲಿಯೇ ದೇವತೆಗಳು ಶುಂಭನಿಶುಂಭರ ಹಿಂಸೆಯಿಂದ ಬ್ರಹ್ಮನನ್ನು ಶರಣುಹೊಂದಿದರು.

೧೯-೨೧. ಬ್ರಹ್ಮನೂಕೂಡ ದೇವತೆಗಳ ದುಃಖವನ್ನು ಕೇಳಿ ದಯೆಯಿಂದ ಸಕಾರಣವಾಗಿ ನಡೆದಿರುವ ರಾಕ್ಷಸರ ಪೂರ್ವೇತಿಹಾಸವನ್ನು ಸ್ಮರಿಸಿಕೊಂಡು ದೇವತೆಗಳ ಪ್ರಾರ್ಥನೆಯನ್ನು ಅಂಗೀಕರಿಸಿ ತನ್ನ ಪ್ರಯತ್ನದಿಂದಲೇ ಆ ರಾಕ್ಷಸರ ವಧೆಯ ಮೂಲಕ ದೇವತೆಗಳ ದುಃಖವು ನಾಶವಾಗುವುದೆಂದು ತಿಳಿದು ದೇವಿಯು ತಪಸನ್ನು ಮಾಡುತ್ತಿದ್ದ ತಪೋವನಕ್ಕೆ ಬಂದನು.

೨೨-೨೩. ಆಗ ಪರಮೇಶ್ವರಿಯಾದ ಪಾರ್ವತೀದೇವಿಯು ಪ್ರಪಂಚದ ರಕ್ಷಣೆಗಾಗಿ ಪ್ರತಿಷ್ಠಿತಳಾದ ದೇವತೆಯಂತೆ ಬೆಳಗುತ್ತಾ ತಪಸ್ಸನ್ನು ಮಾಡುತ್ತಿದ್ದಳು.

ರರಾಮ ಚಾಸ್ಯ ಜಗತೋ ಮಾತರಂ ಸ್ವಸ್ಯ ವೈ ಹರೇಃ ।
ರುದ್ರಸ್ಯ ಚ ಪಿತುರ್ಭಾರ್ಯಾಮಾರ್ಯಾಮದ್ರೀಶ್ವರಾತ್ಮಜಾಂ ॥ ೨೩ ॥

ಬ್ರಹ್ಮಾಣಮಾಗತಂ ದೃಷ್ಟ್ವಾ ದೇವೀ ದೇವಗಣೈಃ ಸಹ ।
ಅರ್ಘ್ಯಂ ತದರ್ಹಂ ದತ್ವಾಽಸ್ಮೈ ಸ್ವಾಗತಾದ್ಯೈರುಪಾಚರತ್ ॥ ೨೪ ॥

ತಾಂ ಚ ಪ್ರತ್ಯುಪಚಾರೋಕ್ತಿಂ ಪುರಸ್ಕೃತ್ಯಾಭಿನಂದ್ಯ ಚ ।
ಪಪ್ರಚ್ಛ ತಪಸೋ ಹೇತುಮಜಾನನ್ನಿವ ಪದ್ಮಜಃ ॥ ೨೫ ॥

॥ ಬ್ರಹ್ಮೋವಾಚ ॥

ತೀವ್ರೇಣ ತಪಸಾನೇನ ದೇವ್ಯಾ ಕಿಮಿಹ ಸಾಧ್ಯತೇ ।
ತಪಃಫಲಾನಾಂ ಸರ್ವೇಷಾಂ ತ್ವದಧೀನಾ ಹಿ ಸಿದ್ಧಯಃ ॥ ೨೬ ॥

---

ಬ್ರಹ್ಮ ವಿಷ್ಣುಗಳಿಗೆ ಮಾತೆಯೂ, ರುದ್ರಪತ್ನಿಯೂ ಆದ ಗಿರಿರಾಜಕುಮಾರಿಯನ್ನು ನೋಡಿ ಬ್ರಹ್ಮನಿಗೆ ಪರಮಾನಂದವಾಯಿತು.

೨೪. ಇತ್ತ ದೇವಿಯು ದೇವತೆಗಳ ಸಮೂಹದೊಡನೆ ಬಂದಿರುವ ಬ್ರಹ್ಮನನ್ನು ನೋಡಿ ಅವನಿಗೆ ಉಚಿತವಾದ ರೀತಿಯಿಂದ ಅರ್ಘ್ಯವೇ ಮೊದಲಾದವುಗಳನ್ನು ಕೊಟ್ಟು ಉಪಚಾರಮಾಡಿದಳು.

೨೫. ಬ್ರಹ್ಮನು ಆ ದೇವಿಯ ಸಂಗಡ ಲೋಕಮರ್ಯಾದೆಯನ್ನನುಸರಿಸಿ ಮಾತುಗಳನ್ನಾಡುತ್ತಾ ಆ ದೇವಿಯನ್ನು ಶ್ಲಾಘನೆಮಾಡಿದನು. ತಾನು ಏನೂ ತಿಳಿಯದವನಂತೆ, ತಪಸ್ಸುಮಾಡಲು ಕಾರಣವೇನೆಂದು ಆ ದೇವಿಯನ್ನು ಪ್ರಶ್ನೆ ಮಾಡಿದನು.

೨೬. ಎಲೈ ದೇವಿಯೇ! ಎಲ್ಲಾ ವಿಧವಾದ ತಪಸ್ಸಿನ ಫಲಗಳೂ ನಿನ್ನಿಂದಲೇ ಸಿದ್ಧಿಯಾಗುವವು. ಎಂದರೆ ಎಲ್ಲರ ತಪಸ್ಸಿಗೂ ಫಲಗಳನ್ನು ಕೊಡುವವಳು ನೀನೇ ಆಗಿರುವೆ. ಹೀಗಿರುವಾಗ ನೀನೇ ಇಷ್ಟುಮಟ್ಟಿನ ಉಗ್ರವಾದ ತಪಸ್ಸನ್ನುಮಾಡಿ ಪಡೆಯಬೇಕಾದುದೇನು ?

ಯಶ್ಚೈವ ಜಗತಾಂ ಭರ್ತಾ ತಮೇವ ಪರಮೇಶ್ವರಂ ।
ಭರ್ತಾರಮಾತ್ಮನಾ ಪ್ರಾಪ್ಯ ಪ್ರಾಪ್ತಂ ಚ ತಪಸಃ ಫಲಂ ॥ ೨೭ ॥

ಅಥವಾ ಸರ್ವಮೇವೈತತ್ಕ್ರೀಡಾವಿಲಸಿತಂ ತವ ।
ಇದಂ ತು ಚಿತ್ರಂ ದೇವಸ್ಯ ವಿರಹಂ ಸಹಸೇ ಕಥಂ ॥ ೨೮ ॥

॥ ದೇವ್ಯುವಾಚ ॥

ಸರ್ಗಾದೌ ಭವತೋ ದೇವಾದುತ್ಪತ್ತಿಃ ಶ್ರೂಯತೇ ಯದಾ ।
ತದಾ ಪ್ರಜಾನಾಂ ಪ್ರಥಮಸ್ತ್ವಂ ಮೇ ಪ್ರಥಮಜಃ ಸುತಃ ॥ ೨೯ ॥

ಯದಾ ಪುನಃ ಪ್ರಜಾವೃದ್ಧ್ಯೈ ಲಲಾಟಾದ್ಭವತೋ ಭವಃ ।
ಉತ್ಪನ್ನೋಽಭೂತ್ತದಾ ತ್ವಂ ಮೇ ಗುರುಃ ಶ್ವಶುರಭಾವತಃ ॥ ೩೦ ॥

ಯದಾ ಭವದ್ಗಿರೀಂದ್ರಸ್ತೇ ಪುತ್ರೋ ಮಮ ಪಿತಾ ಸ್ವಯಂ ।
ತದಾ ಪಿತಾಮಹಸ್ತ್ವಂ ಮೇ ಜಾತೋ ಲೋಕಪಿತಾಮಹ ॥ ೩೧ ॥

---

೨೭-೨೮. ಪ್ರಪಂಚಕ್ಕೆಲ್ಲಕ್ಕೂ ಅಧಿಪತಿಯಾಗಿರುವ ಪರಮೇಶ್ವರನನ್ನೇ ನೀನು ಪತಿಯನ್ನಾಗಿ ಪಡೆದಿರುವೆ. ಇದೇ ನೀನು ಮಾಡಿರುವ ತಪಸ್ಸಿಗೆ ಫಲವೆಂದು ಭಾವಿಸುತ್ತೇನೆ. ಹಾಗಿಲ್ಲದಿದ್ದರೆ ನೀನು ಸುಮ್ಮನೆ ವಿನೋದಕ್ಕಾಗಿ ತಪಸ್ಸನ್ನು ಮಾಡುತ್ತಿರಬಹುದು. ಆದರೆ ನೀನು ನಿನ್ನ ಪತಿಯ ವಿರಹವನ್ನು ಸಹಿಸಿಕೊಂಡು ತಪಸ್ಸನ್ನು ಮಾಡುತ್ತಿರುವುದು ಬಹಳ ಆಶ್ಚರ್ಯಕರವಾಗಿರುತ್ತದೆ ಎಂದನು.

೨೯-೩೦. ದೇವಿಯು ಹೇಳಿದಳು.—ಎಲೈ ಬ್ರಹ್ಮನೇ ಕೇಳು! ಸೃಷ್ಟಿಕಾಲದಲ್ಲಿ ನೀನು ನನಗೆ ಮೊದಲನೆಯ ಮಗನಾಗಿರುತ್ತೀಯೆ. ಪ್ರಜಾವೃದ್ಧಿಗಾಗಿ ನಿನ್ನ ಭ್ರೂಮಧ್ಯಪ್ರದೇಶದಿಂದ ರುದ್ರನು ಹುಟ್ಟಿದನಷ್ಟೆ. ಆ ನಿಮಿತ್ತದಿಂದ ನೀನು ನನಗೆ ಮಾವನಾಗಿರುವೆ. ಹಿರಿಯರ ಸ್ಥಾನದಲ್ಲಿರುವುದರಿಂದ ನೀನು ನನಗೆ ಪೂಜ್ಯನಾಗಿರುತ್ತೀಯೆ

೩೧. ನನ್ನ ತಂದೆಯಾದ ಹಿಮವಂತನು ನಿನಗೆ ಮಗನಾದ ಕಾರಣ ಆ ನಾವೆಯಿಂದಲೂ ಲೋಕಕ್ಕೆ ಪಿತಾಮಹನೆನಿಸಿದ ನೀನು ನನಗೆ ತಾತನಾಗಿರುತ್ತೀಯೆ.

**ತದೀದೃಶಸ್ಯ ಭವತೋ ಲೋಕಯಾತ್ರಾವಿಧಾಯಿನಃ ।**
**ವೃತ್ತಮಂತಃಪುರೇ ಭರ್ತ್ರಾ ಕಥಯಿಷ್ಯೇ ಕಥಂ ಪುನಃ ॥ ೩೨ ॥**

**ಕಿಮತ್ರ ಬಹುನಾ ದೇಹೇ ಯುಶ್ಚಾಯಂ ಮಮ ಕಾಲಿಮಾ ।**
**ತ್ಯಕ್ತ್ವಾ ಸತ್ತ್ವವಿಧಾನೇನ ಗೌರೀ ಭವಿತುಮುತ್ಸಹೇ ॥ ೩೩ ॥**

**॥ ಬ್ರಹ್ಮೋವಾಚ ॥**
**ಏತಾವತಾ ಕಿಮರ್ಥೇನ ತೀವ್ರಂ ದಿವಿ ತಪಃ ಕೃತಂ ।**
**ಸ್ವೇಚ್ಛೈವ ಕಿಮಪರ್ಯಾಪ್ತಾ ಕ್ರೀಡೇಯಂ ಹಿ ತವೇದೃಶೀ ॥ ೩೪ ॥**

**ಕ್ರೀಡಾಽಪಿ ಚ ಜಗನ್ಮಾತಸ್ತವ ಲೋಕಹಿತಾಯ ವೈ ।**
**ಅತೋ ಮಮೇಷ್ಟಮನಯಾ ಫಲಂ ಕಿಮಪಿ ಸಾಧ್ಯತಾಂ ॥ ೩೫ ॥**

**ನಿಶುಂಭಶುಂಭನಾಮಾನೌ ದೈತ್ಯೌ ದತ್ತವರೌ ಮಯಾ ।**
**ದೃಪ್ತೌ ದೇವಾನ್ಪ್ರಬಾಧೇತೇ ತ್ವತ್ತೋ ಲಬ್ಧಸ್ತಯೋರ್ವಧಃ ॥ ೩೬ ॥**

---

೩೨–೩೩. ಈ ಪ್ರಕಾರದಿಂದ ಲೋಕದ ಸ್ಥಿತಿಯನ್ನು ನಡೆಸುತ್ತಿರುವ ನಿನ್ನ ಸಂಗಡ ನಾನು ನನ್ನ ಅತಃಪುರದಲ್ಲಿ ನನ್ನ ಪತಿಯೊಡನೆ ರಹಸ್ಯದಲ್ಲಿ ನಡೆದಿರುವ ವೃತ್ತಾಂತವನ್ನು ಹೇಗೆ ಹೇಳಲಿ? ಹೆಚ್ಚಾಗಿ ಹೇಳಿ ಉಪಯೋಗವೇನು? ಸೂಕ್ಷ್ಮ ವಾಗಿ ಹೇಳುವೆನು ಕೇಳು. ನನ್ನ ಶರೀರದಲ್ಲಿರುವ ಕಪ್ಪುಬಣ್ಣವು ಹೋಗಿ ನನಗೆ ಉತ್ತಮವಾದ ಗೌರವರ್ಣವು ಉಂಟಾಗಬೇಕೆಂದು ಬಯಸುತ್ತೇನೆ ಎಂದಳು.

೩೪. ಬ್ರಹ್ಮನಿಂತೆಂದನು.—ಎಲೈ, ದೇವಿಯೆ! ಇಷ್ಟು ಮಾತ್ರಕ್ಕಾಗಿಯೇ ನೀನು ಇಷ್ಟು ತೀವ್ರವಾದ ತಪಸ್ಸನ್ನು ಮಾಡಬೇಕೇ? ನೀನು ಇಷ್ಟಪಟ್ಟ ಮಾತ್ರ ದಿಂದಲೇ ನಿನ್ನ ಅಪೇಕ್ಷೆಯು ಸಿದ್ಧಿಸುವುದು. ಹೀಗಿರುವಾಗ ಈ ಪ್ರಕಾರ ತಪಸ್ಸನ್ನು ಮಾಡುವುದು ನಿನಗೆ ಒಂದು ವಿನೋದವಾಗಿರುತ್ತದೆ.

೩೫. ಎಲೈ, ಜಗನ್ಮಾತೆಯೆ, ನಿನ್ನ ವಿನೋದವೂ ಕೂಡ ಜಗತ್ತಿಗೆ ಹಿತ ವನ್ನುಂಟುಮಾಡುತ್ತದೆ. ಈ ಕಾರಣದಿಂದ, ಎಂದರೆ ನಿನ್ನ ವರ್ಣಬದಲಾವಣೆಯಿಂದ ನಾನು ಕೊಂಚಮಟ್ಟಿನ ಪ್ರಯೋಜನವನ್ನು ಹೊಂದುವೆನು.

೩೬. ಶುಂಭನಿಶುಂಭರೆಂಬ ಇಬ್ಬರು ರಾಕ್ಷಸರಿಗೂ ನಾನು ವರವನ್ನು ಕೊಟ್ಟಿರುವೆನು. ಅವರು ದೇವತೆಗಳೆಲ್ಲರನ್ನೂ ಬಾಧಿಸುತ್ತಿರುವರು. ನೀನು ಈಗ ಮಾಡುವ ಕೆಲಸದಿಂದ ಅವರ ವಿನಾಶವು ನಿನ್ನಿಂದಲೇ ಆಯಿತೆಂದು ತಿಳಿಯುವೆನು.

ಅಲಂ ವಿಲಂಬನೇನಾತ್ರ ತ್ವಂ ಕ್ಷಣೇನ ಸ್ಥಿರಾ ಭವ ।
ಶಕ್ತಿರ್ವಿಸೃಜ್ಯಮಾನಾಽದ್ಯ ತಯೋರ್ಮೃತ್ಯುರ್ಭವಿಷ್ಯತಿ ॥ ೩೭ ॥

ಬ್ರಹ್ಮಣಾಭ್ಯರ್ಥಿತಾ ಚೈವ ದೇವೀ ಗಿರಿವರಾತ್ಮಜಾ ।
ತ್ವಕ್ಕೋಶಂ ಸಹಸೋತ್ಸೃಜ್ಯ ಗೌರೀ ಸಾ ಸಮಜಾಯತ ॥ ೩೮ ॥

ಸಾ ತ್ವಕ್ಕೋಶಾತ್ಮನೋತ್ಸೃಷ್ಟಾ ಕೌಶಿಕೀ ನಾಮ ನಾಮತಃ ।
ಕಾಲೀ ಕಾಲಾಂಬುದಪ್ರಖ್ಯಾ ಕನ್ಯಕಾ ಸಮಪದ್ಯತ । ॥ ೩೯ ॥

ಸಾ ತು ಮಾಯಾತ್ಮಿಕಾ ಶಕ್ತಿರ್ಯೋಗನಿದ್ರಾ ಚ ವೈಷ್ಣವೀ ।
ಶಂಖಚಕ್ರತ್ರಿಶೂಲಾದಿಸಾಯುಧಾಷ್ಟಮಹಾಭುಜಾ ॥ ೪೦ ॥

---

೩೭. ಎಲೌ ದೇವಿ! ನೀನು ಏತಕ್ಕೆ ವಿಲಂಬ ಮಾಡುತ್ತಿರುವೆ? ಒಂದು ಕ್ಷಣಕಾಲದವರೆಗೂ ಸ್ಥಿರವಾಗಿರು. ಈಗ ನೀನು ನಿನ್ನ ಚರ್ಮ ಬಿದ್ದ ಕೂಡಲೆ ಅದು ನಿನ್ನ ಶಕ್ತಿಯ ರೂಪದಿಂದ ಅವರಿಬ್ಬರಿಗೂ ಮೃತ್ಯುವಾಗುವುದು ಎಂದನು.

೩೮. ಬ್ರಹ್ಮನು ದೇವಿಯಾದ ಪಾರ್ವತಿಯನ್ನು ಹೀಗೆ ಪ್ರಾರ್ಥನೆಮಾಡಿದ ನಂತರ ಹಿಮವತ್ಪುತ್ರಿಯಾದ ಪಾರ್ವತಿಯು ಬೇಗನೆ ತನ್ನ ಕಪ್ಪಗಿರುವ ಚರ್ಮವನ್ನು ತ್ಯಜಿಸಿ ಉತ್ತಮವಾದ ಚರ್ಮವನ್ನು ಹೊಂದಿ ಗೌರಿಯೆಂದು ಪ್ರಸಿದ್ಧಿಯಾದಳು.

೩೯. ಪಾರ್ವತಿಯು ತ್ಯಾಗಮಾಡಿದ (ತ್ವಕ್ಕೋಶವು) ಚರ್ಮದ ಕೋಶವು ಕೌಶಿಕೀ ಎಂದು ಹೆಸರನ್ನು ಹೊಂದಿ ಪ್ರಳಯಕಾಲದ ಮೇಘದಕಾಂತಿಯಂತೆ ಕಪ್ಪಗೆ ಹೊಳೆಯುತ್ತಿರುವ ಓರ್ವ ಕನ್ಯೆಯ ಆಕಾರವನ್ನು ಧರಿಸಿತು.

೪೦. ಆ ಕೌಶಿಕಿಯೇ ಮಾಯಾಶಕ್ತಿಯೆಂತಲೂ, ಯೋಗನಿದ್ರಾ ಎಂತಲೂ, ವೈಷ್ಣವೀಶಕ್ತಿ ಎಂತಲೂ, ಪ್ರಸಿದ್ಧಿಯನ್ನು ಹೊಂದಿರುವಳು. ತನ್ನ ಮಹಾಬಾಹುಗಳಲ್ಲಿ ಶಂಖ, ಚಕ್ರ, ತ್ರಿಶೂಲ ಇವೇ ಮೊದಲಾದ ಎಂಟು ಆಯುಧಗಳನ್ನು ಧರಿಸಿರುವಳು.

ಸೌಮ್ಯಾ ಘೋರಾ ಚ ಮಿಶ್ರಾ ಚ ತ್ರಿನೇತ್ರಾ ಚಂದ್ರಶೇಖರಾ ।
ಅಜಾತಪುಂಸ್ಪರ್ಶರತಿರಧೃಷ್ಯಾ ಚಾತಿಸುಂದರೀ ॥ ೪೧ ॥

ದತ್ತಾ ಚ ಬ್ರಹ್ಮಣೇ ದೇವ್ಯಾ ಶಕ್ತಿರೇಷಾ ಸನಾತನೀ ।
ನಿಶುಂಭಸ್ಯ ಚ ಶುಂಭಸ್ಯ ನಿಹಂತ್ರೀ ದೈತ್ಯಸಿಂಹಯೋಃ ॥ ೪೨ ॥

ಬ್ರಹ್ಮಣಾಪಿ ಪ್ರಹೃಷ್ಟೇನ ತಸ್ಯೈ ಪರಮಶಕ್ತಯೇ ।
ಪ್ರಬಲಃ ಕೇಸರೀ ದತ್ತೋ ವಾಹನತ್ವೇ ಸಮಾಗತಃ ॥ ೪೩ ॥

ವಿಂಧ್ಯೇ ಚ ವಸತಿಂ ತಸ್ಯಾಃ ಪೂಜಾಮಾಸವಪೂರ್ವಕೈಃ ।
ಮಾಂಸೈರ್ಮತ್ಸ್ಯೈರಪೂಪೈಶ್ಚ ನಿರ್ವರ್ತ್ಯಾಸೌ ಸಮಾದಿಶತ್ ॥ ೪೪ ॥

ಸಾ ಚೈವ ಸಂಮತಾ ಶಕ್ತಿರ್ಬ್ರಹ್ಮಣೋ ವಿಶ್ವಕರ್ಮಣಃ ।
ಪ್ರಣಮ್ಯ ಮಾತರಂ ಗೌರೀಂ ಬ್ರಹ್ಮಾಣಂ ಚಾನುಪೂರ್ವಶಃ ॥ ೪೫ ॥

೪೧. ಈ ಕೌಶಿಕಿಗೆ ಸೌಮ್ಯವಾದ ರೂಪವೂ ಭಯಂಕರವಾದ ಆಕಾರವೂ ಇರುವುದಲ್ಲದೆ ಇವೆರಡು ಆಕಾರವೂ ಮಿಶ್ರವಾಗಿರುವ ಮತ್ತೊಂದು ಆಕಾರವೂ ಇರುವುದು. ಈ ಕೌಶಿಕಿಗೆ ಮೂರು ಕಣ್ಣುಗಳಿರುವವು. ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವಳು. ಇವಳು ಬಹಳ ಸುಂದರಳಾಗಿರುವಳು. ಇವಳಿಗೆ ಯಾವಾಗಲೂ ಪುರುಷಸಂಪರ್ಕವಿಲ್ಲ.

೪೨. ಪಾರ್ವತೀದೇವಿಯು ಈ ಶಕ್ತಿದೇವಿಯನ್ನು ಬ್ರಹ್ಮನಿಗೆ ಲೋಕಹಿತಕ್ಕಾಗಿ ಕೊಟ್ಟಿರುವಳು. ಇವಳೇ ಶುಂಭ, ನಿಶುಂಭರೆಂಬ ಇಬ್ಬರು ಬಲಿಷ್ಠರಾದ ರಾಕ್ಷಸರನ್ನು ನಾಶಮಾಡಿರುವಳು.

೪೩. ಈ ಶಕ್ತಿದೇವಿಗೆ ವಾಹನಕ್ಕಾಗಿ ಬಹಳ ಶಕ್ತಿಯುಳ್ಳ ಒಂದು ಸಿಂಹವನ್ನು ಬ್ರಹ್ಮನು ಸಿದ್ಧಮಾಡಿಕೊಟ್ಟನು.

೪೪. ಆ ಶಕ್ತಿದೇವಿಗೆ ವಾಸಮಾಡಲು ವಿಂಧ್ಯಪರ್ವತದಲ್ಲಿ ಸ್ಥಳವನ್ನು ಕಲ್ಪಿಸಿ ಕೊಟ್ಟು, ಮದ್ಯ, ಮಾಂಸ, ಅಪೂಪ, ಪಾಯಸ ಇವುಗಳಿಂದ ಪೂಜೆಯನ್ನು ಮಾಡುವಂತೆ ಹೇಳಿ ತಾನೂ ಪೂಜಿಸಿ ದೈತ್ಯರಾದ ಶುಂಭ, ನಿಶುಂಭರಿಬ್ಬರನ್ನೂ ಸಂಹಾರಮಾಡಲು ಆ ಶಕ್ತಿದೇವಿಯನ್ನು ಕಳುಹಿಸಿದನು.

೪೫-೪೬. ಪ್ರಪಂಚವನ್ನು ನಿರ್ಮಿಸಿದ ಬ್ರಹ್ಮನ ಅನುಮತಿಯಂತೆ ಆ ಶಕ್ತಿದೇವಿಯು ತನ್ನ ತಾಯಿಯಾದ ಗೌರಿಗೂ ಬ್ರಹ್ಮನಿಗೂ ನಮಸ್ಕರಿಸಿ ತನ್ನಿಂದ ಹುಟ್ಟಿದ

ಶಕ್ತಿಭಿಶ್ಚಾಪಿ ತುಲ್ಯಾಭಿಃ ಸ್ವಾತ್ಮಜಾಭಿರನೇಕಶಃ ।
ಪರೀತಾ ಪ್ರಯಯೌ ವಿಂಧ್ಯಂ ದೈತ್ಯೇಂದ್ರೌ ಹಂತುಮುದ್ಯತಾ ॥ ೪೬ ॥

ನಿಹತೌ ಚ ತಯಾ ತತ್ರ ಸಮರೇ ದೈತ್ಯಪುಂಗವೌ ।
ತದ್ಬಾಣೈಃ ಕಾಮಬಾಣೈಶ್ಚ ಛಿನ್ನಭಿನ್ನಾಂಗಮಾನಸೌ ॥ ೪೭ ॥

ತದ್ಯುದ್ಧವಿಸ್ತರಶ್ಚಾತ್ರ ನ ಕೃತೋಽನ್ಯತ್ರ ವರ್ಣನಾತ್ ।
ಊಹನೀಯಂ ಪರಸ್ಮಾಚ್ಚ ಪ್ರಸ್ತುತಂ ವರ್ಣಯಾಮಿ ವಃ ॥ ೪೮ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾಂ
ದೇವೀಗೌರತ್ವಭವನವರ್ಣನಂ ನಾಮ ಪಂಚವಿಂಶೋಽಧ್ಯಾಯಃ



ಮತ್ತು ತನಗೆ ಅನುರೂಪರಾದ ಅನೇಕ ಇತರ ಶಕ್ತಿಗಳೊಡನೆ ಕೂಡಿಕೊಂಡು ಶುಂಭ, ನಿಶುಂಭರನ್ನು ಕೊಲ್ಲುವುದಕ್ಕೆ ಸಿದ್ಧಳಾಗಿ ವಿಂಧ್ಯಪರ್ವತಕ್ಕೆ ಪ್ರಯಾಣಮಾಡಿದಳು.

೪೭. ಶುಂಭ, ನಿಶುಂಭರೊಡನೆ ನಡೆದ ಆ ಯುದ್ಧದಲ್ಲಿ, ಆ ದೇವಿಯು ತನ್ನ ಬಾಣಗಳಿಂದಲೂ, ಕಾಮನಬಾಣಗಳಿಂದಲೂ, ಆ ದೈತ್ಯರ ಅವಯವಗಳನ್ನೂ ಮನಸ್ಸನ್ನೂ ಘಾಸಿಗೊಳಿಸಿ ಅವರಿಬ್ಬರನ್ನೂ ನಾಶಮಾಡಿದಳು.

೪೮. ಆ ದೈತ್ಯರಿಗೂ ದೇವಿಗೂ ನಡೆದ ಯುದ್ಧದ ವರ್ಣನೆಯು ಬೇರೆಯ ಕಡೆ ವಿಸ್ತಾರವಾಗಿ ಹೇಳಿರುವಕಾರಣ ಅದನ್ನು ಇಲ್ಲಿ ಹೇಳುವುದಿಲ್ಲ. ಬೇರೆಯಕಡೆ ಹೇಳಿರುವುದನ್ನೇ ಕೇಳಿ ತಿಳಿದುಕೊಳ್ಳಬೇಕು. ನಿಮಗೆ ಪ್ರಕೃತ ಸಂದರ್ಭದಲ್ಲಿ ಹೇಳಬೇಕಾದದ್ದನ್ನು ಹೇಳುವೆನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯ ಸಂಹಿತೆಯ ಪೂರ್ವಭಾಗದಲ್ಲಿ
ಪಾರ್ವತೀದೇವಿಗೆ ಗೌರತ್ವ ಪ್ರಾಪ್ತಿಯಾದ ವಿಧಾನವನ್ನು ವರ್ಣಿಸುವ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ
## ವಾಯವೀಯಸಂಹಿತಾಯಾಂ ಪೂರ್ವಭಾಗೇ
## ಷಡ್ವಿಂಶೋಽಧ್ಯಾಯಃ

॥ ವಾಯುರುವಾಚ ॥

**ಉತ್ಪಾದ್ಯ ಕೌಶಿಕೀಂ ಗೌರೀ ಬ್ರಹ್ಮಣೇ ಪ್ರತಿಪಾದ್ಯ ತಾಂ ।**
**ತಸ್ಯ ಪ್ರತ್ಯುಪಕಾರಾಯ ಪಿತಾಮಹಮಥಾಬ್ರವೀತ್ ॥ ೧ ॥**

॥ ದೇವ್ಯುವಾಚ ॥

**ದೃಷ್ಟಃ ಕಿಮೇಷ ಭವತಾ ಶಾರ್ದೂಲೋ ಮದುಪಾಶ್ರಯಃ ।**
**ಅನೇನ ದುಷ್ಟಸತ್ತ್ವೇಭ್ಯೋ ರಕ್ಷಿತಂ ಮತ್ತಪೋವನಂ ॥ ೨ ॥**

## ಇಪ್ಪತ್ತಾರನೆಯ ಅಧ್ಯಾಯವು

೧. ವಾಯುದೇವನಿಂತೆಂದನು — ಈರೀತಿ ಗೌರೀದೇವಿಯು ಕೌಶಿಕಿಯನ್ನು ಸೃಷ್ಟಿಮಾಡಿ ಅವಳನ್ನು ಬ್ರಹ್ಮನಿಗೆ ಕೊಟ್ಟು ಅದರ ಪ್ರತ್ಯುಪಕಾರವನ್ನು ಹೊಂದುವುದಕ್ಕಾಗಿ ಬ್ರಹ್ಮನನ್ನು ಕುರಿತು—

೨. ಎಲೈ, ಬ್ರಹ್ಮನೆ! ನನ್ನನ್ನು ಆಶ್ರಯಿಸಿಕೊಂಡಿರುವ ಈ ಹುಲಿಯನ್ನು ನೀನು ನೋಡಿರುವಿಯಷ್ಟೆ? ಈ ಹುಲಿಯು ನನ್ನ ತಪೋವನಕ್ಕೆ ಯಾವ ವಿಧವಾದ ದುಷ್ಟಪ್ರಾಣಿಯೂ ಬಾರದಂತೆ ರಕ್ಷಿಸುತ್ತಿತ್ತು.

**ಮಯ್ಯರ್ಪಿತಮನಾ ಏವ ಭಜತೇ ಮಾಮನನ್ಯಧೀಃ ।**
**ಅಸ್ಯ ಸಂರಕ್ಷಣಾದನ್ಯತ್ಪ್ರಿಯಂ ಮಮ ನ ವಿದ್ಯತೇ ॥ ೩ ॥**

**ಭವಿತವ್ಯಮನೇನಾತೋ ಮಮಾಂತಃಪುರಚಾರಿಣಾ ।**
**ಗಣೇಶ್ವರಪದಂ ಚಾಸ್ಮೈ ಪ್ರೀತ್ಯಾ ದಾಸ್ಯತಿ ಶಂಕರಃ ॥ ೪ ॥**

**ಏನಮಗ್ರೇಸರಂ ಕೃತ್ವಾ ಸಖೀಭಿರ್ಗಂತುಮುತ್ಸಹೇ ।**
**ಪ್ರದೀಯತಾಮನುಜ್ಞಾ ಮೇ ಪ್ರಜಾನಾಂ ಪತಿನಾ ತ್ವಯಾ ॥ ೫ ॥**

**ಇತ್ಯುಕ್ತಃ ಪ್ರಹಸನ್ಬ್ರಹ್ಮಾ ದೇವೀಂ ಮುಗ್ಧಾಮಿವ ಸ್ಮಯನ್ ।**
**ತಸ್ಯ ತೀವ್ರೈಃ ಪುರಾವೃತ್ತೈರ್ದೌರಾತ್ಮ್ಯಂ ಸಮವರ್ಣಯತ್ ॥ ೬ ॥**

**॥ ಬ್ರಹ್ಮೋವಾಚ ॥**

**ಪಶೌ ದೇವಿ ಮೃಗಾಃ ಕ್ರೂರಾಃ ಕ್ವ ಚ ತೇಽನುಗ್ರಹಃ ಶುಭಃ ।**
**ಆಶೀವಿಷಮುಖೇ ಸಾಕ್ಷಾದಮೃತಂ ಕಿಂ ನಿಷಿಚ್ಯತೇ ॥ ೭ ॥**

೩-೫. ಈ ಹುಲಿಯು ನನ್ನಲ್ಲಿಯೇ ಮನಸ್ಸನ್ನು ಇರಿಸಿ, ನನ್ನನ್ನು ನೀನೇ ಗತಿ ಎಂಬುದಾಗಿ ಸೇವಿಸುತ್ತಾ ಇರುವುದು ಇದನ್ನು ರಕ್ಷಿಸುವುದಕ್ಕಿಂತ ಬೇರೆ ಯಾವ ಕೆಲಸವೂ ನನಗಿರುವುದಿಲ್ಲ. ಆದುದರಿಂದ ಈ ಪ್ರಾಣಿಯು ನನ್ನ ಅಂತಃಪುರದಲ್ಲಿ ಇರಲು ತಕ್ಕಂತೆ ಮಾಡಬೇಕು. ಈ ಹುಲಿಗೆ ಶಂಕರನು ಪ್ರೀತಿಯಿಂದ ಗಣೇಶ್ವರನ ಪದವಿಯನ್ನು ಕೊಡುವನು. ನಾನು ಇದನ್ನು ಮುಂದಿಟ್ಟುಕೊಂಡು ನನ್ನ ಸಖಿಯರೊಡನೆ ಪ್ರಯಾಣಮಾಡುವೆನು. ನಾನು ಹೀಗೆ ಮಾಡುವುದಕ್ಕೆ ಪ್ರಜೆಗಳಿಗೆಲ್ಲರಿಗೂ ಅಧಿಪತಿಯಾದ ನೀನು ಅನುಜ್ಞೆಯನ್ನು ಕೊಡಬೇಕು ಎಂದಳು

೬. ದೇವಿಯು ಹೀಗೆ ಹೇಳಿದ ಮಾತನ್ನು ಕೇಳಿ ಬ್ರಹ್ಮನು ದೇವಿಯನ್ನು ಮೂಢಳಂತೆ ತಿಳಿದು ನಗುತ್ತಾ ಆ ಹುಲಿಯ ಹಿಂದಿನ ನಡತೆಯನ್ನೂ ದುಷ್ಟತನವನ್ನೂ ವರ್ಣಿಸಿದನು

೭. ಎಲೈ ದೇವಿಯೇ! ಪಶುಗಳಲ್ಲಿ ಮೃಗಗಳು ಕ್ರೂರವಾದುವುಗಳು. ಅವುಗಳ ವಿಷಯದಲ್ಲಿ ನೀನು ಇಷ್ಟುಮಟ್ಟಿಗೆ ಒಳ್ಳೆಯ ಅನುಗ್ರಹವನ್ನು ಮಾಡುವುದು ಹಾವಿನ ಬಾಯಿಗೆ ಅಮೃತವನ್ನು ಹಾಕಿದಂತಾಗುವುದು.

ವ್ಯಾಘ್ರಮಾತ್ರೇಣ ಸನ್ನೇಷ ದುಷ್ಟಃ ಕೋऽಪಿ ನಿಶಾಚರಃ ।
ಅನೇನ ಭಕ್ಷಿತಾ ಗಾವೋ ಬ್ರಾಹ್ಮಣಾಶ್ಚ ತಪೋಧನಾಃ ॥ ೮ ॥

ತರ್ಪಯಂಸ್ತ್ವಾನ್ಯಥಾಕಾಮಂ ಕಾಮರೂಪೀ ಚರತ್ಯಸೌ ।
ಅವಶ್ಯಂ ಖಲು ಭೋಕ್ತವ್ಯಂ ಫಲಂ ಪಾಪಸ್ಯ ಕರ್ಮಣಃ ॥ ೯ ॥

ಅತಃ ಕಿಂ ಕೃಪಯಾ ಕೃತ್ಯಮೀದೃಶೇಷು ದುರಾತ್ಮಸು ।
ಅನೇನ ದೇವ್ಯಾಃ ಕಿಂ ಕೃತ್ಯಂ ಪ್ರಕೃತ್ಯಾ ಕಲುಷಾತ್ಮನಾ ॥ ೧೦ ॥

॥ ದೇವ್ಯುವಾಚ ॥

ಯದುಕ್ತಂ ಭವತಾ ಸರ್ವಂ ತಥ್ಯಮಸ್ತ್ವಯಮೀದೃಶಃ ।
ತಥಾಪಿ ಮಾಂ ಪ್ರಪನ್ನೋऽಭೂನ್ನ ತ್ಯಾಜ್ಯೋ ಮಾಮುಪಾಶ್ರಿತಃ ॥ ೧೧ ॥

---

೮-೯. ಈ ಪ್ರಾಣಿಯು ವ್ಯಾಘ್ರದಂತೆ ಕಾಣಿಸುವುದು. ಆದರೆ ಇವನು ದುಷ್ಟನಾದ ಯಾವನೋ ರಾಕ್ಷಸನಾಗಿರಬಹುದು. ಇವನು ಋಷಿಗಳನ್ನೂ, ಹಸುಗಳನ್ನೂ, ಇನ್ನೂ ಬಹಳ ಮಂದಿಯನ್ನು ತಿಂದಿರುವನು. ತನಗೆ ಮನಸ್ಸು ಬಂದ ಹಾಗೆ ಆಕಾರವನ್ನು ಧರಿಸಿಕೊಂಡು ಗೋವುಗಳೂ, ಋಷಿಗಳೂ ಇವರ ಕೊಲೆಯಿಂದ ತೃಪ್ತಿಯನ್ನು ಹೊಂದುತ್ತಾ ಕಾಮರೂಪನಾಗಿ ಸಂಚರಿಸುತ್ತಿರುವನು. ಆದ್ದರಿಂದ ಇವನು ಮಾಡಿರುವ ಕೆಟ್ಟಕೆಲಸದ ಫಲವನ್ನು ಇವನು ಅವಶ್ಯಕವಾಗಿ ಅನುಭವಿಸಿಯೇ ತೀರಬೇಕು.

೧೦. ಈ ಕಾರಣದಿಂದ ಈ ಪ್ರಕಾರವಾಗಿರುವ ದುಷ್ಟರ ವಿಷಯದಲ್ಲಿ ನೀನು ದಯೆಯನ್ನು ಮಾಡುವುದು ಉಪಯೋಗವಿಲ್ಲ. ಸ್ವಭಾವದಿಂದ ಪಾಪಿಯಾದ ಇವನಿಂದ ನಿನಗೆ ಆಗಬೇಕಾದ ಕೆಲಸವು ಯಾವುದು ತಾನೆ ಇರುವುದು ? ಎನ್ನಲು,

೧೧. ದೇವಿಯು ಹೇಳಿದಳು.—ಎಲೈ, ಬ್ರಹ್ಮನೇ! ನೀನು ಹೇಳುವುದೆಲ್ಲ ನಿಜವೇ ಸರಿ. ಈ ಪ್ರಾಣಿಯು ದುಷ್ಟಸ್ವಭಾವವುಳ್ಳದ್ದಾದರೂ ನನ್ನನ್ನು ಆಶ್ರಯಿಸಿಕೊಂಡಿರುವುದು. ನನ್ನನ್ನು ಆಶ್ರಯಿಸಿಕೊಂಡಿರುವುದನ್ನು ನಾನು ರಕ್ಷಿಸದೆ ಇರುವುದು ಸರಿಯಲ್ಲ ಎಂದಳು.

॥ ಬ್ರಹ್ಮೋವಾಚ ॥

ಅಸ್ಯ ಭಕ್ತಿಮವಿಜ್ಞಾಯ ಪ್ರಾಗ್ವೃತ್ತಂ ತೇ ನಿವೇದಿತಂ ।
ಭಕ್ತಿಶ್ಚೇದಸ್ಯ ಕಿಂ ಪಾಪೈರ್ನ ತೇ ಭಕ್ತಃ ಪ್ರಣಶ್ಯತಿ ॥ ೧೨ ॥

ಪುಣ್ಯಕರ್ಮಾಪಿ ಕಿಂ ಕುರ್ಯಾತ್ತ್ವದೀಯಾಜ್ಞಾನಪೇಕ್ಷಯಾ ।
ಅಜಾ ಪ್ರಜ್ಞಾ ಪುರಾಣೀ ಚ ತ್ವಮೇವ ಪರಮೇಶ್ವರೀ ॥ ೧೩ ॥

ತ್ವದಧೀನಾ ಹಿ ಸರ್ವೇಷಾಂ ಬಂಧಮೋಕ್ಷವ್ಯವಸ್ಥಿತಿಃ ।
ತ್ವದೃತೇ ಪರಮಾ ಶಕ್ತಿಃ ಸಂಸಿದ್ಧಿಃ ಕಸ್ಯ ಕರ್ಮಣಾ ॥ ೧೪ ॥

ತ್ವಮೇವ ವಿವಿಧಾ ಶಕ್ತಿರ್ಭವಾನಾಮಥ ವಾ ಸ್ವಯಂ ।
ಅಶಕ್ತಃ ಕರ್ಮಕರಣೇ ಕರ್ತಾ ವಾ ಕಿಂ ಕರಿಷ್ಯತಿ ॥ ೧೫ ॥

---

೧೨. ಬ್ರಹ್ಮನು ಮತ್ತೆ ಹೇಳಿದನು.—ಈ ಪ್ರಾಣಿಯು ನಿನ್ನ ವಿಷಯದಲ್ಲಿ ಇರಿಸಿರುವ ಭಕ್ತಿಯನ್ನು ತಿಳಿಯದೆ ಈ ಪ್ರಾಣಿಯ ಹಿಂದಿನ ನಡತೆಯನ್ನು ಮಾತ್ರ ತಿಳಿಸಿದೆನು. ಇದಕ್ಕೆ ದೇವಿಯಾದ ನಿನ್ನ ವಿಷಯದಲ್ಲಿ ಭಕ್ತಿಯಿದ್ದರೆ ಇದರ ಪಾತಕಗಳು ಇದನ್ನು ಏನೂ ಮಾಡಲಾರವು ನಿನ್ನ ಭಕ್ತನಾದವನು ಎಂದಿಗೂ ಹೀನ ಸ್ಥಿತಿಯನ್ನು ಹೊಂದುವುದಿಲ್ಲ.

೧೩. ಪುಣ್ಯಕೆಲಸವನ್ನು ಮಾಡಿದವನೂ ಕೂಡ ನಿನ್ನ ಅಪ್ಪಣೆಯಿಲ್ಲದೆ ಏನನ್ನೂ ಮಾಡಲಾರನು. ನೀನು ಜನ್ಮರಹಿತಳಾಗಿಯೂ, ನಿತ್ಯಳಾಗಿಯೂ, ಜ್ಞಾನಿಯಾಗಿಯೂ ಇರುವ ಪರಮೇಶ್ವರಿಯಾಗಿರುವೆ. ಎಲ್ಲಾ ಪ್ರಾಣಿಗಳ ಬಂಧ, ಮೋಕ್ಷ ವ್ಯವಸ್ಥೆಯು ನಿನ್ನಧೀನವಾಗಿರುವುದು.

೧೪. ನಿನ್ನ ಅನುಗ್ರಹವಿಲ್ಲದೆ ಯಾವ ಕೆಲಸಕ್ಕಾದರೂ ಉತ್ತಮವಾದ ಸಿದ್ಧಿಯು ಹೇಗೆ ಲಭಿಸುವುದು ?

೧೫. ನೀನೇ ಪ್ರಾಣಿಗಳ ಅನೇಕ ವಿಧವಾದ ಶಕ್ತಿರೂಪದಿಂದ ಇರುತ್ತೀಯೆ. ಹೀಗಿಲ್ಲದಿದ್ದರೆ ಯಾವ ಕೆಲಸವನ್ನೂ ಮಾಡಲು ಶಕ್ತಿಯಿಲ್ಲದವನು ಏನನ್ನು ತಾನೆ ಮಾಡಿಯಾನು ?

ವಿಷ್ಣೋಶ್ಚ ಮಮ ಚಾನ್ಯೇಷಾಂ ದೇವದಾನವರಕ್ಷಸಾಂ ।
ತತ್ತದೈಶ್ವರ್ಯಸಂಪ್ರಾಪ್ತ್ಯೈ ತವೈವಾಜ್ಞಾ ಹಿ ಕಾರಣಂ ॥ ೧೬ ॥

ಅತೀತಾಃ ಖಲ್ವಸಂಖ್ಯಾತಾ ಬ್ರಹ್ಮಾಣೋ ಹರಯೋ ಭವಾಃ ।
ಅನಾಗತಾಸ್ತ್ವಸಂಖ್ಯಾತಾಸ್ತ್ವದಾಜ್ಞಾನುವಿಧಾಯಿನಃ ॥ ೧೭ ॥

ತ್ವಾಮನಾರಾಧ್ಯ ದೇವೇಶಿ ಪುರುಷಾರ್ಥಚತುಷ್ಟಯಂ ।
ಲಬ್ಧುಂ ನ ಶಕ್ಯಮಸ್ಮಾಭಿರಪಿ ಸರ್ವೈಃ ಸುರೋತ್ತಮೈಃ ॥ ೧೮ ॥

ವ್ಯತ್ಯಾಸೋಽಪಿ ಭವೇತ್ಸದ್ಯೋ ಬ್ರಹ್ಮತ್ವಸ್ಥಾವರತ್ವಯೋಃ ।
ಸುಕೃತಂ ದುಷ್ಕೃತಂ ಚಾಪಿ ತ್ವಯೈವ ಸ್ಥಾಪಿತಂ ಯತಃ ॥ ೧೯ ॥

ತ್ವಂ ಹಿ ಸರ್ವಜಗದ್ಭರ್ತುಶ್ಶಿವಸ್ಯ ಪರಮಾತ್ಮನಃ ।
ಅನಾದಿಮಧ್ಯನಿಧನಾ ಶಕ್ತಿರಾದ್ಯಾ ಸನಾತನೀ ॥ ೨೦ ॥

---

೧೬-೧೭. ವಿಷ್ಣು, ನಾನು, ದೇವತೆಗಳು, ಇತರ ದಾನವರು, ರಾಕ್ಷಸರು ಇವರುಗಳು ಅವರವರ ಐಶ್ವರ್ಯವನ್ನು ನಿನ್ನ ಅಪ್ಪಣೆಯಿಂದಲೇ ಪಡೆದು ಸುಖಿಸುತ್ತಿರುವರು. ಹೀಗೆ ಎಷ್ಟೋ ಮಂದಿ ನಿನ್ನ ಆಜ್ಞೆಯನ್ನು ಅನುಸರಿಸಿ ಬ್ರಹ್ಮ, ವಿಷ್ಣು, ಶಿವ ಇವರುಗಳಾಗಿ ಕಳೆದುಹೋದರು. ಅವರನ್ನು ಲೆಕ್ಕಮಾಡಲು ಸಾಧ್ಯವಿಲ್ಲ. ಇನ್ನು ಮುಂದೆಯೂ ನಿನ್ನ ಅಪ್ಪಣೆಯನ್ನು ಅನುಸರಿಸಿ ನಡೆಯುವ ಬ್ರಹ್ಮವಿಷ್ಣುಮಹೇಶ್ವರರು ಎಷ್ಟು ಜನ ಆಗುವರೋ ಅವರ ಸಂಖ್ಯೆಯನ್ನೂ ಹೇಳುವುದಕ್ಕೆ ಆಗುವುದಿಲ್ಲ.

೧೮. ಎಲೌ ದೇವಿಯೆ! ನಿನ್ನನ್ನು ಪೂಜಿಸದೆ ದೇವಶ್ರೇಷ್ಠರಾದ ನಾವುಗಳೂ ಕೂಡ ಚತುರ್ವಿಧ ಪುರುಷಾರ್ಥಗಳನ್ನು ಹೊಂದುವುದಕ್ಕಾಗುವುದಿಲ್ಲ.

೧೯. ನೀನು ಎಲ್ಲರನ್ನೂ ಅವರವರ ಸ್ಥಿತಿಯಲ್ಲಿ ಸರಿಯಾಗಿರುವಂತೆ ಇಟ್ಟಿರುತ್ತೀಯೆ. ಇಲ್ಲದಿದ್ದರೆ ಬ್ರಹ್ಮತ್ವ, ಸ್ಥಾವರತ್ವ ಮೊದಲಾದುವು ಒಂದು ಕ್ಷಣದಲ್ಲಿ ವ್ಯತ್ಯಾಸವನ್ನು ಹೊಂದುವುದು. ಮತ್ತು ಪುಣ್ಯಪಾಪಗಳ ವ್ಯವಸ್ಥೆಯು ತಪ್ಪಿ ಹೋಗುವುದು.

೨೦-೨೧. ನೀನು ಪ್ರಪಂಚಕ್ಕೆಲ್ಲಕ್ಕೂ ಅಧಿಪತಿಯಾಗಿರುವ ಪರಮಾತ್ಮನಾದ ಶಿವನ ಆದಿಮಧ್ಯಾನ್ತರಹಿತವಾದ ನಿತ್ಯಶಕ್ತಿರೂಪಳಾಗಿರುವೆ. ಮತ್ತು ಎಲ್ಲಾ ಲೋಕ

**ಸಮಸ್ತಲೋಕಯಾತ್ರಾರ್ಥಂ ಮೂರ್ತಿಮಾವಿಶ್ಯ ಕಾಮಪಿ ।**
**ಕ್ರೀಡಸೇ ವಿವಿಧೈರ್ಭಾವೈಃ ಕಸ್ತ್ವಾಂ ಜಾನಾತಿ ತತ್ತ್ವತಃ ॥ ೨೧ ॥**

**ಅತೋ ದುಷ್ಕೃತಕರ್ಮಾಪಿ ವ್ಯಾಘ್ರೋಽಯಂ ತ್ವದನುಗ್ರಹಾತ್ ।**
**ಪ್ರಾಪ್ನೋತು ಪರಮಾಂ ಸಿದ್ಧಿಮತ್ರ ಕಃ ಪ್ರತಿಬಂಧಕಃ ॥ ೨೨ ॥**

**ಇತ್ಯಾತ್ಮನಃ ಪರಂ ಭಾವಂ ಸ್ಮಾರಯಿತ್ವಾನುರೂಪತಃ ।**
**ಬ್ರಹ್ಮಣಾಭ್ಯರ್ಥಿತಾ ಗೌರೀ ತಪಸೋಽಪಿ ನ್ಯವರ್ತತ ॥ ೨೩ ॥**

**ತತೋ ದೇವೀಮನುಜ್ಞಾಪ್ಯ ಬ್ರಹ್ಮಣ್ಯಂತರ್ಹಿತೇ ಸತಿ ।**
**ದೇವೀಂ ಚ ಮಾತರಂ ದೃಷ್ಟ್ವಾ ಮೇನಾಂ ಹಿಮವತಾ ಸಹ ॥ ೨೪ ॥**

**ಪ್ರಣಮ್ಯಾಶ್ವಾಸ್ಯ ಬಹುಧಾ ಪಿತರೌ ವಿರಹಾಸಹೌ ।**
**ತಪಃಪ್ರಣಯಿನೋ ದೇವೀ ತಪೋವನಮಹೀರುಹಾನ್ ॥ ೨೫ ॥**

ಗಳಲ್ಲಿಯೂ ವ್ಯವಹಾರವು ಸರಿಯಾಗಿ ನಡೆಯುವಂತೆ ಮಾಡುವುದಕ್ಕಾಗಿ ಅನಿರ್ವಚನೀಯವಾದ ಆಕಾರವನ್ನು ಹೊಂದಿ ಅನೇಕ ವಿಧವಾದ ಅಭಿಪ್ರಾಯಗಳನ್ನು ಅವರವರಿಗೆ ತೋರುವಂತೆ ಮಾಡುತ್ತಾ ಕ್ರೀಡಿಸುತ್ತಿರುವೆ. ಈ ಪ್ರಕಾರದಿಂದಿರುವ ನಿನ್ನ ನಿಜಸ್ಥಿತಿಯನ್ನು ಯಾರು ತಾನೆ ತಿಳಿಯಬಲ್ಲರು ?

೨೨, ಹೀಗಿರುವುದರಿಂದ ಈ ದುಷ್ಟ ಕರ್ಮಗಳನ್ನು ಮಾಡಿರುವ ಈ ವ್ಯಾಘ್ರದ ವಿಷಯದಲ್ಲಿ ನಿನ್ನ ಅನುಗ್ರಹವು ಇರುವ ಕಾರಣ ಈ ಮೃಗವು ಉತ್ತಮವಾದ ಸಿದ್ಧಿಯನ್ನು ಹೊಂದುವ ವಿಷಯದಲ್ಲಿ ಯಾವ ವಿಧವಾದ ಪ್ರತಿಬಂಧಕವೂ ಇರುವುದಿಲ್ಲ ಎಂದನು.

೨೩. ಬ್ರಹ್ಮನು ಈ ಪ್ರಕಾರವಾಗಿ ತನಗೆ ತೋರಿದಂತೆ ತನ್ನ ಅಭಿಪ್ರಾಯವನ್ನು ದೇವಿಯ ಸಂಗಡ ಹೇಳಿ ಪ್ರಾರ್ಥನೆಯನ್ನು ಮಾಡಿಕೊಂಡನಂತರ ಗೌರಿಯು ತಾನು ಮಾಡುವ ತಪಸ್ಸನ್ನು ನಿಲ್ಲಿಸಿದಳು.

೨೪-೨೯. ಅನಂತರ ಬ್ರಹ್ಮನು ದೇವಿಯಾದ ಗೌರಿಯ ಅನುಮತಿಯನ್ನು ಪಡೆದು ಅಲ್ಲಿಯೇ ಅದೃಶ್ಯನಾದನು. ದೇವಿಯು ತನ್ನ ತಂದೆಯಾದ ಹಿಮವಂತನನ್ನೂ ತಾಯಿಯಾದ ಮೇನೆಯನ್ನೂ ಕಂಡು ತನ್ನ ವಿರಹದಿಂದ ಬಳಲುತ್ತಿರುವ ಅವರಿಬ್ಬರಿಗೂ ನಮಸ್ಕಾರಮಾಡಿ ಅವರನ್ನು ಸಮಾಧಾನಪಡಿಸಿದಳು ಅನಂತರ ದೇವಿಯು

ವಿಪ್ರಯೋಗಶುಚೇವಾಗ್ರೇ ಪುಷ್ಪಬಾಷ್ಪಂ ವಿಮುಂಚತಃ ।
ತತ್ರಚ್ಛಾಖಾಸಮಾರೂಢವಿಹಗೋದೀರಿತೈ ರುತೈಃ ॥ ೨೬ ॥

ವ್ಯಾಕುಲಂ ಬಹುಧಾ ದೀನಂ ವಿಲಾಪಮಿವ ಕುರ್ವತಃ ।
ಸಖೀಭ್ಯಃ ಕಥಯಂತ್ಯೇವಂ ಸತ್ವರಾ ಭರ್ತೃದರ್ಶನೇ ॥ ೨೭ ॥

ಪುರಸ್ಕೃತ್ಯ ಚ ತಂ ವ್ಯಾಘ್ರಂ ಸ್ನೇಹಾತ್ಪುತ್ರಮಿವೌರಸಂ ।
ದೇಹಸ್ಯ ಪ್ರಭಯಾ ಚೈವ ದೀಪಯಂತೀ ದಿಶೋ ದಶ ॥ ೨೮ ॥

ಪ್ರಯಯೌ ಮಂದರಂ ಗೌರೀ ಯತ್ರ ಭರ್ತಾ ಮಹೇಶ್ವರಃ ।
ಸರ್ವೇಷಾಂ ಜಗತಾಂ ಧಾತಾ ಕರ್ತಾ ಪಾತಾ ವಿನಾಶಕೃತ್ ॥ ೨೯ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾಂ
ಪೂರ್ವಭಾಗೇ ವ್ಯಾಘ್ರಗತಿವರ್ಣನಂ ನಾಮ ಷಡ್ವಿಂಶೋಽಧ್ಯಾಯಃ

---

ತನ್ನ ಸಖಿಯರನ್ನು ಕುರಿತು—ಎಲೌ ಸಖಿಯರೇ, ಇತ್ತನೋಡಿ. ನಾನು ತಪಸ್ಸನ್ನು ಮಾಡುತ್ತಿರುವಾಗ ನನಗೆ ಅನುಕೂಲ ಮಾಡಿಕೊಟ್ಟ ತಪೋವನದ ಮರಗಳು ನನ್ನ ವಿರಹ ವ್ಯಥೆಯ ದುಃಖದಿಂದ ನನ್ನ ಮುಂದೆ ಕಣ್ಣೀರು ಸುರಿಸುವಂತೆ ಪುಷ್ಪವೃಷ್ಟಿಯನ್ನು ಸುರಿಸುತ್ತಿರುವುವು. ಹಾಗೆಯೇ ಆಯಾಯ ಮರಗಳ ಕೊಂಬೆಗಳಲ್ಲಿ ಕೂತುಕೊಂಡು ಕೂಗುತ್ತಿರುವ ಅನೇಕ ಹಕ್ಕಿಗಳು ವಿಧವಿಧವಾದ ಧ್ವನಿಗಳಿಂದ ಬಹಳ ದುಃಖದಿಂದ ಸಂಕಟವುಳ್ಳದ್ದಾಗಿ ಅಳುತ್ತಿರುವಂತೆ ತೋರುವವು ಎಂದು ಬಗೆಬಗೆಯಾಗಿ ತನ್ನ ಸಖಿಯರಿಗೆ ವರ್ಣನೆಯನ್ನು ಮಾಡಿ ಹೇಳುತ್ತಾ, ತಾನೂ ತನ್ನ ಪತಿಯನ್ನು ನೋಡುವುದರಲ್ಲಿ ಆತುರವುಳ್ಳವಳಾಗಿ, ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನು ಮುಂದಿಟ್ಟುಕೊಂಡು ಬರುವಂತೆ ಸ್ನೇಹದಿಂದ ಆ ಹುಲಿಯನ್ನು ತನ್ನ ಮುಂದೆ ಬಿಟ್ಟುಕೊಂಡು, ತನ್ನ ಶರೀರಕಾಂತಿಯಿಂದ ದಶದಿಕ್ಕುಗಳನ್ನೂ ಬೆಳಗುತ್ತಾ, ಎಲ್ಲಾ ಜಗತ್ತುಗಳನ್ನೂ ನಿರ್ಮಿಸುವವನೂ, ಅವುಗಳನ್ನು ಧರಿಸಿ ಕಾಪಾಡುವವನೂ, ಕಡೆಯಲ್ಲಿ ನಾಶಮಾಡುವವನೂ ಆದ ತನ್ನ ಪತಿ ಮಹೇಶ್ವರನು ವಾಸವಾಗಿರುವ ಮಂದರಪರ್ವತಕ್ಕೆ ಬೇಗನೆ ಬಂದು ಸೇರಿದಳು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯ ಸಂಹಿತೆಯ ಪೂರ್ವಭಾಗದಲ್ಲಿ
ವ್ಯಾಘ್ರಗತಿವರ್ಣನವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ಸಪ್ತವಿಂಶೋಽಧ್ಯಾಯಃ

॥ ಋಷಯ ಊಚುಃ ॥

**ಕೃತ್ವಾ ಗೌರಂ ವಪುರ್ದಿವ್ಯಂ ದೇವೀ ಗಿರಿವರಾತ್ಮಜಾ ।**
**ಕಥಂ ದದರ್ಶ ಭರ್ತಾರಂ ಪ್ರವಿಷ್ಟಾ ಮಂದಿರಂ ಸತೀ ॥ ೧ ॥**

**ಪ್ರವೇಶಸಮಯೇ ತಸ್ಯಾ ಭವನದ್ವಾರಗೋಚರೈಃ ।**
**ಗಣೇಶೈಃ ಕಿಂ ಕೃತಂ ದೇವಸ್ತಾಂ ದೃಷ್ಟ್ವಾ ಕಿಂ ತದಾಽಕರೋತ್ ॥ ೨ ॥**

## ಇಪ್ಪತ್ತೇಳನೆಯ ಅಧ್ಯಾಯವು

೧-೨. ಋಷಿಗಳು ಕೇಳುವರು.—ಪರ್ವತರಾಜ ಪುತ್ರಿಯಾದ ದೇವಿಯು ತಪಸ್ಸಿನಿಂದ ಉತ್ತಮವಾದ ಗೌರವರ್ಣವುಳ್ಳ ಶರೀರವನ್ನು ಪಡೆದು ಮಂದರಪರ್ವತಕ್ಕೆ ಬಂದಳಷ್ಟೆ. ಆಗ ಪತಿಪತ್ನಿಯರಾದ ಪಾರ್ವತೀಪರಮೇಶ್ವರ ಸಮಾಗಮವು ಎಂತು ನಡೆಯಿತು? ಅದರ ವಿವರಗಳೇನು? ದೇವಿಯು ಪತಿಯನ್ನು ನೋಡಲು ತನ್ನ ಮನೆಯನ್ನು ಪ್ರವೇಶಿಸಿದಾಗ ಆ ಮನೆಯ ಬಾಗಿಲನ್ನು ಕಾಯುತ್ತಿರುವ ಗಣೇಶ್ವರರು ಏನು ಮಾಡಿದರು? ದೇವದೇವನಾದ ಪರಮೇಶ್ವರನು ಅವರನ್ನು ನೋಡಿ ಏನು ಮಾಡಿದನು? ಈ ವಿವರಗಳನ್ನೆಲ್ಲಾ ನಮಗೆ ತಿಳಿಸು ಎಂದರು.

॥ ವಾಯುರುವಾಚ ॥

ಪ್ರವಕ್ತುಮಂಜಸಾऽಶಕ್ಯಸ್ತಾದೃಶಃ ಪರಮೋ ರಸಃ ।
ಯೇನ ಪ್ರಣಯಗರ್ಭೇಣ ಭಾವೋ ಭಾವವತಾಂ ಹೃತಃ ॥ ೩ ॥

ದ್ವಾಸ್ಥೈರ್ಸಸಂಭ್ರಮೈರೇವ ದೇವೋ ದೇವ್ಯಾಗಮೋತ್ಸುಕಃ ।
ಶಂಕಮಾನಾ ಪ್ರವಿಷ್ಟಾಂತಸ್ತಂ ಚ ಸಾ ಸಮಪಶ್ಯತ ॥ ೪ ॥

ತೈಸ್ತೈಃ ಪ್ರಣಯಭಾವೈಶ್ಚ ಭವನಾಂತರವರ್ತಿಭಿಃ ।
ಗಣೇಂದ್ರೈರ್ವಂದಿತಾ ವಾಚಾ ಪ್ರಣನಾಮ ತ್ರಿಯಂಬಕಂ ॥ ೫ ॥

ಪ್ರಣಮ್ಯ ನೋತ್ಥಿತಾ ಯಾವತ್ತಾವತ್ತಾಂ ಪರಮೇಶ್ವರಃ ।
ಪ್ರಗೃಹ್ಯ ದೋರ್ಭ್ಯಾಮಾಶ್ಲಿಷ್ಯ ಪರಿತಃ ಪರಯಾ ಮುದಾ ॥ ೬ ॥

೩. ವಾಯುದೇವನಿಂತೆಂದನು :—ಪ್ರೀತಿಪಾತ್ರರಾದವರು ಕೆಲವುಕಾಲ ವಿಯೋಗದಿಂದಿದ್ದು ಪುನಃ ಮಿಳನವಾದರೆ ಅಂತಹ ಸಮಾಗಮದ ಸರಿಯಾದ ಸ್ಥಿತಿಯನ್ನು ವರ್ಣಿಸಲು ಪರಸ್ಪರ ಪ್ರೀತ್ಯತಿಶಯಗಳನ್ನೂ ವಿರಹಿಜನರ ಮನೋಭಿಪ್ರಾಯವನ್ನೂ ಬಲ್ಲ ರಸಿಕರಿಗೂ ಅಶಕ್ಯವಾಗಿರುವುದು.

೪. ದೇವದೇವನಾದ ಪರಮೇಶ್ವರನು ಬಾಗಿಲನ್ನು ಕಾಯುವವರ ಸಡಗರವನ್ನು ನೋಡಿದ ಮಾತ್ರದಿಂದಲೇ ದೇವಿಯು ಬಂದಳೆಂದು ತಿಳಿದು ಅವಳನ್ನು ನೋಡಲು ಕುತೂಹಲವುಳ್ಳವನಾದನು. ಪಾರ್ವತೀದೇವಿಯು ಸಂದೇಹದಿಂದ ಮನೆಯ ಒಳಗಡೆ ಪ್ರವೇಶಿಸಿ ಪರಮೇಶ್ವರನನ್ನು ಕಂಡಳು.

೫. ಆಗ ಆ ಪಾರ್ವತೀದೇವಿಯನ್ನು ಶಿವನ ಮನೆಯ ದ್ವಾರಪಾಲಕರಾದ ಗಣೇಂದ್ರರು ತಮ್ಮ ತಮ್ಮ ಮನೋಭಾವನೆಗನುಸಾರವಾಗಿ ಪ್ರೀತಿಯಿಂದಲೂ ಮರ್ಯಾದೆಯಿಂದಲೂ ಸ್ತೋತ್ರಮಾಡಿದರು. ಬಳಿಕ ಪಾರ್ವತಿಯು ಅವರ ಸ್ತೋತ್ರಗಳನ್ನು ನಮಸ್ಕಾರಗಳನ್ನು ಅಭಿನಂದಿಸುತ್ತಾ ಶಿವನನ್ನು ಕಂಡು ನಮಸ್ಕಾರ ಮಾಡಿದಳು.

೬–೮. ಆಗ ಪರಮೇಶ್ವರನು ಆ ದೇವಿಯು ತನಗೆ ನಮಸ್ಕರಿಸಿ ಮೇಲಕ್ಕೆ ಏಳುವುದರೊಳಗೆ ತನ್ನ ಕೈಯ್ಯಿಗಳಿಂದ ಆ ದೇವಿಯನ್ನು ಹಿಡಿದೆತ್ತಿ ಸಂತೋಷದಿಂದ ಆಲಂಗಿಸಿಕೊಂಡು ತನ್ನ ತೊಡೆಯಲ್ಲಿ ಕೂರಿಸಿಕೊಳ್ಳಲು ಪ್ರಯತ್ನಿಸಿದನು. ಆದರೆ

**ಸ್ವಾಂಕೇ ಧರ್ತುಂ ಪ್ರವೃತ್ತೋಽಪಿ ಸಾ ಪರ್ಯಂಕೇ ನ್ಯಷೀದತ ।**
**ಪರ್ಯಂಕತೋ ಬಲಾದ್ದೇವೀಂ ಸೋಂಕಮಾರೋಪ್ಯ ಸುಸ್ಮಿತಾಂ ॥ ೭ ॥**

**ಸಸ್ಮಿತೋ ವಿವೃತೈರ್ನೇತ್ರೈಸ್ತದ್ವಕ್ತ್ರಂ ಪ್ರಪಿಬನ್ನಿವ ।**
**ತಯಾ ಸಂಭಾಷಣಾಯೇಶಃ ಪೂರ್ವಭಾಷಿತಮಬ್ರವೀತ್ ॥ ೮ ॥**

**॥ ದೇವದೇವ ಉವಾಚ ॥**

**ಸಾ ದಶಾ ಚ ವ್ಯತೀತಾ ಕಿಂ ತವ ಸರ್ವಾಂಗಸುಂದರಿ ।**
**ಯಸ್ಯಾಮನುನಯೋಪಾಯಃ ಕೋಽಪಿ ಕೋಪಾನ್ನ ಲಭ್ಯತೇ ॥ ೯ ॥**

**ಸ್ವೇಚ್ಛಯಾಪಿ ನ ಕಾಲೀತಿ ನಾನ್ಯವರ್ಣವತೀತಿ ಚ ।**
**ತ್ವತ್ಸ್ವಭಾವಾಹೃತಂ ಚಿತ್ತಂ ಸುಭ್ರು ಚಿಂತಾವಹಂ ಮಮ ॥ ೧೦ ॥**

**ವಿಸ್ಮೃತಃ ಪರಮೋ ಭಾವಃ ಕಥಂ ಸ್ವೇಚ್ಛಾಂಗಯೋಗತಃ ।**
**ನ ಸಂಭವಂತಿ ಯೇ ತತ್ರ ಚಿತ್ತಕಾಲುಷ್ಯಹೇತವಃ ॥ ೧೧ ॥**

---

ಆ ದೇವಿಯು ಪರಮೇಶ್ವರನು ಕೂತುಕೊಂಡಿದ್ದ ಮಂಚದಮೇಲೆ ಸ್ವಲ್ಪ ದೂರದಲ್ಲಿ ಬೇರೆಯಾಗಿ ಕೂತುಕೊಂಡಳು. ದೇವದೇವನಾದ ಪರಮೇಶ್ವರನು ನಸುನಗುತ್ತಾ ಇರುವ ಆ ದೇವಿಯನ್ನು ಬಲಾತ್ಕಾರದಿಂದ ತನ್ನ ತೊಡೆಯಮೇಲೆ ಕೂರಿಸಿಕೊಂಡನು. ಅನಂತರ ತಾನೂ ಮಂದಹಾಸದಿಂದ ಸುಂದರವಾದ ಅವಳ ಮುಖಾರವಿಂದವನ್ನು ಪಾನಮಾಡುವವನಂತೆ ಆ ದೇವಿಯನ್ನೇ ದೃಷ್ಟಿಸಿ ನೋಡುತ್ತಾ ಅವಳೊಡನೆ ಸಂಭಾಷಣೋದ್ಯುಕ್ತನಾಗಿ ಇಂತು ನುಡಿದನು.

೯. ಎಲೈ ಸರ್ವಾಂಗಸುಂದರಿಯಾದ ದೇವಿಯೇ, ನಿನ್ನನ್ನು ಸಮಾಧಾನ ಮಾಡುವುದಕ್ಕಾಗಿ ನಾನು ಎಷ್ಟೋ ಉಪಾಯಗಳನ್ನು ಮಾಡಿದಾಗ್ಯೂ ಅವುಗಳೊಂದೂ ಫಲಕಾರಿಯಾಗಲಿಲ್ಲ. ಆ ಪ್ರಕಾರವಾಗಿದ್ದ ನಿನ್ನ ಮನೋಭಿಪ್ರಾಯವು ಈಗ ಕಳೆದಿರುವುದೆ?

೧೦. ಒಳ್ಳೆಯ ಹುಬ್ಬುಗಳಿಂದ ಶೋಭಿಸುವ ಎಲೌ ದೇವಿ, ನಾನು ಕಾಳಿಯೂ ಅಲ್ಲ ಬೇರೆಯ ವರ್ಣವುಳ್ಳವಳೂ ಅಲ್ಲ ಎಂದು ಹೇಳುತ್ತಾ ಕೋಪಗೊಂಡಿದ್ದ ನಿನ್ನ ಮನಸ್ಸು ನನಗೆ ಬಹಳ ವ್ಯಾಕುಲವನ್ನುಂಟುಮಾಡಿತ್ತು.

೧೦-೧೨. ನಿನ್ನ ಇಷ್ಟಪ್ರಕಾರವಾಗಿರುವ ಶರೀರವನ್ನು ನೀನು ಹೊಂದಿದ ನಂತರ ಅಷ್ಟುಮಟ್ಟಿನ ಉದ್ರೇಕಗೊಂಡಿದ್ದ ನಿನ್ನ ಮನೋಭಿಪ್ರಾಯವು ಹೇಗೆ ಕಳೆದು

**ಪೃಥಗ್ಭಾವವದನ್ಯೋನ್ಯಂ ವಿಪ್ರಿಯಸ್ಯಾಪಿ ಕಾರಣಂ ।**
**ಆವಯೋರಪಿ ಯದ್ಯಸ್ತಿ ನಾಸ್ತ್ಯೇವೈತಚ್ಚರಾಚರಂ ॥ ೧೨ ॥**

**ಅಹಮಗ್ನಿಶಿರೋನಿಷ್ಠಸ್ತ್ವಂ ಸೋಮಶಿರಸಿ ಸ್ಥಿತಾ ।**
**ಅಗ್ನೀಷೋಮಾತ್ಮಕಂ ವಿಶ್ವಮಾವಾಭ್ಯಾಂ ಸಮಧಿಷ್ಠಿತಂ ॥ ೧೩ ॥**

**ಜಗದ್ಧಿತಾಯ ಚರತೋಃ ಸ್ವೇಚ್ಛಾಧೃತಶರೀರಯೋಃ ।**
**ಆವಯೋರ್ವಿಪ್ರಯೋಗೇ ಹಿ ಸ್ಯಾನ್ನಿರಾಲಂಬನಂ ಜಗತ್ ॥ ೧೪ ॥**

**ಅಸ್ತಿ ಹೇತ್ವಂತರಂ ಚಾತ್ರ ಶಾಸ್ತ್ರಯುಕ್ತಿವಿನಿಶ್ಚಿತಂ ।**
**ವಾಗರ್ಥಮಿವ ನೋ ವೈತಜ್ಜಗತ್ಸ್ಥಾವರಜಂಗಮಂ ॥ ೧೫ ॥**

---

ಹೋಯಿತು ? ಮನಸ್ಸಿಗೆ ದುಃಖವನ್ನುಂಟುಮಾಡತಕ್ಕ ಕಾರಣಗಳು ನಮಗೆ ಹುಟ್ಟ ಬಾರದು. ಲೋಕರೀತಿಯನ್ನನುಸರಿಸುವವರ ಹಾಗೆ ನಮ್ಮಿಬ್ಬರಲ್ಲಿ ವಿರೋಧ ವನ್ನುಂಟುಮಾಡಲು ತಕ್ಕ ಕಾರಣವೂ ಉಂಟಾದರೆ ಆಗ ಈ ಚರಾಚರಾತ್ಮಕವಾದ ಪ್ರಪಂಚವು ಉಳಿಯುವುದಿಲ್ಲ.

೧೩. ನಾನು ಅಗ್ನಿಯ ಶಿರಸ್ಸಿನಲ್ಲಿರುವವನು, ನೀನು ಚಂದ್ರನ ಕಿರಣಗಳ ಕಾಂತಿರೂಪದಿಂದಿರುವವಳು ನಾವಿಬ್ಬರೂ ಅಗ್ನಿ, ಸೋಮ ಎಂಬ ಎರಡು ರೂಪದಿಂದ ಇರುವವರು.

೧೪. ಲೋಕಗಳ ಹಿತಕ್ಕಾಗಿ ಪ್ರಯತ್ನಪಡುತ್ತಾ ನಮ್ಮ ಇಚ್ಛಾನುಸಾರವಾಗಿ ಶರೀರವನ್ನು ಧರಿಸಿಕೊಂಡಿರುವ ನಮ್ಮಿಬ್ಬರಿಗೂ ಪರಸ್ಪರವಾಗಿ ವಿರೋಧವುಂಟಾದರೆ ಪ್ರಪಂಚಕ್ಕೆ ಆಶ್ರಯವೇ ತಪ್ಪಿಹೋಗುವುದು.

೧೫. ಈ ವಿಷಯಗಳಲ್ಲಿ ಶಾಸ್ತ್ರಗಳಲ್ಲಿ ಯುಕ್ತಿಯಿಂದ ನಿಶ್ಚಯಿಸಲ್ಪಟ್ಟ ಬೇರೆಯ ಕಾರಣವೂ ಇರುವುದು. ಚರ, ಸ್ಥಿರ ಪ್ರಾಣಿಗಳಿಂದಕೂಡಿದ ಈ ಪ್ರಪಂಚವು ಶಬ್ದ ಮತ್ತು ಅರ್ಥ ಇವುಗಳಂತೆ ಎಂದರೆ ಶಬ್ದವನ್ನ ಬಿಟ್ಟು ಅರ್ಥವೂ, ಅರ್ಥವನ್ನ ಬಿಟ್ಟು ಶಬ್ದವೂ ಇಲ್ಲದಿರುವಂತೆ ನಮ್ಮಿಬ್ಬರಿಂದ ಅನ್ಯೋನ್ಯವಾಗಿ ಕೂಡಿರುವುದು.

**ತ್ವಂ ಹಿ ವಾಗಮೃತಂ ಸಾಕ್ಷಾದಹಮರ್ಥಾಮೃತಂ ಪರಂ ।**
**ದ್ವಯಮಪ್ಯಮೃತಂ ಕಸ್ಮಾದ್ವಿಯುಕ್ತಮುಪಪದ್ಯತೇ ॥ ೧೬ ॥**

**ವಿದ್ಯಾಪ್ರತ್ಯಯಿಕಾ ತ್ವಂ ಮೇ ವೇದ್ಯೋಽಹಂ ಪ್ರತ್ಯಯಾತ್ತವ ।**
**ವಿದ್ಯಾವೇದ್ಯಾತ್ಮನೋರೇವ ವಿಶ್ಲೇಷಃ ಕಥಮಾವಯೋಃ ॥ ೧೭ ॥**

**ನ ಕರ್ಮಣಾ ಸೃಜಾಮೀದಂ ಜಗತ್ಪ್ರತಿಸೃಜಾಮಿ ಚ ।**
**ಸರ್ವಸ್ಯಾಜ್ಞೈಕಲಭ್ಯತ್ವಾದಾಜ್ಞಾ ತ್ವಂ ಹಿ ಗರೀಯಸೀ ॥ ೧೮ ॥**

**ಆಜ್ಞೈಕಸಾರಮೈಶ್ವರ್ಯಂ ಯಸ್ಮಾತ್ಸ್ವಾತಂತ್ರ್ಯಲಕ್ಷಣಂ ।**
**ಆಜ್ಞಯಾ ವಿಪ್ರಯುಕ್ತಸ್ಯ ಚೈಶ್ವರ್ಯಂ ಮಮ ಕೀದೃಶಂ ॥ ೧೯ ॥**

---

೧೬. ನೀನು ವರ್ಣಾತ್ಮಕವಾದ ಶಬ್ದ ರೂಪದಿಂದ ಇರುವೆ. ನಾನು ಆ ಶಬ್ದಕ್ಕೆ ಎಲ್ಲರಿಗೂ ಅನುಭವಪೂರ್ವಕವಾದ ಅರ್ಥರೂಪದಿಂದ ಇರುವೆನು. ಇವೆರಡೂ ಅಮೃತಸ್ವರೂಪವಾಗಿರುವವು. ಲೋಕದಲ್ಲಿ ಅರ್ಥವಿಲ್ಲದ ಶಬ್ದವೂ, ಶಬ್ದವಿಲ್ಲದ ಅರ್ಥವೂ ಬೇರೆಯಾಗಿ ಸಿಕ್ಕುವುದಿಲ್ಲ. ಹೀಗೆ ಇರಲು ನಮ್ಮ ಅನ್ಯೋನ್ಯ ಸಂಶ್ಲಿಷ್ಟತೆಯೇ ಕಾರಣವು.

೧೭. ಲೋಕದಲ್ಲಿ ನೀನು ಜ್ಞಾನವನ್ನುಂಟುಮಾಡುವ ವಿದ್ಯಾರೂಪದಿಂದ ಇರುತ್ತೀಯೆ. ನಿನ್ನ ರೂಪದಿಂದ ಇರುವ ವಿದ್ಯದಲ್ಲಿ ನಂಬಿಕೆಯಿಂದ ತಿಳಿಯಲು ಯೋಗ್ಯನಾಗಿ ಜ್ಞಾನರೂಪದಿಂದ ನಾನು ಇರುವೆನು. ವಿದ್ಯ ಮತ್ತು ವೇದ್ಯ ಎಂಬ ಈ ನಮ್ಮ ಎರಡು ರೂಪಗಳು ಬೇರೆ ಬೇರೆಯಾಗಿರುವುದು ಲೋಕದಲ್ಲಿ ಎಲ್ಲಿಯಾದರೂ ಕಂಡುಬರುವುದೇ ?

೧೮. ನಾನು ಈ ಜಗತ್ತೆಲ್ಲವನ್ನೂ ಕರ್ಮಗಳಿಂದ ಸೃಷ್ಟಿಮಾಡುವುದಿಲ್ಲ. ಪ್ರಳಯವನ್ನೂ ಕರ್ಮಗಳಿಂದ ಮಾಡುವುದಿಲ್ಲ. ಎಲ್ಲಕ್ಕೂ ಆಜ್ಞೆಯೇ ಕಾರಣವಾಗಿರುವುದು. ನೀನೇ ಶ್ರೇಷ್ಠವಾದ ಆ ಆಜ್ಞಾರೂಪದಿಂದ ಇರುವೆ. ಈ ಆಜ್ಞಾರೂಪವಾದ ಐಶ್ವರ್ಯವೇ ನನ್ನ ಸರ್ವಸ್ವಾಮಿತ್ವಕ್ಕೂ ಸರ್ವಸ್ವತಂತ್ರಕ್ಕೂ ಕಾರಣವಾಗಿರುವುದು.

೧೯-೨೦. ಈ ಪ್ರಕಾರವಾಗಿರುವ ಆಜ್ಞೆಯಿಂದ ರಹಿತನಾಗಿದ್ದರೆ ನನ್ನ ಐಶ್ವರ್ಯವು ಎಷ್ಟರಮಟ್ಟಿನದಾಗಿರುವುದು? ಈ ಕಾರಣಗಳಿಂದ ನಾವಿಬ್ಬರು ಯಾವಾ

ನ ಕದಾಚಿದವಸ್ಥಾನಮಾವಯೋರ್ವಿಪ್ರಯುಕ್ತಯೋಃ ।
ದೇವಾನಾಂ ಕಾರ್ಯಮುದ್ದಿಶ್ಯ ಲೀಲೋಕ್ತಂ ಕೃತವಾನಹಂ ॥ ೨೦ ॥

ತ್ವಯಾಪ್ಯವಿದಿತಂ ನಾಸ್ತಿ ಕಥಂ ಕುಪಿತವತ್ಯಸಿ ।
ತತಸ್ತ್ರೈಲೋಕ್ಯರಕ್ಷಾರ್ಥೇ ಕೋಪೋ ಮಯ್ಯಪಿ ತೇ ಕೃತಃ ॥ ೨೧ ॥

ಯದನರ್ಥಾಯ ಭೂತಾನಾಂ ನ ತದಸ್ತಿ ಖಲು ತ್ವಯಿ ।
ಇತಿ ಪ್ರಿಯಂವದೇ ಸಾಕ್ಷಾದೀಶ್ವರೇ ಪರಮೇಶ್ವರೇ ॥ ೨೨ ॥

ಶೃಂಗಾರಭಾವಸಾರಾಣಾಂ ಜನ್ಮಭೂಮಿರಕೃತ್ರಿಮಾ ।
ಸ್ವಭರ್ತ್ರಾ ಲಲಿತಂ ತಥ್ಯಮುಕ್ತಂ ಮತ್ವಾ ಸ್ಮಿತೋತ್ತರಂ ॥ ೨೩ ॥

ಲಜ್ಜಯಾ ನ ಕಿಮಪ್ಯೂಚೇ ಕೌಶಿಕೀವರ್ಣನಾತ್ಪರಂ ।
ತದೇವ ವರ್ಣಯಾಮ್ಯದ್ಯ ಶೃಣು ದೇವ್ಯಾಶ್ಚ ವರ್ಣನಂ ॥ ೨೪ ॥

---

ಗಲೂ ಬೇರೆ ಬೇರೆಯಾಗಿ ಇರತಕ್ಕವರಲ್ಲ. ಆದರೆ ನಾನು ನಿನ್ನ ಸಂಗಡ ದೇವತೆಗಳ ಕಾರ್ಯವನ್ನು ಸಾಧಿಸುವುದಕ್ಕಾಗಿಯೇ ಕೊಂಚ ವಿನೋದಕ್ಕಾಗಿ ಆ ಪ್ರಕಾರವಾಗಿ ಮಾತನಾಡಿದೆನು.

೨೧. ನೀನೂ ಇದನ್ನು ತಿಳಿದೇ ಇರುತ್ತೀಯೆ. ಹೀಗಿರುವಾಗ ನಿನಗೆ ಕೋಪವು ಏತಕ್ಕೆ ಉಂಟಾಯಿತು ? ನೀನು ನನ್ನ ವಿಷಯದಲ್ಲಿ ಕೋಪವನ್ನು ಮಾಡಿ ಕೊಂಡಿದ್ದರಿಂದ ಅದೇ ಒಂದು ಕಾರಣವಾಗಿ ಮೂರು ಲೋಕಗಳ ರಕ್ಷಣೆ ಯುಂಟಾಯಿತು.

೨೨. ನೀನು ಪ್ರಾಣಿಗಳಿಗೆ ಸುಖವನ್ನುಂಟು ಮಾಡುವುದಕ್ಕಾಗಿಯೇ ಇರು ತ್ತೀಯೆ ಎಂದು ಪರಮೇಶ್ವರನು ಪ್ರತ್ಯಕ್ಷವಾಗಿ ಹಿತಕರವಾದ ಮಾತುಗಳನ್ನಾಡಿದನು.

೨೩–೨೪. ಕಪಟವಿಲ್ಲದಿರುವ ಶೃಂಗಾರರಸದ ನಿಜಸ್ವರೂಪವೇ ಆ ದೇವಿಯು. ತನ್ನ ಪತಿಯಾದ ಪರಮೇಶ್ವರನು ನಿಜವಾದ ಮಾತನ್ನು ಮೃದುವಾಗಿಯೂ ಮಂದ ಹಾಸದಿಂದಲೂ ಹೇಳುತ್ತಿರುವುದೆಲ್ಲಾ ನಿಜವೆಂದು ತಿಳಿದು ಆ ದೇವಿಯು ನಾಚಿಕೆ ಯಿಂದ ಯಾವ ಮಾತನ್ನೂ ಆಡದೆ ತಾನು ನಿರ್ಮಿಸಿದ ಕೌಶಿಕಿಯ ವರ್ಣನೆಯನ್ನು ಮಾಡಿದಳು. ಎಲೈ ಋಷಿಗಳಿರಾ ! ಅದನ್ನೇ ನಾನು ಹೇಳುವೆನು. ಆ ಕೌಶಿಕೀ ದೇವಿಯ ವರ್ಣನೆಯನ್ನು ಕೇಳಿರಿ.

॥ ದೇವ್ಯುವಾಚ ॥

ಕಿಂ ದೇವೇನ ನ ಸಾ ದೃಷ್ಟಾ ಯಾ ಸೃಷ್ಟಾ ಕೌಶಿಕೀ ಮಯಾ ।
ತಾದೃಶೀ ಕನ್ಯಕಾ ಲೋಕೇ ನ ಭೂತಾ ನ ಭವಿಷ್ಯತಿ ॥ ೨೫ ॥

ತಸ್ಯಾ ವೀರ್ಯಂ ಬಲಂ ವಿಂಧ್ಯನಿಲಯಂ ವಿಜಯಂ ತಥಾ ।
ಶುಂಭಸ್ಯಚ ನಿಶುಂಭಸ್ಯ ಮಾರಣೇ ಚ ರಣೇ ತಯೋಃ ॥ ೨೬ ॥

ಪ್ರತ್ಯಕ್ಷಫಲದಾನಂ ಚ ಲೋಕಾಯ ಭಜತೇ ಸದಾ ।
ಲೋಕಾನಾಂ ರಕ್ಷಣಂ ಶಶ್ವದ್ಬ್ರಹ್ಮಾ ವಿಜ್ಞಾಪಯಿಷ್ಯತಿ ॥ ೨೭ ॥

ಇತಿ ಸಂಭಾಷಮಾಣಾಯಾ ದೇವ್ಯಾ ಏವಾಜ್ಞಯಾ ತದಾ ।
ವ್ಯಾಘ್ರಃ ಸಖ್ಯಾ ಸಮಾನೀಯ ಪುರೋಽವಸ್ಥಾಪಿತಸ್ತದಾ ॥ ೨೮ ॥

ತಂ ಪ್ರೇಕ್ಷ್ಯಾಹ ಪುನರ್ದೇವೀ ದೇವಾನೀತಮುಪಾಯನಂ ।
ವ್ಯಾಘ್ರಂ ಪಶ್ಯ ನ ಚಾನೇನ ಸದೃಶೋ ಮದುಪಾಸಕಃ ॥ ೨೯ ॥

೨೫. ದೇವಿಯು ಹೇಳಿದಳು.—ನಾನು ಸೃಷ್ಟಿಮಾಡಿರುವ ಕೌಶಿಕಿಯನ್ನು ದೇವನಾದ ಪರಮೇಶ್ವರನೇ ನೋಡಿಲ್ಲವು. ಆ ಪ್ರಕಾರದಿಂದ ಇರುವ ಕನ್ಯೆಯು ಲೋಕದಲ್ಲಿ ಹಿಂದೆ ಇರಲಿಲ್ಲ ಮುಂದೆ ಹುಟ್ಟುವುದೂ ಇಲ್ಲ.

೨೬. ಆ ದೇವಿಯು ವಿಂಧ್ಯಪರ್ವತದಲ್ಲಿ ವಾಸಮಾಡಿಕೊಂಡು ಶುಂಭ ನಿಶುಂಭರಿಬ್ಬರ ಸಂಗಡ ಯುದ್ಧಮಾಡುವುದರಲ್ಲಿಯೂ, ಅವರಿಬ್ಬರನ್ನು ನಾಶಮಾಡುವುದರಲ್ಲಿಯೂ ಆಸಕ್ತಳಾಗಿರುವಳು ಆ ದೇವಿಯ ದೇಹಶಕ್ತಿಯನ್ನೂ, ಮನಶ್ಶಕ್ತಿಯನ್ನೂ ಎಷ್ಟೆಂದು ವರ್ಣಿಸಲಿ ?

೨೭. ಬ್ರಹ್ಮನು ಆಗಾಗ್ಗೆ ಆ ದೇವಿಯ ಸಮೀಪಕ್ಕೆ ಬಂದು ಲೋಕಗಳ ರಕ್ಷಣೆಯ ವಿಷಯವನ್ನು ವಿಜ್ಞಾಪಿಸಿಕೊಳ್ಳುವನು. ಆ ದೇವಿಯು ಯಾವಾಗಲೂ ಲೋಕಹಿತಕ್ಕಾಗಿ ಕಷ್ಟಪಟ್ಟಾದರೂ ಪ್ರಯೋಜನವನ್ನುಂಟುಮಾಡಿಕೊಡುವಳು.

೨೮. ದೇವಿಯು ಪರಮೇಶ್ವರನ ಸಂಗಡ ಹೀಗೆ ಮಾತನಾಡುತ್ತಿರುವಾಗ ಆ ದೇವಿಯ ಆಜ್ಞೆಯಿಂದ ಸಖಿಯು, ದೇವಿಯು ತಪಸ್ಸನ್ನು ಮಾಡುತ್ತಿದ್ದಾಗ ದೇವಿಯ ಸಮೀಪದಲ್ಲಿದ್ದ ಹುಲಿಯನ್ನು ಅಲ್ಲಿಗೆ ತಂದುಬಿಟ್ಟಳು.

೨೯. ಆಗ ದೇವಿಯು ಪರಮೇಶ್ವರನನ್ನು ಕುರಿತು—ಎಲೈ ಪರಮೇಶ್ವರನೆ ! ನಾನು ನಿನಗೆ ಒಂದು ಕಾಣಿಕೆಯನ್ನು ಒಪ್ಪಿಸುವೆನು ಈ ಹುಲಿಯನ್ನು ನೋಡು. ಇದರಂತೆ ನನ್ನನ್ನು ಸೇವಿಸಿ ಇರುವ ಪ್ರಾಣಿಯು ಮತ್ತಾವುದೂ ಇಲ್ಲ.

ಅನೇನ ದುಷ್ಟಸಂಘೇಭ್ಯೋ ರಕ್ಷಿತಂ ಮತ್ತಪೋವನಂ ।
ಅತೀವ ಮಮ ಭಕ್ತಶ್ಚ ವಿಶ್ರಬ್ಧಶ್ಚ ಸ್ವರಕ್ಷಣಾತ್ ॥ ೩೦ ॥

ಸ್ವದೇಶಂ ಚ ಪರಿತ್ಯಜ್ಯ ಪ್ರಸಾದಾರ್ಥಂ ಸಮಾಗತಃ ।
ಯದಿ ಪ್ರೀತಿರಭೂನ್ಮತ್ತಃ ಪರಾಂ ಪ್ರೀತಿಂ ಕರೋಷಿ ಮೇ ॥ ೩೧ ॥

ನಿತ್ಯಮಂತಃಪುರದ್ವಾರಿ ನಿಯೋಗಾನ್ನಂದಿನಃ ಸ್ವಯಂ ।
ರಕ್ಷಿಭಿಸ್ಸಹ ತಚ್ಚಿಹ್ನೈರ್ವರ್ತತಾಮಯಮೀಶ್ವರಃ ॥ ೩೨ ॥

॥ ವಾಯುರುವಾಚ ॥

ಮಧುರಂ ಪ್ರಣಯೋದರ್ಕಂ ಶ್ರುತ್ವಾ ದೇವ್ಯಾಃ ಶುಭಂ ವಚಃ ।
ಪ್ರೀತೋಽಸ್ಮೀತ್ಯಾಹ ತಂ ದೇವಸ್ಸ ಚಾದೃಶ್ಯತ ತತ್ಕ್ಷಣಾತ್ ॥ ೩೩ ॥

ಬಿಭ್ರದ್ವೇತ್ರಲತಾಂ ಹೈಮೀಂ ರತ್ನಚಿತ್ರಂ ಚ ಕಂಚುಕಂ ।
ಛುರಿಕಾಮುರಗಪ್ರಖ್ಯಾಂ ಗಣೇಶೋ ರಕ್ಷವೇಷಧೃಕ್ ॥ ೩೪ ॥

೩೦. ಈ ಹುಲಿಯು, ನನ್ನ ತಪೋವನವನ್ನು ದುಷ್ಟ ಪ್ರಾಣಿಗಳು ಯಾವುದೂ ಬರದಂತೆ ಕಾಪಾಡಿರುವುದು. ತನ್ನ ಶರೀರದ ರಕ್ಷಣೆಯನ್ನೂ ಬಿಟ್ಟು ನನ್ನ ರಕ್ಷಣೆಯನ್ನು ಮಾಡುತ್ತಾ ನನಗೆ ನಂಬಿಕೆಯನ್ನುಂಟುಮಾಡುವ ಭಕ್ತನಾಗಿರುವುದು.

೩೧-೩೨. ಈ ಹುಲಿಯು ತನ್ನ ವಾಸದ ಸ್ಥಳವನ್ನು ಬಿಟ್ಟು ನಿನ್ನ ಅನುಗ್ರಹವನ್ನು ಅಪೇಕ್ಷಿಸಿ ಇಲ್ಲಿಗೆ ಬಂದಿರುವುದು. ನೀನು ನನಗೋಸ್ಕರ ಈ ಹುಲಿಯ ವಿಷಯದಲ್ಲಿ ಬಹಳ ಪ್ರೀತಿಮಾಡುವುದಾದರೆ ಇದು ನಂದೀಶ್ವರನ ಆಜ್ಞೆಯಂತೆ ನನ್ನ ಅಂತಃಪುರದ ಬಾಗಿಲಿನಲ್ಲಿರುವ ಇತರ ರಕ್ಷಕರ ಹಾಗೆ ತಕ್ಕ ವೇಷಭೂಷಾದಿಗಳನ್ನು ಧರಿಸಿ ಅವರಂತೆ ಗಣೇಶ್ವರನಾಗಿ ಇಲ್ಲಿಯೇ ವಾಸವನ್ನು ಮಾಡುತ್ತಾ ಇರಲಿ ಎಂದಳು.

೩೩. ವಾಯುದೇವನಿಂತೆಂದನು.—ದೇವನಾದ ಪರಮೇಶ್ವರನು ದೇವಿಯು ಹೇಳುತ್ತಿರುವ ಪ್ರೀತಿಪೂರ್ವಕವೂ ಮಧುರವೂ ಆದ ಒಳ್ಳೆಯ ಮಾತನ್ನು ಕೇಳಿ ಆ ಹುಲಿಯ ವಿಷಯದಲ್ಲಿ ಸಂತೋಷವುಳ್ಳವನಾಗಿ ಹಾಗೆಯೇ ಆಗಲಿ ಎಂದನು.

೩೪. ಪರಮೇಶ್ವರನು ಹೀಗೆ ಹೇಳಿದ ಕೂಡಲೆ, ಆ ಹುಲಿಯು ತನ್ನ ಆಕಾರಕ್ಕೆ ಬದಲಾಗಿ ದ್ವಾರಪಾಲಕನ ಆಕಾರವನ್ನು ಧರಿಸಿತು ರತ್ನಖಚಿತವಾದ

**ಯಸ್ಮಾತ್ಸೋಮೋ ಮಹಾದೇವೋ ನಂದೀ ಚಾನೇನ ನಂದಿತಃ ।**
**ಸೋಮನಂದೀತಿ ವಿಖ್ಯಾತಸ್ತಸ್ಮಾದ್ವೇಷಸಮಾಖ್ಯಯಾ　　　॥ ೩೫ ॥**

**ಇತ್ಥಂ ದೇವ್ಯಾಃ ಪ್ರಿಯಂ ಕೃತ್ವಾ ದೇವಶ್ಚಾರ್ಧೇಂದುಭೂಷಣಃ ।**
**ಭೂಷಯಾಮಾಸ ತಂ ದಿವ್ಯೈರ್ಭೂಷಣೈ ರತ್ನಭೂಷಿತೈಃ　　　॥ ೩೬ ॥**

**ತತಸ್ಸ ಗೌರೀಂ ಗಿರಿಶೋ ಗಿರೀಂದ್ರಜಾಂ**
**ಸಗೌರವಾಂ ಸರ್ವಮನೋಹರಾಂ ಹರಃ ।**
**ಪರ್ಯಂಕಮಾರೋಪ್ಯ ವರಾಂಗಭೂಷಣೈ**
**ರ್ವಿಭೂಷಯಾಮಾಸ ಶಶಾಂಕಭೂಷಣಃ　　　॥ ೩೭ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ದೇವೀಶಿವಮಿಲನವರ್ಣನಂ ನಾಮ ಸಪ್ತವಿಂಶೋಽಧ್ಯಾಯಃ**

---

ಕವಚವನ್ನು ತೊಟ್ಟು ಕೈಯಲ್ಲಿ ಚಿನ್ನದ ಬೆತ್ತವನ್ನೂ ಹಾವಿನಂತೆ ಇರುವ ಕತ್ತಿಯನ್ನೂ ಹಿಡಿದುಕೊಂಡು ಗಣೇಶ್ವರನ ವೇಷದಿಂದ ದೇವಿಯ ಅಂತಃಪುರದ ದ್ವಾರಪಾಲಕನ ಪದವಿಯನ್ನು ಹೊಂದಿತು.

೩೫ ಪರಮೇಶ್ವರನೂ, ನಂದೀಶ್ವರನೂ, ಸಂತೋಷಪಟ್ಟರು. ಆದುದರಿಂದ ಆ ದ್ವಾರಪಾಲಕನ ಪದವಿಯನ್ನು ಹೊಂದಿದ ಈ ವ್ಯಾಘ್ರಕ್ಕೆ ಸೋಮನಂದಿ ಎಂದು ಹೆಸರಾಯಿತು.

೩೬. ಚಂದ್ರಶೇಖರನಾದ ಪರಮೇಶ್ವರನು ಈ ಪ್ರಕಾರವಾಗಿ ದೇವಿಗೆ ಹಿತವನ್ನುಂಟುಮಾಡುವುದಕ್ಕಾಗಿ ಆ ವ್ಯಾಘ್ರಕ್ಕೆ ಗಣೇಶ್ವರನ ಪದವಿಯನ್ನು ಕೊಟ್ಟು ರತ್ನಖಚಿತವಾದ ಉತ್ತಮಾಭರಣಗಳಿಂದ ಅದನ್ನು ಅಲಂಕರಿಸಿದನು.

೩೭. ಅನಂತರ ಚಂದ್ರಾರ್ಧಶೇಖರನಾದ ಶಿವನು ಸರ್ವಾವಯವಸೌಂದರ್ಯದಿಂದ ಮನೋಹರವಾಗಿ ಒಪ್ಪುತ್ತಿರುವ ಗಿರಿರಾಜಪುತ್ರಿಯನ್ನು ಮಂಚದ ಮೇಲೆ ತನ್ನ ಸಮೀಪದಲ್ಲಿ ಕೂರಿಸಿಕೊಂಡು ಉತ್ತಮವಾದ ಭೂಷಣಗಳಿಂದ ಅಲಂಕರಿಸಿದನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯ ಸಂಹಿತೆಯ ಪೂರ್ವಭಾಗದಲ್ಲಿ ದೇವೀಶಿವಮಿಲನವೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ವಾಯವೀಯಸಂಹಿತಾಯಾಂ ಪೂರ್ವಭಾಗೇ
## ಅಷ್ಟವಿಂಶೋಽಧ್ಯಾಯಃ

॥ ಋಷಯ ಊಚುಃ ॥

ದೇವೀಂ ಸಮಾದಧಾನೇನ ದೇವೇನೇದಂ ಕಿಮೀರಿತಂ ।
ಅಗ್ನೀಷೋಮಾತ್ಮಕಂ ವಿಶ್ವಂ ವಾಗರ್ಥಾತ್ಮಕಮಿತ್ಯಪಿ ॥ ೧ ॥

ಆಜ್ಞೈಕಸಾರಮೈಶ್ವರ್ಯಮಾಜ್ಞಾತ್ವಮಿತಿ ಚೋದಿತಂ ।
ತದಿದಂ ಶ್ರೋತುಮಿಚ್ಛಾಮೋ ಯಥಾವದನುಪೂರ್ವಶಃ ॥ ೨ ॥

---

## ಇಪ್ಪತ್ತೆಂಟನೆಯ ಅಧ್ಯಾಯವು

೧-೨. ಋಷಿಗಳು ಕೇಳುವರು.—ಎಲೈ ವಾಯುದೇವನೇ, ದೇವಿಯನ್ನು ಸಮಾಧಾನಮಾಡುವಾಗ ದೇವನಾದ ಪರಮೇಶ್ವರನು ಏನು ಹೇಳಿದನು ? ಪ್ರಪಂಚವು ಅಗ್ನೀಸೋಮಾತ್ಮಕವೆಂತಲೂ, ಶಬ್ದಾರ್ಥರೂಪದಿಂದ ಪ್ರಪಂಚಾಧಿಪತ್ಯವು ಆಜ್ಞಾಸಾರವೆಂತಲೂ ಆದರಲ್ಲಿ ನೀನೇ ಆಜ್ಞಾರೂಪದಿಂದ ಇರುವವಳೆಂತಲೂ, ದೇವಿಯ ಸಂಗಡ ಪರಮೇಶ್ವರನು ಹೇಳಿದನಷ್ಟೆ? ಈ ವಿಷಯಗಳನ್ನು ನಾವು ವಿಸ್ತಾರವಾಗಿ ಕೇಳಲಪೇಕ್ಷಿಸುವೆವು ಎನ್ನಲು,

೩. ವಾಯುದೇವನಿಂತೆಂದನು.—ಅಗ್ನಿಯೆಂಬುವುದು ರುದ್ರನ ಭಯಂಕರವಾದ ಮತ್ತು ತೇಜೋಮಯವಾದ ಶರೀರವು. ಶಾಂತಿಯನ್ನು ಉಂಟುಮಾಡುವ

॥ ವಾಯುರುವಾಚ ॥

ಅಗ್ನಿರಿತ್ಯುಚ್ಯತೇ ರೌದ್ರೀ ಘೋರಾ ಯಾ ತೈಜಸೀ ತನುಃ ।
ಸೋಮಃ ಶಕ್ತ್ಯೋಽಮೃತಮಯಃ ಶಕ್ತೇಃ ಶಾಂತಿಕರೀ ತನುಃ ॥ ೩ ॥

ಅಮೃತಂ ಯತ್ಪ್ರತಿಷ್ಠಾ ಸಾ ತೇಜೋ ವಿದ್ಯಾ ಕಲಾ ಸ್ವಯಂ ।
ಭೂತಸೂಕ್ಷ್ಮೇಷು ಸರ್ವೇಷು ತ ಏವ ರಸತೇಜಸೀ ॥ ೪ ॥

ದ್ವಿವಿಧಾ ತೇಜಸೋ ವೃತ್ತಿಃ ಸೂರ್ಯಾತ್ಮಾ ಚಾನಲಾತ್ಮಿಕಾ ।
ತಥೈವ ರಸವೃತ್ತಿಶ್ಚ ಸೋಮಾತ್ಮಾ ಚ ಜಲಾತ್ಮಿಕಾ ॥ ೫ ॥

ವಿದ್ಯುದಾದಿಮಯಂ ತೇಜೋ ಮಧುರಾದಿಮಯೋ ರಸಃ ।
ತೇಜೋರಸವಿಭೇದೈಸ್ತು ಧೃತಮೇತಚ್ಚರಾಚರಂ ॥ ೬ ॥

ಅಗ್ನೇರಮೃತನಿಷ್ಪತ್ತಿರಮೃತೇನಾಗ್ನಿರೇಧತೇ ।
ಅತ ಏವ ಹಿ ವಿಕ್ರಾಂತಮಗ್ನೀಷೋಮಂ ಜಗದ್ಧಿತಂ ॥ ೭ ॥

---

ಅಮೃತಮಯವಾದ ಶಕ್ತಿಯ ಶರೀರವು ಸೋಮನೆಂದು ಹೆಸರನ್ನು ಹೊಂದುವುದು. ರುದ್ರನಲ್ಲಿ ಈ ಎರಡುವಿಧವಾದ ಶಕ್ತಿಗಳೂ ಸೇರಿ ಇರುವವು.

೪. ಅಮೃತವನ್ನು ಯಾವಾಗಲೂ ಸ್ಥಿರವಾಗಿರುವಂತೆ ಧರಿಸಿಕೊಂಡಿರುವ ತೇಜಸ್ಸು ವಿದ್ಯಾಕಲಾ ಎನ್ನಿಸಿಕೊಳ್ಳುವುದು. ಪಂಚಮಹಾಭೂತಗಳ ಸೂಕ್ಷ್ಮಾಂಶಗಳಲ್ಲಿ ಎಂದರೆ ಪಂಚತನ್ಮಾತ್ರಗಳಲ್ಲಿ ಈ ರಸತೇಜಸ್ಸುಗಳಿರುವುವು.

೫. ತೇಜಸ್ಸು ಸೂರ್ಯರೂಪದಿಂದಲೂ ಅಗ್ನಿಯ ರೂಪದಿಂದಲೂ ಎರಡು ಪ್ರಕಾರವಾಗಿರುವುದು. ರಸವೂ ಕೂಡ ಚಂದ್ರರೂಪದಿಂದಲೂ, ಜಲರೂಪದಿಂದಲೂ ಎರಡು ಪ್ರಕಾರವಾಗಿರುವುದು.

೬. (ವಿದ್ಯುತ್) ವೈದ್ಯುತಶಕ್ತಿಯು ತೇಜಸ್ಸೆನಿಸಿಕೊಳ್ಳುವುದು. ಮಧುರ, ಆಮ್ಲ, ಇವೇ ಮೊದಲಾದವು ರಸವೆನಿಸಿಕೊಳ್ಳುವುದು. ಈ ತೇಜಸ್ಸು ಮತ್ತು ರಸ ಇವುಗಳ ಭೇದಪ್ರಭೇಧಗಳಿಂದ ಈ ಚರಾಚರಾತ್ಮಕವಾದ ಪ್ರಪಂಚವು ವ್ಯಾಪ್ತವಾಗಿರುವುದು.

೭: ಅಗ್ನಿಯಿಂದ ಅಮೃತವು ಹುಟ್ಟುವುದು. ಅಮೃತದಿಂದ ಅಗ್ನಿಯು ವೃದ್ಧಿಯಾಗುವುದು. ಈ ಕಾರಣದಿಂದಲೇ ಅಗ್ನಿಯೂ, ಸೋಮವೂ ಜಗತ್ತಿಗೆ ಹಿತವನ್ನುಂಟುಮಾಡುತ್ತಿರುವುವು.

ಹವಿಷೇ ಸಸ್ಯಸಂಪತ್ತಿರ್ವೃಷ್ಟಿಃ ಸಸ್ಯಾಭಿವೃದ್ಧಯೇ ।
ವೃಷ್ಟೇರೇವ ಹವಿಸ್ತಸ್ಮಾದಗ್ನೀಷೋಮಧೃತಂ ಜಗತ್ ॥ ೮ ॥

ಅಗ್ನಿರೂರ್ಧ್ವಂ ಜ್ವಲತ್ಯೇಷ ಯಾವತ್ಸೌಮ್ಯಂ ಪರಾಮೃತಂ ।
ಯಾವದಗ್ನ್ಯಾಸ್ಪದಂ ಸೌಮ್ಯಮಮೃತಂ ಚ ಸ್ರವತ್ಯಧಃ ॥ ೯ ॥

ಅತ ಏವ ಹಿ ಕಾಲಾಗ್ನಿರಧಸ್ತಾಚ್ಛಕ್ತಿರೂರ್ಧ್ವತಃ ।
ಯಾವದಾದಹನಂ ಚೋರ್ಧ್ವಮಧಶ್ಚಾಪ್ಲಾವನಂ ಭವೇತ್ ॥ ೧೦ ॥

ಆಧಾರಶಕ್ತ್ಯೈವ ಧೃತಃ ಕಾಲಾಗ್ನಿರಯಮೂರ್ಧ್ವಗಃ ।
ತಥೈವ ನಿಮ್ನಗಃ ಸೋಮಶ್ಶಿವಶಕ್ತಿಪದಾಸ್ಪದಃ ॥ ೧೧ ॥

ಶಿವಶ್ಚೋರ್ಧ್ವಮಧಶ್ಶಕ್ತಿರೂರ್ಧ್ವಂ ಶಕ್ತಿರಧಃ ಶಿವಃ ।
ತದಿತ್ಥಂ ಶಿವಶಕ್ತಿಭ್ಯಾಂ ನಾವ್ಯಾಪ್ತಮಿಹ ಕಿಂಚನ ॥ ೧೨ ॥

---

೮. ಹವಿಸ್ಸನ್ನು ಸ್ಥಿರಪಡಿಸುವುದಕ್ಕಾಗಿ ಸಸ್ಯಗಳ ಅಭಿವೃದ್ಧಿಯೂ, ಸಸ್ಯಗಳ ಅಭಿವೃದ್ಧಿಗಾಗಿ ಮಳೆಯೂ, ಉಂಟಾಗುವವು ಮಳೆಯಿಂದಲೇ ಹವಿಸ್ಸು ಸಿದ್ಧವಾಗುವ ಕಾರಣ ಅಗ್ನಿ, ಸೋಮ ಇವರಿಂದಲೇ ಜಗತ್ತು ಸ್ಥಿರವಾಗಿರುವುದು.

೯. ಈ ಅಗ್ನಿಯು ಮೇಲು ಮುಖವಾಗಿ ಉರಿಯುವುದು. ಈ ಅಗ್ನಿಯಿಂದ ಸೋಮ ಸಂಬಂಧವಾದ ಅಮೃತವು ಕೆಳಕ್ಕೆ ವೃಷ್ಟಿಯ ರೂಪದಿಂದ ಬೀಳುವುದು.

೧೦. ಈ ಕಾರಣದಿಂದಲೇ ಪ್ರಳಯಕಾಲದ ಅಗ್ನಿಯು ಕೆಳಗೂ, ಶಕ್ತಿಯು ಮೇಲುಗಡೆಯಲ್ಲಿಯೂ ಇದ್ದುಕೊಂಡು ಬೆಂಕಿಯು ಚನ್ನಾಗಿ ಹತ್ತಿಕೊಂಡು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿದನಂತರ ಕೆಳಗಡೆಗೆ ನೀರಿನ ರೂಪದಿಂದ ಇಳಿಯುವುದು.

೧೧. ಈ ಮೇಲು ಭಾಗದಲ್ಲಿರುವ ಕಾಲಾಗ್ನಿಯನ್ನು ಆಧಾರ ಶಕ್ತಿಯು ಧರಿಸುವುದು. ಶಿವಶಕ್ತಿಯ ಸ್ಥಾನವನ್ನು ಆಶ್ರಯಿಸಿರುವ ಸೋಮವು ಕೆಳಮುಖವಾಗಿರುವುದು.

೧೨. ಶಿವನು ಮೇಲುಗಡೆಯಲ್ಲಿಯೂ, ಶಕ್ತಿಯು ಕೆಳಭಾಗದಲ್ಲಿಯೂ, ಶಕ್ತಿಯು ಮೇಲುಗಡೆಯಲ್ಲಿಯೂ, ಶಿವನು ಕೆಳಭಾಗದಲ್ಲಿಯೂ, ಪರಸ್ಪರ ವ್ಯಾಪಿಸಿರುವರು. ಈ ಪ್ರಕಾರ ಶಿವಶಕ್ತಿ ಇವರಿಬ್ಬರಿಂದ ವ್ಯಾಪಿಸಲ್ಪಡದಿರುವ ವಸ್ತುವು ಯಾವುದೂ ಈ ಪ್ರಪಂಚದಲ್ಲಿಲ್ಲ.

**ಅಸಕೃಚ್ಚಾಗ್ನಿನಾ ದಗ್ಧಂ ಜಗದ್ಯದ್ಭಸ್ಮಸಾತ್ಕೃತಂ ।**
**ಅಗ್ನೇರ್ವೀರ್ಯಮಿದಂ ಚಾಹುಸ್ತದ್ವೀರ್ಯಂ ಭಸ್ಮ ಯತ್ತತಃ ॥ ೧೩ ॥**

**ಯಶ್ಚೇತ್ಥಂ ಭಸ್ಮಸದ್ಭಾವಂ ಜ್ಞಾತ್ವಾ ಸ್ನಾತಿ ಚ ಭಸ್ಮನಾ ।**
**ಅಗ್ನಿರಿತ್ಯಾದಿಭಿರ್ಮಂತ್ರೈರ್ಬದ್ಧಃ ಪಾಶಾತ್ಪ್ರಮುಚ್ಯತೇ ॥ ೧೪ ॥**

**ಅಗ್ನೇರ್ವೀರ್ಯಂ ತು ಯದ್ಭಸ್ಮ ಸೋಮೇನಾಪ್ಲಾವಿತಂ ಪುನಃ ।**
**ಅಯೋಗಯುಕ್ತ್ಯಾ ಪ್ರಕೃತೇರಧಿಕಾರಾಯ ಕಲ್ಪತೇ ॥ ೧೫ ॥**

**ಯೋಗಯುಕ್ತ್ಯಾ ತು ತದ್ಭಸ್ಮ ಪ್ಲಾವ್ಯಮಾನಂ ಸಮಂತತಃ ।**
**ಶಾಕ್ತೇನಾಮೃತವರ್ಷೇಣ ಚಾಧಿಕಾರಾನ್ನಿವರ್ತಯೇತ್ ॥ ೧೬ ॥**

**ಅತೋ ಮೃತ್ಯುಂಜಯಾಯೇತ್ಥಮಮೃತಪ್ಲಾವನಂ ಸದಾ ।**
**ಶಿವಶಕ್ತ್ಯಮೃತಸ್ಪರ್ಶೇ ಲಬ್ಧಂ ಯೇನ ಕುತೋ ಮೃತಿಃ ॥ ೧೭ ॥**

೧೩. ಅಗ್ನಿಯು ಜಗತ್ತೆಲ್ಲವನ್ನೂ ಬೂದಿಯಾಗುವಂತೆ ಸುಡುವ ಕಾರಣ ಈ ಭಸ್ಮವನ್ನು ಅಗ್ನಿಯ ವೀರ್ಯವೆಂದು ಹೇಳುವರು.

೧೪. ಪಾಶಬದ್ಧನಾದ ಜೀವನು ಈ ಪ್ರಕಾರವಾಗಿರುವ ಭಸ್ಮದ ನಿಜಸ್ಥಿತಿಯನ್ನು ತಿಳಿದುಕೊಂಡು ಅಗ್ನಿರಿತಿ ಭಸ್ಮ ಇವೇ ಮೊದಲಾದ ಮಂತ್ರಗಳಿಂದ ಭಸ್ಮಸ್ನಾನವನ್ನು ಮಾಡಿದರೆ ಅವನು ತನ್ನ ಜನ್ಮಕ್ಕೆ ಕಾರಣವಾದ ಪಾಶಗಳಿಂದ ಬಿಡುಗಡೆಯನ್ನು ಹೊಂದುವನು.

೧೫. ಅಗ್ನಿವೀರ್ಯವಾದ ಭಸ್ಮವನ್ನು ನೀರಿನಿಂದ ಆಪ್ಲಾವನೆಯನ್ನು ಮಾಡಿದರೆ ಎಂದರೆ ಕಲಸಿಧರಿಸಿದರೆ ಅವನು ಪ್ರಕೃತಿಯ ಸಂಬಂಧವಾದ ಮಾಯಾದಿದೋಷಗಳಿಂದ ನಿರ್ಲಿಪ್ತನಾಗುವನು.

೧೬. ಮಂತ್ರಪೂರ್ವಕವಾಗಿ ಸಿದ್ಧಮಾಡಿದ ಭಸ್ಮವನ್ನು ಧರಿಸಿದರೆ ಎಂದರೆ ಭಸ್ಮೋದ್ಧೂಳನವನ್ನು ಮಾಡಿಕೊಂಡರೆ ಶಕ್ತಿಯ ಸಂಬಂಧವಾದ ಅಮೃತವರ್ಷವು ಉಂಟಾಗಿ ಶರೀರಾಧಿಕಾರದಿಂದ ನಿವೃತ್ತನಾಗುವನು.

೧೭. ಈ ಕಾರಣಗಳಿಂದ ಮೃತ್ಯುಂಜಯ ಮೂರ್ತಿಯಲ್ಲಿ ಮೇಲೆಹೇಳಿದ ಕ್ರಮದಿಂದ ಸರ್ವದಾ ಅಮೃತಪ್ಲಾವನವು ಆಗುತ್ತಿರುವುದು. ಶಿವಶಕ್ತಿಗಳ ಈ ವಿಧವಾದ ಅಮೃತ ಸ್ಪರ್ಶವು ಜೀವನಿಗೆ ಉಂಟಾದಲ್ಲಿ ಅವನಿಗೆ ಮರಣಭಯವೆಲ್ಲಿಯದು ?

ಯೋ ವೇದ ದಹನಂ ಗುಹ್ಯಂ ಪ್ಲಾವನಂ ಚ ಯಥೋದಿತಂ ।
ಅಗ್ನೀಷೋಮಪದಂ ಹಿತ್ವಾ ನ ಸ ಭೂಯೋಽಭಿಜಾಯತೇ ॥ ೧೮ ॥

ಶಿವಾಗ್ನಿನಾ ತನುಂ ದಗ್ಧ್ವಾ ಶಕ್ತಿಸೌಮ್ಯಾಮೃತೇನ ಯಃ ।
ಪ್ಲಾವಯೇದ್ಯೋಗಮಾರ್ಗೇಣ ಸೋಽಮೃತತ್ವಾಯ ಕಲ್ಪತೇ ॥ ೧೯ ॥

ಹೃದಿ ಕೃತ್ವೇಮಮರ್ಥಂ ವೈ ದೇವೇನ ಸಮುದಾಹೃತಂ ।
ಅಗ್ನೀಷೋಮಾತ್ಮಕಂ ವಿಶ್ವಂ ಜಗದಿತ್ಯನುರೂಪತಃ ॥ ೨೦ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯ ಸಂಹಿತಾಯಾಂ
ಪೂರ್ವಭಾಗೇ ಭಸ್ಮತತ್ತ್ವವರ್ಣನಂ ನಾಮಾಷ್ಟಾವಿಂಶೋಽಧ್ಯಾಯಃ



೧೮. ಈಗ ನಾನು ಹೇಳಿದಂತೆ ಬಹಳ ಗೂಢವಾಗಿರುವ ಅಗ್ನಿಯನ್ನೂ ಅಮೃತಪ್ಲಾವನವನ್ನೂ ತಿಳಿದವನು ಅಗ್ನಿ, ಸೋಮ ಇವರುಗಳ ಸ್ಥಾನವನ್ನು ಮೀರಿ ಎಂದರೆ ಮಾಯಾಪಾಶರಹಿತನಾಗಿ ಪುನಃ ಜನ್ಮವನ್ನು ಪಡೆಯುವುದಿಲ್ಲ.

೧೯. ಯೋಗಮಾರ್ಗದಿಂದ ಶಿವಾಗ್ನಿಯಿಂದ ಶರೀರವನ್ನು ದಹಿಸಿ ಶಕ್ತಿಯ ಸೌಮ್ಯವಾದ ಅಮೃತದಿಂದ ಶರೀರವನ್ನು ಪ್ಲಾವನೆ ಮಾಡುವವನಿಗೆ ಜನ್ಮಮರಣಗಳು ಇರುವುದಿಲ್ಲ.

೨೦. ದೇವದೇವನಾದ ಶಂಕರನು ಈ ಅಭಿಪ್ರಾಯವನ್ನು ತನ್ನ ಮನಸ್ಸಿನಲ್ಲಿರಿಸಿಕೊಂಡು ಈ ಪ್ರಪಂಚವು ಅಗ್ನೀ ಸೋಮಾತ್ಮಕವೆಂದು ಹೇಳಿರುವನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯ ಸಂಹಿತೆಯ ಪೂರ್ವಭಾಗದಲ್ಲಿ
ಭಸ್ಮತತ್ತ್ವವರ್ಣನೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ
## ವಾಯವೀಯಸಂಹಿತಾಯಾಂ ಪೂರ್ವಭಾಗೇ
## ಏಕೋನತ್ರಿಂಶೋಽಧ್ಯಾಯಃ

---

॥ ವಾಯುರುವಾಚ ॥

ನಿವೇದಯಾಮಿ ಜಗತೋ ವಾಗರ್ಥಾತ್ಮ್ಯಂ ಕೃತಂ ಯಥಾ ।
ಷಡಧ್ವವೇದನಂ ಸಮ್ಯಕ್ಸಮಾಸಾನ್ನ ತು ವಿಸ್ತರಾತ್ ॥ ೧ ॥

ನಾಸ್ತಿ ಕಶ್ಚಿದಶಬ್ದಾರ್ಥೋ ನಾಪಿ ಶಬ್ದೋ ನಿರರ್ಥಕಃ ।
ತತೋ ಹಿ ಸಮಯೋ ಶಬ್ದಸ್ಸರ್ವಸ್ಸರ್ವಾರ್ಥಬೋಧಕಃ ॥ ೨ ॥

### ಇಪ್ಪತ್ತೊಂಭತ್ತನೆಯ ಅಧ್ಯಾಯವು

೧. ವಾಯುದೇವನು ಹೇಳಿದನು.- ನಾನು ನಿಮಗೆ, ಈ ಪ್ರಪಂಚವು ಶಬ್ದಾರ್ಥರೂಪದಿಂದಿರುವ ರೀತಿಯನ್ನೂ, ಷಡಧ್ವ ಕ್ರಮವನ್ನೂ, ಸಂಕ್ಷೇಪವಾಗಿ ಹೇಳಿದನು. ವಿಸ್ತಾರವಾಗಿ ಹೇಳಲು ಆಗುವುದಿಲ್ಲ.

೨-೩. ಅರ್ಥವಿಲ್ಲದ ಶಬ್ದವು ಎಲ್ಲಿಯೂ ಕಂಡು ಬರುವುದಿಲ್ಲ. ಶಬ್ದದ ಸಹಾಯವಿಲ್ಲದೆ ಸರಿಯಾದ ಅರ್ಥವನ್ನೂ ಸೂಚಿಸುವುದಕ್ಕಾಗುವುದಿಲ್ಲ. ಹೀಗಿರುವುದರಿಂದಲೇ ಒಂದೊಂದು ಕಡೆಯಲ್ಲಿ ಆಯಾಯ ಪ್ರಕರಣಕ್ಕನುಸಾರವಾಗಿ ಎಲ್ಲಾ ಶಬ್ದವೂ ಎಲ್ಲಾ ಅರ್ಥವನ್ನೂ (ಕೊಡುವುದು) ತಿಳಿಸುವುದು. ಪ್ರಕೃತಿಯ ಪರಿಣಾಮವು ಶಬ್ದಭಾವನಾ ಅರ್ಥಭಾವನಾ ಎಂದು ಎರಡು ವಿಧವಾಗಿರುವುದು. ಈ ವಿಧವಾದ

ಪ್ರಕೃತೇಃ ಪರಿಣಾಮೋಽಯಂ ದ್ವಿಧಾ ಶಬ್ದಾರ್ಥಭಾವನಾ ।
ತಾಮಾಹುಃ ಪ್ರಾಕೃತೀಂ ಮೂರ್ತಿಂ ಶಿವಯೋಃ ಪರಮಾತ್ಮನೋಃ ॥ ೩ ॥

ಶಬ್ದಾತ್ಮಿಕಾ ವಿಭೂತಿರ್ಯಾ ಸಾ ತ್ರಿಧಾ ಕಥ್ಯತೇ ಬುಧೈಃ ।
ಸ್ಥೂಲಾ ಸೂಕ್ಷ್ಮಾ ಪರಾ ಚೇತಿ ಸ್ಥೂಲಾ ಯಾ ಶ್ರುತಿಗೋಚರಾ ॥ ೪ ॥

ಸೂಕ್ಷ್ಮಾ ಚಿಂತಾಮಯೀ ಪ್ರೋಕ್ತಾ ಚಿಂತಯಾ ರಹಿತಾ ಪರಾ ।
ಯಾ ಶಕ್ತಿಃ ಸಾ ಪರಾ ಶಕ್ತಿಶ್ಶಿವತತ್ತ್ವಸಮಾಶ್ರಯಾ ॥ ೫ ॥

ಜ್ಞಾನಶಕ್ತಿಸಮಾಯೋಗಾದಿಚ್ಛೋಪೋದ್ಬಲಿಕಾ ತಥಾ ।
ಸರ್ವಶಕ್ತಿಸಮಷ್ಟ್ಯಾತ್ಮಾ ಶಕ್ತಿತತ್ತ್ವಸಮಾಖ್ಯಯಾ ॥ ೬ ॥

ಸಮಸ್ತಕಾರ್ಯಜಾತಸ್ಯ ಮೂಲಪ್ರಕೃತಿತಾಂ ಗತಾ ।
ಸೈವ ಕುಂಡಲಿನೀ ಮಾಯಾ ಶುದ್ಧಾಧ್ವಪರಮಾ ಸತೀ ॥ ೭ ॥

---

ಪರಿಣಾಮಕ್ಕೆ ಆಧಾರವಾಗಿರುವ ದೇವಿಯನ್ನು ಪಾರ್ವತೀ ಪರಮೇಶ್ವರರ ಪ್ರಾಕೃತವಾದ ಆಕಾರವನ್ನಾಗಿ ಹೇಳುವರು.

೪. ಶಬ್ದರೂಪದಿಂದ ಇರುವ ಆ ದೇವಿಯ ಮಹಿಮೆಯು ಸ್ಥೂಲ, ಸೂಕ್ಷ್ಮ, ಪರ, ಎಂಬುದಾಗಿ ಮೂರು ವಿಧವೆಂದು ತಿಳಿದವರು ಹೇಳುವರು. ಇವುಗಳಲ್ಲಿ ಸ್ಥೂಲವಾದ ಶಬ್ದವು ಶ್ರವಣಪ್ರತ್ಯಕ್ಷವಾಗಿರುವುದು ಎಂದರೆ ಕಿವಿಯಿಂದ ಕೇಳಲು ಅರ್ಹವಾಗಿರುವುದು.

೫-೭. ಸೂಕ್ಷ್ಮವಾಗಿರುವುದು ಸಂಕಲ್ಪ ಎಂದರೆ ಮನಸ್ಸಿನಲ್ಲಿಯೇ ಯೋಚಿಸುವ ರೂಪದಿಂದ ಇರುವುದು. ಮೂರನೆಯದಾದ ಪರಾ ಎಂಬುವುದು ಸಂಕಲ್ಪ ರೂಪವನ್ನೂ ಮೀರಿ ಅದಕ್ಕಿಂತಲೂ, ಬೇರೆಯಾಗಿ ಇರುವುದು. ಸೂಕ್ಷ್ಮರೂಪದಿಂದ ಇರುವುದಕ್ಕಿಂತಲೂ ಬೇರೆಯದಾದ ಈ ಪರಾ ಎಂಬ ಶಕ್ತಿಯು ಶಿವತತ್ತ್ವಕ್ಕೆ ಆಧಾರವಾಗಿರುವುದು. ಇದು ಜ್ಞಾನಶಕ್ತಿಯೊಡನೆ ಸೇರಿಕೊಂಡು ಸೂಕ್ಷ್ಮರೂಪದಿಂದ ಇರುವ ಸಂಕಲ್ಪವನ್ನು ಹೆಚ್ಚಿಸಲು ಕಾರಣವಾಗಿರುವುದು. ಇದು ಎಲ್ಲಾ ವಿಧವಾದ ಶಕ್ತಿಗಳಿಗೂ ಸಮಷ್ಟಿರೂಪದಿಂದ ಎಂದರೆ ಒಟ್ಟಾಗಿರುವ ರೂಪದಿಂದ ಇದ್ದುಕೊಂಡಿರುವುದರಿಂದ ಶಕ್ತಿತತ್ತ್ವವೆಂದು ಹೆಸರನ್ನು ಹೊಂದಿ ಎಲ್ಲಾ ವಿಧವಾದ ಕಾರ್ಯ ಸಮೂಹಗಳಿಗೂ ಮುಖ್ಯಕಾರಣ ರೂಪದಿಂದಇರುವ ಮೂಲ ಪ್ರಕೃತಿಯ ರೂಪ

**ಸಾ ವಿಭಾಗಸ್ವರೂಪೈವ ಷಡಧ್ವಾತ್ಮಾ ವಿಜೃಂಭತೇ ।**
**ತತ್ರ ಶಬ್ದಾಸ್ತ್ರಯೋಽಧ್ವಾನಸ್ತ್ರಯಶ್ಚಾರ್ಥಾಃ ಸಮೀರಿತಾಃ ॥ ೮ ॥**

**ಸರ್ವೇಷಾಮಪಿ ವೈ ಪುಂಸಾಂ ನೈಜಶುಧ್ಯನುರೂಪತಃ ।**
**ಲಯಭೋಗಾಧಿಕಾರಾಸ್ಸ್ಯುಸ್ಸರ್ವತತ್ತ್ವವಿಭಾಗತಃ ॥ ೯ ॥**

**ಕಲಾಭಿಸ್ತಾನಿ ತತ್ತ್ವಾನಿ ವ್ಯಾಪ್ತಾನ್ಯೇವ ಯಥಾತಥಂ ।**
**ಪರಸ್ಯಾಃ ಪ್ರಕೃತೇರಾದೌ ಪಂಚಧಾ ಪರಿಣಾಮತಃ ॥ ೧೦ ॥**

**ಕಲಾಶ್ಚ ತಾ ನಿವೃತ್ತ್ಯಾದ್ಯಾಃ ಪರ್ಯಾಪ್ತಾ ಇತಿ ನಿಶ್ಚಯಃ ।**
**ಮಂತ್ರಾಧ್ವಾ ಚ ಪದಾಧ್ವಾ ಚ ವರ್ಣಾಧ್ವಾ ಚೇತಿ ಶಬ್ದತಃ ॥ ೧೧ ॥**

---

ವನ್ನು ಹೊಂದಿರುವುದು. ಹೀಗಿರುವ ಈ ಪರಾ ಎಂಬ ಶಕ್ತಿಯನ್ನೇ ಕುಂಡಲಿನೀ, ಮಾಯಾ, ಎಂತಲೂ ಹೇಳುವರು. ಈ ಪರಾ ಶಕ್ತಿಯು ಶುದ್ಧವಾದ ಅಧ್ವರೂಪ ದಿಂದ ಇರುವುದು.

೮. ಈ ಪರಾ ಶಕ್ತಿಯೇ ತನ್ನಲ್ಲಿ ಬೇರೆ ಬೇರೆಯಾದ ವಿಭಾಗಗಳನ್ನು ಹೊಂದಿ, ಷಡಧ್ವರೂಪದಿಂದ (ಆರು ಅಧ್ವಗಳ ರೂಪದಿಂದ) ಪ್ರಪಂಚದಲ್ಲಿ ಹಬ್ಬಿರು ವುದು. ಅದರಲ್ಲಿ ಶಬ್ದಾಧ್ವಾ ಎಂಬುವುದು ಮೂರು ವಿಧವಾಗಿರುವುದು. ಅರ್ಥಾಧ್ವಾ ಎಂಬುವುದೂ ಸಹ ಮೂರು ವಿಧವಾಗಿರುವುದು.

೯. ಎಲ್ಲಾ ಪುರುಷರಿಗೂ ಅವರವರ ಶುದ್ಧಿಗೆ ಅನುರೂಪವಾಗಿ ಲಯಭೋಗ ಗಳಲ್ಲಿ ಅಧಿಕಾರವಿರುವುದು ಎಂದರೆ ಲೀನವಾಗುವುದಕ್ಕೂ ಮತ್ತು ಭೋಗವನ್ನು ಅನುಭವಿಸುವುದಕ್ಕೂ ತಕ್ಕಷ್ಟು ಅವಕಾಶವು ಇರುವುದು ಇದಕ್ಕನುಕೂಲವಾಗಿರು ವಂತೆ ಎಲ್ಲಾ ತತ್ವಗಳೂ ಅನೇಕವಿಭಾಗಗಳಿಂದ ಕೂಡಿರುವವು.

೧೦-೧೧. ಆ ತತ್ವಗಳೆಲ್ಲವೂ ಪರಾ ಪ್ರಕೃತಿಯಿಂದ ಐದು ವಿಧವಾಗಿ ಪರಿ ಣಾಮವನ್ನು ಹೊಂದಿರುವುದರಿಂದ ಐದು ವಿಧವಾದ ಕಲೆಗಳಿಂದ ಅವುಗಳಿಗೆ ತಕ್ಕ ರೀತಿಯಿಂದ ಹೊಂದಿಕೊಂಡಿರುವುವು. ನಿವೃತ್ತಿಯೇ ಮೊದಲಾದ ಕಲೆಗಳು ಈ ತತ್ವಗಳ ಜೊತೆಯಲ್ಲಿ ಇರುವವುಗಳೆಂದು ನಿಶ್ಚಯ ಮಾಡಿರುವರು.

ಭುವನಾಧ್ವಾ ಚ ತತ್ತ್ವಾಧ್ವಾ ಕಲಾಧ್ವಾ ಚಾರ್ಥತಃ ಕ್ರಮಾತ್ ।
ಅತ್ರಾನ್ಯೋಽನ್ಯಂ ಚ ಸರ್ವೇಷಾಂ ವ್ಯಾಪ್ಯವ್ಯಾಪಕತೋಚ್ಯತೇ ॥ ೧೨ ॥

ಮಂತ್ರಾಃ ಸರ್ವೈಃ ಪದೈರ್ವ್ಯಾಪ್ತಾ ವಾಕ್ಯಭಾವಾತ್ಪದಾನಿ ಚ ।
ವರ್ಣೈರ್ವರ್ಣಸಮೂಹಂ ಹಿ ಪದಮಾಹುರ್ವಿಪಶ್ಚಿತಃ ॥ ೧೩ ॥

ವರ್ಣಾಸ್ತು ಭುವನೈರ್ವ್ಯಾಪ್ತಾಸ್ತೇಷಾಂ ತೇಷೂಪಲಂಭನಾತ್ ।
ಭುವನಾನ್ಯಪಿ ತತ್ತ್ವೌಘೈರುತ್ಪತ್ತ್ಯಾಂತರ್ಬಹಿಷ್ಕ್ರಮಾತ್ ॥ ೧೪ ॥

ವ್ಯಾಪ್ತಾನಿ ಕಾರಣೈಸ್ತತ್ತ್ವೈರಾರಬ್ಧತ್ವಾದನೇಕಶಃ ।
ಅಂತರಾದುತ್ಥಿತಾನೀಹ ಭುವನಾನಿ ತು ಕಾನಿಚಿತ್ ॥ ೧೫ ॥

---

೧೨. ಶಬ್ದಾಧ್ವವು ಮನ್ತ್ರಾಧ್ವ, ಪದಾಧ್ವಾ, ವರ್ಣಾಧ್ವಾ ಎಂದು ಮೂರು ವಿಧವಾಗಿಯೂ, ಅರ್ಥಾಧ್ವವು ಭುವನಾಧ್ವಾ, ತತ್ತ್ವಾಧ್ವಾ, ಕಲಾಧ್ವಾ ಎಂದು ಮೂರು ವಿಧವಾಗಿಯೂ ಇರುವವು. ಈ ಶಬ್ದಾಧ್ವಾ, ಅರ್ಥಾಧ್ವಾ ಎಂಬಿವೆರಡು ಪರಸ್ಪರವಾಗಿ ವ್ಯಾಪ್ಯವ್ಯಾಪಕ ಭಾವದಿಂದ ಇರುವುವು. ಎಂದರೆ ಒಂದರಲ್ಲಿ ಒಂದು ಸೇರಿಕೊಂಡು ಇರುವವು.

೧೩. ಮಂತ್ರಗಳೆಲ್ಲವೂ ಪದಗಳಿಂದ ತುಂಬಿರುವುವು. ಪದಗಳೆಲ್ಲವೂ ಸೇರಿ ವಾಕ್ಯರೂಪದಿಂದ ಇರುವುವು. ಅಕ್ಷರಗಳ ಸಮೂಹವು ಯಾವುದಾದರೂ ಒಂದು ಅರ್ಥವನ್ನು ಸೂಚಿಸಿದರೆ ಅದನ್ನು ಬುದ್ಧಿವಂತರು ಪದವೆಂದು ಹೇಳುವರು.

೧೪–೧೬ ವರ್ಣಗಳು (ಅಕ್ಷರಗಳು) ಪ್ರಪಂಚವನ್ನು ಆವರಿಸಿ ಅದರಲ್ಲಿ ವ್ಯಾಪಿಸಿಕೊಂಡಿರುವವು. ಆ ಪ್ರಪಂಚಗಳು ಅಥವಾ ಭುವನಗಳು ತತ್ತ್ವಸಮೂಹಗಳಿಂದ ವ್ಯಾಪ್ತವಾಗಿರುವವು. ಆ ತತ್ತ್ವಸಮೂಹಗಳಿಂದಲೇ ಪ್ರಪಂಚಗಳು ಉತ್ಪತ್ತಿಯಾಗುವವು, ಮತ್ತು ಅವುಗಳಲ್ಲಿಯೇ ಲೀನವಾಗುವವು. ಹೀಗೆ ಅನೇಕ ವಿಧವಾದ ತತ್ತ್ವಸಮೂಹಗಳಿಂದಲೇ ಪ್ರಪಂಚಗಳು ಅಥವಾ ಭುವನಗಳನ್ನೊಳಗೊಂಡ ಬ್ರಹ್ಮಾಂಡವು ಸೃಷ್ಟಿಸಲ್ಪಟ್ಟಿರುವುದು. ಪುರಾಣಗಳಲ್ಲಿಯೂ, ಶಿವಾಗಮಗಳಲ್ಲಿಯೂ, ಸಾಂಖ್ಯಯೋಗದಲ್ಲಿಯೂ, ಶಿವಶಾಸ್ತ್ರಗಳಲ್ಲಿಯೂ ಇನ್ನೂ ಇತರ ಶಾಸ್ತ್ರಗಳಲ್ಲಿಯೂ ಈ ತತ್ತ್ವಗಳು ನಾನಾವಿಧವಾಗಿ ಪ್ರತಿಪಾದಿಸಲ್ಪಟ್ಟಿರುವವು. ಕೆಲವು ಭುವನಗಳು ಈ ತತ್ತ್ವಗಳ ಮಧ್ಯದಲ್ಲಿ ಹುಟ್ಟಿದವುಗಳೆಂದು ಪೌರಾಣಿಕರು ಹೇಳು

**ಪೌರಾಣಿಕಾನಿ ಚಾನ್ಯಾನಿ ವಿಜ್ಞೇಯಾನಿ ಶಿವಾಗಮೇ ।**
**ಸಾಂಖ್ಯಯೋಗಪ್ರಸಿದ್ಧಾನಿ ತತ್ತ್ವಾನ್ಯಪಿ ಚ ಕಾನಿಚಿತ್ ॥ ೧೬ ॥**

**ಶಿವಶಾಸ್ತ್ರಪ್ರಸಿದ್ಧಾನಿ ತತೋಽನ್ಯಾನ್ಯಪಿ ಕೃತ್ಸ್ನಶಃ ।**
**ಕಲಾಭಿಸ್ತಾನಿ ತತ್ತ್ವಾನಿ ವ್ಯಾಪ್ತಾನ್ಯೇವ ಯಥಾತಥಂ ॥ ೧೭ ॥**

**ಪರಸ್ಯಾಃ ಪ್ರಕೃತೇರಾದೌ ಪಂಚಧಾ ಪರಿಣಾಮತಃ ।**
**ಕಲಾಶ್ಚ ತಾ ನಿವೃತ್ತ್ಯಾದ್ಯಾ ವ್ಯಾಪ್ತಾಃ ಪಂಚ ಯಥೋತ್ತರಂ ॥ ೧೮ ॥**

**ವ್ಯಾಪಿಕಾತಃ ಪರಾ ಶಕ್ತಿರವಿಭಕ್ತಾಃ ಷಡಧ್ವನಾಂ ।**
**ಪರಪ್ರಕೃತಿಭಾವಸ್ಯ ತತ್ಸತ್ತ್ವಾಚ್ಛಿವತತ್ತ್ವತಃ ॥ ೧೯ ॥**

**ಶಕ್ತ್ಯಾದಿ ಚ ಪೃಥಿವ್ಯಂತಂ ಶಿವತತ್ತ್ವಸಮುದ್ಭವಂ ।**
**ವ್ಯಾಪ್ತಾಮೇಕೇನ ತೇನೈವ ಮೃದಾ ಕುಂಭಾದಿಕಂ ಯಥಾ ॥ ೨೦ ॥**

---

ವರು. ಶಿವಾಗಮದಲ್ಲಿ ಇದಕ್ಕಿಂತಲೂ ಬೇರೆಯಾದ ಕೆಲವು ತತ್ವಗಳೂ ಅವುಗಳ ಸಂಖ್ಯೆಯೂ ಇರುವುವೆಂದೂ ಅವುಗಳಿಗಿರುವ ಸಂಬಂಧವೂ ಬೇರೆ ಬೇರೆಯಾಗಿರುವುದೆಂದೂ ತಿಳಿದುಬರುವುದು.

೧೭. ಶಿವಾಗಮದಲ್ಲಿ ಹೇಳಿರುವುದಕ್ಕಿಂತಲೂ ಶಿವಶಾಸ್ತ್ರಗಳಲ್ಲಿ ಎಲ್ಲಾ ತತ್ವಗಳೂ ಬೇರೆ ಪ್ರಕಾರವಾಗಿ ಹೇಳಲ್ಪಟ್ಟಿರುವವು. ಈ ತತ್ವಗಳನ್ನು ಅವುಗಳಿಗೆ ತಕ್ಕ ತಕ್ಕ ರೀತಿಯಿಂದ ಕಲೆಗಳು ವ್ಯಾಪಿಸಿಕೊಂಡಿರುವುವು.

೧೮–೨೦. ಮೊದಲು ಪರಾಶಕ್ತಿಯು ಐದು ವಿಧವಾಗಿ ಪರಿಣಾಮವನ್ನು ಹೊಂದಿರುವುದು. ಆ ಪರಿಣಾಮವೇ ನಿವೃತ್ತಿಯೇ ಮೊದಲಾದ ಕಲೆಗಳಾಗಿ ಎಲ್ಲವನ್ನೂ ವ್ಯಾಪಿಸಿಕೊಂಡಿರುವುದು. ವರ್ಣಾಧ್ವಾ ಮೊದಲಾಗಿರುವ ಆರು ಅಧ್ವಗಳೂ ಪರಸ್ಪರವಾಗಿ ಹೊಂದಿಕೊಂಡಿರುವಂತೆ ಪರಾಶಕ್ತಿಯು ಈ ಕಲಾರೂಪದಿಂದ ವ್ಯಾಪಿಸಿಕೊಂಡಿರುವುದು. ಈ ಕಲೆಗಳ (ಸತ್ತೆಯಿಂದ) ಸ್ಥಿತಿಯಿಂದ ಪರಾಶಕ್ತಿಯೂ, ಈ ಪರಾಶಕ್ತಿಯ ಸ್ಥಿತಿಯಿಂದ ಶಿವ ತತ್ವವೂ ವ್ಯಾಪಿಸಿಕೊಂಡಿರುವುದರಿಂದ ಶಕ್ತಿಯೇ ಮೊದಲಾಗಿ ಪೃಥಿವೀ ತತ್ವದವರಿಗೂ ಎಲ್ಲವೂ ಶಿವತತ್ವದಿಂದಲೇ ಉಂಟಾಗಿರುವವು. ಮಣ್ಣು ಒಂದೇ ಆದರೂ ಮಣ್ಣಿನ ವಿಕಾರಗಳಾದ ಗಡಿಗೆಯೇ ಮೊದಲಾದುವುಗಳು ಬೇರೆಯಾಗಿ ತೋರುವಹಾಗೆ ಶಿವತತ್ವ ಒಂದರಿಂದಲೇ ಇವೆಲ್ಲವೂ ವ್ಯಾಪ್ತವಾಗಿರುವವು ಎಂದರೆ ಎಲ್ಲವೂ ಉಂಟಾಗಿರುವವು.

ಶೈವಂ ತತ್ಪರಮಂ ಧಾಮ ಯತ್ಪ್ರಾಪ್ಯಂ ಷಡ್ಭಿರಧ್ವಭಿಃ ।
ವ್ಯಾಪಿಕಾವ್ಯಾಪಿಕಾ ಶಕ್ತಿಃ ಪಂಚತತ್ತ್ವವಿಶೋಧನಾತ್ ॥ ೨೧ ॥

ನಿವೃತ್ತ್ಯಾ ರುದ್ರಪರ್ಯಂತಂ ಸ್ಥಿತಿರಂಡಸ್ಯ ಶೋಧ್ಯತೇ ।
ಪ್ರತಿಷ್ಠಯಾ ತದೂರ್ಧ್ವಂ ತು ಯಾವದವ್ಯಕ್ತಗೋಚರಂ ॥ ೨೨ ॥

ತದೂರ್ಧ್ವಂ ವಿದ್ಯಯಾ ಮಧ್ಯೇ ಯಾವದ್ವಿಶ್ವೇಶ್ವರಾವಧಿ ।
ಶಾಂತ್ಯಾ ತದೂರ್ಧ್ವಮಧ್ವಾಂತೇ ವಿಶುದ್ಧಿಃ ಶಾಂತ್ಯತೀತಯಾ ॥ ೨೩ ॥

ಯಮಾಹುಃ ಪರಮಂ ವ್ಯೋಮ ಪರಪ್ರಕೃತಿಯೋಗತಃ ।
ಏತಾನಿ ಪಂಚತತ್ತ್ವಾನಿ ಯೈರ್ವ್ಯಾಪ್ತಮಖಿಲಂ ಜಗತ್ ॥ ೨೪ ॥

ತತ್ರೈವ ಸರ್ವಮೇವೇದಂ ದ್ರಷ್ಟವ್ಯಂ ಖಲು ಸಾಧಕೈಃ ।
ಅಧ್ವವ್ಯಾಪ್ತಿಮವಿಜ್ಞಾಯ ಶುದ್ಧಿಂ ಯಃ ಕರ್ತುಮಿಚ್ಛತಿ ॥ ೨೫ ॥

---

೨೧. ವರ್ಣಾಧ್ವವೇ ಮೊದಲಾದ ಈ ಆರು ಅಧ್ವಗಳಿಂದ ಶಿವನ ಪರಮ ಪದವೆಂಬ ಉತ್ತಮ ಸ್ಥಾನವನ್ನು ಹೊಂದಲು ಸಾಧ್ಯವಾಗಿರುವುದು ಪಂಚತತ್ತ್ವಗಳಿಂದ ಶೋಧಿಸಿದಲ್ಲಿ ಕೆಲವೆಡೆಗಳಲ್ಲಿ ವ್ಯಾಪಕವಾಗಿಯೂ ಕೆಲವೆಡೆಗಳಲ್ಲಿ ವ್ಯಾಪ್ಯವಾಗಿಯೂ ಇರುವ ಶಕ್ತಿಯು ಗೋಚರವಾಗುವುದು.

೨೨-೨೪. ನಿವೃತ್ತಿ ತತ್ವದಿಂದ ರುದ್ರಪರ್ಯಂತವಾಗಿಯೂ ಬ್ರಹ್ಮಾಂಡದ ಸ್ಥಿತಿಯು ಶೋಧಿಸಲ್ಪಟ್ಟಿರುವುದು, (ವ್ಯಾಪ್ತವಾಗಿರುವುದು) ಅದರ ಮುಂದಕ್ಕೆ ಅವ್ಯಕ್ತವು ಗೋಚರವಾಗುವವರೆಗೂ ಪ್ರತಿಷ್ಠಾ ಎಂಬ ತತ್ವದಿಂದ ಶೋಧಿಸಲ್ಪಟ್ಟಿರುವುದು. ಅದರ ಮುಂದಕ್ಕೆ ವಿದ್ಯಾ ತತ್ವದಿಂದ ಮಧ್ಯದಲ್ಲಿ ವಿಶ್ವೇಶ್ವರ ಪರ್ಯಂತವಾಗಿಯೂ, ಅದರ ಮುಂದೆ ಶಾನ್ತಿ ತತ್ವದಿಂದಲೂ ಅಲ್ಲಿಂದ ಕೊನೆಯವರೆಗೂ ಶಾಂತ್ಯತೀತವೆಂಬ ತತ್ವದಿಂದಲೂ ಶೋಧಿತವಾಗಿರುವುದು. ಹೀಗೆ ಶೋಧನೆಯನ್ನು ಮಾಡಿದರೆ ಪರಾಪ್ರಕೃತಿ ಸಂಬಂಧದಿಂದ ಉಂಟಾದ ಚಿದಾಕಾಶವೆಂದು ಯಾವುದನ್ನು ಹೇಳುವರೋ ಅದನ್ನು ತಿಳಿಯಬಹುದು. ಈರೀತಿಯಾಗಿರುವ ಐದು ತತ್ತ್ವಗಳೇ ಸಮಸ್ತ ಪ್ರಪಂಚವನ್ನು ವ್ಯಾಪಿಸಿಕೊಂಡಿರುವವು.

೨೫. ಉಪಾಸಕರಾದವರು ಆಯಾಯ ತತ್ವಗಳಿಂದ ಶುದ್ಧಿಮಾಡುವ ಕ್ರಮವನ್ನು ಆಯಾಯಾ ಶಾಸ್ತ್ರಗಳನ್ನು ಚೆನ್ನಾಗಿ ವಿಚಾರಿಸಿ ತಿಳಿದುಕೊಳ್ಳಬೇಕು. ಈಗ ನಾನು ಹೇಳಿರುವ ಪ್ರಕಾರದಿಂದ ಇರುವ ಆರು ಅಧ್ವಗಳ ವ್ಯಾಪ್ತಿಯನ್ನು ತಿಳಿಯದೆ

**ಸ ವಿಪ್ರಲಂಭಕಃ ಶುದ್ಧೇರ್ನಾಲಂ ಪ್ರಾಪಯಿತುಂ ಫಲಂ ।**
**ವೃಥಾ ಪರಿಶ್ರಮಸ್ತಸ್ಯ ನಿರಯಾಯೈವ ಕೇವಲಂ ॥ ೨೬ ॥**

**ಶಕ್ತಿಪಾತಸಮಾಯೋಗಾದೃತೇ ತತ್ತ್ವಾನಿ ತತ್ತ್ವತಃ ।**
**ತದ್ವ್ಯಾಪ್ತಿಸ್ತದ್ವಿವೃದ್ಧಿಶ್ಚ ಜ್ಞಾತುಮೇವಂ ನ ಶಕ್ಯತೇ ॥ ೨೭ ॥**

**ಶಕ್ತಿರಾಜ್ಞಾ ಪರಾ ಶೈವೀ ಚಿದ್ರೂಪಾ ಪರಮೇಶ್ವರೀ ।**
**ಶಿವೋಽಧಿಷ್ಠತ್ಯಖಿಲಂ ಯಯಾ ಕಾರಣಭೂತಯಾ ॥ ೨೮ ॥**

**ನಾತ್ಮನೋ ನೈವ ಮಾಯೈಷಾ ನ ವಿಕಾರೋ ವಿಚಾರತಃ ।**
**ನ ಬಂಧೋ ನಾಪಿ ಮುಕ್ತಿಶ್ಚ ಬಂಧಮುಕ್ತಿವಿಧಾಯಿನೀ ॥ ೨೯ ॥**

**ಸರ್ವೈಶ್ವರ್ಯಪರಾ ಕಾಷ್ಠಾ ಶಿವಸ್ಯಾವ್ಯಭಿಚಾರಿಣೀ ।**
**ಸಮಾನಧರ್ಮಿಣೀ ತಸ್ಯ ತೈಸ್ತೈರ್ಭಾವೈರ್ವಿಶೇಷತಃ ॥ ೩೦ ॥**

---

ಶುದ್ಧಿಯನ್ನು ಮಾಡಿಕೊಳ್ಳಲು ಇಚ್ಛೆಮಾಡುವವನು ತಪ್ಪುಮಾರ್ಗವನ್ನು ಹಿಡಿಯು ವುದರಿಂದ ಮೋಸಹೋಗುವನು. ಶುದ್ಧಿಯ ಫಲವನ್ನು ಹೊಂದಲಾರನು.

೨೬-೨೭. ಮತ್ತು ಅವನು ಪಟ್ಟಶ್ರಮವು ವ್ಯರ್ಥವಾಗಿ ಕಡೆಗೆ ನರಕಕ್ಕೆ ಹೋಗುವನು. ಶಕ್ತಿಯ ಅನುಗ್ರಹವಿಲ್ಲದೆ ತತ್ತ್ವಗಳ ನಿಜಸ್ಥಿತಿಯೂ, ಅವುಗಳ ವ್ಯಾಪ್ತಿಯೂ, ಅವುಗಳ ವೃದ್ಧಿಕ್ರಮವೂ ಹೀಗೆಯೇ ಇರುವುದೆಂದು ತಿಳಿಯುವುದ ಕ್ಕಾಗುವುದಿಲ್ಲ.

೨೮. ಚಿದ್ರೂಪಳಾದ ಪರಮೇಶ್ವರಿಯೇ ಶಿವನ ಶಕ್ತಿಯರೂಪದಿಂದ ಇದ್ದು ಕೊಂಡು ಪರಾಶಕ್ತಿಯಾಗಿ ಆಜ್ಞಾರೂಪದಿಂದ ಇರುವಳು. ಎಲ್ಲಕ್ಕೂ ಕಾರಣಳಾದ ಈ ಶಕ್ತಿಯು ಎಲ್ಲವನ್ನೂ ಶಿವನಿಗೆ ಅಧೀನವನ್ನಾಗಿ ಮಾಡುತ್ತಿರುವಳು.

೨೯-೩೦. ವಸ್ತುಸ್ಥಿತಿಯಿಂದ ವಿಚಾರಮಾಡಿದಲ್ಲಿ ಆತ್ಮನಿಗೆ ಈ ಮಾಯಾ ಸಂಬಂಧವಿಲ್ಲ. ಮಾಯಾ ಸಂಬಂಧದಿಂದ ಉಂಟಾದ ವಿಕಾರವೂ ಇಲ್ಲ. ಬಂಧವೂ, ಮೋಕ್ಷವೂ, ಇಲ್ಲ. ಈ ಶಕ್ತಿಯು ಆಯಾಯಾ ಪ್ರಾಣಿಗಳಿಗೆ ಆಯಾಯಾ ಅಭಿ ಪ್ರಾಯಗಳನ್ನು ಅವುಗಳ ಮನಸ್ಸಿನಲ್ಲಿ ಹುಟ್ಟಿಸಿ ಆ ಮೂಲಕ ಬಂಧ ಮುಕ್ತಿಗಳನ್ನು ಉಂಟುಮಾಡುವಳು. ಈ ಪರಾಶಕ್ತಿಯೇ, ಶಿವನು ಎಲ್ಲಕ್ಕೂ ಅಧಿಪತಿಯಾಗಿರು ವಂತೆ ಮಾಡಿ, ಆ ಶಿವನ ಅಧಿಪತ್ಯದ ಪರಾಕಾಷ್ಠದೆಶೆಯನ್ನು ತಪ್ಪದೆ ಶಿವನಿಗೆ ಉಂಟು ಮಾಡುತ್ತಿರುವಳು. ಇವಳು ಶಿವನಿಗೆ ಸಮಾನ ಧರ್ಮಿಣಿಯೆನಿಸಿರುವಳು

ಸ ತಯೈವ ಗೃಹೀ ಸಾಪಿ ತೇನೈವ ಗೃಹಿಣೀ ಸದಾ ।
ತಯೋರಪತ್ಯಂ ಯತ್ಕಾರ್ಯಂ ಪರಪ್ರಕೃತಿಜಂ ಜಗತ್ ॥ ೩೧ ॥

ಸ ಕರ್ತಾ ಕಾರಣಂ ಸೇತಿ ತಯೋರ್ಭೇದೋ ವ್ಯವಸ್ಥಿತಃ ।
ಏಕ ಏವ ಶಿವಃ ಸಾಕ್ಷಾದ್ದ್ವಿಧಾsಸೌ ಸಮುವಸ್ಥಿತಃ ॥ ೩೨ ॥

ಸ್ತ್ರೀಪುಂಸಭಾವೇನ ತಯೋರ್ಭೇದ ಇತ್ಯಪಿ ಕೇಚನ ।
ಅಪರೇ ತು ಪರಾ ಶಕ್ತಿಃ ಶಿವಸ್ಯ ಸಮವಾಯಿನೀ ॥ ೩೩ ॥

ಪ್ರಭೇವ ಭಾನೋಶ್ಚಿದ್ರೂಪಾ ಭಿನ್ನೈವೇತಿ ವ್ಯವಸ್ಥಿತಿಃ ।
ತಸ್ಮಾಚ್ಛಿವಃ ಪರೋ ಹೇತುಸ್ತಸ್ಯಾಜ್ಞಾ ಪರಮೇಶ್ವರೀ ॥ ೩೪ ॥

ತಯೈವ ಪ್ರೇರಿತಾ ಶೈವೀ ಮೂಲಪ್ರಕೃತಿರವ್ಯಯಾ ।
ಮಹಾಮಾಯಾ ಚ ಮಾಯಾ ಚ ಪ್ರಕೃತಿಸ್ತ್ರಿಗುಣೇತಿ ಚ ॥ ೩೫ ॥

---

೩೧-೩೪. ಶಿವನು ಆ ಶಕ್ತಿಯಿಂದ ಕೂಡಿ ಗೃಹಸ್ಥನಾಗಿರುವನು. ಈ ಶಕ್ತಿಯು ಆ ಶಿವನಿಂದ ಯಾವಾಗಲೂ ಗೃಹಿಣಿಯಾಗಿರುವಳು. ಎಂದರೆ ಶಿವನು ಪತಿಯಾಗಿಯೂ ಶಕ್ತಿಯು ಪತ್ನಿಯಾಗಿಯೂ ಇರುವುದರಿಂದ ಅವರಿಗೆ ಪತಿಪತ್ನೀಭಾವವಿರುವುದೆಂದು ತಿಳಿಯಬೇಕು. ಜಗತ್ತೇ ಮೊದಲಾದ ಕಾರ್ಯಗಳೆಲ್ಲವೂ ಇವರಿಬ್ಬರಿಂದಲೇ ಉಂಟಾಗಿರುವುದು. ಶಿವನು ಈ ಜಗತ್ತನ್ನು ನಿರ್ಮಿಸುವುದೇ ಮೊದಲಾದ ಕಾರ್ಯಗಳನ್ನು ಮಾಡುವನು. ಈ ಕಾರ್ಯವನ್ನು ಮಾಡುವಾಗ ಈ ಶಕ್ತಿಯು ಕಾರಣವು. (ಸಹಾಯಕವು) ಇವರಿಬ್ಬರಿಗೂ ಇಷ್ಟೇ ಭೇದವೆಂದು ನಿರ್ಣಯವಾಗಿರುವುದು. ಕೆಲವರು ಶಿವನೊಬ್ಬನೇಕಾರಣ, ಕರ್ತೃ ಎಂಬ ಎರಡು ಭೇದದಿಂದ ಇರುವನೆಂತಲೂ, ಇದರಲ್ಲಿ-ಸ್ತ್ರೀ ರೂಪವೇ ಶಕ್ತಿಯು, ಪುಂ ರೂಪವೇ ಶಿವನೆಂತಲೂ, ಇಷ್ಟೇ ಭೇದವು ಇವರಿಬ್ಬರಿಗೆ ಇರುವುದೆಂತಲೂ ಹೇಳುವರು. ಇನ್ನು ಕೆಲವರು ಪರಾಶಕ್ತಿಯು ಸೂರ್ಯನಿಗೆ ಇರುವ ಪ್ರಭೆಯಂತೆ, ಚಿದ್ರೂಪಳಾಗಿ ಬೇರೆಯಾಗಿದ್ದಾಗ್ಯೂ ಶಿವನನ್ನು ಎಡಬಿಡದೆ ನಿತ್ಯವಾಗಿ ಶಿವನಲ್ಲಿರುವಳೆಂತಲೂ ಇದು ನಿಶ್ಚಿತವಾಗಿ ವ್ಯವಸ್ಥಿತವಾಗಿರುವುದೆಂತಲೂ ಹೇಳುವರು. ಆದ್ದರಿಂದ ಶಿವನೇ ಎಲ್ಲಕ್ಕೂ ಮುಖ್ಯ ಕಾರಣವಾಗಿರುವನು. ಪರಮೇಶ್ವರಿಯಾದ ಶಕ್ತಿಯೇ ಅವನ ಆಜ್ಞಾರೂಪದಿಂದ ಇರುವಳು.

೩೫-೩೭. ಶಿವನ ಆಜ್ಞಾರೂಪಳಾದ ಆ ಪರಾಶಕ್ತಿಯಿಂದಲೇ ಪ್ರೇರಿತಳಾಗಿ ನಾಶರಹಿತಳಾದ ಮೂಲಪ್ರಕೃತಿಯು ಮಹಾಮಾಯಾ, ಮಾಯಾ, ಸತ್ತ್ವರಜಸ್ತ

**ತ್ರಿವಿಧಾ ಕಾರ್ಯಭೇದೇನ ಸಾ ಪ್ರಸೂತೇ ಷಡಧ್ವನಃ ।**
**ಸಾ ವಾಗರ್ಥಮಯಶ್ಚಾಧ್ವಾ ಷಡ್ವಿಧೋ ನಿಖಿಲಂ ಜಗತ್ ॥ ೩೭ ॥**

**ಅಸ್ಯೈವ ವಿಸ್ತರಂ ಪ್ರಾಹುಃ ಶಾಸ್ತ್ರಜಾತಮಶೇಷತಃ ॥ ೩೮ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ**
**ಪೂರ್ವಭಾಗೇ ವಾಗರ್ಥಾತ್ಮಕತತ್ತ್ವವರ್ಣನಂ**
**ನಾಮೈಕೋನತ್ರಿಂಶೋಽಧ್ಯಾಯಃ**



ಮಸ್ಸುಗಳೆಂಬ ತ್ರಿಗುಣಗಳಿಂದ ಕೂಡಿದ ಪ್ರಕೃತಿ ಎಂಬ ಮೂರು ಭೇದವುಳ್ಳವಳಾಗಿ ತನ್ನ ಕಾರ್ಯರೂಪದಿಂದ ಇರುವ ಬೇರೆ ಬೇರೆಯಾದ ಆರು ಅಧ್ವಗಳನ್ನೂ ನಿರ್ಮಿಸಿರುವಳು. ಶಬ್ದಾರ್ಥಮಯವಾಗಿರುವ ಈ ಷಡಧ್ವಗಳೇ ಎಲ್ಲಾ ಜಗದ್ರೂಪದಿಂದ ಇರುವವು. ಎಲ್ಲಾ ಶಾಸ್ತ್ರಗಳೂ ಈ ವಿಚಾರವನ್ನೇ ನಾನಾವಿಧವಾಗಿ ವಿಸ್ತರಿಸಿ ಹೇಳುವವು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯ ಸಂಹಿತೆಯ ಪೂರ್ವಭಾಗದಲ್ಲಿ
ವಾಗರ್ಥಾತ್ಮಕತತ್ತ್ವವರ್ಣನವೆಂಬ ಇಪ್ಪತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ತ್ರಿಂಶೋಽಧ್ಯಾಯಃ

॥ ಋಷಯ ಊಚುಃ ॥

ಚರಿತಾನಿ ವಿಚಿತ್ರಾಣಿ ಗೃಹ್ಯಾಣಿ ಗಹನಾನಿ ಚ ।
ದುರ್ವಿಜ್ಞೇಯಾನಿ ದೇವೈಶ್ಚ ಮೋಹಯಂತಿ ಮನಾಂಸಿ ನಃ ॥ ೧ ॥

ಶಿವಯೋಸ್ತತ್ತ್ವಸಂಬಂಧೇ ನ ದೋಷ ಉಪಲಭ್ಯತೇ ।
ಚರಿತ್ರೈಃ ಪ್ರಾಕೃತೋ ಭಾವಸ್ತಯೋರಪಿ ವಿಭಾವ್ಯತೇ ॥ ೨ ॥

## ಮೂವತ್ತನೆಯ ಅಧ್ಯಾಯವು

೧. ಋಷಿಗಳಿಂತೆಂದರು.—ಎಲೈ ವಾಯುದೇವನೇ ನೀನು ಹೇಳಿದ ಈ ಚರಿತ್ರೆಗಳು ಅವಶ್ಯವಾಗಿ ಕೇಳಬೇಕಾಗಿರುವವು. ದೇವತೆಗಳಿಗೂ ತಿಳಿಯಲಶಕ್ಯಗಳಾಗಿದ್ದುಕೊಂಡು ಬಹಳ ರಹಸ್ಯವಾಗಿರುವುದಲ್ಲದೆ ಮನಸ್ಸಿಗೆ ಆಶ್ಚರ್ಯವನ್ನು ಉಂಟುಮಾಡುತ್ತಿರುವವು.

೨. ಪಾರ್ವತೀ ಪರಮೇಶ್ವರರಿಗೆ ತತ್ತ್ವಸಂಬಂಧವು ಉಂಟಾಗಿರುವ ವಿಷಯದಲ್ಲಿ ಯಾವ ದೋಷವೂ ಇಲ್ಲವು. ಅವರ ಚರಿತ್ರೆಗಳಿಂದ ಅವರಿಗೆ ಪ್ರಕೃತಿ ಸಂಬಂಧವಾದ ಭಾವವನ್ನು ಕಲ್ಪಿಸಿಕೊಳ್ಳಲು ಯಾವ ಅಡ್ಡಿಯೂ ಇಲ್ಲ. ಪ್ರಕೃತಿ ಸಂಬಂಧವಾದ ವಿಧವಿಧ ರೂಪಗಳನ್ನು ಅವರು ಇಚ್ಛೆಯಿಂದಲೇ ಧರಿಸಲು ಸಮರ್ಥರಾಗಿರುವರು.

**ಬ್ರಹ್ಮಾದಯೋಽಪಿ ಲೋಕಾನಾಂ ಸೃಷ್ಟಿಸ್ಥಿತ್ಯಂತಹೇತವಃ ।**
**ನಿಗ್ರಹಾನುಗ್ರಹೌ ಪ್ರಾಪ್ಯ ಶಿವಸ್ಯ ವಶವರ್ತಿನಃ ॥ ೩ ॥**

**ಶಿವಃ ಪುನರ್ನ ಕಸ್ಯಾಪಿ ನಿಗ್ರಹಾನುಗ್ರಹಾಸ್ಪದಂ ।**
**ಅತೋಽನಾಯತ್ತಮೈಶ್ವರ್ಯಂ ತಸ್ಯೈವೇತಿ ವಿನಿಶ್ಚಿತಂ ॥ ೪ ॥**

**ಯದ್ಯೇವಮೀದೃಶೈಶ್ವರ್ಯಂ ತತ್ತು ಸ್ವಾತಂತ್ರ್ಯಲಕ್ಷಣಂ ।**
**ಸ್ವಭಾವಸಿದ್ಧಂ ಚೈತಸ್ಯ ಮೂರ್ತಿಮತ್ತಾಸ್ಪದಂ ಭವೇತ್ ॥ ೫ ॥**

**ನ ಮೂರ್ತಿಶ್ಚ ಸ್ವತಂತ್ರಸ್ಯ ಘಟತೇ ಮೂಲಹೇತುನಾ ।**
**ಮೂರ್ತೇರಪಿ ಚ ಕಾರ್ಯತ್ವಾತ್ತತ್ಸಿದ್ಧಿಃ ಸ್ಯಾದಹೈತುಕೀ ॥ ೬ ॥**

**ಸರ್ವತ್ರ ಪರಮೋ ಭಾವೋಽಪರಮಶ್ಚಾನ್ಯ ಉಚ್ಯತೇ ।**
**ಪರಮಾಪರಮೌ ಭಾವೌ ಕಥಮೇಕತ್ರ ಸಂಗತೌ ॥ ೭ ॥**

---

೩-೪. ಬ್ರಹ್ಮನೇ ಮೊದಲಾದವರು ಈ ಲೋಕಗಳೆಲ್ಲಕ್ಕೂ ಸೃಷ್ಟಿ, ಸ್ಥಿತಿ, ನಾಶ ಇವುಗಳನ್ನು ಮಾಡಲು ಕಾರಣವಾಗಿರುವರು. ಅವರಿಗೆ ನಿಗ್ರಹಾನುಗ್ರಹ ಶಕ್ತಿಯೂ ಇರುವುದು. ಆದರೆ ಅವರು ಶಿವನಿಗೆ ಅಧೀನರಾಗಿರುವರು. ಶಿವನು ಮಾತ್ರ ಯಾರಿಗೂ ಅಧೀನವಾಗಿ ನಿಗ್ರಹ ಅನುಗ್ರಹಗಳನ್ನು ಪಡೆಯುವವನಲ್ಲ. ಈ ಕಾರಣದಿಂದ ಯಾರಿಗೂ ಅಧೀನನಾಗದೆ ಇರುವ ಐಶ್ವರ್ಯವು ಅವನಿಗೆ ಇರುತ್ತದೆ. ಎಂದು ನಿಶ್ಚಯಿಸಲ್ಪಟ್ಟಿರುವುದು.

೫ ಇತರರಿಗೆ ಅಧೀನನಾಗದೆ ಇರುವುದು ಸ್ವತಂತ್ರಕ್ಕೆ ಲಕ್ಷಣವು. ಶಿವನಿಗೆ ಈ ವಿಧವಾದ ಸ್ವತಂತ್ರವು ಸ್ವಭಾವಸಿದ್ಧವಾದುದು. ಕರ್ಮಗಳ ಫಲರೂಪವಾಗಿ ಶರೀರವನ್ನು ಪಡೆದಿರುವವರಿಗೆ ಈ ವಿಧವಾದ ಸ್ವತಂತ್ರವಿರುವುದಿಲ್ಲ.

೬. ಆಕಾರವನ್ನು (ಶರೀರವನ್ನು) ಹೊಂದಿರುವುದು ಮಲಸಂಬಂಧವುಳ್ಳವನಿಗೇ ಹೊರತು ಸ್ವತಂತ್ರನಾದವನಿಗೆ ಸಂಭವಿಸುವದಿಲ್ಲ. ಆಕಾರವನ್ನು ಹೊಂದಿರುವುದು ಕಾರ್ಯರೂಪವಾದುದು. ಕಾರಣವಿಲ್ಲದೆ ಅದು ಸಿದ್ಧಿಯಾಗಲಾರದು.

೭. ಎಲ್ಲಾ ವಿಷಯಗಳಲ್ಲಿಯೂ ಉತ್ತಮವಾದ ಮತ್ತು ದುಷ್ಟವಾದ ಅಭಿಪ್ರಾಯಗಳಿರುವವೆಂಬುದು ಅನುಭವದಲ್ಲಿರುವುದು. ಇವೆರಡೂ ಎಂದರೆ ಒಳ್ಳೆಯ ಮತ್ತು ಕೆಟ್ಟ ಭಾವಗಳು ಒಂದು ಕಡೆಯಲ್ಲಿ ಹೇಗೆ ಇರುವವು ? ಎಂದರೆ ಶುದ್ಧವಾದ ಮತ್ತು ಅಶುದ್ಧವಾದ ಭಾವಗಳು ಹೇಗೆ ಒಬ್ಬನಲ್ಲಿರುವವು ?

ನಿಷ್ಕಲೋ ಹಿ ಸ್ವಭಾವೋऽಸ್ಯ ಪರಮಃ ಪರಮಾತ್ಮನಃ ।
ಸ ಏವ ಸಕಲಃ ಕಸ್ಮಾತ್ಸ್ವಭಾವೋ ಹ್ಯವಿಪರ್ಯಯಃ ॥ ೮ ॥

ಸ್ವಭಾವೋ ವಿಪರೀತಶ್ಚೇತ್ಸ್ವತಂತ್ರಃ ಸ್ವೇಚ್ಛಯಾ ಯದಿ ।
ನ ಕರೋತಿ ಕಿಮೀಶಾನೋ ನಿತ್ಯಾನಿತ್ಯವಿಪರ್ಯಯಂ ॥ ೯ ॥

ಮೂರ್ತಾತ್ಮಾ ಸಕಲಃ ಕಶ್ಚಿತ್ಸ ಚಾನ್ಯೋ ನಿಷ್ಕಲಃ ಶಿವಃ ।
ಶಿವೇನಾಧಿಷ್ಠಿತಶ್ಚೇತಿ ಸರ್ವತ್ರ ಲಘು ಕಥ್ಯತೇ ॥ ೧೦ ॥

ಮೂರ್ತಾತ್ಮೈವ ತದಾ ಮೂರ್ತಿಃ ಶಿವಸ್ಯಾಸ್ಯ ಭವೇದಿತಿ ।
ತಸ್ಯಾಂ ಮೂರ್ತೌ ಮೂರ್ತಿಮತೋಃ ಪಾರತಂತ್ರ್ಯಂ ಹಿ ನಿಶ್ಚಿತಂ ॥ ೧೧ ॥

ಅನ್ಯಥಾ ನಿರಪೇಕ್ಷೇಣ ಮೂರ್ತಿಃ ಸ್ವೀಕ್ರಿಯತೇ ಕಥಂ ।
ಮೂರ್ತಿಸ್ವೀಕರಣಂ ತಸ್ಮಾನ್ಮೂರ್ತೌ ಸಾಧ್ಯಫಲೇಪ್ಸಯಾ ॥ ೧೨ ॥

---

೮ ಪರಮಾತ್ಮನಾದ ಶಿವನ ಭಾವವು ನಿಷ್ಕಲವೆನಿಸಿಕೊಂಡು ಉತ್ತಮವಾಗಿರುವುದು. ಅದು ಅವನ ಸ್ವಭಾವವಾಗಿರುವುದು. ವ್ಯತ್ಯಾಸವನ್ನು ಹೊಂದದೆ ಇರುವ ಅವನ ಸ್ವಭಾವವು ಹೇಗೆ ಸಕಲವಾದೀತು? ಅವನ ಸ್ವಭಾವವು ಸಕಲ, ಮತ್ತು ನಿಷ್ಕಲ ಇವೆರಡೂ ಆಗಿರುವಪಕ್ಷದಲ್ಲಿ ಅವನು ತನ್ನ ಇಚ್ಛೆಯಿಂದಲೇ ಸ್ವತಂತ್ರನಾಗಿದ್ದುಕೊಂಡು ಅವನು ನಿತ್ಯ ಮತ್ತು ಅನಿತ್ಯ ಪದಾರ್ಥಗಳ ವ್ಯತ್ಯಾಸವನ್ನು ಹೇಗೆ ಮಾಡುವನು ?

೯-೧೦. ಮೂರ್ತಿಯುಳ್ಳವನಾದ ಸಕಲನಾದ ಶಿವನೊಬ್ಬನು ಬೇರೆ ಇರುವನು ಎಂದೂ, ಹೀಗೆ ಇರುವ ಶಿವನು ಎಲ್ಲಕ್ಕೂ ಆಧಾರವಾಗಿರುವನು ಎಂದೂ ಹೇಳುವುದಾದರೆ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವ ಶಿವನಿಗೆ ಲಾಘವವು ಉಂಟಾಗುವುದು.

೧೧. ಶಿವನಿಗೆ ಆಕಾರವಿದ್ದೇ ಇರುವುದೆಂದು ಹೇಳುವುದಾದರೆ ಆಕಾರವುಳ್ಳವನಿಗೆ ಸ್ವಾತಂತ್ರ್ಯವಿರುವುದಿಲ್ಲ. ಅವನಿಗೆ ಪರಾಧೀನತೆಯು ತಪ್ಪಿದ್ದಲ್ಲ.

೧೨. ಶಿವನು ಆಕಾರವನ್ನು ತನ್ನ ಸ್ವಂತ ಇಚ್ಛೆಯಿಂದ ಸ್ವೀಕರಿಸುವನು ಎಂದರೆ ಯಾವ ಅಪೇಕ್ಷೆಯೂ ಇಲ್ಲದೆ ಪೂರ್ಣಕಾಮನಾದವನಿಗೆ ಶರೀರ ಸ್ವೀಕಾರವು ಏತಕ್ಕೆ ? ಯಾವುದಾದರೊಂದು ಕಾರ್ಯಸಾಧನೆಗಾಗಿ ತಾನೇ ಶರೀರಧಾರಣೆ ಮಾಡು

**ನ ಹಿ ಸ್ವೇಚ್ಛಾಶರೀರತ್ವಂ ಸ್ವಾತಂತ್ರ್ಯೋಪಪದ್ಯತೇ ।**
**ಸ್ವೇಚ್ಛೈವ ತಾದೃಶೀ ಪುಂಸಾಂ ಯಸ್ಮಾತ್ಕರ್ಮಾನುಸಾರಿಣೀ ॥ ೧೩ ॥**

**ಸ್ವೀಕರ್ತುಂ ಸ್ವೇಚ್ಛಯಾ ದೇಹಂ ಹಾತುಂ ಚ ಪ್ರಭವಂತ್ಯುತ ।**
**ಬ್ರಹ್ಮಾದಯಃ ಪಿಶಾಚಾಂತಾಃ ಕಿಂ ತೇ ಕರ್ಮಾತಿವರ್ತಿನಃ ॥ ೧೪ ॥**

**ಇಚ್ಛಯಾ ದೇಹನಿರ್ಮಾಣಮಿಂದ್ರಜಾಲೋಪಮಂ ವಿದುಃ ।**
**ಅಣಿಮಾದಿಗುಣೈಶ್ವರ್ಯವಶೀಕಾರಾನತಿಕ್ರಮಾತ್ ॥ ೧೫ ॥**

ವುದು? ಆದ್ದರಿಂದ ಆಯಾಯಾ ಆಕಾರದಲ್ಲಿ ಹೊಂದಬೇಕಾದ ಫಲವನ್ನು ಸಾಧಿಸುವುದಕ್ಕಾಗಿಯೇ ಆಕಾರವನ್ನು ಹೊಂದಬೇಕಾಗಿ ಇರುವುದು.

೧೩. ತನ್ನ ಇಚ್ಛೆಯಿಂದ ಶರೀರವನ್ನು ಹೊಂದುವುದು ಸ್ವತಂತ್ರತೆಯ ಲಕ್ಷಣವಲ್ಲ ಏಕೆಂದರೆ ಪ್ರಪಂಚದಲ್ಲಿ ಪುರುಷರಿಗೆ ಅವರವರ ಕರ್ಮಾನುಸಾರವಾಗಿ ಆಯಾಯಾ ಶರೀರಗಳನ್ನು ಧರಿಸಲು ಇಚ್ಛೆಯುಂಟಾಗುವುದು. ಎಂದರೆ ಮನಸ್ಸು ಬಂದಂತೆ ಶರೀರಸ್ವೀಕಾರವು ಸಾಧ್ಯವಿಲ್ಲ. ಅದು ಕರ್ಮಾನುಸಾರವಾಗಿಯೇ ಆಗುವುದು. ಆದುದರಿಂದ ಮನುಷ್ಯನ ಮನಸ್ಸಿನಲ್ಲಿ ಉಂಟಾಗುವ ಯಾವ ಭಾವನೆಯೇ ಆಗಲಿ ಕರ್ಮಾನುಸಾರವಾಗಿರುವುದು. "ಬುದ್ಧಿಃ ಕರ್ಮಾನುಸಾರಿಣೀ" ಎಂದು ವಚನವಿರುವುದು.

೧೪. ಇಚ್ಛೆಯು ಕರ್ಮಕ್ಕನುಸಾರವಾಗಿ ಹುಟ್ಟದೆ ಇದ್ದಲ್ಲಿ ಎಲ್ಲರೂ ಅವರವರ ಇಚ್ಛಾನುಸಾರವಾಗಿ ಶರೀರವನ್ನು ಹೊಂದುವುದಕ್ಕೂ ಅದನ್ನು ಬಿಡುವುದಕ್ಕೂ ಸಮರ್ಥರಾದಾರು. ಬ್ರಹ್ಮನಿಂದ ಹಿಡಿದು ಪಿಶಾಚಿಗಳವರೆಗೂ ಇರುವ ಸಮಸ್ತ ಪ್ರಾಣಿಗಳೂ ಕರ್ಮವನ್ನು ಮೀರಿ ಇರುವುದಕ್ಕೆ ಸಾಧ್ಯವೇ ?

೧೫. ಯೋಗಾಭ್ಯಾಸದಿಂದ ಅಣಿಮಾದಿ ಅಷ್ಟಸಿದ್ಧಿಗಳನ್ನು ವಶಪಡಿಸಿಕೊಂಡು ಅನಂತರ ;ತನ್ನ ಇಚ್ಛಾನುಗುಣವಾಗಿ ಶರೀರವನ್ನು ಹೊಂದಬಹುದು. ಇಲ್ಲದಿದ್ದರೆ ತಾನು ಬೇರೆಯ ರೀತಿಯಿಂದ ಇಚ್ಛಾನುಗುಣವಾಗಿ ಶರೀರವನ್ನು ಹೊಂದುವುದೂ ಅದನ್ನು ಸೃಷ್ಟಿಮಾಡುವುದೂ ಕೂಡ (ಇಂದ್ರಜಾಲ) ಮೋಸಗಾರಿಕೆಯಾಗಿ ಇರುವುದೇ ಹೊರತು ವಾಸ್ತವವಾಗಿರುವುದಿಲ್ಲ.

ವಿಶ್ವರೂಪಂ ದಧದ್ವಿಷ್ಣುರ್ದಧೀಚೇನ ಮಹರ್ಷಿಣಾ ।
ಯುಧ್ಯತಾ ಸಮುಪಾಲಬ್ಧಸ್ತದ್ರೂಪಂ ದಧತಾ ಸ್ವಯಂ ॥ ೧೬ ॥

ಸರ್ವಸ್ಮಾದಧಿಕಸ್ಯಾಪಿ ಶಿವಸ್ಯ ಪರಮಾತ್ಮನಃ ।
ಶರೀರವತ್ತಯಾನ್ಯಾತ್ಮಸಾಧರ್ಮ್ಯಂ ಪ್ರತಿಭಾತಿ ನಃ ॥ ೧೭ ॥

ಸರ್ವಾನುಗ್ರಾಹಕಂ ಪ್ರಾಹುಶ್ಶಿವಂ ಪರಮಕಾರಣಂ ।
ಸ ನಿಗೃಹ್ಣಾತಿ ದೇವಾನಾಂ ಸರ್ವಾನುಗ್ರಾಹಕಃ ಕಥಂ ॥ ೧೮ ॥

ಚಿಚ್ಛೇದ ಬಹುಶೋ ದೇವೋ ಬ್ರಹ್ಮಣಃ ಪಂಚಮಂ ಶಿರಃ ।
ಶಿವನಿಂದಾಂ ಪ್ರಕುರ್ವಂತಂ ಪುತ್ರೇತಿ ಕುಮತೇರ್ಹಠಾತ್ ॥ ೧೯ ॥

ವಿಷ್ಣೋರಪಿ ನೃಸಿಂಹಸ್ಯ ರಭಸಾ ಶರಭಾಕೃತಿಃ ।
ಬಿಭೇದ ಪದ್ಭ್ಯಾಮಾಕ್ರಮ್ಯ ಹೃದಯಂ ನಖರೈಃ ಖರೈಃ ॥ ೨೦ ॥

---

೧೬. ವಿಷ್ಣುವು ವಿಶ್ವರೂಪವನ್ನು ಹೊಂದಿ ದಧೀಚಿ ಋಷಿಯೊಡನೆ ಯುದ್ಧವನ್ನು ಮಾಡುತ್ತಿದ್ದನು. ಆಗ ದಧೀಚಿ ಋಷಿಯೂ ಸಹ ಅಂತಹ ರೂಪವನ್ನೇ ಕೈಗೊಂಡು ಯುದ್ಧಮಾಡಿದನು.

೧೭. ಎಲ್ಲಕ್ಕಿಂತಲೂ ಅಧಿಕನಾಗಿರುವ ಪರಮಾತ್ಮನಾದ ಶಿವನು ಶರೀರವನ್ನು ಹೊಂದಿರುವುದು ನಮ್ಮಂತಹ ಶರೀರವನ್ನು ಹೊಂದಿರುವ ಇನ್ನೊಂದು ಪ್ರಾಣಿಗೆ ಸಮವೆಂದು ಕಾಣುವುದೇ ಹೊರ್ತು ಅವನ ಹೆಚ್ಚಿಗೆಯನ್ನು ತೋರಿಸುವದಿಲ್ಲ.

೧೮. ಎಲ್ಲಕ್ಕೂ ಉತ್ಕೃಷ್ಟನಾಗಿರುವ ಶಿವನನ್ನು ಎಲ್ಲಕ್ಕೂ ಕಾರಣನಾದವನೆಂತಲೂ, ಎಲ್ಲರಿಗೂ ಅನುಗ್ರಹ ಮಾಡುವವನೆಂತಲೂ ಹೇಳುವರು. ಅವನು ಕೆಲವು ಸಂದರ್ಭಗಳಲ್ಲಿ ದೇವತೆಗಳನ್ನು ನಿಗ್ರಹ ಮಾಡುವವನಾದುದರಿಂದ ಎಲ್ಲರಿಗೂ ಅನುಗ್ರಹವನ್ನು ಮಾಡುವವನು ಎಂದು ಹೇಗೆ ಹೇಳಲಾದೀತು ?

೧೯. ಶಿವನನ್ನು ತನ್ನ ಮಗನೆಂದು ಹೇಳುತ್ತಾ ಶಿವನಿಂದೆಯನ್ನು ಬಹಳವಾಗಿ ಮಾಡುತ್ತಿದ್ದ ದುಷ್ಟ ಬುದ್ಧಿಯಾದ ಬ್ರಹ್ಮನ ಐದನೆಯ ತಲೆಯನ್ನು ಅನೇಕ ಸಾರಿ ಶಿವನು ಕತ್ತರಿಸಿ ಹಾಕಿರುವನು.

೨೦. ಶರಭನ ಆಕಾರವನ್ನು ಧರಿಸಿದ ಶಿವನು ನರಸಿಂಹಾಕಾರದಿಂದಿರುವ ವಿಷ್ಣುವನ್ನು ಕಾಲಿನಿಂದ ಮೆಟ್ಟಿಕೊಂಡು ತನ್ನ ಹರಿತವಾದ ಉಗರುಗಳಿಂದ ಅವನ ಎದೆಯನ್ನು ಸೀಳಿ ಹಾಕಿರುವನು

**ದೇವಸ್ತ್ರೀಷು ಚ ದೇವೇಷು ದಕ್ಷಸ್ಯಾಧ್ವರಕಾರಣಾತ್ ।**
**ವೀರೇಣ ವೀರಭದ್ರೇಣ ನ ಹಿ ಕಶ್ಚಿದದಂಡಿತಃ ॥ ೨೧ ॥**

**ಪುರತ್ರಯಂ ಚ ಸಸ್ತ್ರೀಕಂ ಸದೈತ್ಯಂ ಸಹ ಬಾಲಕೈಃ ।**
**ಕ್ಷಣೇನೈಕೇನ ದೇವೇನ ನೇತ್ರಾಗ್ನೇರಿಂಧನೀಕೃತಂ ॥ ೨೨ ॥**

**ಪ್ರಜಾನಾಂ ರತಿಹೇತುಶ್ಚ ಕಾಮೋ ರತಿಪತಿಸ್ಸ್ವಯಂ ।**
**ಕ್ರೋಶತಾಮೇವ ದೇವಾನಾಂ ಹುತೋ ನೇತ್ರಹುತಾಶನೇ ॥ ೨೩ ॥**

**ಗಾವಶ್ಚ ಕಶ್ಚಿದ್ದುಗ್ಧೌಘಂ ಶ್ರವಂತ್ಯೋ ಮೂರ್ಧ್ನಿ ಖೇಚರಾಃ ।**
**ಸರುಷಾ ಪ್ರೇಕ್ಷ್ಯ ದೇವೇನ ತತ್ಕ್ಷಣೇ ಭಸ್ಮಸಾತ್ಕೃತಃ ॥ ೨೪ ॥**

**ಜಲಂಧರಾಸುರೋ ದೀರ್ಣಶ್ಚಕ್ರೀಕೃತ್ಯ ಜಲಂ ಪದಾ ।**
**ಬಧ್ವಾನಂತೇನ ಯೋ ವಿಷ್ಣುಂ ಚಿಕ್ಷೇಪ ಶತಯೋಜನಂ ॥ ೨೫ ॥**

೨೧. ದಕ್ಷಬ್ರಹ್ಮನ ಯಜ್ಞವಿಧ್ವಂಸನ ಸಂದರ್ಭದಲ್ಲಿ ಶೂರನಾದ ವೀರಭದ್ರನು ದೇವತಾಸ್ತ್ರೀಯರನ್ನೂ, ದೇವತೆಗಳನ್ನೂ, ಯಾರನ್ನು ತಾನೆ ಶಿಕ್ಷೆಮಾಡದೆ ಬಿಟ್ಟಿರುವನೇ ?

೨೨. ಎಳೆಯ ಮಕ್ಕಳು, ಹೆಂಗಸರು, ದೈತ್ಯರು ಮೊದಲಾದವರಿಂದ ನಿಬಿಡವಾದ ಪುರತ್ರಯಗಳನ್ನೂ ಅವುಗಳಲ್ಲಿದ್ದ ರಾಕ್ಷಸರನ್ನೂ ಒಟ್ಟಿಗೇ ಸೇರಿಸಿ ಶಿವನು ತನ್ನ ನೇತ್ರಾಗ್ನಿಯಿಂದ ಅವರೆಲ್ಲರನ್ನೂ ಒಂದೇ ಕ್ಷಣದಲ್ಲಿ ಸುಟ್ಟು ಭಸ್ಮಮಾಡಿದನು.

೨೩. ಪ್ರಜೆಗಳು ಸುಖವನ್ನು ಹೊಂದಲು ಕಾರಣವಾಗಿರುವ, ರತಿಗೆ ಪತಿಯಾದ ಕಾಮದೇವನನ್ನು, ದೇವತೆಗಳು ಬೇಡಬೇಡವೆಂದು ಕೂಗುತ್ತಿದ್ದಾಗ್ಯೂ ಅದನ್ನು ಗಣನೆಗೆ ತಾರದೆ ತನ್ನ ಕಣ್ಣಿನ ಬೆಂಕಿಯಿಂದ ಸುಟ್ಟಿರುವನು.

೨೪. ಬಹಳ ಹಾಲನ್ನು ಕೊಡುವ ಅನೇಕ ಹಸುಗಳು ಗೋಲೋಕದಲ್ಲಿರುವುವು. ಅವು ರುದ್ರ ಲೋಕಕ್ಕಿಂತಲೂ ಮೇಲೆ ಇರುವಕಾರಣ ಶಿವನ ತಲೆಯಮೇಲೆ ಇವೆ ಎಂದು ಶಿವನ ಕೋಪಕ್ಕೆ ಪಾತ್ರವಾಗಿ ಅವನ ಕಣ್ಣಿನಿಂದ ಸುಟ್ಟುಹೋಗಿರುವುವು.

೨೫. ಜಲಂಧರನೆಂಬ ಅಸುರನು ತನ್ನ ಕಾಲಿನಿಂದ ನೀರನ್ನೆಲ್ಲವನ್ನೂ ಚಕ್ರಾಯುಧವನ್ನಾಗಿ ಮಾಡಿಕೊಂಡು ಅದರಿಂದ ವಿಷ್ಣುವನ್ನು ಅವನ ಶಯ್ಯೆಯಾದ ಅನಂತನೊಡನೆ ನೂರುಯೋಜನ ದೂರದವರೆಗೂ ಎಸೆದುಬಿಟ್ಟನು.

ತಮೇವ ಜಲಸಂಧಾಯೀ ಶೂಲೇನೈವ ಜಘಾನ ಸಃ ।
ತಚ್ಚಕ್ರಂ ತಪಸಾ ಲಬ್ಧ್ವಾ ಲಬ್ಧವೀರ್ಯೋ ಹರಿಸ್ಸದಾ ॥ ೨೬ ॥

ಜಿಘಾಂಸತಾಂ ಸುರಾರೀಣಾಂ ಕುಲಂ ನಿರ್ಘೃಣಚೇತಸಾಂ ।
ತ್ರಿಶೂಲೇನಾಂಧಕಸ್ಯೋರಃ ಶಿಖಿನೈವೋಪತಾಪಿತಂ ॥ ೨೭ ॥

ಕಂಠಾತ್ಕಾಲಾಂಗನಾಂ ಸೃಷ್ಟ್ವಾ ದಾರಕೋಽಪಿ ನಿಪಾತಿತಃ ।
ಕೌಶಿಕೀಂ ಜನಯಿತ್ವಾ ತು ಗೌರ್ಯಾಸ್ತ್ವಕ್ಕೋಶಗೋಚರಾಂ ॥ ೨೮ ॥

ಶುಂಭಸ್ಸಹ ನಿಶುಂಭೇನ ಪ್ರಾಪಿತೋ ಮರಣಂ ರಣೇ ।
ಶ್ರುತಂ ಚ ಮಹದಾಖ್ಯಾನಂ ಸ್ಕಾಂದೇ ಸ್ಕಂದಸಮಾಶ್ರಯಂ ॥ ೨೯ ॥

ವಧಾರ್ಥೇ ತಾರಕಾಖ್ಯಸ್ಯ ದೈತ್ಯೇಂದ್ರಸ್ಯೇಂದ್ರವಿದ್ವಿಷಃ ।
ಬ್ರಹ್ಮಣಾಭ್ಯರ್ಥಿತೋ ದೇವೋ ಮಂದರಾಂತಃಪುರಂ ಗತಃ ॥ ೩೦ ॥

೨೬. ಶಿವನು ತಾನೂ ನೀರನ್ನು ಚಕ್ರಾಯುಧದಂತೆ ಸೇರಿಸಿ ಆ ಜಲಂಧರನನ್ನು ತ್ರಿಶೂಲಾಯುಧದಿಂದ ಕೊಂದು ಹಾಕಿದನು, ಆಗ ವಿಷ್ಣುವು ಆ ಚಕ್ರಾಯುಧಕ್ಕಾಗಿ ತಪಸ್ಸನ್ನುಮಾಡಿ ಅದನ್ನು ಹೊಂದಿ ಯಾವಾಗಲೂ ಅದರಿಂದ ಶಕ್ತಿವಂತನಾಗಿರುವನು.

೨೭. ಶಿವನು, ಕೊಂಚವೂ ದಯವಿಲ್ಲದ ಮನಸ್ಸಿನಿಂದ ದೇವಶತ್ರುಗಳಾದ ರಾಕ್ಷಸರ ವಂಶವನ್ನೂ ಮತ್ತು ಅಂಧಕಾಸುರನ ಎದೆಯನ್ನೂ ತನ್ನ ತ್ರಿಶೂಲಾಯುಧದಿಂದ ಸೀಳಿ ಬೆಂಕಿಯಿಂದ ಸುಟ್ಟು ನಾಶವಾಗುವಂತೆ ಮಾಡಿದನು.

೨೮-೨೯. ಶಿವನು ತನ್ನ ಕಂಠದಿಂದ ಕಪ್ಪಾಗಿರುವ ಓರ್ವ ಸ್ತ್ರೀಯನ್ನು ನಿರ್ಮಿಸಿ ಎಳೆಯ ಮಗುವನ್ನು ನಾಶಮಾಡಿದನು. ಗೌರೀದೇವಿಯಾದ ಪಾರ್ವತಿಯ ಚರ್ಮಕೋಶದಿಂದ ಕೌಶಿಕೀ ಎಂಬುವಳನ್ನು ನಿರ್ಮಾಣಮಾಡಿ ಅವಳಿಂದ ಶುಂಭ ನಿಶುಂಭರೆಂಬ ಇಬ್ಬರು ರಾಕ್ಷಸರನ್ನು ಯುದ್ಧದಲ್ಲಿ ನಾಶಮಾಡಿಸಿದನು. ಸ್ಕಾಂದಪುರಾಣದಲ್ಲಿ ಸ್ಕಂದನಿಗೆ ಸಂಬಂಧಪಟ್ಟ ಚರಿತ್ರೆಯೆಲ್ಲವೂ ವಿಸ್ತಾರವಾಗಿ ಹೇಳಲ್ಪಟ್ಟಿರುವುದು.

೩೦. ಇಂದ್ರನನ್ನು ದ್ವೇಷಮಾಡಿ ಅವನನ್ನು ತೊಂದರೆಪಡಿಸುತ್ತಿದ್ದ ರಾಕ್ಷಸಾಧಿಪತಿಯಾದ ತಾರಕಾಸುರನನ್ನು ನಾಶಮಾಡುವುದಕ್ಕಾಗಿ ದೇವದೇವನಾದ ಶಿವನನ್ನು ಬ್ರಹ್ಮನು ಪ್ರಾರ್ಥಿಸಲು, ಶಿವನು ಮಂದರ ಪರ್ವತದಲ್ಲಿದ್ದ ಪಾರ್ವತಿಯ ಅಂತಃಪುರವನ್ನು ಪ್ರವೇಶಿಸಿದನು.

ವಿಹೃತ್ಯ ಸುಚಿರಂ ದೇವ್ಯಾ ವಿಹಾರಾತ್ಯತಿಪ್ರಸಂಗತಃ ।
ರಸಾಂ ರಸಾತಲಂ ನೀತಾಮಿವ ಕೃತ್ವಾಭಿಧಾಂ ತತಃ ॥ ೩೧ ॥

ದೇವೀಂ ಚ ವಂಚಯಂಸ್ತಸ್ಯಾಂ ಸ್ವವೀರ್ಯಮತಿದುರ್ವಹಂ ।
ಅವಿಸೃಜ್ಯ ವಿಸೃಜ್ಯಾಗ್ನೌ ಹವಿಃ ಪೂತಮಿವಾಮೃತಂ ॥ ೩೨ ॥

ಗಂಗಾದಿಷ್ವಪಿ ನಿಃಕ್ಷಿಪ್ಯ ವಹ್ನಿದ್ವಾರಾ ತದಂಶತಃ ।
ತತ್ಸಮಾಹೃತ್ಯ ಶನಕೈಸ್ತೋಕಂ ಸ್ತೋಕಸ್ತಮಿತಸ್ತತಃ ॥ ೩೩ ॥

ಸ್ವಾಹಯಾ ಕೃತ್ತಿಕಾರೂಪಾತ್ಸ್ವಭರ್ತಾ ರಮಮಾಣಯಾ ।
ಸುವರ್ಣೀಭೂತಯಾ ನ್ಯಸ್ತಂ ಮೇರೌ ಶರವಣೇ ಕ್ವಚಿತ್ ॥ ೩೪ ॥

ಸಂದೀಪಯಿತ್ವಾ ಕಾಲೇನ ತಸ್ಯ ಭಾಸಾ ದಿಶೋ ದಶ ।
ರಂಜಯಿತ್ವಾ ಗಿರೀನ್ಸರ್ವಾನ್ಕಾಂಚನೀಕೃತ್ಯ ಮೇರುಣಾ ॥ ೩೫ ॥

---

೩೧. ಅಲ್ಲಿ ಪಾರ್ವತೀದೇವಿಯೊಡನೆ ಬಹಳ ಕಾಲದವರೆಗೂ ವಿಹರಿಸಿದನು. ಈ ವಿಹಾರದಿಂದ ಭೂಮಿಯು ಪಾತಾಳಕ್ಕೆ ಇಳಿದುಹೋಯಿತೋ ಎಂಬಂತೆ ರಸಭಾವವನ್ನು ಪ್ರದರ್ಶಿಸುತ್ತಾ ಪಾರ್ವತಿಯು ಬೆರಗಾಗುವಂತೆ ಮಾಡಿದನು.

೩೨-೩೩. ಕಡೆಗೂ ಪಾರ್ವತೀದೇವಿಗೆ ಮೋಸಮಾಡಿ ಯಾರೂ ಸಹಿಸಲ ಶಕ್ಯವಾದ ತನ್ನ ವೀರ್ಯವನ್ನು ಅವಳ ಗರ್ಭದಲ್ಲಿ ಬಿಡದೆ ಪರಿಶುದ್ಧವಾದ ಅಮೃತದಂತಿರುವ ತನ್ನ ವೀರ್ಯವನ್ನು ಅಗ್ನಿಯಲ್ಲಿ ಬಿಟ್ಟನು. ಆ ಅಗ್ನಿಯ ಮೂಲಕವಾಗಿ ಅದನ್ನು ಕೊಂಚಕೊಂಚವಾಗಿ ಭಾಗಮಾಡಿ ಅಲ್ಲಲ್ಲಿಗೆ ತರಿಸಿ ಗಂಗೆಯೇ ಮೊದಲಾದುವುಗಳಲ್ಲಿ ಮೆಲ್ಲಗೆ ಉಪಾಯದಿಂದ ಇರಿಸಿದನು.

೩೪-೩೫. ಕೃತ್ತಿಕಾನಕ್ಷತ್ರ ರೂಪದಿಂದ ಇದ್ದುಕೊಂಡು ಅಗ್ನಿಯೊಡನೆ ವಿಹರಿಸುತ್ತಿದ್ದ ಸ್ವಾಹಾದೇವಿಯಿಂದ ಸುವರ್ಣಮಯವಾದ ಆ ವೀರ್ಯವನ್ನು ಮೇರುಪರ್ವತದ ಶಿಖರದಲ್ಲಿ ಇರಿಸಿದನು. ಕೆಲವುಕಾಲದ ಮೇಲೆ ಅದು ತನ್ನ ಕಾಂತಿಯಿಂದ ಹತ್ತು ದಿಕ್ಕುಗಳನ್ನೂ ಬೆಳಗುತ್ತಿರಲು ಅದರ ಪ್ರಕಾಶದಿಂದ ಸುತ್ತಲೂ ಇದ್ದ ಎಲ್ಲಾ ಪರ್ವತಗಳಿಗೂ ಪ್ರಕಾಶಿಸತೊಡಗಿದವು.

ತತಶ್ಚಿರೇಣ ಕಾಲೇನ ಸಂಜಾತೇ ತತ್ರ ತೇಜಸಿ ।
ಕುಮಾರೇ ಸುಕುಮಾರಾಂಗೇ ಕುಮಾರಾಣಾಂ ನಿದರ್ಶನೇ ॥ ೩೬ ॥

ತಚ್ಛೈಶವಂ ಸ್ವರೂಪಂ ಚ ತಸ್ಯ ದೃಷ್ಟ್ವಾ ಮನೋಹರಂ ।
ಸಹ ದೇವಾಸುರೈರ್ಲೋಕೈರ್ವಿಸ್ಮಿತೇ ಚ ವಿಮೋಹಿತೇ ॥ ೩೭ ॥

ದೇವೋಽಪಿ ಸ್ವಯಮಾಯಾತಃ ಪುತ್ರದರ್ಶನಲಾಲಸಃ ।
ಸಹ ದೇವ್ಯಾಂಕಮಾರೋಪ್ಯ ತತೋಽಸ್ಯ ಸ್ಮೇರಮಾನನಂ ॥ ೩೮ ॥

ಪೀತಾಮೃತಮಿವ ಸ್ನೇಹವಿವಶೇನಾಂತರಾತ್ಮನಾ ।
ದೇವೇಷ್ವಪಿ ಚ ಪಶ್ಯತ್ಸು ವೀತರಾಗೈಸ್ತಪಸ್ವಿಭಿಃ ॥ ೩೯ ॥

ಸ್ವಸ್ಯ ವಕ್ಷಃಸ್ಥಲೇ ಸ್ವೈರಂ ನರ್ತಯಿತ್ವಾ ಕುಮಾರಕಂ ।
ಅನುಭೂಯ ಚ ತತ್ಕ್ರೀಡಾಂ ಸಂಭಾವ್ಯ ಚ ಪರಸ್ಪರಂ ॥ ೪೦ ॥

ಸ್ತನ್ಯಮಾಜ್ಞಾಪಯನ್ದೇವ್ಯಾಃ ಪಾಯಯಿತ್ವಾಮೃತೋಪಮಂ ।
ತವಾವತಾರೋ ಜಗತಾಂ ಹಿತಾಯೇತ್ಯನುಶಾಸ್ಯ ಚ ॥ ೪೧ ॥

---

೩೬-೩೭. ಅನಂತರ ಕೆಲವು ಕಾಲವು ಕಳೆದಮೇಲೆ ಆ ತೇಜಸ್ಸು ಕುಮಾರನ ಆಕಾರವನ್ನು ಹೊಂದಿ ಕೋಮಲವಾದ ಶರೀರವನ್ನು ಪಡೆದು ಪ್ರಕಾಶಿಸಿತು. ಶಿಶುವಿನ ಆಕಾರದಿಂದಿರುವ ಆ ಬಾಲಕನು ಮನೋಹರವಾಗಿಯೂ ಮುದ್ದಾಗಿಯೂ ಇರುವ ಸುಂದರಾಕೃತಿಯನ್ನು ನೋಡಿ ದೇವಾಸುರರು ಆಶ್ಚರ್ಯದಿಂದ ಬೆರಗಾದರು.

೩೮. ದೇವನಾದ ಶಿವನೂ ಕೂಡ ತನ್ನ ಮಾಯೆಗೆ ತಾನೂ ಒಳಗಾಗಿ ತನ್ನ ಪುತ್ರನನ್ನು ನೋಡಬೇಕೆಂದು ತಾನೇ ಅಲ್ಲಿಗೆ ಬಂದು ನಗುಮುಖವುಳ್ಳ ಆ ಬಾಲಕನನ್ನು ತನ್ನ ತೊಡೆಯಮೇಲೆ ಕೂರಿಸಿಕೊಂಡನು.

೩೯-೪೦. ಬಳಿಕ ಶಿವನು ಆ ಮಗುವನ್ನು ತನ್ನ ವಕ್ಷಸ್ಥಳದಲ್ಲಿ ಪ್ರೀತಿಯಿಂದ ಅಪ್ಪಿಕೊಂಡು ಅದನ್ನು ಕುಣಿಸುತ್ತಲೂ, ಆಟವಾಡಿಸುತ್ತಲೂ ಇದ್ದು ಪುತ್ರಸಂಸರ್ಗ ಸುಖವನ್ನು ಅನುಭವಿಸಿದನು. ಇದನ್ನೆಲ್ಲಾ ಜಿತೇಂದ್ರಿಯರಾದ ತಪಸ್ವಿಗಳೂ, ದೇವತೆಗಳೂ ನೋಡುತ್ತಿದ್ದರು.

೪೧. ಆ ಮಗುವಿಗೆ ಅಮೃತಕ್ಕೆ ಸಮಾನವಾಗಿರುವ ಎದೆಯ ಹಾಲನ್ನು ಕೊಡುವಂತೆ ದೇವಿಗೆ ಅಪ್ಪಣೆಮಾಡಿ ಆ ಹಾಲನ್ನು ಆ ಮಗುವಿಗೆ ಕುಡಿಸಿ ಈ ಮಗು

**ಸ್ವಯಂ ದೇವಶ್ಚ ದೇವೀ ಚ ನ ತೃಪ್ತಿಮುಪಜಗ್ಮತುಃ ।**
**ತತಃ ಶಕ್ರೇಣ ಸಂಧಾಯ ಬಿಭ್ಯತಾ ತಾರಕಾಸುರಾತ್ ॥ ೪೨ ॥**

**ಕಾರಯಿತ್ವಾಭಿಷೇಕಂ ಚ ಸೇನಾಪತ್ಯೇ ದಿವೌಕಸಾಂ ।**
**ಪುತ್ರಮಂತರತಃ ಕೃತ್ವಾ ದೇವೇನ ತ್ರಿಪುರದ್ವಿಷಃ ॥ ೪೩ ॥**

**ಸ್ವಯಮಂತರ್ಹಿತೇನೈವ ಸ್ಕಂದಮಿಂದ್ರಾದಿರಕ್ಷಿತಂ ।**
**ತಚ್ಛಕ್ತ್ಯಾ ಕ್ರೌಂಚಭೇದಿನ್ಯಾ ಯುಧಿ ಕಾಲಾಗ್ನಿಕಲ್ಪಯಾ ॥ ೪೪ ॥**

**ಛೇದಿತಂ ತಾರಕಸ್ಯಾಪಿ ಶಿರಶ್ಶಕ್ರಭಿಯಾ ಸಹ ।**
**ಸ್ತುತಿಂ ಚಕ್ರುರ್ವಿಶೇಷೇಣ ಹರಿಧಾತೃಮುಖಾಃ ಸುರಾಃ ॥ ೪೫ ॥**

**ತಥಾ ರಕ್ಷೋಧಿಪಃ ಸಾಕ್ಷಾದ್ರಾವಣೋ ಬಲಗರ್ವಿತಃ ।**
**ಉದ್ಧರನ್ಸ್ವಭುಜೈರ್ದೀರ್ಘೈಃ ಕೈಲಾಸಂ ಗಿರಿಮಾತ್ಮನಃ ॥ ೪೬ ॥**

---

ವಿನ ಜನನವು ಪ್ರಪಂಚದ ಹಿತಕ್ಕಾಗಿಯೇ ಆಗಿರುವುದು ಎಂದು ದೇವಿಯು ಸಂಗಡ ಹೇಳಿ ಶಿವನೂ ಪಾರ್ವತೀದೇವಿಯೂ ಎಷ್ಟು ಸಂತೋಷಪಟ್ಟರೂ ಅವರಿಗೆ ತೃಪ್ತಿಯೇ ಆಗಲಿಲ್ಲ.

೪೨-೪೫. ಅನಂತರ ತಾರಾಕಾಸುರನಿಗೆ ಹೆದರುತ್ತಿರುವ ಇಂದ್ರನೊಡನೆ ಸಮಾಲೋಚಿಸಿ ಶಿವನು ಆ ಮಗುವಿಗೆ ದೇವತೆಗಳ ಸೇನಾಧಿಪತ್ಯಕ್ಕೆ ಅಭಿಷೇಕ ಮಾಡಿಸಿದನು. ತ್ರಿಪುರಗಳನ್ನು ನಾಶಮಾಡಿದ ಶಿವನು ಆ ಮಗನನ್ನು ಮಧ್ಯದಲ್ಲಿ ಬಿಟ್ಟುಕೊಂಡು ಇಂದ್ರನೇ ಮೊದಲಾದವರು ಅವನನ್ನು ರಕ್ಷಿಸುತ್ತಿರಲು ತಾನು ಯಾರಿಗೂ ಕಾಣದಂತೆ ಇದ್ದುಕೊಂಡು, ಪ್ರಳಯಕಾಲದ ಅಗ್ನಿಗೆ ಸಮಾನವಾದುದೂ ಕ್ರೌಂಚಪರ್ವತವನ್ನು ಭೇಧಿಸಿದುದೂ ಆದ ಶಕ್ತ್ಯಾಯುಧವನ್ನು ಆ ಬಾಲಕನ ಕೈಯ್ಯಲ್ಲಿ ಕೊಟ್ಟು ಅದರಿಂದ ತಾರಕಾಸುರನ ತಲೆಯನ್ನೂ ಕತ್ತರಿಸಿ ಇಂದ್ರನಿಗುಂಟಾಗಿದ್ದ ಭಯವನ್ನು ಪರಿಹರಿಸಿದನು. ಆಗ ವಿಷ್ಣು, ಬ್ರಹ್ಮ ಮೊದಲಾದ ದೇವತೆಗಳು ಬಹಳವಾಗಿ ಸ್ತೋತ್ರವನ್ನು ಮಾಡಿದರು.

೪೬-೪೭. ರಾಕ್ಷಸರಿಗೆ ಅಧಿಪತಿಯಾದ ರಾವಣನು ತಾನೇ ಬಲಿಷ್ಠನೆಂದು ಗರ್ವದಿಂದ ಕೂಡಿ ಉದ್ದವಾಗಿರುವ ತನ್ನ ತೋಳುಗಳಿಂದ ಶಿವನ ವಾಸಸ್ಥಳವಾದ ಕೈಲಾಸಪರ್ವತವನ್ನು ಮೇಲಕ್ಕೆ ಎತ್ತಿದನು. ಅವನು ಮಾಡಿದ ಅಪರಾಧವನ್ನು

ತದಾಗೋಽಸಹಮಾನಸ್ಯ ದೇವದೇವಸ್ಯ ಶೂಲಿನಃ ।
ಪದಾಂಗುಷ್ಠಪರಿಸ್ಪಂದಾನ್ಮಮಜ್ಜ ಮ್ರುದಿತೋ ಭುವಿ ॥ ೪೭ ॥

ವಟೋಃ ಕೇನಚಿದರ್ಥೇನ ಸ್ವಾಶ್ರಿತಸ್ಯ ಗತಾಯುಷಃ ।
ತ್ವರಯಾಗತ್ಯ ದೇವೇನ ಪಾದಾಂತಂ ಗಮಿತೋಽಂತಕಃ ॥ ೪೮ ॥

ಸ್ವವಾಹನಮವಿಜ್ಞಾಯ ವೃಷೇಂದ್ರಂ ವಡವಾನಲಃ ।
ಸಗಲಗ್ರಹಮಾನೀತಸ್ತತೋಽಸ್ತ್ಯೇಕೋದಕಂ ಜಗತ್ ॥ ೪೯ ॥

ಅಲೋಕವಿದಿತೈಸ್ತೈಸ್ತೈರ್ವೃತ್ತೈರಾನಂದಸುಂದರೈಃ ।
ಅಂಗಹಾರಸ್ವಸೇನೇದಮುಸಕೃಚ್ಚಾಲಿತಂ ಜಗತ್ ॥ ೫೦ ॥

---

ತ್ರಿಶೂಲಧಾರಿಯಾದ ಶಿವನು ಸಹಿಸಲಿಲ್ಲ. ಆದ್ದರಿಂದ ಆ ಬೆಟ್ಟವನ್ನು ಅವನ ಕೈಗಳ ಜೊತೆಯಲ್ಲಿಯೇ ತನ್ನ ಪಾದಾಂಗುಷ್ಠದಿಂದ ತುಳಿದನು. ಅದರಿಂದ ರಾವಣನು ಹೊಸಗಿದವನಂತೆ ಆಗಿ ಭೂಮಿಯಲ್ಲಿ ನಿಶ್ಚೇಷ್ಟಿತನಾಗಿ ಬಿದ್ದನು.

೪೮. ಬ್ರಹ್ಮಚಾರಿಯಾದ ಓರ್ವ ಬಾಲಕನು ಕಾರಣಾಂತರದಿಂದ ತನ್ನ ಆಯುಸ್ಸು ಮುಗಿಯುತ್ತ ಬರಲು ಶಿವನನ್ನು ಆರಾಧಿಸಿದನು. ಆಗ ಶಿವನು ಬೇಗನೆ ಅಲ್ಲಿಗೆ ಬಂದು ಅವನ ಪ್ರಾಣಾಪಹರಣಕ್ಕಾಗಿ ಬಂದಿದ್ದ ಯಮನನ್ನು ನಿಗ್ರಹಮಾಡಲು ಯಮನು ಶಿವನಿಗೆ ನಮಸ್ಕಾರಮಾಡಿದನು.

೪೯. ಶಿವನ ವಾಹನವೆಂದು ತಿಳಿಯದೆ ವೃಷಭವನ್ನು ಬಡಬಾಗ್ನಿಯು ಅದರ ಕುತ್ತಿಗೆಯ ಸಹಿತವಾಗಿ ಹಿಡಿಯಲು ಅದನ್ನು ಬಿಡಿಸಿದನು. ಅನಂತರದಲ್ಲಿ ಲೋಕವೆಲ್ಲವೂ ನೀರಿನಿಂದ ತುಂಬಿಹೋಯಿತು.

೫೦. ಈ ಪ್ರಕಾರವಾಗಿರುವ ಶಿವನ ಅನೇಕ ನಡತೆಗಳಿಂದಲೂ, ಸುಂದರ ಚೇಷ್ಟೆಗಳಿಂದಲೂ, ಈ ಜಗತ್ತೆಲ್ಲವೂ ತುಂಬಿಹೋಗಿರುವುದು. ಇವುಗಳು ಲೋಕದ ಜನಗಳಿಗೆ ಹಿತವನ್ನುಂಟುಮಾಡುವುದಾದರೂ ಅವುಗಳನ್ನು ಜನಗಳು ತಿಳಿಯಲು ಸಾಧ್ಯವಿಲ್ಲ.

ಶಾಂತ ಏವ ಸದಾ ಸರ್ವಮನುಗೃಹ್ಣಾತಿ ಚೇಚ್ಛಿವಃ ।
ಸರ್ವಾಣಿ ಪೂರಯೇದೇವ ಕಥಂ ಶಕ್ತೇನ ಮೋಚಯೇತ್ ॥ ೫೧ ॥

ಅನಾದಿಕರ್ಮವೈಚಿತ್ರ್ಯಮಪಿ ನಾತ್ರ ನಿಯಾಮಕಂ ।
ಕಾರಣಂ ಖಲು ಕರ್ಮಾಪಿ ಭವೇದೀಶ್ವರಕಾರಿತಂ ॥ ೫೨ ॥

ಕಿಮತ್ರ ಬಹುನೋಕ್ತೇನ ನಾಸ್ತಿಕ್ಯಂ ಹೇತುಕಾರಕಂ ।
ಯಥಾ ಹ್ಯಾಶು ನಿವರ್ತೇತ ತಥಾ ಕಥಯಮಾರುತ ॥ ೫೩ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ಶಿವತತ್ತ್ವಪ್ರಶ್ನೋ ನಾಮ ತ್ರಿಂಶೋಽಧ್ಯಾಯಃ

---

೫೧. ಶಿವನು ಉಪಶಾಂತನಾಗಿಯೇ ಯಾವಾಗಲೂ ಎಲ್ಲರನ್ನೂ ಅನುಗ್ರಹಿಸುವವನಾಗಿದ್ದರೆ ಮತ್ತು ಎಲ್ಲರ ಇಷ್ಟವನ್ನೂ ಶಕ್ತಿಯುಕ್ತನಾಗಿ ನಡೆಯಿಸಿ ಕೊಡುವವನಾಗಿದ್ದರೆ, ಹೀಗೆ ಅನೇಕರನ್ನು ನಿಗ್ರಹಮಾಡಲು ಕಾರಣವೇನು? ಈ ವಿಷಯದಲ್ಲಿ ನಮಗೆ ಬಹಳ ಸಂಶಯವುಂಟಾಗಿರುವುದು.

೫೨. ಪ್ರಾಣಿಗಳ ಬಂಧಮೋಕ್ಷಗಳ ವಿಷಯದಲ್ಲಿ ಆದಿಯೇ ಇಲ್ಲದೆ ಪ್ರವಾಹರೂಪದಿಂದ ಇರುವ ಅನೇಕವಿಧವಾದ ಕರ್ಮಗಳ ಗತಿವೈಚಿತ್ರ್ಯವು ಹೀಗೆಯೇ ಸರಿ ಎಂದು ನಿಯಾಮಕವಾಗಿಲ್ಲ. ಈಶ್ವರನು ಈರೀತಿ ಏಕೆ ಮಾಡಿರುವನು?

೫೩. ಎಲೈ ವಾಯುದೇವನೆ! ಬಹಳ ಮಾತುಗಳನ್ನು ಹೇಳಿ ಉಪಯೋಗವೇನು? ನಾಸ್ತಿಕತೆಯುಂಟಾಗದಿರಲು ಕಾರ್ಯಕಾರಣ ರೂಪವಾದ ಯುಕ್ತಿಗಳಿಂದಲೂ ಶಾಸ್ತ್ರಸಮ್ಮತಿಯಿಂದಲೂ ನಮಗೆ ಉಂಟಾಗಿರುವ ಈ ಸಂದೇಹನಿವೃತ್ತಿಗಾಗಿ ಯಾವ ರೀತಿ ಹೇಳಬೇಕೋ ಹಾಗೆ ವಿವರಿಸಿ ಹೇಳು ಎಂದರು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯ ಸಂಹಿತೆಯ ಪೂರ್ವಭಾಗದಲ್ಲಿ ಶಿವತತ್ತ್ವ ಪ್ರಶ್ನವೆಂಬ ಮೂವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ಏಕತ್ರಿಂಶೋಽಧ್ಯಾಯಃ

---

॥ ವಾಯುರುವಾಚ ॥

**ಸ್ಥಾನೇ ಸಂಶಯಿತಂ ವಿಪ್ರಾ ಭವದ್ಭಿರ್ಹೇತುಚೋದಿತೈಃ ।**
**ಜಿಜ್ಞಾಸಾ ಹಿ ನ ನಾಸ್ತಿಕ್ಯಂ ಸಾಧಯೇತ್ಸಾಧುಬುದ್ಧಿಷು ॥ ೧ ॥**

**ಪ್ರಮಾಣಮತ್ರ ವಕ್ಷ್ಯಾಮಿ ಸತಾಂ ಮೋಹನಿವರ್ತಕಂ ।**
**ಅಸತಾಂ ತ್ವನ್ಯಥಾಭಾವಃ ಪ್ರಸಾದೇನ ವಿನಾ ಪ್ರಭೋಃ ॥ ೨ ॥**

---

## ಮೂವತ್ತೊಂದನೆಯ ಅಧ್ಯಾಯವು

೧. ವಾಯುದೇವನಿಂತೆಂದನು — ಎಲೈ ಋಷಿಗಳಿರಾ, ನೀವು ಸಕಾರಣವಾಗಿ ವಿವರಿಸಿ ಸಂಶಯುವನ್ನು ಹೋಗಲಾಡಿಸಬೇಕೆಂದು ನನ್ನನ್ನು ಕೇಳಿಕೊಂಡಿರುವುದು ಬಹಳ ಯುಕ್ತವಾದದ್ದು. ಜ್ಞಾನವಿಚಾರದಲ್ಲಿ ತಿಳಿದುಕೊಳ್ಳಬೇಕೆಂದು ವಿಚಾರ ಮಾಡುವುದು ಸಾಧುಮಾರ್ಗಪ್ರವರ್ತಕರಾದವರ ವಿಷಯದಲ್ಲಿ ನಾಸ್ತಿಕ್ಯವೆಂದು ಹೇಳಲಾಗುವುದಿಲ್ಲ. ತತ್ತ್ವಜಿಜ್ಞಾಸಮಾಡುವುದಕ್ಕಾಗಿ ಪೂರ್ವಾಪರ ಸಂಗತಿಗಳನ್ನೂ, ಪೂರ್ವಪಕ್ಷ ಸಿದ್ಧಾಂತಗಳನ್ನೂ, ಸಾಧಕಬಾಧಕಗಳನ್ನೂ, ಯುಕ್ತಿಯುಕ್ತವಾಗಿಯೂ, ಪ್ರಮಾಣಪೂರ್ವಕವಾಗಿಯೂ ವಿಮರ್ಶೆಮಾಡುವುದು ನಾಸ್ತಿಕ್ಯವೆನಿಸುವುದಿಲ್ಲ.

೨. ಸತ್ಪುರುಷರಾದವರಿಗೆ ಅಜ್ಞಾನವನ್ನು ಹೋಗಲಾಡಿಸುವ ಪ್ರಮಾಣವನ್ನು ಹೇಳುವೆನು ದುಷ್ಟರಾದವರಿಗೆ ಪ್ರಭುವಾದ ಪರಮೇಶ್ವರನ ಉತ್ತಮವಾದ ಅನುಗ್ರಹವು ಇಲ್ಲದ್ದರಿಂದ ಅವರಿಗೆ ನಾಸ್ತಿಕ್ಯವು ಉಂಟಾಗುವುದು.

ಶಿವಸ್ಯ ಪರಿಪೂರ್ಣಸ್ಯ ಪರಾನುಗ್ರಹಮಂತರಾ ।
ನ ಕಿಂಚಿದಪಿ ಕರ್ತವ್ಯಮಿತಿ ಸಾಧುವಿನಿಶ್ಚಿತಂ　　॥ ೩ ॥

ಸ್ವಭಾವ ಏವ ಪರ್ಯಾಪ್ತಃ ಪರಾನುಗ್ರಹಕರ್ಮಣಿ ।
ಅನ್ಯಥಾ ನಿಸ್ಸ್ವಭಾವೇನ ನ ಕಿಮಪ್ಯನುಗೃಹ್ಯತೇ　　॥ ೪ ॥

ಪರಂ ಸರ್ವಮನುಗ್ರಾಹ್ಯಂ ಪಶುಪಾಶಾತ್ಮಕಂ ಜಗತ್ ।
ಪರಸ್ಯಾನುಗ್ರಹಾರ್ಥಂ ತು ಪತ್ಯುರಾಜ್ಞಾಸಮನ್ವಯಃ　　॥ ೫ ॥

ಪತಿರಾಜ್ಞಾಪಕಃ ಸರ್ವಮನುಗೃಹ್ಣಾತಿ ಸರ್ವದಾ ।
ತದರ್ಥಮರ್ಥಸ್ವೀಕಾರೇ ಪರತಂತ್ರಃ ಕಥಂ ಶಿವಃ　　॥ ೬ ॥

ಅನುಗ್ರಾಹ್ಯನಪೇಕ್ಷೋಽಸ್ತಿ ನ ಹಿ ಕಶ್ಚಿದನುಗ್ರಹಃ ।
ಅತಃ ಸ್ವಾತಂತ್ರ್ಯಶಬ್ದಾರ್ಥಾನನಪೇಕ್ಷತ್ವಲಕ್ಷಣಃ　　॥ ೭ ॥

---

೩. ಎಲ್ಲಾ ವಿಧದಲ್ಲಿಯೂ ಪರಿಪೂರ್ಣನಾದ ಶಿವನ ಪರಾಶಕ್ತಿಯ ಅನುಗ್ರಹವನ್ನು ಸಂಪಾದಿಸದೆ ಯಾವ ಕೆಲಸವನ್ನೂ ಮಾಡಬಾರದೆಂದು ಸತ್ಪುರುಷರು ನಿಶ್ಚಯ ಮಾಡಿರುವರು.

೪. ಇನ್ನೊಬ್ಬರಿಗೆ ಅನುಗ್ರಹಮಾಡುವುದೇ ಶಿವನ ಸ್ವಭಾವವಾಗಿರುವುದು. ಇಂತಹ ಸ್ವಭಾವವು ಶಿವನಿಗಿಲ್ಲದಿದ್ದರೆ ಅವನು ಯಾರಿಗೂ ಅನುಗ್ರಹಮಾಡಲ ಸಮರ್ಥನಾಗುವನು.

೫. ಪಶುಪಾಶಾತ್ಮಕವಾದ ಈ ಸಮಸ್ತ ಜಗತ್ತೂ ಶಿವನ ಪರಮಾನುಗ್ರಹಕ್ಕೆ ಒಳಪಟ್ಟದ್ದಾಗಿರುವುದು. ಇನ್ನೊಬ್ಬರಿಗೆ ಅನುಗ್ರಹಮಾಡುವುದೇ ಪತಿಯಾದ ಶಿವನ ಆಜ್ಞಾರೂಪವಾದ ನಿಯಾಮಕವಾಗಿರುವುದು.

೬. ಪತಿಯಾದ ಶಿವನು ತನ್ನ ಆಜ್ಞಾರೂಪವಾದ ಶಕ್ತಿಯಿಂದ ಎಲ್ಲರನ್ನೂ ಯಾವಾಗಲೂ ಅನುಗ್ರಹಿಸುತ್ತಿರುವನು. ಈ ಕಾರಣಕ್ಕಾಗಿ ಪದಾರ್ಥಗಳ ವಿಷಯದಲ್ಲಿ ಶಿವನಿಗೆ ಅಭಿಮಾನವಿದ್ದ ಮಾತ್ರದಿಂದ ಶಿವನು ಇನ್ನೊಬ್ಬರಿಗೆ ಅಧೀನವೆಂದು ಹೇಳಲಾಗುವುದಿಲ್ಲ.

೭. ಅನುಗ್ರಹಮಾಡುವ ವಿಚಾರದಲ್ಲಿ ಅನುಗ್ರಹಮಾಡುವವನೂ, ಅನುಗ್ರಹವನ್ನು ಪಡೆಯುವವನೂ ಎಂದು ಇಬ್ಬರು ಇರಬೇಕಷ್ಟೆ? ಇವರಿಬ್ಬರೂ ಇಲ್ಲದಿದ್ದರೆ

ಏತತ್ಪುನರನುಗ್ರಾಹ್ಯಂ ಪರತಂತ್ರಂ ತದಿಷ್ಯತೇ ।
ಅನುಗ್ರಹಾದೃತೇ ತಸ್ಯ ಭುಕ್ತಿಮುಕ್ತ್ಯೋರನನ್ವಯಾತ್ ॥ ೮ ॥

ಮೂರ್ತಾತ್ಮನೋಽಪ್ಯನುಗ್ರಾಹ್ಯಾ ಶಿವಜ್ಞಾನನಿವರ್ತನಾತ್ ।
ಅಜ್ಞಾನಾಧಿಷ್ಠಿತಂ ಶಂಭೋರ್ನ ಕಿಂಚಿದಿಹ ವಿದ್ಯತೇ ॥ ೯ ॥

ಯೇನೋಪಲಭ್ಯತೇಽಸ್ಮಾಭಿಸ್ಸಕಲೇನಾಪಿ ನಿಷ್ಕಲಃ ।
ಸ ಮೂರ್ತ್ಯಾತ್ಮಾ ಶಿವಃ ಶೈವಮೂರ್ತಿರಿತ್ಯುಪಚರ್ಯತೇ ॥ ೧೦ ॥

---

ಅನುಗ್ರಹವೆಂಬುದೇ ಇರಬೇಕಾಗಿಲ್ಲ ಅಥವಾ ಅನುಗ್ರಾಹ್ಯರಿಲ್ಲದೆ ಅನುಗ್ರಹವಿಲ್ಲ. ಅನುಗ್ರಹವನ್ನಪೇಕ್ಷಿಸುವವನು ಪರತಂತ್ರನು ಅಥವಾ ಇನ್ನೊಬ್ಬನಿಗೆ ಅಧೀನನು. ಅನುಗ್ರಹಮಾಡುವವನು ಸ್ವತಂತ್ರನು. ಆದುದರಿಂದ ಯಾವುದನ್ನೂ ಅಪೇಕ್ಷಿಸದಿರುವುದೇ ಸ್ವತಂತ್ರಶಬ್ದಕ್ಕೆ ಸರಿಯಾದ ಅರ್ಥವು.

೮. ಶಿವನು ಸ್ವಾತಂತ್ರ್ಯವುಳ್ಳವನಾಗಿ ಅನುಗ್ರಹವನ್ನು ಮಾಡುತ್ತಿರುವವನಾದ ಮೇಲೆ ಆವನಿಂದ ಬೇರೆಯಾದದ್ದೆಲ್ಲವೂ ಅವನ ಅಧೀನತೆಯಲ್ಲಿದ್ದು ಅವನ ಅನುಗ್ರಹವನ್ನು ಹೊಂದುವುದಕ್ಕೆ ಅರ್ಹವಾದದ್ದು ಎಂಬ ವಾದವನ್ನು ನಾವು ಒಪ್ಪಲೇಬೇಕು. ಏಕೆಂದರೆ ಶಿವನ ಅನುಗ್ರಹವಿಲ್ಲದೆ ಭುಕ್ತಿಯಾಗಲೀ, ಮುಕ್ತಿಯಾಗಲೀ ಯಾವುದೂ ಆಗುವುದಿಲ್ಲ.

೯. ಈ ವಿಧವಾದ ಅನುಗ್ರಹವು ಉಂಟಾಗುವುದಕ್ಕೆ ಆಕಾರವನ್ನು ಹೊಂದಿರುವವರೆಲ್ಲರೂ ಎಂದರೆ ಶರೀರಧಾರಿಗಳಾವ ಸಮಸ್ತಪ್ರಾಣಿಗಳೂ ಅನುಗ್ರಾಹ್ಯರೆನಿಸಿಕೊಳ್ಳುವರು. ಅನುಗ್ರಹವನ್ನು ಹೊಂದಲು ಶಿವಜ್ಞಾನವು ಅತ್ಯವಶ್ಯಕವು. ಈ ಶಿವಜ್ಞಾನವಿಲ್ಲದಿದ್ದರೆ ಎಲ್ಲವೂ ಅಜ್ಞಾನದ ಆಶ್ರಯದಿಂದಲೇ ಇರುವುದೇ ಹೊರತು ಇದಕ್ಕೆ ವ್ಯತಿರಿಕ್ತವಾಗಿ ಯಾವುದೂ ಇರುವುದಿಲ್ಲ.

೧೦. ಶಿವನು ಸ್ವಭಾವತಃ ನಿಷ್ಕಲಸ್ವರೂಪನಾದರೂ ನಾವು ಅವನನ್ನು ಸಕಲನೆಂದು ಭಾವಿಸಿ ಉಪಾಸಿಸುವೆವು. ಎಂದರೆ ಶಿವನಿಗೆ ಸಕಲನಿಷ್ಕಲ ರೂಪಗಳೆರಡೂ ಇರುವವು. ಕಲಾಸಹಿತನಾಗಿ ಮೂರ್ತಿರೂಪದಿಂದಿರುವಾಗ ಅವನನ್ನು ಶಿವನೆಂದೂ ಶೈವಮೂರ್ತಿಯೆಂದೂ ವ್ಯವಹರಿಸುವೆವು.

ನ ಹ್ಯಸೌ ನಿಷ್ಕಲಃ ಸಾಕ್ಷಾಚ್ಛಿವಃ ಪರಮಕಾರಣಂ ।
ಸಾಕಾರೇಣಾನುಭಾವೇನ ಕೇನಾಪ್ಯನುಪಲಕ್ಷಿತಃ ॥ ೧೧ ॥

ಪ್ರಮಾಣಗಮ್ಯತಾಮಾತ್ರಂ ತತ್ಸ್ವಭಾವೋಪಪಾದಕಂ ।
ನ ತಾವತಾತ್ರೋಪೇಕ್ಷಾಧೀರುಪಲಕ್ಷಣಮಂತರಾ ॥ ೧೨ ॥

ಆತ್ಮೋಪಮೋಲ್ಬಣಂ ಸಾಕ್ಷಾನ್ಮೂರ್ತಿರೇವ ಹಿ ಕಾಚನ ।
ಶಿವಸ್ಯ ಮೂರ್ತಿಮೂರ್ತ್ಯಾತ್ಮಾ ಪರಸ್ತಸ್ಯೋಪಲಕ್ಷಣಂ ॥ ೧೩ ॥

ಯಥಾ ಕಾಷ್ಠೇಷ್ವನಾರೂಢೋ ನ ವಹ್ನಿರುಪಲಭ್ಯತೇ ।
ಏವಂ ಶಿವೋಽಪಿ ಮೂರ್ತ್ಯಾತ್ಮನ್ಯನಾರೂಢ ಇತಿ ಸ್ಥಿತಿಃ ॥ ೧೪ ॥

---

೧೧. ಆಕಾರವನ್ನೂ, ಮಹಿಮೆಯನ್ನೂ ಹೊಂದಿರುವ ಶಿವನ ಸಕಲವಾದ ಮೂರ್ತಿಯು ಎಲ್ಲಕ್ಕೂ ಕಾರಣವು. ನಿಷ್ಕಲನಾದ ಶಿವನು ಸಾಕ್ಷಾತ್ತಾಗಿ ಯಾವದಕ್ಕೂ ಕಾರಣ ಭಾವವನ್ನು ಹೊಂದುವುದಿಲ್ಲ.

೧೨. ವೇದ, ಶಾಸ್ತ್ರ ಇವುಗಳ ಪ್ರಮಾಣದಿಂದ ಶಿವನ ಸ್ವರೂಪವನ್ನು ತಿಳಿಯಬೇಕಾಗಿರುವುದು. ಆ ವೇದಶಾಸ್ತ್ರಗಳು ಶಿವನ ಸಕಲನಿಷ್ಕಲರೂಪಗಳನ್ನು ಪ್ರತಿಪಾದಿಸುವವು. ಹೀಗಿದ್ದರೂ ಸಕಲಮೂರ್ತಿಯ ವಿಷಯದಲ್ಲಿ ಉಪೇಕ್ಷೆಯನ್ನು ಮಾಡಬಾರದು. ಮತ್ತು ನಿಷ್ಕಲಮೂರ್ತಿಯನ್ನು ಒಪ್ಪಿಕೊಂಡು ಸಕಲವಾದ ಮೂರ್ತಿಗೆ ಅನುಗ್ರಹ ರೂಪವಾದ ಕ್ರಿಯಾಸಂಬಂಧವುಂಟೆಂದು ಹೇಳುವುದು ಸರಿಯಾಗಿರುವುದು.

೧೩. ಶಿವನ ಸಕಲವಾದ ಒಂದು ಆಕಾರವು ಸಾಕ್ಷಾತ್ತಾಗಿ ಆತ್ಮನ ಹೋಲಿಕೆಗೆ ಅನುಗುಣವಾಗಿರುವ ಉಪಲಕ್ಷಣಗಳುಳ್ಳದ್ದೆಂದು ತಿಳಿಯಲು ಕಷ್ಟಸಾಧ್ಯವಾಗಿರುವುದು. ಈ ಸಕಲವಾಗಿರುವ ಆಕಾರವೇ ಶಿವನ ಮೂರ್ತಿಯು. ಆಕಾರವನ್ನು ಹೊಂದಿರುವ ಈ ಮೂರ್ತಿಯು ಶಿವನ ನಿಷ್ಕಲಭಾವದಿಂದ ಬೇರೆಯಾಗಿರುವುದು. ಆದರೆ ಆ ನಿಷ್ಕಲಭಾವದಿಂದ ಇರುವ ಶಿವನನ್ನು ತಿಳಿಯಲು ಈ ಸಕಲಮೂರ್ತಿಯು ಸಾಧಕವಾಗಿರುವುದು.

೧೪. ಅಗ್ನಿಯನ್ನು ತಿಳಿಯಲು, ಕಟ್ಟಿಗೆಯನ್ನು ಹಾಕಿ ಅದು ಹತ್ತಿದನಂತರ ಅಗ್ನಿಯನ್ನು ತಿಳಿಯುವ ಹಾಗೆ ಶಿವನಿಗೂ ಆಕಾರವನ್ನು ಕಲ್ಪಿಸಿ ಅದರಿಂದ ಶಿವನನ್ನು

**ಯಥಾಗ್ನಿ ಮಾನಯೇತ್ಯುಕ್ತೇ ಜ್ವಲತ್ಕಾಷ್ಠಾದೃತೇ ಸ್ವಯಂ ।**
**ನಾಗ್ನಿರಾನೀಯತೇ ತದ್ವತ್ಪೂಜ್ಯೋ ಮೂರ್ತ್ಯಾತ್ಮನಾ ಶಿವಃ ॥ ೧೫ ॥**

**ಅತ ಏವ ಹಿ ಪೂಜಾದೌ ಮೂರ್ತ್ಯಾತ್ಮಪರಿಕಲ್ಪನಂ ।**
**ಮೂರ್ತ್ಯಾತ್ಮನಿ ಕೃತಂ ಸಾಕ್ಷಾಚ್ಛಿವ ಏವ ಕೃತಂ ಯತಃ ॥ ೧೬ ॥**

**ಲಿಂಗಾದಾವಪಿ ತತ್ಕೃತ್ಯಮರ್ಚಾಯಾಂ ಚ ವಿಶೇಷತಃ ।**
**ತತ್ತನ್ಮೂರ್ತ್ಯಾತ್ಮಭಾವೇನ ಶಿವೋಽಸ್ಮಾಭಿರುಪಾಸ್ಯತೇ ॥ ೧೭ ॥**

---

ತಿಳಿಯಬೇಕು. ಕಟ್ಟಿಗೆಯ ಸಂಬಂಧವಿಲ್ಲದೆ ಅಗ್ನಿಯು ಪ್ರತ್ಯೇಕವಾಗಿರುವುದನ್ನು ನೋಡಲು ಹೇಗೆ ಸಾಧ್ಯವಿಲ್ಲವೋ ಹಾಗೆ ನಿರಾಕಾರನಾದ ಶಿವನನ್ನು ತಿಳಿಯಲು ಸಾಧ್ಯವಿಲ್ಲ. ಅದಕ್ಕಾಗಿಯೇ ಮೊದಲು ಸಾಕಾರನಾದ ಶಿವನನ್ನು ಆರಾಧಿಸಬೇಕು.

೧೫. "ಅಗ್ನಿಯನ್ನು ತಂದು ಕೊಡು" ಎಂದರೆ ಉರಿಯುತ್ತಿರುವ ಕಟ್ಟಿಗೆಯನ್ನು ತರುವನು. ಕಟ್ಟಿಗೆಯ ಸಂಪರ್ಕವಿಲ್ಲದೆ ಪ್ರತ್ಯೇಕವಾಗಿರುವ ಅಗ್ನಿಯನ್ನು ತರಲು ಸಾಧ್ಯವಿಲ್ಲ. ಇದರಂತೆ ಸಾಕಾರನಾಗಿರುವ ಶಿವನಿಗೆ ನಾವೂ ಪೂಜೆಯನ್ನು ಮಾಡಬೇಕು.

೧೬. ಈ ಕಾರಣದಿಂದಲೇ ಪೂಜೆಯೇ ಮೊದಲಾದುವುಗಳಲ್ಲಿ ಶಿವನಿಗೆ ಆಕಾರ ಸಂಬಂಧವನ್ನು ನಾವು ಕಲ್ಪಿಸಿಕೊಂಡಿರುವೆವು. ಒಂದು ಆಕಾರವನ್ನು ಕಲ್ಪಿಸಿ ಅದನ್ನು ಶಿವನೆಂದು ಭಾವಿಸಿ ಪೂಜೆಯನ್ನು ಮಾಡಿದಲ್ಲಿ ಅದು ಶಿವನಿಗೇ ಪೂಜೆಯನ್ನು ಮಾಡಿದಂತಾಗುವುದು.

೧೭. ಶಿವಲಿಂಗಗಳಿಗೆ ಹಸ್ತ, ಪಾದ ಮುಂತಾದ ಅವಯವಗಳು ಇಲ್ಲದಿದ್ದಾಗ್ಯೂ ಅವುಗಳನ್ನು ಶಿವನೆಂದು ಪೂಜಿಸಬಹುದು. ಆಕಾರವನ್ನು ಹೊಂದಿರುವ ಶಿವನ ವಿಷಯದಲ್ಲಿ ಪೂಜಿಸಬೇಕೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಶ್ರೀಕಂಠ ಮೂರ್ತಿ, ಅಘೋರಮೂರ್ತಿ, ತತ್ಪುರುಷಮೂರ್ತಿ ಎಂಬ ಶಿವನ ಸಂಬಂಧವಾದ ಅನೇಕ ವಿಧವಾದ ಆಕಾರದಿಂದ ಇರುವ ಶಿವನನ್ನು ನಾವು ಬೇರೆಬೇರೆಯಾಗಿ (ಉಪಾಸನೆ) ಆರಾಧಿಸುವುದು ಎಲ್ಲರಿಗೂ ತಿಳಿದೇ ಇರುವುದು.

**ಯಥಾನುಗೃಹ್ಯತೇ ಸೋಽಪಿ ಮೂರ್ತ್ಯಾತ್ಮಾ ಪಾರಮೇಷ್ಠಿನಾ ।**
**ತಥಾ ಮೂರ್ತ್ಯಾತ್ಮನಿಷ್ಠೇನ ಶಿವೇನ ಪಶವೋ ವಯಂ ॥ ೧೮ ॥**

**ಲೋಕಾನುಗ್ರಹಣಾಯೈವ ಶಿವೇನ ಪರಮೇಷ್ಠಿನಾ ।**
**ಸದಾಶಿವಾದಯಸ್ಸರ್ವೇ ಮೂರ್ತ್ಯಾತ್ಮಾನೋಽಪ್ಯಧಿಷ್ಠಿತಾಃ ॥ ೧೯ ॥**

**ಆತ್ಮಾನಮೇವ ಭೋಗಾಯ ಮೋಕ್ಷಾಯ ಚ ವಿಶೇಷತಃ ।**
**ತತ್ತ್ವತತ್ತ್ವಸ್ವರೂಪೇಷು ಮೂರ್ತ್ಯಾತ್ಮಸು ಶಿವಾನ್ವಯಃ ॥ ೨೦ ॥**

**ಭೋಗಃ ಕರ್ಮವಿಪಾಕಾತ್ಮಾ ಸುಖದುಃಖಾತ್ಮಕೋ ಮತಃ ।**
**ನ ಚ ಕರ್ಮ ಶಿವೇಽಸ್ತೀತಿ ತಸ್ಯ ಭೋಗಃ ಕಿಮಾತ್ಮಕಃ ॥ ೨೧ ॥**

**ಸರ್ವಂ ಶಿವೋಽನುಗೃಹ್ಣಾತಿ ನ ನಿಗೃಹ್ಣಾತಿ ಕಿಂಚನ ।**
**ನಿಗೃಹ್ಣತಾಂ ತು ಯೋ ದೋಷಾಶ್ಶಿವೇ ತೇಷಾಮಸಂಭವಾತ್ ॥ ೨೨ ॥**

---

೧೮. ಅತ್ಯುತ್ತಮಭಾವದಿಂದ ಇರುವ ಸಾಕಾರನಾದ ಶಿವನು ನಾವು ಮಾಡುವ ಭಕ್ತಿಶ್ರದ್ಧೆಗಳಿಗನುಸಾರವಾಗಿ ನಮಗೆ ಅನುಗ್ರಹಮಾಡುವನು. ಪಶುಭಾವವು ನಮ್ಮಲ್ಲಿರುವುದು. ಸಾಕಾರನಾದ ಶಿವನು ಅನುಗ್ರಹವನ್ನು ಮಾಡುವನು ನಾವುಗಳು ಅವನಿಗೆ ಅನುಗ್ರಾಹ್ಯವಾದ ಪಶುಗಳಾಗಿರುವೆವು.

೧೯. ಶಿವನು ಲೋಕಗಳ ಅನುಗ್ರಹಕ್ಕಾಗಿಯೇ ಸದಾಶಿವನೇ ಮೊದಲಾದ ಬೇರೆ ಬೇರೆಯಾದ ಅನೇಕ ಆಕಾರಗಳನ್ನು ಧರಿಸಿರುವನು

೨೦. ಸಕಲನಿಷ್ಕಲಭಾವದಿಂದಿರುವ ಶಿವಸ್ವರೂಪವನ್ನೂ, ತತ್ತ್ವ ಅಥವಾ ತತ್ವಸಂಬಂಧವಿಲ್ಲದಿರುವ ಶಿವನ ನಾನಾಮೂರ್ತಿಭೇದಗಳ ಸ್ವರೂಪವನ್ನೂ ನಾವು ಎಷ್ಟುಮಟ್ಟಿಗೆ ತಿಳಿದುಕೊಳ್ಳುವೆವೋ ಅದಕ್ಕನುಸಾರವಾಗಿ ಭೋಗವೂ, ಮೋಕ್ಷವೂ, ಅವರವರಿಗೆ ಉಂಟಾಗುವುದೆಂದು ಶಿವಶಾಸ್ತ್ರದ ಸಿದ್ಧಾಂತವನ್ನು ತಿಳಿಯತಕ್ಕದ್ದು.

೨೧–೨೨. ಕರ್ಮಗಳ ಪರಿಪಾಕದಿಂದ ಉಂಟಾದ ಸುಖ, ದುಃಖಗಳನ್ನು ಅನುಭವಿಸುವುದೇ ಭೋಗವೆನಿಸುವುದು. ಶಿವನಲ್ಲಿ ಆ ಪ್ರಕಾರವಾದ ಕರ್ಮಗಳು ಇಲ್ಲದಿರುವುದರಿಂದ ಶಿವನಿಗೆ ಭೋಗವೆಲ್ಲಿಯದು ? ಎಂದರೆ ಶಿವನಿಗೆ ಕರ್ಮಸಂಬಂಧವಾದ ಸುಖದುಃಖಾದಿಗಳ ಭೋಗಾನುಭವವಿಲ್ಲ ಶಿವನು ಎಲ್ಲವನ್ನೂ ಅನುಗ್ರಹಿಸುವನು. ಯಾವುದನ್ನೂ ನಿಗ್ರಹ ಮಾಡುವುದಿಲ್ಲ. ನಿಗ್ರಹವನ್ನು ಮಾಡುವವರಿಗೆ

ಯೇ ಪುನರ್ನಿಗ್ರಹಾಃ ಕೇಚಿದ್ಬ್ರಹ್ಮಾದಿಷು ನಿದರ್ಶಿತಾಃ ।
ತೇऽಪಿ ಲೋಕಹಿತಾಯೈವ ಕೃತಾಃ ಶ್ರೀಕಂಠಮೂರ್ತಿನಾ ॥ ೨೩ ॥

ಬ್ರಹ್ಮಾಂಡಸ್ಯಾಧಿಪತ್ಯಂ ಹಿ ಶ್ರೀಕಂಠಸ್ಯ ನ ಸಂಶಯಃ ।
ಶ್ರೀಕಂಠಾಖ್ಯಾಂ ಶಿವೋ ಮೂರ್ತಿಂ ಕ್ರೀಡತೀಮಧಿತಿಷ್ಠತಿ ॥ ೨೪ ॥

ಸದೋಷಾ ಏವ ದೇವಾದ್ಯಾ ನಿಗೃಹೀತಾ ಯಥೋದಿತಂ ।
ತತಸ್ತೇऽಪಿ ವಿಪಾಪ್ಮಾನಃ ಪ್ರಜಾಶ್ಚಾಪಿ ಗತಜ್ವರಾಃ ॥ ೨೫ ॥

ನಿಗ್ರಹೋऽಪಿ ಸ್ವರೂಪೇಣ ವಿದುಷಾಂ ನ ಜುಗುಪ್ಸಿತಃ ।
ಅತ ಏವ ಹಿ ದಂಡ್ಯೇಷು ದಂಡೋ ರಾಜ್ಞಾಂ ಪ್ರಶಸ್ಯತೇ ॥ ೨೬ ॥

---

ಇರುವ ದೋಷಗಳು ಶಿವನಲ್ಲಿ ಇಲ್ಲ. ಆದರೆ ಶ್ರೀಕಂಠಮೂರ್ತಿಯಾದ ಶಿವನು ಬ್ರಹ್ಮನೇ ಮೊದಲಾದವರನ್ನು ನಿಗ್ರಹ ಮಾಡಿದನೆಂದು ಹಿಂದಿನ ಅಧ್ಯಾಯದಲ್ಲಿ ಹೇಳಿರುವುದು. ಅವುಗಳೆಲ್ಲವೂ ಲೋಕಗಳ ಹಿತಕ್ಕಾಗಿಯೇ ನಡೆದಿರುವುದರಿಂದ ಅವು ಅನುಗ್ರಹರೂಪವಾಗಿಯೇ ಇರುವವು.

೨೪. ಸಮಸ್ತ ಬ್ರಹ್ಮಾಂಡದ ಆಧಿಪತ್ಯವೂ ಶ್ರೀಕಂಠನೆಂದು ಹೆಸರುಳ್ಳ ಶಿವನಿಗೆ ಸಂಬಂಧಪಟ್ಟಿರುವುದು. ಅವನು ಆ ಹೆಸರಿನಿಂದ ಇರುವ ಆಕಾರವನ್ನು ಧರಿಸಿಕೊಂಡು ಸದಾ ಕ್ರೀಡಿಸುತ್ತಿರುವನು.

೨೫. ದೇವತೆಗಳೇ ಮೊದಲಾದವರೆಲ್ಲರೂ ದೋಷಯುಕ್ತರಾದುದರಿಂದ ಹಿಂದೆ ಹೇಳಿದಂತೆ ಶಿವನಿಂದ ನಿಗ್ರಹವನ್ನು ಹೊಂದಿದರು. ಮತ್ತು ಪ್ರಜೆಗಳೆಲ್ಲರೂ ಅದರಿಂದ ಸುಖವನ್ನು ಹೊಂದಿದರು. ಆ ನಿಗ್ರಹದಿಂದ ಅವರು ಅನುಭವಿಸಬೇಕಾದ ಪಾಪಕರ್ಮದ ಫಲವನ್ನು ಕಳೆದುಕೊಂಡು ಕಡೆಗೆ ಸುಖವನ್ನು ಹೊಂದಿದರು.

೨೬. ನಿಗ್ರಹವೂ ಕೂಡ ತಿಳುವಳಿಕೆಯುಳ್ಳವರಿಗೆ ಸ್ವಭಾವವಾಗಿ ಜಗುಪ್ಸೆಯನ್ನುಂಟುಮಾಡುವುದಿಲ್ಲ. ಈ ಕಾರಣದಿಂದಲೇ ರಾಜರು ಶಿಕ್ಷಾರ್ಹರಾದವರನ್ನು ಶಿಕ್ಷಿಸುವುದು ಲೋಕದಲ್ಲಿ ಶ್ಲಾಘನೆಗೆ ಕಾರಣವಾಗಿರುತ್ತದೆ. ಅನುಗ್ರಹಮಾಡುವುದು ಹೇಗೆ ಮುಖ್ಯವೋ ನಿಗ್ರಹವೂ ಹಾಗೆಯೇ ಅವಶ್ಯಕವಾಗಿರುವುದು. ತಪ್ಪನ್ನು ಮಾಡಿದವರು ತಮಗೆ ಸ್ವಕೀಯರೇ ಆದಾಗ್ಯೂ ಅವರು ನಿಗ್ರಹಕ್ಕೆ ಅರ್ಹರು. ಅವರನ್ನು ತಮ್ಮವರೆಂದು ಶಿಕ್ಷಿಸದೆ ಬಿಡಬಾರದು. ಶಿಕ್ಷಿಸಲೇಬೇಕು. ಹೀಗೆ ಮಾಡದಿದ್ದರೆ ಪಕ್ಷ

**ಯತ್ಸಿದ್ಧಿರೀಶ್ವರ ತ್ವೇನಕಾರ್ಯವರ್ಗಸ್ಯ ಕೃತ್ಸ್ನಶಃ ।**
**ನ ಸ ಚೇದೀಶತಾಂ ಕುರ್ಯಾಜ್ಜಗತಃ ಕಥಮೀಶ್ವರಃ ॥ ೨೭ ॥**

**ಈಶೇಚ್ಛಾ ಚ ವಿಧಾತ್ಮತ್ವಂ ವಿಧಿರಾಜ್ಞಾಪನಂ ಪರಂ ।**
**ಆಜ್ಞಾವಶ್ಯಮಿದಂ ಕುರ್ಯಾನ್ನ ಕುರ್ಯಾದಿತಿ ಶಾಸನಂ ॥ ೨೮ ॥**

**ತಚ್ಛಾಸನಾನುವರ್ತಿತ್ವಂ ಸಾಧುಭಾವಸ್ಯ ಲಕ್ಷಣಂ ।**
**ವಿಪರೀತಮಸಾಧೋಃ ಸ್ಯಾನ್ನ ಸರ್ವಂ ತತ್ತು ದೃಶ್ಯತೇ ॥ ೨೯ ॥**

**ಸಾಧುಸಂರಕ್ಷಣೀಯಂ ಚೇದ್ವಿನಿವರ್ತ್ಯಮಸಾಧು ಯತ್ ।**
**ನಿವರ್ತತೇ ಚ ಸಾಮಾದೇರಂತೇ ದಂಡೋ ಹಿ ಸಾಧನಂ ॥ ೩೦ ॥**

---

ಪಾತದೋಷವು ಪ್ರಾಪ್ತವಾಗುವುದು. ಈಶ್ವರನಿಗೆ ಪಕ್ಷಪಾತವೆಂಬುವುದಿಲ್ಲ. ಪಕ್ಷಪಾತವಿರುವವನು ಎಷ್ಟೇ ಗುಣಯುಕ್ತನಾದರೂ ದೇವನಾಗಲಾರನು. ಪಕ್ಷಪಾತವಿರುವವನನ್ನು ಸರ್ವಲೋಕೇಶ್ವರನೆಂದು ಹೇಗೆ ಹೇಳಲಾದೀತು ?

೨೭. ಈಶ್ವರನಾದವನು ಎಲ್ಲಾ ವಿಧವಾದ ಕಾರ್ಯಗಳೂ ಸರಿಯಾಗಿರುವಂತೆ ಸಂಪೂರ್ಣವಾಗಿ ನೋಡಬೇಕಾದದ್ದು ಅತ್ಯವಶ್ಯಕವು. ಈ ಕೆಲಸವನ್ನು ಅವನು ಮಾಡದಿದ್ದರೆ ಅವನು ಪ್ರಪಂಚಕ್ಕೆ ಹೇಗೆ ತಾನೆ ಅಧಿಪತಿಯಾಗುವನು ?

೨೮. ಈಶ್ವರನಾದವನ ಇಚ್ಛೆಯು ವಿಧಿರೂಪದಿಂದ ಇರುವುದು. ವಿಧಿಯು ಉತ್ಕೃಷ್ಟವಾದ ಆಜ್ಞೆಯ ರೂಪವಾಗಿರುವುದು. ಆ ಆಜ್ಞೆಯು ಇದನ್ನು ಮಾಡಬೇಕು, ಇದನ್ನು ಮಾಡಕೂಡದು ಎಂದು ಅಪ್ಪಣೆಯಾಗಿರುವುದು.

೨೯. ಈ ವಿಧವಾಗಿರುವ ಅಪ್ಪಣೆಯನ್ನು ಅನುಸರಿಸುವುದು ಸತ್ಪುರುಷನಾದವನ ಸ್ವಭಾವವು. ದುಷ್ಟನಾದವನು ಈ ವಿಧವಾದ ಅಪ್ಪಣೆಯನ್ನು ಮೀರಿ ನಡೆಯುವನು. ಇವೆಲ್ಲವೂ ದುಷ್ಟನಲ್ಲಿ ಕಂಡುಬರುವುದಿಲ್ಲವಾದ್ದರಿಂದ ಅವನು ಸ್ವೇಚ್ಛಾಚಾರಿಯಾಗಿರುವನು.

೩೦. ಸತ್ಪುರುಷನು ರಕ್ಷಣೆಗೆ ಅರ್ಹನೆಂದು ಹೇಳಿದಂತೆ ದುಷ್ಟನು ರಕ್ಷಣೆಗೆ ಅನರ್ಹನೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ದುಷ್ಟನನ್ನು ಸರಿಯಾಗಿ ನಡೆಯುವಂತೆ ಮಾಡಲು ಸಾಮಾದಿ ಉಪಾಯಗಳು ಯಾವುದೂ ಫಲಕಾರಿಯಾಗದಿರುವಾಗ ಕೊನೆಯಲ್ಲಿ ದಂಡೋಪಾಯವನ್ನು ಉಪಯೋಗಿಸಬೇಕಾಗುವುದು.

ಹಿತಾರ್ಥಲಕ್ಷಣಂ ಚೇದಂ ದಂಡಾಂತಮನುಶಾಸನಂ ।
ಅತೋ ಯದ್ವಿಪರೀತಂ ತದಹಿತಂ ಸಂಪ್ರಚಕ್ಷತೇ ॥ ೩೧ ॥

ಹಿತೇ ಸದಾ ನಿಷಣ್ಣಾನಾಮೀಶ್ವರಸ್ಯ ನಿದರ್ಶನಂ ।
ಸ ಕಥಂ ದುಷ್ಯತೇ ಸದ್ಭಿರಸತಾಮೇವ ನಿಗ್ರಹಾತ್ ॥ ೩೨ ॥

ಅಯುಕ್ತಕಾರಿಣೋ ಲೋಕೇ ಗರ್ಹಣೀಯಾ ವಿವೇಕಿತಾ ।
ಯದುದ್ವೇಜಯತೇ ಲೋಕಂ ತದಯುಕ್ತಂ ಪ್ರಚಕ್ಷತೇ ॥ ೩೩ ॥

ಸರ್ವೋಽಪಿ ನಿಗ್ರಹೋ ಲೋಕೇ ನ ಚ ವಿದ್ವೇಷಪೂರ್ವಕಃ ।
ನ ಹಿ ದ್ವೇಷ್ಟಿ ಪಿತಾ ಪುತ್ರಂ ಯೋ ನಿಗೃಹ್ಯಾತಿಶಿಕ್ಷಯೇತ್ ॥ ೩೪ ॥

---

೩೧. ಈ ದಂಡೋಪಾಯರೂಪವಾದ ಅಪ್ಪಣೆಯನ್ನು ಮಾಡುವುದು, ದುಷ್ಟನಾದವನನ್ನು ಸರಿಯಾದ ಮಾರ್ಗದಲ್ಲಿ ಇರುವಂತೆಮಾಡಿ ಅವನಿಗೆ ಹಿತವನ್ನುಂಟುಮಾಡುವುದಕ್ಕಾಗಿಯೇ ಹೊರತು ಅವನನ್ನು ನಾಶಮಾಡಬೇಕೆಂಬ ಅಭಿಪ್ರಾಯದಿಂದಲ್ಲ. ಈ ಅಭಿಪ್ರಾಯವಿಲ್ಲದೆ ದಂಡೋಪಾಯವನ್ನು ಉಪಯೋಗಿಸುವುದರಿಂದ ಕೆಟ್ಟದ್ದು ಉಂಟಾಗುವುದು.

೩೨. ಯಾವಾಗಲೂ ಹಿತವನ್ನು ಉಂಟುಮಾಡುವುದಕ್ಕಾಗಿಯೇ ಈಶ್ವರನು ಇರುವನು. ಇವನು ದುಷ್ಟರಿಗೆ ಹಿತವನ್ನು ಸಾಧಿಸಬೇಕೆಂಬ ಉದ್ದೇಶದಿಂದಲೇ ಶಿಕ್ಷೆಯನ್ನು ಮಾಡುವುದರಿಂದ ಸತ್ಪುರುಷರಾದವರು ಶಿವನನ್ನು ದೋಷಿಯನ್ನಾಗಿ ಹೇಳಬಾರದು.

೩೩. ನಿಂದ್ಯವಾದ ಕೆಲಸವನ್ನು ಮಾಡುವವರನ್ನು ನಿಂದೆಮಾಡುವುದು ಲೋಕದಲ್ಲಿ ಸ್ವಭಾವಸಿದ್ಧವಾದುದು. ಎಲ್ಲರೂ ತೊಂದರೆಯನ್ನು ಅನುಭವಿಸುವಂತೆ ಮಾಡುವ ಕೆಲಸವನ್ನು ಅಯುಕ್ತವಾದ ಕೆಲಸವೆಂದು ಹೇಳುವರು.

೩೪. ಲೋಕದಲ್ಲಿ ನಿಗ್ರಹವೆಂಬುವುದು ಎಲ್ಲ ಸಂದರ್ಭಗಳಲ್ಲಿಯೂ ದ್ವೇಷಪೂರ್ವಕವಾಗಿರುವುದಿಲ್ಲ. ತಂದೆಯು ಮಗನನ್ನು ಶಿಕ್ಷೆಮಾಡುವುದು ಅವನು ಹೆಚ್ಚಾಗಿ ಬುದ್ಧಿವಂತನಾಗುವಂತೆ ಮಾಡುವುದಕ್ಕಾಗಿಯೇ ಹೊರತು ತೊಂದರೆ ಮಾಡುವುದಕ್ಕಲ್ಲ. ಮಗನ ವಿಷಯದಲ್ಲಿ ತಂದೆಗೆ ದ್ವೇಷಬುದ್ಧಿಯು ಯಾವಾಗಲೂ ಇರುವುದಿಲ್ಲ.

**ಮಾಧ್ಯಸ್ಥೇನಾಪಿ ನಿಗ್ರಾಹ್ಯಾನ್ಯೋ ನಿಗೃಹ್ಣಾತಿ ಮಾರ್ಗತಃ ।**
**ತಸ್ಯಾಪ್ಯವಶ್ಯಂ ಯತ್ಕಿಂಚಿನ್ನೈರ್ಘೃಣ್ಯಮನುವರ್ತತೇ ॥ ೩೫ ॥**

**ಅನ್ಯಥಾ ನ ಹಿನಸ್ತ್ಯೇವ ಸದೋಷಾನಪ್ಯಸೌ ಪರಾನ್ ।**
**ಹಿನಸ್ತಿ ಚಾಯಮಪ್ಯಜ್ಞಾನ್ಪರಂ ಮಾಧ್ಯಸ್ಥ್ಯಮಾಚರನ್ ॥ ೩೬ ॥**

**ತಸ್ಮಾದ್ದುಃಖಾತ್ಮಿಕಾಂ ಹಿಂಸಾಂ ಕುರ್ವಾಣೋ ಯಃ ಸ ನಿರ್ಘೃಣಃ ।**
**ಇತಿ ನಿರ್ಬಂಧಯಂತ್ಯೇಕೇ ನಿಯಮೋ ನೇತಿ ಚಾಪರೇ ॥ ೩೭ ॥**

**ನಿದಾನಜ್ಞಸ್ಯ ಭಿಷಜೋ ರುಗ್ಣೋ ಹಿಂಸಾಂ ಪ್ರಯುಂಜತಃ ।**
**ನ ಕಿಂಚಿದಪಿ ನೈರ್ಘೃಣ್ಯಂ ಘೃಣೈವಾತ್ರ ಪ್ರಯೋಜಿಕಾ ॥ ೩೮ ॥**

೩೫. ಒಬ್ಬನು ಮತ್ತೊಬ್ಬನನ್ನು ದ್ವೇಷಬುದ್ಧಿಯಿಂದ ನಿಗ್ರಹಮಾಡುವನು. ಅಂತಹ ಸಂದರ್ಭದಲ್ಲಿ ಅವನಿಗೆ ಕೊಂಚವೂ ದಯೆಯಿಲ್ಲವೆಂದು ಅವಶ್ಯಕವಾಗಿ ಹೇಳಬೇಕಾಗಿರುವುದು.

೩೬. ಈ ಶಿವನು ಕೊಂಚವೂ ದಯೆಯಿಲ್ಲದವನು ಎಂದು ಎನ್ನಿಸಿಕೊಳ್ಳಬಾರದೆಂದಿದ್ದರೆ ತಪ್ಪಿತಸ್ಥರಾಗಿರುವ ಎಲ್ಲರನ್ನೂ ನಾಶಪಡಿಸದೆ ಇರಬೇಕಾಗಿರುವುದು. ಈ ಶಿವನು ತಪ್ಪಿತಸ್ಥರಾಗಿರುವವರ ವಿಷಯದಲ್ಲಿ ಹೆಚ್ಚಾದ ಉದಾಸೀನತೆಯನ್ನು ತೋರಿಸಿ ನಿಗ್ರಹಮಾಡುವನು.

೩೭. ಹಿತವನ್ನುಂಟು ಮಾಡುವುದಕ್ಕಾಗಿಯೇ ಮಾಡುವ ನಿಗ್ರಹವು ದೋಷವಲ್ಲವಾದ್ದರಿಂದ ಕೇವಲ ದುಃಖವನ್ನುಂಟುಮಾಡುವುದಕ್ಕಾಗಿಯೇ ಹಿಂಸೆಯನ್ನು ಮಾಡುವವನು ಕ್ರೂರಿಯೆಂದೆನಿಸಿಕೊಳ್ಳುವನು. ಈ ನೈರ್ಘೃಣ್ಯ (ನಿರ್ದಯತೆ) ವಿಚಾರದಲ್ಲಿ ಹೀಗೆ ಹೇಳಬೇಕೆಂದು ಕೆಲವರು ಸಿದ್ಧಾಂತಮಾಡಿರುವರು. ಇನ್ನು ಕೆಲವರು ಈ ಪ್ರಕಾರವಾದ ಶಿಕ್ಷೆಯು ಹಿಂಸಾಜನಕವಾಗಿದ್ದಲ್ಲಿ ಎಂದರೆ ಮುಂದಾದರೂ ಹಿತವನ್ನು ಉಂಟುಮಾಡದೆ ಇದ್ದಲ್ಲಿ ಆಗ ಅದು ನೈರ್ಘೃಣ್ಯವು ಎಂದು ಹೇಳಬೇಕಾಗುವುದು ಎನ್ನುವರು.

೩೮. ರೋಗಕಾರಣವನ್ನು ತಿಳಿದಿರುವ ವೈದ್ಯನು ರೋಗಿಯ ವಿಷಯದಲ್ಲಿ ಉಪಯೋಗಮಾಡುವ ಹಿಂಸೆಯು ಅವನ ಕ್ರೂರಸ್ವಭಾವವನ್ನು ತೋರಿಸುವುದಿಲ್ಲ. ಆದರೆ ದಯೆಯನ್ನು ಚೆನ್ನಾಗಿ ಪ್ರಕಟಮಾಡುವುದು. ಏಕೆಂದರೆ ಮುಂದೆ ರೋಗಿಗೆ ಒಳ್ಳೆಯದಾಗಲೆಂಬ ಉದ್ದೇಶದಿಂದಲೇ ತಾತ್ಕಾಲಿಕವಾಗಿ ಹಿಂಸೆಯನ್ನು ಉಪಯೋಗಿಸುವನು.

ಘೃಣಾಪಿ ನ ಗುಣಾಯೈವ ಹಿಂಸ್ರೇಷು ಪ್ರತಿಯೋಗಿಷು ।
ತಾದೃಶೇಷು ಘೃಣೀ ಭ್ರಾಂತ್ಯಾ ಘೃಣಾಂತರಿತನಿರ್ಘೃಣಃ ॥ ೩೯ ॥

ಉಪೇಕ್ಷಾಪೀಹ ದೋಷಾಯ ರಕ್ಷ್ಯೇಷು ಪ್ರತಿಯೋಗಿಷು ।
ಶಕ್ತೌ ಸತ್ಯಾಮುಪೇಕ್ಷಾತೋ ರಕ್ಷ್ಯಸ್ಸದ್ಯೋ ವಿಪದ್ಯತೇ ॥ ೪೦ ॥

ಸರ್ವಸ್ವಾಸ್ಯ ಗತಂ ಪಶ್ಯನ್ಯಸ್ತು ರಕ್ಷ್ಯಮುಪೇಕ್ಷತೇ ।
ದೋಷಾಭಾಸಾನ್ನಮುತ್ಪ್ರೇಕ್ಷ್ಯ ಫಲತಃ ಸೋಽಪಿ ನಿರ್ಘೃಣ ॥ ೪೧ ॥

ತಸ್ಮಾದ್ಘೃಣಾ ಗುಣಾಯೈವ ಸರ್ವಥೇತಿ ನ ಸಂಮತಂ ।
ಸಂಮತಂ ಪ್ರಾಪ್ತಕಾಮಿತ್ವಂ ಸರ್ವಂ ತ್ವನ್ಯದಸಂಮತಂ ॥ ೪೨ ॥

---

೩೯. ಹಿಂಸೆಯನ್ನೇ ಯಾವಾಗಲೂ ಇತರರಿಗೆ ಉಂಟುಮಾಡುತ್ತಿರುವವರ ವಿಷಯದಲ್ಲಿ ತೋರಿಸುವ ದಯೆಯು ಯಾವಾಗಲೂ ಪ್ರಶಸ್ತವಾದುದಲ್ಲ. ಆ ಪ್ರಕಾರವಾಗಿರುವ ಜನರ ವಿಷಯದಲ್ಲಿ ಭ್ರಾಂತಿಯಿಂದ ದಯೆಯನ್ನು ತೋರಿಸುವವನು ಒಂದು ಬಗೆಯ ದಯಾರಹಿತನಾದ ಕ್ರೂರಿಯೇ ಆಗಿರುವನು.

೪೦. ಯಾವನೇ ಆದಾಗ್ಯೂ ತನ್ನ ರಕ್ಷಣೆಗೆ ಒಳಪಟ್ಟವರ ವಿಷಯದಲ್ಲಿ ಸರಿಯಾಗಿ ನಿಗ್ರಹಮಾಡದೆ ಉದಾಸೀನತೆಯಿಂದ ಇರುವುದು ಸರಿಯಲ್ಲ. ಸರಿಯಾದ ಮಾರ್ಗದಲ್ಲಿ ಬುದ್ಧಿಯನ್ನು ಕಲಿಸುವುದಕ್ಕೂ, ನಿಗ್ರಹಮಾಡುವುದಕ್ಕೂ ಸಾಮರ್ಥ್ಯವಿದ್ದಾಗ್ಯೂ ಉದಾಸೀನತೆ ಮಾಡಿದಲ್ಲಿ ಇವನಿಂದ ರಕ್ಷಣೆಯನ್ನು ಹೊಂದುವವನು ಆ ಕ್ಷಣದಲ್ಲಿಯೇ ವಿಪತ್ತನ್ನು ಹೊಂದುವನು.

೪೧. ಎಲ್ಲವನ್ನೂ ಕಳಕೊಂಡು ನಿರ್ಗತಿಕನಾದವನೆಂದು ರಕ್ಷಣೆಗೆ ಯೋಗ್ಯನಾದವನನ್ನು ರಕ್ಷಿಸದೆ ಉದಾಸೀನಮಾಡಿದರೆ, ಅಂತವನು ಕ್ರೂರಿಯೂ ದಯಾರಹಿತನೂ ಎನ್ನಿಸಿಕೊಳ್ಳುವನು.

೪೨. ಆದುದರಿಂದ ಯಾವಾಗಲೂ ದಯೆಯಿಂದ ಇರುವುದು ಗುಣಾವಹವಲ್ಲ. ದಯೆಯುಳ್ಳವನಾಗಲಿ, ಕ್ರೂರಿಯಾಗಲಿ ಇತರರಿಗೆ ಶುಭವನ್ನುಂಟುಮಾಡುವ ಉದ್ದೇಶವಿದ್ದಲ್ಲಿ ಅದು ಶಾಸ್ತ್ರಸಮ್ಮತವಾಗಿರುವುದು. ಇದಕ್ಕೆ ವಿರುದ್ಧವಾಗಿರುವುದು ಸರಿಯಾದದ್ದಲ್ಲವು.

ಮೂರ್ತ್ಯಾತ್ಮಸ್ವಪಿ ರಾಗಾದ್ಯಾ ದೋಷಾಃ ಸಂತ್ಯೇವ ವಸ್ತುತಃ ।
ತಥಾಪಿ ತೇಷಾಮೇವೈತೇ ನ ಶಿವಸ್ಯ ತು ಸರ್ವಥಾ ।
ಅಗ್ನಾವಪಿ ಸಮಾವಿಷ್ಟಂ ತಾಮ್ರಂ ಖಲು ಸಕಾಲಿಕಂ ॥ ೪೩ ॥

ಇತಿ ನಾಗ್ನಿರಸೌ ದುಷ್ಯೇತ್ತಾಮ್ರಸಂಸರ್ಗಕಾರಣಾತ್ ।
ನಾಗ್ನೇರಶುಚಿಸಂಸರ್ಗಾದಶುಚಿತ್ವಮುಪೇಕ್ಷತೇ ॥ ೪೪ ॥

ಅಶುಚೇಸ್ತ್ವಗ್ನಿಸಂಯೋಗಾಚ್ಛುಚಿತ್ವಮಪಿ ಜಾಯತೇ ।
ಏವಂ ಶೋಧ್ಯಾತ್ಮಸಂಸರ್ಗಾನ್ನಹ್ಯಶುದ್ಧಃ ಶಿವೋ ಭವೇತ್ ॥ ೪೫ ॥

ಶಿವಸಂಸರ್ಗತಸ್ತ್ವೇಷ ಶೋಧ್ಯಾತ್ಮೈವ ಹಿ ಶುಧ್ಯತಿ ।
ಅಯಸ್ಯಗ್ನೌ ಸಮಾವಿಷ್ಟೇ ದಾಹೋಽಗ್ನೇರೇವ ನಾಯಸಃ ॥ ೪೬ ॥

---

೪೩. ಆಕಾರವನ್ನು ಹೊಂದಿರುವವರಿಗೆ ಎಂದರೆ ಶರೀರಧಾರಿಗಳಾದ ಪ್ರಾಣಿಗಳಿಗೆ ಪ್ರಾಯಿಕವಾಗಿ ರಾಗದ್ವೇಷಗಳು ಇರುವವು ಎಂಬುದು ವಸ್ತುಸ್ಥಿತಿಯ ಸ್ವಭಾವವಾಗಿರುತ್ತದೆ. ಆದಾಗ್ಯೂ ಇದು ಲೋಕರೀತಿಯಿಂದ ಇರುವವರಿಗೇ ಹೊರ್ತು ಶಿವನಿಗೆ ಇದು ಅನ್ವಯಿಸುವುದಿಲ್ಲ.

೪೪-೪೫. ಅಗ್ನಿಯಲ್ಲಿ ದೋಷದಿಂದ ಕೂಡಿರುವ ತಾಮ್ರವನ್ನು ಪುಟಹಾಕುವರು. ಇದರಿಂದ ತಾಮ್ರಸಂಬಂಧವಾದ ದೋಷವು ಅಗ್ನಿಗೆ ಉಂಟಾಗುವುದಿಲ್ಲ. ಆ ಪ್ರಕಾರವಾಗಿರುವ ಅಗ್ನಿಯ ಸಂಬಂಧದಿಂದ ಅಶುಚಿತ್ವವೂ (ಲೆಕ್ಕಕ್ಕೆ) ಗಣನೆಗೆ ಬರುವುದಿಲ್ಲ. ಅಶುಚಿಯಾದ ಪದಾರ್ಥವು ಅಗ್ನಿಯ ಸಂಬಂಧದಿಂದ ಶುದ್ಧಿಯಾಗುತ್ತದ. ಹೀಗೆಯೇ ಶೋಧನೆಗೆ ಯೋಗ್ಯರಾದವರ ಸಂಬಂಧದಿಂದ ಶಿವನಿಗೆ ಯಾವ ವಿಧವಾದ ದೋಷವೂ ಉಂಟಾಗುವುದಿಲ್ಲ.

೪೬. ಶಿವಸಂಬಂಧದಿಂದ ಶೋಧ್ಯನಾದವನು ಮಾತ್ರ ಶುದ್ಧಿಯನ್ನು ಹೊಂದುವನು. ಅಗ್ನಿಯಲ್ಲಿ ಕಬ್ಬಿಣವನ್ನು ಹಾಕಿದರೆ ಅದರಲ್ಲಿ ಹುಟ್ಟುವ ಸುಡುವ ಶಕ್ತಿಯೂ ಅಗ್ನಿಯದೇ ಹೊರತು ಕಬ್ಬಿಣದ್ದಾಗಿರುವುದಿಲ್ಲ. ಹೀಗೆಯೇ ಆಕಾರವನ್ನು ಹೊಂದಿರುವ ಶಿವನ (ಆಜ್ಞಾರೂಪವಾದ) ಐಶ್ವರ್ಯವು ಪ್ರಕಟವಾಗುವುದೇ ಹೊರ್ತು ಅದರಲ್ಲಿ ಆತ್ಮನ ಮಹಿಮೆಯೇನೂ ಇಲ್ಲ.

ಮೂರ್ತಾತ್ಮನ್ಯೇವಮೈಶ್ವರ್ಯಮೀಶ್ವರಸ್ಯೈವ ನಾತ್ಮನಾಂ ।
ನ ಹಿ ಕಾಷ್ಠಂ ಜ್ವಲತ್ಯೂರ್ಧ್ವಮಗ್ನಿರೇವ ಜ್ವಲತ್ಯಸೌ ॥ ೪೭ ॥

ಕಾಷ್ಠಸ್ಯಾಂಗಾರತಾ ನಾಗ್ನೇರೇವಮತ್ರಾಪಿ ಯೋಜ್ಯತಾಂ ।
ಅತ ಏವ ಜಗತ್ಯಸ್ಮಿನ್ಕಾಷ್ಠಪಾಷಾಣಮೃತ್ಸ್ವಪಿ ॥ ೪೮ ॥

ಶಿವಾವೇಶವಶಾದೇವ ಶಿವತ್ವಮುಪಚರ್ಯತೇ ।
ಮೈತ್ರ್ಯಾದಯೋ ಗುಣಾ ಗೌಣಾಸ್ತಸ್ಮಾತ್ತೇ ಭಿನ್ನವೃತ್ತಯಃ ॥ ೪೯ ॥

ತೈರ್ಗುಣೈರುಪರಕ್ತಾನಾಂ ದೋಷಾಯ ಚ ಗುಣಾಯ ಚ ।
ಯತ್ತು ಗೌಣಮಗೌಣಂ ಚ ತತ್ಸರ್ವಮನುಗೃಹ್ಣತಃ ।
ನ ಗುಣಾಯ ನ ದೋಷಾಯ ಶಿವಸ್ಯ ಗುಣವೃತ್ತಯಃ ॥ ೫೦ ॥

---

೪೭. ಕಟ್ಟಿಗೆಯು ಮೇಲು ಮುಖವಾಗಿ ಉರಿಯುವುದಿಲ್ಲ. ಅಗ್ನಿಯೇ ಊರ್ಧ್ವ ಮುಖವಾಗಿ ಉರಿಯುವುದು. ಕಟ್ಟಿಗೆಯು ಕೆಂಡವಾಗಿದ್ದಾಗ್ಯೂ ಅದು ಸುಡುವಂತೆ ಆಗಬೇಕಾದರೆ ಅಗ್ನಿಯೇ ಹೇಗೆ ಕಾರಣವೋ ಹಾಗೆ ಶಿವನ ಸಂಬಂಧ ವಿಲ್ಲದೆ ಕೇವಲ ಆಕಾರಕ್ಕೆ ಯಾವ ವಿಧವಾದ ಸಾಮರ್ಥ್ಯವೂ ಉಂಟಾಗುವುದಿಲ್ಲ.

೪೮. ಈ ಕಾರಣದಿಂದಲೇ ಮರ, ಮಣ್ಣು, ಕಲ್ಲು ಇವುಗಳಿಂದ ಮಾಡಿರುವ ಶಿವನ ಆಕಾರಗಳು ಶಿವನ ಸಂಬಂಧವಾದ ಮಹಿಮೆಯ ಸಂಕರ್ಪದಿಂದಲೇ ಶಿವನೆಂದು ಹೆಸರನ್ನು ಹೊಂದಿ ಪೂಜಾರ್ಹವಾಗಿರುವವು. ಸ್ನೇಹ, ದ್ವೇಷ ಇವೇ ಮೊದಲಾದ ಆಕಾರನಿಷ್ಠವಾದ ಸ್ವಾಭಾವಿಕ ಗುಣಗಳು ಉಪಚಾರಾರ್ಹವಾದುವುಗಳು. ಇವುಗಳು ಶಿವನಿಗೆ ಸ್ವಭಾವಸಿದ್ಧವಾದವುಗಳಲ್ಲ. ಆದ್ದರಿಂದಲೇ ಇವುಗಳನ್ನು ಶಿವನಲ್ಲಿಲ್ಲವೆಂದೂ ಬೇರೆಯಾದವರಲ್ಲಿ ಇರುತಕ್ಕುವುಗಳೆಂದೂ ಹೇಳುವರು.

೪೯-೫೦. ಶಿವನಲ್ಲಿರುವ ಗುಣಗಳು ಮೈತ್ರ್ಯಾದಿ ಗುಣಗಳಿಂದ ವ್ಯಾಪ್ತ ರಾದವರ ದೋಷವನ್ನು ಪ್ರಕಟಮಾಡಿ ಅವರಿಗೆ ನಿಗ್ರಹಹನ್ನು ಮಾಡುವುದಕ್ಕೂ ಗುಣಗಳನ್ನು ಹೆಚ್ಚಿಸಿ ಸದ್ಗತಿಯನ್ನುಂಟುಮಾಡುವುದಕ್ಕೂ ಸಮರ್ಥವಾಗಿರುವವು. ಕೆಲವು ಕಡೆಯಲ್ಲಿ ಗೌಣವೇ ಆಗಲಿ, ಸ್ವಭಾವಸಿದ್ಧವೇ ಆಗಲಿ ಮೈತ್ರ್ಯಾದಿ ಗುಣ ಗಳೆಲ್ಲವನ್ನೂ ಹೊಂದಿರುವವರನ್ನು ಅನುಗ್ರಹಿಸುವವು. ಆದುದರಿಂದ ಶಿವನಲ್ಲಿರುವ ಗುಣಗಳು ಗುಣಕ್ಕೂ, ದೋಷಕ್ಕೂ ಸಂಬಂಧಪಟ್ಟವುಗಳಿಲ್ಲ.

**ನ ಚಾನುಗ್ರಹಶಬ್ದಾರ್ಥಂ ಗೌಣಮಾಹುರ್ವಿಪಶ್ಚಿತಃ ।**
**ಸಂಸಾರಮೋಚನಂ ಕಿಂ ತು ಶೈವಮಾಜ್ಞಾಮಯಂ ಹಿತಂ ॥ ೫೧ ॥**

**ಹಿತಂ ತದಾಜ್ಞಾಕರಣಂ ಯದ್ಧಿತಂ ತದನುಗ್ರಹಃ ।**
**ಸರ್ವಂ ಹಿತೇ ನಿಯುಂಜಾನಃ ಸರ್ವಾನುಗ್ರಹಕಾರಕಃ ॥ ೫೨ ॥**

**ಯಸ್ತೂಪಕಾರಶಬ್ದಾರ್ಥಸ್ತಮಪ್ಯಾಹುರನುಗ್ರಹಂ ।**
**ತಸ್ಯಾಪಿ ಹಿತರೂಪತ್ವಾಚ್ಛಿವಃ ಸರ್ವೋಪಕಾರಕಃ ॥ ೫೩ ॥**

**ಹಿತೇ ಸದಾ ನಿಯುಕ್ತಂ ತು ಸರ್ವಂ ಚಿದಚಿದಾತ್ಮಕಂ ।**
**ಸ್ವಭಾವಪ್ರತಿಬಂಧಂ ತತ್ಸಮಂ ನ ಲಭತೇ ಹಿತಂ ॥ ೫೪ ॥**

---

೫೧-೫೨. ಶಿವನು ಮಾಡುವ ಕೆಲಸದಲ್ಲಿ ನಿಗ್ರಹವೇ ಮುಖ್ಯವಾಗಿರುವುದರಿಂದ ಅನುಗ್ರಹವನ್ನು ಗೌಣವೆಂದು ಕೆಲವರು ಹೇಳುವರು. ಇದು ಸರಿಯಾದುದಲ್ಲ. ಶಿವನ ಆಜ್ಞೆಯು ಜನನಮರಣ ಪ್ರವಾಹರೂಪವಾದ ಸಂಸಾರದಿಂದ ಬಿಡುಗಡೆಯನ್ನು ಹೊಂದಿಸಿ ಹಿತವನ್ನುಂಟುಮಾಡುವುದಾಗಿಯೇ ಇರುವುದು. ಯಾವುದು ಹಿತವಾಗಿರುವುದೋ ಅದು ಶಿವನ ಆಜ್ಞೆಯು. ಯಾವುದು ಶಿವನ ಆಜ್ಞೆಯೋ ಅದು ಅನುಗ್ರಹವೆನಿಸಿಕೊಂಡಿರುವುದು. ನಿಗ್ರಹವು ಉಂಟಾದರೂ ಕೊನೆಯಲ್ಲಿ ಸುಖವನ್ನು ಉಂಟುಮಾಡುವುದಾಗಿರುವುದರಿಂದ ಅನುಗ್ರಹವಾಗಿಯೇ ಇರುವುದು. ಶಿವನ ಆಜ್ಞೆಯು ಎಲ್ಲರಿಗೂ ಹಿತವನ್ನುಂಟುಮಾಡುವುದರಲ್ಲಿಯೇ ಪರ್ಯವಸಿತವಾಗುವ ಕಾರಣ ಶಿವನು ಯಾವಾಗಲೂ ಎಲ್ಲರಿಗೂ ಅನುಗ್ರಹಮಾಡುವವನಾಗಿಯೇ ಇರುವನು.

೫೩. ಉಪಕಾರವೆಂದು ಲೋಕದಲ್ಲಿ ಹೇಳುವ ಶಬ್ದದ ಅರ್ಥವೂ ಹೀಗೆಯೇ ಹಿತವನ್ನುಂಟುಮಾಡುವ ಅನುಗ್ರಹಾರ್ಥದಲ್ಲಿಯೇ ರೂಢವಾಗಿರುವುದು. ಉಪಕಾರವೂ ಹಿತರೂಪದಿಂದಿರುವಕಾರಣ ಶಿವನು ಎಲ್ಲರಿಗೂ ಉಪಕಾರವನ್ನು ಮಾಡುವವನಾಗಿರುವನು.

೫೪. ಶಿವನು ಚರಾಚರಾತ್ಮಕವಾದ ಸಮಸ್ತ ವಸ್ತುಗಳಿಗೂ ಪಕ್ಷಪಾತವಿಲ್ಲದೆ ಒಂದೇ ಸಮವಾಗಿ ಹಿತವನ್ನುಂಟುಮಾಡುವನು. ಆದರೆ ಆ ವಸ್ತುಗಳ (ಪ್ರಾಣಿಗಳ) ಸ್ವಭಾವಗಳು ಬೇರೆ ಬೇರೆಯಾಗಿರುವುದರಿಂದ ಅವುಗಳಿಗೆ ಉಂಟಾಗುವ ಹಿತವೂ ಹೆಚ್ಚು ಕಡಿಮೆಯಾಗಿರುವವು. ಹೇಗೆಂದರೆ—

ಯಥಾ ವಿಕಾಶಯತ್ಯೇವ ರವಿಃ ಪದ್ಮಾನಿ ಭಾನುಭಿಃ ।
ಸಮಂ ನ ವಿಕಸಂತ್ಯೇವ ಸ್ವಸ್ವಭಾವಾನುರೋಧತಃ ॥ ೫೫ ॥

ಸ್ವಭಾವೋಽಪಿ ಹಿ ಭಾವಾನಾಂ ಭಾವಿನೋಽರ್ಥಸ್ಯ ಕಾರಣಂ ।
ನ ಹಿ ಸ್ವಭಾವೋ ನಶ್ಯಂತಮರ್ಥಂ ಕರ್ತೃಷು ಸಾಧಯೇತ್ ॥ ೫೬ ॥

ಸುವರ್ಣಮೇವ ನಾಂಗಾರಂ ದ್ರಾವಯತ್ಯಗ್ನಿಸಂಗಮಃ ।
ಏವಂ ಪಕ್ವಮಲಾನೇವ ಮೋಚಯೇನ್ನ ಶಿವಃ ಪರಾನ್ ॥ ೫೭ ॥

ಯದ್ಯಥಾ ಭವಿತುಂ ಯೋಗ್ಯಂ ತತ್ತಥಾ ನ ಭವೇತ್ಸ್ವಯಂ ।
ವಿನಾ ಭಾವನಯಾ ಕರ್ತಾ ಸ್ವತಂತ್ರಸ್ಸಂತತೋ ಭವೇತ್ ॥ ೫೮ ॥

೫೫. ಸೂರ್ಯನು ತನ್ನ ಕಿರಣಗಳಿಂದ ಕಮಲಗಳನ್ನು ಅರಳುವ ಹಾಗೆ ಮಾಡಿದಾಗ್ಯೂ ಎಲ್ಲಾ ಕಮಲದ ಹೂವುಗಳೂ ಒಂದೇ ಸಮನಾಗಿ ಅರಳುವುದಿಲ್ಲ ಹೀಗೆ ಆಗುವುದರಿಂದ ಈ ವಿಷಯದಲ್ಲಿ ಸೂರ್ಯನ ಕಿರಣಗಳ ದೋಷವು ಕಾರಣವಾಗದೆ ಆಯಾಯ ಹೂವುಗಳ ಸ್ವಭಾವಗಳೇ ಕಾರಣವಾಗಿರುವವು.

೫೬-೫೭. ಆಯಾಯ ಪದಾರ್ಥಗಳ ಸ್ವಭಾವವೂ ಆಯಾಯ ಪದಾರ್ಥಗಳಲ್ಲಿ ಮುಂದೆ ಉಂಟಾಗುವ ಫಲರೂಪವಾದ ಪರಿಣಾಮಕ್ಕನುಸಾರವಾಗಿ ಕಾರಣವಾಗಿರುವುದು. ಎಂದರೆ ಪದಾರ್ಥಗಳ ಸ್ವಭಾವಕ್ಕನುಸಾರವಾಗಿ ಅವುಗಳಿಗೆ ಮುಂದೆ ಫಲವುಂಟಾಗುವುದು. ಆ ಫಲಗಳಲ್ಲಿ ಕಂಡುಬರುವ ವ್ಯತ್ಯಾಸಗಳು ಪದಾರ್ಥಗಳ ಸ್ವಭಾವಕ್ಕನುಸಾರವಾಗಿರುವವೇ ಹೊರತು ಫಲವನ್ನು ಕೊಡುವ ಈಶ್ವರನು ಮಾಡುವ ಪಕ್ಷಪಾತವೆಂದು ಹೇಳಲಾಗುವುದಿಲ್ಲ. ಅಗ್ನಿಗೂ, (ಸುವರ್ಣ) ಚಿನ್ನಕ್ಕೂ ಸಂಬಂಧವು ಉಂಟಾದಾಗ ಚಿನ್ನವನ್ನು ಅಗ್ನಿಯು ಕರಗಿಸುವುದು. ಕೆಂಡವನ್ನು ಕರಗಿಸುವುದಿಲ್ಲ. ಇದರಂತೆಯೇ ಶಿವನು ಪಕ್ವಮಲವುಳ್ಳ ಪ್ರಾಣಿಗಳನ್ನು ಎಂದರೆ ತತ್ವಜ್ಞಾನದಿಂದ ಕರ್ಮಪರಿಪಾಕವನ್ನು ಕಳೆದುಕೊಂಡು ಮೋಕ್ಷಪ್ರಾಪ್ತಿಗೆ ಅರ್ಹರಾದವರನ್ನು ಸಂಸಾರದಿಂದ ಬಿಡಿಸುವನೇ ಹೊರತು ಇತರರನ್ನು ಬಿಡಿಸುವುದಿಲ್ಲ.

೫೮. ಯಾವ ಪ್ರಾಣಿಯೇ ಆದಾಗ್ಯೂ ತಾನು ಹೇಗೆ ಆಗಬೇಕೆಂದು ಇಚ್ಛಿಸುವುದೋ ಹಾಗೆ ಸುಮ್ಮನೆ ಆಗುವುದಿಲ್ಲ. ಅದಕ್ಕನುಸಾರವಾದ ದೃಢವಾದ ಭಾವನೆಯನ್ನು ತನ್ನ ಮನಸ್ಸಿನಲ್ಲಿ ಅದು ಹೊಂದಿ, ಯಾವಾಗಲೂ ಅದಕ್ಕನುಸಾರವಾಗಿ ಪ್ರಯತ್ನಪಟ್ಟು ಅನಂತರ ತಾನೇ ತನ್ನ ಇಷ್ಟಪ್ರಕಾರವಾಗಿರುವಷ್ಟುಮಟ್ಟಿನ ಸ್ವತಂತ್ರತೆಯನ್ನು ಹೊಂದುವುದು.

ಸ್ವಭಾವವಿಮಲೋ ಯದ್ವತ್ಸರ್ವಾನುಗ್ರಾಹಕಶ್ಶಿವಃ ।
ಸ್ವಭಾವಮಲಿನಾಸ್ತದ್ವದಾತ್ಮಾನೋ ಜೀವಸಂಜ್ಞಿತಾಃ ॥ ೫೯ ॥

ಅನ್ಯಥಾ ಸಂಸರಂತ್ಯೇತೇ ನಿಯಮಾನ್ನ ಶಿವಃ ಕಥಂ ।
ಕರ್ಮಮಾಯಾನುಬಂಧೋಽಸ್ಯ ಸಂಸಾರಃ ಕಥ್ಯತೇ ಬುಧೈಃ ॥ ೬೯ ॥

ಅನುಬಂಧೋಽಯಮಸ್ಯೈವ ನ ಶಿವಸ್ಯೇತಿ ಹೇತುಮಾನ್ ।
ಸ ಹೇತುರಾತ್ಮನಾಮೇವ ನಿಜೋ ನಾಗಂತುಕೋ ಮಲಃ ॥ ೬೧ ॥

ಆಗಂತುಕತ್ವೇ ಕಸ್ಯಾಪಿ ಭಾವ್ಯಂ ಕೇನಾಪಿ ಹೇತುನಾ ।
ಯೋಽಯಂ ಹೇತುರಸಾವೇಕಸ್ತ್ವವಿಚಿತ್ರಸ್ವಭಾವತಃ ॥ ೬೨ ॥

---

೫೯. ಶಿವನು ಸ್ವಭಾವವಾಗಿ ಪರಿಶುದ್ಧವಾದವನು. ಅವನು ಎಲ್ಲರನ್ನೂ ಅನುಗ್ರಹಮಾಡುವವನಾಗಿರುವನು. ಹಾಗೆಯೇ ಜೀವರೆಂದು ಹೆಸರನ್ನು ಹೊಂದಿರುವ ಶರೀರಿಗಳು ಅಥವಾ ಪ್ರಾಣಿಗಳು (ಆತ್ಮರುಗಳು) ತಮ್ಮ ತಮ್ಮ ಸ್ವಭಾವಕ್ಕನುಗುಣವಾಗಿ ಮಲಿನರಾಗಿಯೇ ಇರುವರು.

೬೦. ಇವರು ಸ್ವಭಾವದಿಂದ ಮಾಲಿನ್ಯವನ್ನು ಹೊಂದಿರುವ ಕಾರಣದಿಂದಲೇ ಶಿವಭಾವವು ತಪ್ಪಿಹೋಗಿ ಯಾವಾಗಲೂ ಜನ್ಮಮರಣರೂಪವಾದ ಸಂಸಾರವು ಇವರಿಗೆ ತಪ್ಪದೆ ಇರುವುದು. ಹೀಗಿಲ್ಲದಿದ್ದರೆ ಶಿವನಿಗೂ ಇಂತಹ ಸಂಸಾರವು ಉಂಟು ಎಂದು ಹೇಳಬೇಕಾಗುವುದು. ಜೀವರಿಗೆ ಸಂಸಾರವು ತಪ್ಪದೆ ಉಂಟಾಗಲು ಅವರ ಕರ್ಮ, ಮತ್ತು ಅವರಿಗೆ ಇರುವ ಮಾಯಾಸಂಬಂಧ ಇವುಗಳೇ ಕಾರಣವೆಂದು ತಿಳಿದವರು ಹೇಳುವರು.

೬೧. ಜೀವರ ಸಂಸಾರಕ್ಕೆ ಕರ್ಮಮಾಯಾ ಸಂಬಂಧವೇ ಕಾರಣವು. ಎಂಬ ಈ ನಿಯಮವು ಜೀವರಿಗೆ ಸಂಬಂಧಪಟ್ಟದ್ದಾಗಿರುವುದು. ಶಿವನಿಗೆ ಸಂಬಂಧಪಟ್ಟಿದ್ದಲ್ಲ. ಇದು ಸಕಾರಣವಾಗಿರುವುದು. ಆ ಕಾರಣವು, ಆಕಾರವನ್ನು ಹೊಂದಿರುವ ಜೀವರಿಗೆ ಸ್ವಭಾವಸಿದ್ಧವಾದ ಕರ್ಮಮಾಯಾ ಸಂಬಂಧವು ಹಿಂದಿನಿಂದಲೂ ಬಂದ ಕರ್ಮದ ಫಲವಾಗಿರುವುದು. ಮುಂದೆ ಅವರು ಮಾಡುವ ಕರ್ಮಕ್ಕೆ ಸಂಬಂಧಪಡುವುದಿಲ್ಲ.

೬೨. ಆಗಂತುಕವಾದ ಮಲಸಂಬಂಧದಿಂದ ಜನ್ಮ, ಮರಣರೂಪವಾದ ಸಂಸಾರವು ಆಗಿಂದಾಗ್ಯೆ ಬರುತ್ತಿರುವುದಾದರೆ ಅದಕ್ಕೂ ಯಾವುದಾದರೂ ಒಂದು

ಆತ್ಮತಾಯಾಃ ಸಮತ್ವೇಽಪಿ ಬದ್ಧಾ ಮುಕ್ತಾಃ ಪರೇ ಯತಃ ।
ಬದ್ಧೇಷ್ವೇವ ಪುನಃ ಕೇಚಿಲ್ಲಯಭೋಗಾಧಿಕಾರತಃ ॥ ೬೩ ॥

ಜ್ಞಾನೈಶ್ವರ್ಯಾದಿವೈಷಮ್ಯಂ ಭಜಂತೇ ಸೋತ್ತರಾಧರಾಃ ।
ಕೇಚಿನ್ಮೂರ್ತ್ಯಾತ್ಮತಾಂ ಯಾಂತಿ ಕೇಚಿದಾಸನ್ನಗೋಚರಾಃ ॥ ೬೪ ॥

ಮೂರ್ತ್ಯಾತ್ಮಸು ಶಿವಾಃ ಕೇಚಿದಧ್ವನಾಂ ಮೂರ್ಧಸು ಸ್ಥಿತಾಃ ।
ಮಧ್ಯೇ ಮಹೇಶ್ವರಾ ರುದ್ರಾಸ್ತ್ವರ್ವಾಚೀನಪದೇ ಸ್ಥಿತಾಃ ॥ ೬೫ ॥

ಆಸನ್ನೇಽಪಿ ಚ ಮಾಯಾಯಾಃ ಪರಸ್ಮಾತ್ಕಾರಣಾತ್ರಯಂ ।
ತತ್ರಾಪ್ಯಾತ್ಮಾ ಸ್ಥಿತೋಽಧಸ್ತಾದಂತರಾತ್ಮಾ ಚ ಮಧ್ಯತಃ ॥ ೬೬ ॥

---

ಕಾರಣವನ್ನು ಹೇಳಬೇಕಾಗುವುದು. ಈ ವಿಷಯದಲ್ಲಿ ಸ್ವಭಾವಸಿದ್ಧವಾದ ಅನಾದಿ ಮಾಯಾಕರ್ಮ ಸಂಬಂಧವೇ ಕಾರಣವಾಗಿರುವಾಗ ಇನ್ನೊಂದು ಬೇರೆ ಕಾರಣ ವಿದ್ದರೆ ಅದು ಎಲ್ಲರಿಗೂ ಏಕರೂಪವಾಗಿ ಒಂದೇ ಆಗಿರಬೇಕು. ವಸ್ತುಸ್ಥಿತಿಯು ಹಾಗಿರುವುದಿಲ್ಲ. ಆದ್ದರಿಂದ ಈ ಪ್ರಕಾರವಾದ ಬೇರೆಯ ಕಾರಣವನ್ನು ಕಲ್ಪಿಸು ವುದು ಸರಿಯಾಗಿಲ್ಲ.

೬೩-೬೫. ಆತ್ಮಭಾವವು ಎಲ್ಲಾ ಜೀವರಿಗೂ ಸಮನಾಗಿ ಏಕರೂಪದಿಂದ ಇರುವಾಗ ಕೆಲವರು ಬದ್ಧರಾಗಿಯೂ, ಕೆಲವರು ಮುಕ್ತರಾಗಿಯೂ ಇರುವರು. ಬದ್ಧರಾದವರಲ್ಲಿಯೂ ಕೆಲವರು ಲಯ, ಭೋಗ ಎಂಬ ಹೆಸರಿನ ಅಧಿಕಾರದಿಂದಿ ರುತ್ತಾ ಜ್ಞಾನ ಐಶ್ವರ್ಯ ಇವುಗಳಲ್ಲಿ ಉಚ್ಚ, ನೀಚಭಾವವನ್ನು ಹೊಂದಿರುವರು. ಕೆಲವರು ಆಕಾರವನ್ನು ಧರಿಸಿಕೊಂಡಿರುವರು. ಮತ್ತೆ ಕೆಲವರು ಪರಮೇಶ್ವರನ ಸಮೀಪದಲ್ಲಿಯೇ ಇರುವರು. ಆಕಾರವನ್ನು ಹೊಂದಿರುವವರಲ್ಲಿ ಕೆಲವರು ಶಿವನ ಸ್ವರೂಪದಿಂದ ಉಚ್ಚಸ್ಥಾನದಲ್ಲಿ ಅಧಿಪತಿಗಳಾಗಿರುವರು. ಮತ್ತೆ ಕೆಲವರು ಮಹೇ ಶ್ವರರಾಗಿ ಮಧ್ಯದಲ್ಲಿಯೂ, ರುದ್ರರಾಗಿರುವ ಕೆಲವರು ಅದಕ್ಕಿಂತಲೂ ಕಡಿಮೆಯಾದ ಸ್ಥಾನದಲ್ಲಿಯೂ ಇರುವರು.

೬೬. ಪರಮೇಶ್ವರನ ಸಮೀಪದಲ್ಲಿರುವವರಲ್ಲಿಯೂ, ಕೂಡ ಪರಮೇಶ್ವರನ ಸಂಬಂಧವಾದ ಮಾಯೆಯಿಂದ ಮೂರು ಕಾರಣಗಳು ಕಂಡುಬರುವವು.

ಪರಸ್ತಾತ್ಪರಮಾತ್ಮೇತಿ ಬ್ರಹ್ಮವಿಷ್ಣುಮಹೇಶ್ವರಾಃ ।
ವರ್ತಂತೇ ವಸವಃ ಕೇಚಿತ್ಪರಮಾತ್ಮಪದಾಶ್ರಯಾಃ ॥ ೬೭ ॥

ಅಂತರಾತ್ಮಪದೇ ಕೇಚಿತ್ಕೇಚಿದಾತ್ಮಪದೇ ತಥಾ ।
ಶಾಂತ್ಯತೀತಪದೇ ಶೈವಾಃ ಶಾಂತೇ ಮಾಹೇಶ್ವರೇ ತತಃ ॥ ೬೮ ॥

ವಿದ್ಯಾಯಾಂ ತು ಯಥಾ ರೌದ್ರಾಃ ಪ್ರತಿಷ್ಠಾಯಾಂ ತು ವೈಷ್ಣವಾಃ ।
ನಿವೃತ್ತೌ ಚ ತಥಾತ್ಮಾನೋ ಬ್ರಹ್ಮಾ ಬ್ರಹ್ಮಾಂಗಯೋನಯಃ ॥ ೬೯ ॥

ದೇವಯೋನ್ಯಷ್ಟಕಂ ಮುಖ್ಯಂ ಮಾನುಷ್ಯಮಥ ಮಧ್ಯಮಂ ।
ಪಕ್ಷ್ಯಾದಯೋಽಧಮಾಃ ಪಂಚ ಯೋನಯಸ್ತಾಶ್ಚತುರ್ದಶ ॥ ೭೦ ॥

ಉತ್ತರಾಧರಭಾವೋಽಪಿ ಜ್ಞೇಯಸ್ಸಂಸಾರಿಣೋ ಮಲಃ ।
ಯಥಾಮಭಾವೋ ಭುಕ್ತಸ್ಯ ಪೂರ್ವಂ ಪಶ್ಚಾತ್ತು ಪಕ್ವತಾ ॥ ೭೧ ॥

---

೬೭-೬೯. ಆ ವಿಧವಾದ ಮೂರು ಕಾರಣಗಳಿಂದ ಅದರಲ್ಲಿಯೂ ಆತ್ಮನು ಪರಮೇಶ್ವರನಿಗಿಂತ ಕಡಿಮೆಯಾದವನಾಗಿಯೂ ಅಂತರಾತ್ಮನು ಮಧ್ಯದಲ್ಲಿಯೂ ಪರಮಾತ್ಮನು ಎಲ್ಲಕ್ಕಿಂತಲೂ ಅಧಿಕವಾಗಿಯೂ ಬ್ರಹ್ಮ, ವಿಷ್ಣು, ಮಹೇಶ್ವರರ ರೂಪದಿಂದ ಇರುವನು. ವಸುಗಳಲ್ಲಿ ಕೆಲವರು ಪರಮಾತ್ಮನ ಸ್ಥಾನವನ್ನು ಆಶ್ರಯಿಸಿಕೊಂಡು ಇರುವರು. ಇನ್ನು ಕೆಲವರು ಅಂತರಾತ್ಮನನ್ನು ಆಶ್ರಯಿಸಿಕೊಂಡು ಅಂತರಾತ್ಮನ ಸ್ಥಾನದಲ್ಲಿರುವರು. ಮತ್ತೆ ಕೆಲವರು ಆತ್ಮನ ಆಶ್ರಯದಿಂದ ಆತ್ಮನ ಸ್ಥಾನದಲ್ಲಿರುವರು. ಶಾಂತ್ಯತೀತವೆಂಬ ಸ್ಥಾನದಲ್ಲಿ ಶೈವರೂ ಶಾಂತವೆಂಬ ಪದದಲ್ಲಿ ಮಹೇಶ್ವರರೂ ಇರುವರು. ವಿದ್ಯಾ ಎಂಬ ಸ್ಥಾನದಲ್ಲಿ ರುದ್ರರೂ, ಪ್ರತಿಷ್ಠಾ ಎಂಬ ಸ್ಥಾನದಲ್ಲಿ ವೈಷ್ಣವರೂ, ನಿವೃತ್ತಿತತ್ವದ ಸ್ಥಾನದ ಆಶ್ರಯದಲ್ಲಿ ಆತ್ಮರುಗಳೂ (ಜೀವರುಗಳೂ) ಬ್ರಹ್ಮನ ಅಂಗದಿಂದ ಉತ್ಪನ್ನರಾದವರೂ, ಬ್ರಹ್ಮನೂ ಇರುವರು.

೭೦. ದೇವತೆಗಳಲ್ಲಿರುವ ಉತ್ಪತ್ತಿಭೇದಗಳು ಎಂಟು ಮುಖ್ಯವಾದವು. ಮನುಷ್ಯರ ಉತ್ಪತ್ತಿಭೇದವು ಒಂದೇ. ಅದು ಮಧ್ಯಮವು, ಪಕ್ಷಿಯೇ ಮೊದಲಾದ ಪ್ರಾಣಿಗಳ ಉತ್ಪತ್ತಿಭೇದಗಳು ಐದು, ಅದು ಅಧಮವು. ಈರೀತಿ ಉತ್ಪತ್ತಿಭೇದಗಳು ಒಟ್ಟು ಹದಿನಾಲ್ಕು ವಿಧವಾಗಿ ಇರುವುವು.

೭೧-೭೨. ಸಂಸಾರಿಯಾದವನಿಗೆ ಸಂಬಂಧಿಸಿರುವ ಮಲವು ಉತ್ತಮ, ಅಧಮ ಎಂದು ಎರಡು ವಿಧವಾಗಿರುವುದೆಂದು ತಿಳಿಯಬೇಕು. ಆಹಾರ ಪದಾರ್ಥವು

**ಮಲೋऽಸ್ಯಾಮಶ್ಚ ಪಕ್ವಶ್ಚ ಭವೇತ್ಸಂಸಾರಕಾರಣಂ ।**
**ಆಮೇ ತ್ವಧರತಾ ಪುಂಸಾಂ ಪಕ್ವೇ ತೂತ್ತರತಾ ಕ್ರಮಾತ್ ॥ ೭೨ ॥**

**ಪಶ್ವಾತ್ಮಾನಸ್ತ್ರಿಧಾ ಭಿನ್ನಾ ಏಕದ್ವಿತ್ರಿಮಲಾಃ ಕ್ರಮಾತ್ ।**
**ಅತ್ರೋತ್ತರಾ ಏಕಮಲಾ ದ್ವಿಮಲಾ ಮಧ್ಯಮಾ ಮತಾಃ ।**
**ತ್ರಿಮಲಾಸ್ತ್ವಧಮಾ ಜ್ಞೇಯಾ ಯಥೋತ್ತರಮಧಿಷ್ಠಿತಾಃ ॥ ೭೩ ॥**

**ತ್ರಿಮಲಾನಧಿತಿಷ್ಠಂತಿ ದ್ವಿಮಲೈಕಮಲಾಃ ಕ್ರಮಾತ್ ।**
**ಇತ್ಥಮೌಪಾಧಿಕೋ ಭೇದೋ ವಿಶ್ವಸ್ಯ ಪರಿಕಲ್ಪಿತಃ ॥ ೭೪ ॥**

---

ಮೊದಲು ನೀರಿನ ರೂಪವನ್ನು ಹೊಂದಿದನಂತರ ಪಕ್ವಭಾಗವನ್ನು ಹೊಂದುವುದು. ಇದರಂತೆಯೇ ಸಂಸಾರಿಯಾದವನಿಗೆ ಆಮಭಾವ, ಪಕ್ವಭಾಗ ಎಂದು ಎರಡು ವಿಧದಿಂದ ಇರುವ ಮಲವು ಸಂಸಾರಕ್ಕೆ ಕಾರಣವಾಗಿರುವುದು. ಇದರಲ್ಲಿ ಮಲದ ಸಂಬಂಧವಾದ ಆಮಭಾವವು ನೀಚವೆಂತಲೂ, ಪಕ್ವಭಾಗವು ಉತ್ತಮವೆಂತಲೂ, ಕ್ರಮವಾಗಿ ಹೇಳಿಸಿಕೊಳ್ಳುವುದು.

೭೩ ಪಶುಭಾವದಿಂದ ಇರುವವರು ಏಕಮಲ, ದ್ವಿಮಲ, ತ್ರಿಮಲಗಳುಳ್ಳವರಾಗಿ ಮೂರು ವಿಧದಿಂದ ಇರುವರು. ಇವರಲ್ಲಿ (ಏಕಮಲ) ಒಂದು ವಿಧವಾದ ಮಲವುಳ್ಳವರು ಉತ್ತಮರು. ಎರಡು ವಿಧವಾದ ಮಲವುಳ್ಳವರು ಮಧ್ಯಮರು. ಮೂರು ಮಲವುಳ್ಳವರು ಅಧಮರೆನಿಸಿಕೊಳ್ಳುವರು. ಇವರುಗಳು ಅವರವರ ಉತ್ತಮಾಧಮ ಭಾವಕ್ಕನುಸಾರವಾಗಿ ಇರುವರು. ಇವರುಗಳಲ್ಲಿ ಮೂರು ಮೂಲವುಳ್ಳವರಾಗಿಯೂ ಬಳಿಕ ಇನ್ನೊಂದು ಮಲವನ್ನು ಕಳೆದುಕೊಂಡು ಏಕಮಲವುಳ್ಳವರೂ ಆಗಿ ಕ್ರಮವಾಗಿ ಉತ್ತಮ ಭಾವವನ್ನು ಹೊಂದುವರು. ಏಕಮಲವುಳ್ಳವರು ಅದನ್ನೂ ಕಳೆದುಕೊಂಡು ಉತ್ತಮ ಭಾವವನ್ನು ಹೊಂದುವರು.

೭೪. ಮೂರು ಮಲವುಳ್ಳವರು ಒಂದೊಂದನ್ನಾಗಿ ಕಳೆದುಕೊಂಡು ಉತ್ತಮ ಭಾವವನ್ನು ಹೊಂದುವಹಾಗೆ ಏಕಮಲವುಳ್ಳವರು, ದ್ವಿಮಲವುಳ್ಳವರಾಗಿಯೂ ಬಳಿಕ ತ್ರಿಮಲವುಳ್ಳವರೂ ಆಗಿ ಅಧಮ ಭಾವವನ್ನು ಹೊಂದುವರು. ಇದು ವಿಲೋಮ ಕ್ರಮವು. ಈ ಪ್ರಪಂಚದಲ್ಲಿ ಈ ಪ್ರಕಾರವಾಗಿ ಮಲಸಂಬಂಧದಿಂದ ಉಪಾಧಿಪ್ರಯುಕ್ತವಾದ ಭೇದವು ಉಂಟಾಗಿರುವುದು.

ಏಕದ್ವಿತ್ರಿಮುಲಾನ್ಸರ್ವಾಂಞ್ಛಿವ ಏಕೋಽಧಿತಿಷ್ಠತಿ ।
ಅಶಿವಾತ್ಮಕಮಪ್ಯೇತಚ್ಛಿವೇನಾಧಿಷ್ಠಿತಂ ಯಥಾ ॥ ೭೫ ॥

ಅರುದ್ರಾತ್ಮಕಮಿತ್ಯೇವಂ ರುದ್ರೈರ್ಜಗದಧಿಷ್ಠಿತಂ ।
ಅಂಡಾಂತಾ ಹಿ ಮಹಾಭೂಮಿಶ್ಶತರುದ್ರಾದ್ಯಧಿಷ್ಠಿತಾ ॥ ೭೬ ॥

ಮಾಯಾಂತಮಂತರಿಕ್ಷಂ ತು ಹ್ಯಮರೇಶಾದಿಭಿಃ ಕ್ರಮಾತ್ ।
ಅಂಗುಷ್ಠಮಾತ್ರಪರ್ಯಂತೈಸ್ಸಮಂತಾತ್ಸಂತತಂ ತತಂ ॥ ೭೭ ॥

ಮಹಾಮಾಯಾವಸಾನಾ ದ್ಯೌರ್ವಾಯ್ವಾದ್ಯೈರ್ಭುವನಾಧಿಪೈಃ ।
ಅನಾಶ್ರಿತಾಂತೈರಧ್ವಾಂತರ್ವರ್ತಿಭಿಸ್ಸಮಧಿಷ್ಠಿತಾಃ ॥ ೭೮ ॥

ತೇ ಹಿ ಸಾಕ್ಷಾದ್ದಿವಿಷದಸ್ತ್ವಂತರಿಕ್ಷಸದಸ್ತಥಾ ।
ಪೃಥಿವೀಷದ ಇತ್ಯೇವಂ ದೇವಾ ದೇವವ್ರತೈಃ ಸ್ಥಿತಾಃ ॥ ೭೯ ॥

---

೭೫-೭೭. ಶಿವರೂಪದಿಂದ ಇಲ್ಲದಿದ್ದಾಗ್ಯೂ ಈ ಪ್ರಪಂಚವು ಶಿವನಿಂದ ಹೇಗೆ ವ್ಯಾಪ್ತವಾಗಿ ಇರುವುದೋ ಅದರಂತೆಯೇ (ರುದ್ರಾತ್ಮಕ) ರುದ್ರರೂಪದಿಂದ ಇಲ್ಲದಿರುವ ಈ ಪ್ರಪಂಚವು ರುದ್ರರಿಂದ ವ್ಯಾಪ್ತವಾಗಿರುವುದು. ಬ್ರಹ್ಮನ ಅಂಡವೇ ಕೊನೆಯಾಗಿರುವ ಈ ದೊಡ್ಡದಾದ ಭೂಮಿಯು ನೂರುರುದ್ರರೇ ಮೊದಲಾದವರಿಂದ ವ್ಯಾಪ್ತವಾಗಿರುವುದು. ಈ ಅಮರೇಶರನೇ ಮೊದಲಾಗಿ, ಮಾಯೆಯೇ ಕೊನೆಯಾಗಿರುವ ಈ ಶತರುದ್ರರು ಈ ಪ್ರಪಂಚದ ಒಳಭಾಗವನ್ನು ವ್ಯಾಪಿಸಿರುವರು. ಇವರೆಲ್ಲರೂ ಅಂಗುಷ್ಠ ಮಾತ್ರ ಪ್ರಮಾಣವುಳ್ಳವರು. ಇವರಿಂದ ಈ ಪ್ರಪಂಚವು ಎಲ್ಲಾ ಕಡೆಯಿಂದಲೂ ಯಾವಾಗಲೂ ವ್ಯಾಪ್ತವಾಗಿರುವುದು.

೭೮. ಮಹಾಮಾಯಾಂತವಾದ ಸ್ವರ್ಗಲೋಕವು ಷಡಧ್ವಗಳ ಕೊನೆಯನ್ನು ಮುಟ್ಟದೇ ಇರುವ ವಾಯುವೇ ಮೊದಲಾದ ಭುವನಾಧಿಪತಿಗಳಿಂದ ವ್ಯಾಪ್ತವಾಗಿರುವುದು.

೭೯. ಅವರುಗಳಲ್ಲಿ ಪ್ರತ್ಯಕ್ಷವಾದ ದೇವತೆಗಳಾಗಿ ಸ್ವರ್ಗದಲ್ಲಿರುವವರು, ಅಂತರಿಕ್ಷದಲ್ಲಿರುವವರು, ಭೂಮಿಯಲ್ಲಿ ಇರುವವರು ಎಂಬದಾಗಿ ಮೂರು ವಿಭಾಗಗಳಿರುವವು. ಇವರೆಲ್ಲರೂ ದೇವವ್ರತರೆಂಬ ದೇವತೆಗಳ ಜೊತೆಯಲ್ಲಿರುವರು.

ಏವಂ ತ್ರಿಭಿರ್ಮಲೈರಾಮೈಃ ಪಕ್ವೈರೇವ ಪೃಥಕ್ಪೃಥಕ್ ।
ನಿದಾನಭೂತೈಸ್ಸಂಸಾರರೋಗಃ ಪುಂಸಾಂ ಪ್ರವರ್ತತೇ ॥ ೮೦ ॥

ಅಸ್ಯ ರೋಗಸ್ಯ ಭೈಷಜ್ಯಂ ಜ್ಞಾನಮೇವ ನ ಚಾಪರಂ ।
ಭಿಷಗಾಜ್ಞಾಪಕಃ ಶಂಭುಶ್ಶಿವಃ ಪರಮಕಾರಣಂ ॥ ೮೧ ॥

ಅದುಃಖೇನಾಽಪಿ ಶಕ್ತೋಽಸೌ ಪಶೂನ್ಮೋಚಯಿತುಂ ಶಿವಃ ।
ಕಥಂ ದುಃಖಂ ಕರೋತೀತಿ ನಾತ್ರ ಕಾರ್ಯಾ ವಿಚಾರಣಾ ॥ ೮೨ ॥

ದುಃಖಮೇವ ಹಿ ಸರ್ವೋಽಪಿ ಸಂಸಾರ ಇತಿ ನಿಶ್ಚಿತಂ ।
ಕಥಂ ದುಃಖಮದುಃಖಂ ಸ್ಯಾತ್ಸ್ವಭಾವೋ ಹ್ಯವಿಪರ್ಯಯಃ ॥ ೮೩ ॥

---

೮೦. ಈಗ ನಾನು ಹೇಳಿದ ಪ್ರಕಾರ ಜೀವರುಗಳು ಮೂರು ವಿಧವಾದ ಆಮಮಲವುಳ್ಳವರೂ, ಪಕ್ವವಾದ ಮಲವುಳ್ಳವರೂ, ಆಗಿರುವರು. ಒಂದು, ಎರಡು, ಮೂರು ಮಲಗಳುಳ್ಳವರಿಗೆ ಆಯಾಯ ಮಲಗಳ ಸಂಬಂಧಗಳಿಗನುಸಾರವಾಗಿ ಜನ್ಮ, ಮರಣ ರೂಪವಾದ ಸಂಸಾರವು ಹೆಚ್ಚುಕಡಮೆಯಾಗಿ ಉಂಟಾಗುವುದು.

೮೧. ಈ ಸಂಸಾರ ರೋಗವು ನಾಶವಾಗಬೇಕಾದರೆ ಜ್ಞಾನವೇ ಪರಮೌಷಧವು. ಅದಕ್ಕಿಂತ ಬೇರೆಯಾದ ಔಷಧಿಯು ಮತ್ತೊಂದಿಲ್ಲ. ಸಂಸಾರವೆಂಬ ರೋಗಕ್ಕೆ ಈ ಔಷಧವನ್ನು ಕೊಡುವ ವೈದ್ಯನು, ಸಕಲಕ್ಕೂ ಕಾರಣನಾಗಿ ಎಲ್ಲರಿಗೂ ಆಜ್ಞಾಪಕನಾದ ಸಾಕ್ಷಾಚ್ಛಿವನೇ ಆಗಿರುವನು.

೮೨. ಈ ಶಿವನು ಪಶುಗಳನ್ನು ನಿಗ್ರಹಮಾಡದೆ ಅವರಿಗೆ ಯಾವ ವಿಧವಾದ ದುಃಖವನ್ನೂ ಉಂಟುಮಾಡದೆ ಮೋಕ್ಷವನ್ನುಂಟುಮಾಡುವ ಸಾಮರ್ಥ್ಯವುಳ್ಳವನಾಗಿರುವನು. ಹೀಗಿರುವಾಗ ಇವನು ದುಃಖವನ್ನುಂಟುಮಾಡುತ್ತಾನೆಂಬುವ ಮಾತು ವ್ಯರ್ಥವಾದದ್ದು. ಈ ವಿಷಯದಲ್ಲಿ ಕೊಂಚವೂ ವಿಚಾರಮಾಡಬೇಕಾದ್ದಿಲ್ಲ.

೮೩. ಸಂಸಾರವೆಂಬುವುದು ಯಾವಾಗಲೂ ದುಃಖಕರವೆಂದು ನಿಶ್ಚಯವಾಗಿರುವುದು. ಯಾವಾಗಲೂ ದುಃಖಸ್ವಭಾವದಿಂದಲೇ ಇರುವ ಈ ಸಂಸಾರವು ದುಃಖವಿಲ್ಲದಿರುವ ಸ್ವಭಾವವುಳ್ಳದ್ದಾಗಿ ಹೇಗೆ ತಾನೇ ಆದೀತು ? ಇದರ ಸ್ವಭಾವವು ಎಂದಿಗೂ ಬದಲಾವಣೆಯನ್ನು ಹೊಂದುವುದಿಲ್ಲ.

**ನ ಹಿ ರೋಗೀ ಹ್ಯರೋಗೀ ಸ್ಯಾದ್ಭಿಷಗ್ಭೈಷಜ್ಯಕಾರಣಾತ್ ।**
**ರೋಗಾರ್ತಂ ತು ಭಿಷಗ್ರೋಗಾದ್ಭೈಷಜ್ಯೈಸ್ಸುಖಮುದ್ಧರೇತ್ ॥ ೮೪ ॥**

**ಏವಂ ಸ್ವಭಾವಮಲಿನಾನ್ಸ್ವಭಾವಾದ್ದುಃಖಿನಃ ಪಶೂನ್ !**
**ಸ್ವಾಜ್ಞೌಷಧವಿಧಾನೇನ ದುಃಖಾನ್ಮೋಚಯತೇ ಶಿವಃ ॥ ೮೫ ॥**

**ನ ಭಿಷಕ್ಕಾರಣಂ ರೋಗೇ ಶಿವಃ ಸಂಸಾರಕಾರಣಂ ।**
**ಇತ್ಯೇತದಪಿ ವೈಷಮ್ಯಂ ನ ದೋಷಾಯಾಸ್ಯ ಕಲ್ಪತೇ ॥ ೮೬ ॥**

**ದುಃಖೇ ಸ್ವಭಾವಸಂಸಿದ್ಧೇ ಕಥಂ ತತ್ಕಾರಣಂ ಶಿವಃ ।**
**ಸ್ವಾಭಾವಿಕೋ ಮಲಃ ಪುಂಸಾಂ ಸ ಹಿ ಸಂಸಾರಯತ್ಯಮೂನ್ ॥ ೮೭ ॥**

**ಸಂಸಾರಕಾರಣಂ ಯತ್ತು ಮಲಂ ಮಾಯಾದ್ಯಚೇತನಂ ।**
**ತತ್ಸ್ವಯಂ ನ ಪ್ರವರ್ತೇತ ಶಿವಸಾನ್ನಿಧ್ಯಮಂತರಾ ॥ ೮೮ ॥**

---

೮೪. ಹೇಗೆಯೇ ರೋಗಿಯು ತನ್ನ ರೋಗವನ್ನು ಕಳೆದುಕೊಂಡು ಆರೋಗ್ಯವಂತನಾಗಬೇಕಾದರೆ ವೈದ್ಯನು ಕೊಡುವ ಔಷಧವೇ ಕಾರಣವು. ವೈದ್ಯನು ಸರಿಯಾದ ಔಷಧಿಯನ್ನು ಆ ರೋಗಿಗೆ ಕೊಟ್ಟು ಅವನಿಗೆ ಸುಖವನ್ನುಂಟುಮಾಡುವನು.

೮೫. ಈ ಶಿವನಾದರೋ ಸ್ವಭಾವದಿಂದಲೇ ಮಾಲಿನ್ಯವುಳ್ಳವರಾಗಿ ದುಃಖದಿಂದ ಇರುವ ಪಶುಗಳನ್ನು ತನ್ನ ಆಜ್ಞೆಯನ್ನು ಉಪಯೋಗಿಸಿ ಅವರು ದುಃಖವಿಲ್ಲದವರಾಗುವಂತೆ ಮಾಡುವನು.

೮೬. ರೋಗಿಯಾದವನಿಗೆ ರೋಗವು ಉಂಟಾಗಲು ವೈದ್ಯನು ಕಾರಣನಲ್ಲವು. ಅದರಂತೆ ಪಶುಗಳಿಗೆ ಸಂಸಾರವು ಉಂಟಾಗಲು ಶಿವನು ಕಾರಣನಾದವನಲ್ಲ. ಹಾಗೆ ಹೇಳುವುದು ಸರಿಯಾದ ಮಾತಲ್ಲ. ಒಂದುವೇಳೆ ಹೇಗಿದ್ದರೂ, ಇದರಿಂದಲೂ ಕೂಡ ಶಿವನಿಗೆ ಯಾವ ವಿಧವಾದ ದೋಷವೂ ಉಂಟಾಗುವುದಿಲ್ಲ.

೮೭. ಸ್ವಭಾವ ಸಂಸಿದ್ಧವಾದ ದುಃಖದ ವಿಷಯದಲ್ಲಿ ಶಿವನು ಹೇಗೆ ತಾನೆ ಕಾರಣನಾಗುವನು ? ಪಶುಗಳಿಗೆ ಮಲವು ಸ್ವಭಾವಸಿದ್ಧವಾದುದು. ಅದು ಅವರನ್ನು ಸಂಸಾರದಲ್ಲಿ ಪ್ರವರ್ತಿಸುವಂತೆ ಮಾಡುವುದು.

೮೮–೯೦. ಅಚೇತನವಾದ ಮಾಯೆ ಮೊದಲಾದ ಮಲವೇ ಸಂಸಾರಕ್ಕೆ ಕಾರಣವಾಗಿರುವುದು. ಅದೂ ಸಹ ಶಿವನ ಸನ್ನಿಧಿಯಲ್ಲಿದ್ದ ಹೊರತು ತಾನಾಗಿ

**ಯಥಾ ಮಣಿರಯಸ್ಕಾಂತಸ್ಸಾನ್ನಿಧ್ಯಾದುಪಕಾರಕಃ ।**
**ಅಯಸಶ್ಚಲತಸ್ತದ್ವಚ್ಛಿವೋಽಪ್ಯಸ್ಯೇತಿ ಸೂರಯಃ ॥ ೮೯ ॥**

**ನ ನಿವರ್ತಯಿತುಂ ಶಕ್ಯಂ ಸಾನ್ನಿಧ್ಯಂ ಸದಕಾರಣಂ ।**
**ಅಧಿಷ್ಠಾತಾ ತತೋ ನಿತ್ಯಮಜ್ಞಾತೋ ಜಗತಶ್ಶಿವಃ ॥ ೯೦ ॥**

**ನ ಶಿವೇನ ವಿನಾ ಕಿಂಚಿತ್ಪ್ರವೃತ್ತಮಿಹ ವಿದ್ಯತೇ ।**
**ತತ್ಪ್ರೇರಿತಮಿದಂ ಸರ್ವಂ ತಥಾಪಿ ನ ಸ ಮುಹ್ಯತಿ ॥ ೯೧ ॥**

**ಶಕ್ತಿರಾಜ್ಞಾತ್ಮಿಕಾ ತಸ್ಯ ನಿಯಂತ್ರೀ ವಿಶ್ವತೋಮುಖೀ ।**
**ತಯಾ ತತಮಿದಂ ಶಶ್ವತ್ತಥಾಪಿ ಸ ನ ದುಷ್ಯತಿ ॥ ೯೨ ॥**

**ಅನಿದಂ ಪ್ರಥಮಂ ಸರ್ವಮೀಶಿತವ್ಯಂ ಸ ಈಶ್ವರಃ ।**
**ಈಶನಾಚ್ಚ ತದೀಯಾಜ್ಞಾ ತಥಾಪಿ ಸ ನ ದುಷ್ಯತಿ ॥ ೯೩ ॥**

---

ಪ್ರವೃತ್ತವಾಗುವುದಿಲ್ಲ. ಕಬ್ಬಿಣದಲ್ಲಿ ಚಲನಕ್ರಿಯೆಯು ಉಂಟಾಗಲು ಅಯಸ್ಕಾಂತ (ಸೂಜಿಗಲ್ಲು) ಶಿಲೆಯು ತನ್ನ ಸಾನ್ನಿಧ್ಯದಿಂದ ಹೇಗೆ ಕಾರಣವಾಗಿರುವುದೋ ಹಾಗೆಯೇ ಶಿವನೂ ಈ ವಿಷಯದಲ್ಲಿ ಕಾರಣನಾಗಿರುವನು ಎಂದು ತಿಳಿದವರು ಹೇಳುತ್ತಾರೆ. ಈ ಸಾನ್ನಿಧ್ಯವು ಸಾಕ್ಷಾತ್ತಾಗಿಲ್ಲವಾದ್ದರಿಂದ ಇದನ್ನು ತಪ್ಪಿಸಲು ಸಾಧ್ಯವಲ್ಲ. ಆದ್ದರಿಂದಲೇ ಯಾರಿಂದಲೂ ತಿಳಿಯಲಶಕ್ಯನಾದ ಶಿವನು ಜಗತ್ತನ್ನು ತನ್ನ ಮಾಯೆಯ ಮೂಲಕವಾಗಿ ವ್ಯಾಪಿಸಿಕೊಂಡಿರುವನು.

೯೧. ಶಿವನ ಪ್ರೇರಣೆಯಿಲ್ಲದೆ ಈ ಜಗತ್ತಿನಲ್ಲಿ ಯಾವ ಅಲ್ಪಕಾರ್ಯವೂ ನಡೆಯುವುದಿಲ್ಲ. ಎಲ್ಲವೂ ಅವನ ಪ್ರೇರಣೆಯಿಂದಲೇ ನಡೆಯುತ್ತಿರುವುದು. ಆದಾಗ್ಯೂ ಶಿವನಿಗೆ ಮಾತ್ರ ಯಾವ ವಿಧವಾದ ಭ್ರಾಂತಿಯೂ ಇರುವುದಿಲ್ಲ, ಅಜ್ಞಾನವೂ ಇಲ್ಲ.

೯೨. ಸರ್ವತೋಮುಖವಾದ, ಎಲ್ಲವನ್ನೂ ನಿಯಮಿಸುವ ಆ ಶಿವನ ಶಕ್ತಿಯು ಆಜ್ಞಾರೂಪದಿಂದ ಇರುವುದು. ಆ ಶಕ್ತಿಯು ಎಲ್ಲವನ್ನೂ ಯಾವಾಗಲೂ ವ್ಯಾಪಿಸಿಕೊಂಡಿರುವುದು. ಹೀಗಿದ್ದಾಗ್ಯೂ ಶಿವನಿಗೆ ಯಾವ ವಿಧವಾದ ದೋಷವುಂಟಾಗಲೂ ಅವಕಾಶವಿಲ್ಲ.

೯೩. ಶಿವನಿಗೆ ಶಕ್ತಿಯಲ್ಲಿ ಸಾನ್ನಿಧ್ಯವಿರುವುದೂ, ಶಿವನು ಶಕ್ತಿಯ ಮೂಲಕವಾಗಿ ಆಜ್ಞೆಯನ್ನು ನಡೆಸುವುದೂ, ಎಲ್ಲಕ್ಕೂ ಅಧಿಪತ್ಯದಿಂದ ಇರುವುದೂ, ಅನಾದಿ

**ಯೋಽನ್ಯಥಾ ಮನ್ಯತೇ ಮೋಹಾತ್ಸ ವಿನಶ್ಯತಿ ದುರ್ಮತಿಃ ।**
**ತಚ್ಛಕ್ತಿವೈಭವಾದೇವ ತಥಾಪಿ ಸ ನ ದುಷ್ಯತಿ ॥ ೯೪ ॥**

**ಏತಸ್ಮಿನ್ನಂತರೇ ವ್ಯೋಮ್ನಃ ಶ್ರುತಾ ವಾಗಶರೀರಿಣೀ ।**
**ಸತ್ಯಮೋಮಮೃತಂ ಸೌಮ್ಯಮಿತ್ಯಾವಿರಭವತ್ಸ್ಫುಟಂ ॥ ೯೫ ॥**

**ತತೋ ಹೃಷ್ಟತರಾಃ ಸರ್ವೇ ವಿನಷ್ಟಾಶೇಷಸಂಶಯಾಃ ।**
**ಮುನಯೋ ವಿಸ್ಮಯಾವಿಷ್ಟಾಃ ಪ್ರಣೇಮುಃ ಪವನಂ ಪ್ರಭುಂ ॥ ೯೬ ॥**

**ತಥಾ ವಿಗತಸಂದೇಹಾನ್ಕೃತ್ವಾಪಿ ಪವನೋ ಮುನೀನ್ ।**
**ನೈತೇ ಪ್ರತಿಷ್ಠಿತಜ್ಞಾನಾ ಇತಿ ಮತ್ವೈವಮಬ್ರವೀತ್ ॥ ೯೭ ॥**

---

ಸಿದ್ಧವಾಗಿರುವುದು. ಈಶ್ವರನು ಎಲ್ಲಕ್ಕೂ ಅಧಿಪತಿಯಾದ್ದರಿಂದ ಅವನು ಆಜ್ಞೆಯನ್ನು ಯನ್ನು ಮಾಡುವುದೂ ಸಿತ್ಯವೇ ಆಗಿರುತ್ತದೆ. ಹೀಗಿದ್ದರೂ ಅದು ಅವನಿಗೆ ದೋಷಾರ್ಹವಲ್ಲ.

೯೪ ಹೀಗಿರುವ ವಸ್ತುಸ್ಥಿತಿಯನ್ನು ಅಜ್ಞಾನದಿಂದ ತಿಳಿಯದಿರುವವನು ದಡ್ಡನೆನಿಸಿಕೊಂಡು ಕೆಟ್ಟಬುದ್ಧಿಯುಳ್ಳವನಾಗಿ ನಾಶವನ್ನು ಹೊಂದುವನು. ಆದರೆ ಆ ಶಿವಶಕ್ತಿಯ ಮಹಿಮೆಯಿಂದ ಅವನಿಗೂ ಯಾವ ವಿಧವಾದ ದೋಷಪ್ರಸಕ್ತಿಗೆ ಅವಕಾಶವಿಲ್ಲ.

೯೫. ವಾಯುದೇವನು ಋಷಿಗಳಿಗೆ ಹೀಗೆ ಉಪದೇಶಮಾಡುವ ಕಾಲಕ್ಕೆ ಸರಿಯಾಗಿ—ಇವನು ಹೇಳುವುದು ಸರಿಯಾಗಿದೆ, ಸತ್ಯವಾಗಿದೆ, ಎಂದು ಅಮೃತಮಯ ವಾದ ಓಂಕಾರವು ಸ್ಪಷ್ಟವಾಗಿ ಆಕಾಶವಾಣಿಯ ಮೂಲಕವಾಗಿ ಎಲ್ಲರಿಗೂ ಕೇಳಿಸಿತು.

೯೬. ಅನಂತರ ಅವರೆಲ್ಲರಿಗೂ ಎಲ್ಲಾ ವಿಧವಾದ ಸಂಶಯವೂ ಹೋಯಿತು. ಋಷಿಗಳೆಲ್ಲರೂ ಆ ಅಶರೀರವಾಕ್ಯನ್ನು ಕೇಳಿ ಆಶ್ಚರ್ಯಚಕಿತರಾಗಿ ಪ್ರಭುವಾದ ವಾಯುದೇವನಿಗೆ ನಮಸ್ಕಾರಮಾಡಿದರು.

೯೭. ವಾಯುದೇವನು ಆ ಪ್ರಕಾರವಾಗಿ ಹೇಳಿ ಋಷಿಗಳ ಸಂದೇಹವನ್ನು ನಾಶಗೊಳಿಸಿಯೂ ಕೂಡ ಈ ಋಷಿಗಳಿಗೆ ಜ್ಞಾನನಿಷ್ಠೆಯು ಇನ್ನೂ ಉಂಟಾಗಿಲ್ಲ ವೆಂದು ತಿಳಿದು ಈರೀತಿ ಹೇಳಿದನು.

॥ ವಾಯುರುವಾಚ ॥

ಪರೋಕ್ಷಮಪರೋಕ್ಷಂ ಚ ದ್ವಿವಿಧಂ ಜ್ಞಾನಮಿಷ್ಯತೇ ।
ಪರೋಕ್ಷಮಸ್ಥಿರಂ ಪ್ರಾಹುರಪರೋಕ್ಷಂ ತು ಸುಸ್ಥಿರಂ ॥ ೯೮ ॥

ಹೇತೂಪದೇಶಗಮ್ಯಂ ಯತ್ತತ್ಪರೋಕ್ಷಂ ತು ಪ್ರಚಕ್ಷತೇ ।
ಅಪರೋಕ್ಷಂ ಪುನಃ ಶ್ರೇಷ್ಠಾದನುಷ್ಠಾನಾದ್ಭವಿಷ್ಯತಿ ॥ ೯೯ ॥

ನಾಪರೋಕ್ಷಾದೃತೇ ಮೋಕ್ಷ ಇತಿ ಕೃತ್ವಾ ವಿನಿಶ್ಚಯಂ ।
ಶ್ರೇಷ್ಠಾನುಷ್ಠಾನಸಿಧ್ಯರ್ಥಂ ಪ್ರಯತಧ್ವಮತಂದ್ರಿತಾಃ ॥ ೧೦೦ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿತಾಯಾಂ ಪೂರ್ವಭಾಗೇ ಜ್ಞಾನೋಪದೇಶವರ್ಣನಂ ನಾಮೈಕತ್ರಿಂಶೋಽಧ್ಯಾಯಃ



೯೮. ಜ್ಞಾನವು ಪರೋಕ್ಷ, ಅಪರೋಕ್ಷವೆಂಬದಾಗಿ ಎರಡು ವಿಧವಾಗಿರುವುದು. ಪರೋಕ್ಷವಾಗಿರುವ ಜ್ಞಾನವು ಸ್ಥಿರವಾದುದಲ್ಲ. ಅಪರೋಕ್ಷಜ್ಞಾನವು ಸ್ಥಿರವಾಗಿರುವುದು.

೯೯. ಶಾಸ್ತ್ರಜನ್ಯವಾದ ಮತ್ತು ಉಪದೇಶದಿಂದ ಉಂಟಾಗುವ ಜ್ಞಾನವು ಪರೋಕ್ಷವೆನಿಸಿಕೊಳ್ಳುವುದು. ಉತ್ತಮವಾದ ಕ್ರಿಯಾನುಷ್ಠಾನದಿಂದ ಅಪರೋಕ್ಷ ಜ್ಞಾನವುಂಟಾಗುವುದು.

೧೦೦. ಆದ್ದರಿಂದ ನೀವುಗಳು ಕೊಂಚವೂ ಆಲಸ್ಯವನ್ನು ಹೊಂದದೆ, ಅಪರೋಕ್ಷ ಜ್ಞಾನದಿಂದಲೇ ಮೋಕ್ಷವು ಉಂಟಾಗುವುದೆಂದು ನಿಶ್ಚಯಿಸಿ, ಉತ್ತಮವಾದ ಕ್ರಿಯಾನುಷ್ಠಾನುವನ್ನು ಮಾಡಲು ಪ್ರಯತ್ನಪಡಬೇಕು. ಆದರಿಂದ ನಿಮಗೆ ಮೋಕ್ಷವು ಸಿದ್ಧಿಸುವುದು ಎಂದನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯ ಸಂಹಿತೆಯ ಪೂರ್ವಭಾಗದಲ್ಲಿ ಜ್ಞಾನೋಪದೇಶವೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ದ್ವಾತ್ರಿಂಶೋಽಧ್ಯಾಯಃ

---

॥ ಋಷಯ ಊಚುಃ ॥

ಕಿಂ ತಚ್ಛ್ರೇಷ್ಠಮನುಷ್ಠಾನಂ ಮೋಕ್ಷೋ ಯೇನಾಪರೋಕ್ಷಿತಃ ।
ತತ್ತಸ್ಯ ಸಾಧನಂ ಚಾದ್ಯ ವಕ್ತುಮರ್ಹಸಿ ಮಾರುತ ॥ ೧ ॥

॥ ವಾಯುರುವಾಚ ॥

ಶೈವೋ ಹಿ ಪರಮೋ ಧರ್ಮಃ ಶ್ರೇಷ್ಠಾನುಷ್ಠಾನಶಬ್ದಿತಃ ।
ಯತ್ರಾಪರೋಕ್ಷೋ ಲಕ್ಷ್ಯೇತ ಸಾಕ್ಷಾನ್ಮೋಕ್ಷಪ್ರದಃ ಶಿವಃ ॥ ೨ ॥

---

## ಮೂವತ್ತೆರಡನೆಯ ಅಧ್ಯಾಯವು

೧. ಋಷಿಗಳು ಪ್ರಶ್ನೆಮಾಡುವರು.—ಎಲೈ ವಾಯುದೇವನೇ, ಅಪರೋಕ್ಷ ಜ್ಞಾನವು ಶ್ರೇಷ್ಠವಾದ ಕ್ರಿಯಾನುಷ್ಠಾನದಿಂದ ಉಂಟಾಗುವುದೆಂದೂ ಅದು ಮೋಕ್ಷಕ್ಕೆ ಸಾಧನವೆಂದೂ ಹೇಳಿದೆಯಷ್ಟೆ? ಆ ಕ್ರಿಯಾನುಷ್ಠಾನದ ಸ್ವರೂಪವೇನು? ಅದನ್ನು ನಮಗೆ ತಿಳಿಸು ಎನ್ನಲು,

೨-೩. ವಾಯುದೇವನು ಹೇಳುವನು.—ಶಿವಧರ್ಮಾಚರಣೆಯನ್ನೇ ಶ್ರೇಷ್ಠವಾದ ಅನುಷ್ಠಾನವೆಂದು ಹೇಳುವರು. ಶಿವನನ್ನು ಪ್ರತ್ಯಕ್ಷಮಾಡಿಕೊಳ್ಳುವುದಕ್ಕೆ ಅದೇ ಉತ್ತಮವಾದ ಉಪಾಯವು. ಆ ಧರ್ಮಾನುಷ್ಠಾನದಿಂದ ಅಪರೋಕ್ಷ ಜ್ಞಾನವು ಉಂಟಾಗಿ ಶಿವನೇ ಸಾಕ್ಷಾತ್ತಾಗಿ ಮೋಕ್ಷವನ್ನು ಕೊಡುವನು ಆ ಧರ್ಮವು ಐದು ಪರ್ವಗಳಿಂದ (ಮೆಟ್ಟಲು) ಐದು ವಿಧವಾಗಿ ಇರುವುದು. ಕ್ರಿಯಾ, ತಪಸ್ಸು,

ಸ ತು ಪಂಚವಿಧೋ ಜ್ಞೇಯಃ ಪಂಚಭಿಃ ಪರ್ವಭಿಃ ಕ್ರಮಾತ್ ।
ಕ್ರಿಯಾತಪೋಜಪಧ್ಯಾನಜ್ಞಾನಾತ್ಮಭಿರನುತ್ತರೈಃ ॥ ೩ ॥

ತೈರೇವ ಸೋತ್ತರೈಸ್ಸಿದ್ಧೋ ಧರ್ಮಸ್ತು ಪರಮೋ ಮತಃ ।
ಪರೋಕ್ಷಮಪರೋಕ್ಷಂ ಚ ಜ್ಞಾನಂ ಯತ್ರ ಚ ಮೋಕ್ಷದಂ ॥ ೪ ॥

ಪರಮೋಽಪರಮಶ್ಚೋಭೌ ಧರ್ಮೌ ಹಿ ಶ್ರುತಿಚೋದಿತೌ ।
ಧರ್ಮಶಬ್ದಾಭಿಧೇಯೇಽರ್ಥೇ ಪ್ರಮಾಣಂ ಶ್ರುತಿರೇವ ನಃ ॥ ೫ ॥

ಪರಮೋ ಯೋಗಪರ್ಯಂತೋ ಧರ್ಮಃ ಶ್ರುತಿಶಿರೋಗತಃ ।
ಧರ್ಮಸ್ತ್ವಪರಮಸ್ತದ್ವದಧಃ ಶ್ರುತಿಮುಖೋತ್ಥಿತಃ ॥ ೬ ॥

ಅಪಶ್ವಾತ್ಮಾಧಿಕಾರತ್ವಾದ್ಧರ್ಮಃ ಪರಮೋ ಮತಃ ।
ಸಾಧಾರಣಸ್ತತೋಽನ್ಯಸ್ತು ಸರ್ವೇಷಾಮಧಿಕಾರತಃ ॥ ೭ ॥

---

ಜಪ, ಧ್ಯಾನ, ಶಿವಜ್ಞಾನ ಎಂಬ ಐದು ರೂಪದಿಂದ ಇರುವುದು. ಈ ಐದು ವಿಧವೂ ಶಿವಧರ್ಮವಾಗಿರುವವು. ಇವುಗಳೆಲ್ಲವೂ ಒಂದಕ್ಕಿಂತ ಒಂದು ಉತ್ತಮವಾಗಿರುವವು.

೪. ಬಹಳ ಉತ್ತಮವಾದ ಈ ಧರ್ಮಾಚರಣೆಯಿಂದ ಸಿದ್ಧವಾಗುವ ಧರ್ಮವೂ ಬಹಳ ಉತ್ತಮವೆಂದೆನಿಸಿಕೊಂಡು ಪರೋಕ್ಷ ಮತ್ತು ಅಪರೋಕ್ಷರೂಪವಾದ ಜ್ಞಾನವನ್ನುಂಟುಮಾಡಿ ಮೋಕ್ಷವನ್ನುಂಟುಮಾಡುವುದು.

೫. ಆ ಧರ್ಮವು ಪರಮ, ಅಪರಮ ಎಂದು ಎರಡು ಪ್ರಕಾರವಾಗಿರುವುದು ಇವೆರಡೂ ವೇದದಲ್ಲಿ ಹೇಳಲ್ಪಟ್ಟಿರುವವು. ಧರ್ಮಶಬ್ದದ ಅರ್ಥದ ವಿಷಯದಲ್ಲಿ ನಮಗೆ ವೇದವೇ ಪ್ರಮಾಣವಾಗಿರುವುದು.

೬. ಇವುಗಳಲ್ಲಿ ಮೊದಲನೆಯದಾದ ಪರಮವೆಂಬ ಧರ್ಮವು ಯೋಗಾಭ್ಯಾಸವೆಂದೆನಿಸಿಕೊಂಡು ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿರುವುದು. ಇದಕ್ಕಿಂತಲೂ ಕಡಿಮೆಯಾಗಿರುವ ಅಪರಮವೆಂಬ ಧರ್ಮವು ಅದರಂತೆಯೇ ವೇದಗಳಲ್ಲಿಯೇ ಹೇಳಲ್ಪಟ್ಟಿರುವುದು.

೭-೮. ಪಶುಭಾವವಿಲ್ಲದವರಿಗೆ ಸಂಬಂಧಪಟ್ಟಿರುವ ಧರ್ಮವು (ಪರಮಧರ್ಮ) ಉತ್ತಮವೆನಿಸಿಕೊಳ್ಳುವುದು. ಉಳಿದವರೆಲ್ಲರಿಗೂ ಸಂಬಂಧಪಟ್ಟ ಧರ್ಮವು

**ಸ ಚಾಯಂ ಪರಮೋ ಧರ್ಮಃ ಪರಧರ್ಮಸ್ಯ ಸಾಧನಂ ।**
**ಧರ್ಮಶಾಸ್ತ್ರಾದಿಭಿಸ್ಸಮ್ಯಕ್ಸಾಂಗ ಏವೋಪಬೃಂಹಿತಃ ॥ ೮ ॥**

**ಶೈವೋ ಯಃ ಪರಮೋ ಧರ್ಮಃ ಶ್ರೇಷ್ಠಾನುಷ್ಠಾನಶಬ್ದಿತಃ ।**
**ನಿತಿಹಾಸಪುರಾಣಾಭ್ಯಾಂ ಕಥಂಚಿದುಪಬೃಂಹಿತಃ ॥ ೯ ॥**

**ಶೈವಾಗಮೈಸ್ತು ಸಂಪನ್ನಃ ಸಹಾಂಗೋಪಾಂಗವಿಸ್ತರಃ ।**
**ತತ್ಸಂಸ್ಕಾರಾಧಿಕಾರೈಶ್ಚ ಸಮ್ಯಗೇವೋಪಬೃಂಹಿತಃ ॥ ೧೦ ॥**

**ಶೈವಾಗಮೋ ಹಿ ದ್ವಿವಿಧಃ ಶ್ರೌತೋಽಶ್ರೌತಶ್ಚ ಸಂಸ್ಕೃತಃ ।**
**ಶ್ರುತಿಸಾರಮಯಃ ಶ್ರೌತಸ್ಸ್ವತಂತ್ರ ಇತರೋ ಮತಃ ॥ ೧೧ ॥**

---

ಅದಕ್ಕಿಂತ ಬೇರೆಯಾಗಿ ಸಾಧಾರಣವೆನಿಸಿಕೊಳ್ಳುವುದು. ಈ ಉತ್ತಮವಾದ ಪರಮಧರ್ಮವೆಂಬುವುದು ಮೋಕ್ಷೋಪಾಯವಾದ ಪರಧರ್ಮಕ್ಕೆ ಸಾಧನವಾಗಿರುವುದು ಮತ್ತು ಉಪನಿಷತ್ತುಗಳಲ್ಲಿ ಹೇಳಿರುವ ಧರ್ಮಾಚರಣೆಯನ್ನು ಮಾಡಲು ಸಾಧನವಾಗಿರುವುದು. ಆ ಧರ್ಮವು ಧರ್ಮಶಾಸ್ತ್ರವೇ ಮೊದಲಾದುವುಗಳಲ್ಲಿ ಸಾಂಗವಾಗಿ ಹೇಳಲ್ಪಟ್ಟಿರುವುದು.

ಶಿವನ ಸಂಬಂಧವಾದ ಉತ್ತಮವಾದ ಪರಮಧರ್ಮವು ಶ್ರೇಷ್ಠಾನುಷ್ಠಾನವೆಂದೆನಿಸಿಕೊಂಡು ಇತಿಹಾಸ ಮತ್ತು ಪುರಾಣಗಳಲ್ಲಿ ಕೊಂಚಮಟ್ಟಿಗೆ ಹೇಳಲ್ಪಟ್ಟಿರುವುದು.

೧೦. ಶೈವಾಗಮದಲ್ಲಿ ಈ ಧರ್ಮವು ಅಂಗೋಪಾಂಗಗಳೊಡನೆ ಆ ಧರ್ಮವನ್ನಾಚರಿಸುವವರಿಗೆ ಬೇಕಾದ ಯೋಗ್ಯತೆ, ಅವರ ಸಂಸ್ಕಾರ ಕ್ರಮ ಇವುಗಳನ್ನು ವಿಸ್ತಾರವಾಗಿ ಹೇಳಿರುವುದು.

೧೧. ಶೈವಾಗಮವೂ ಶ್ರೌತ, ಅಶ್ರೌತ, ಎಂದು ಎರಡು ವಿಧವಾಗಿರುವುದು. ಇವೆರಡೂ ಚೆನ್ನಾಗಿ ಪರಿಷ್ಕರಿಸಲ್ಪಟ್ಟಿರುವವು. ಇವುಗಳಲ್ಲಿ ಶ್ರುತಿಸಾರವಾದ ಉಪನಿಷನ್ಮಯವಾದದ್ದು ಶ್ರೌತವೆನಿಸಿಕೊಳ್ಳುವುದು. ಇದಕ್ಕಿಂತಲೂ ಬೇರೆಯಾಗಿರುವುದು ಸ್ವತಂತ್ರವೆಂದೆನಿಸಿಕೊಳ್ಳುವುದು.

ಸ್ವತಂತ್ರೋ ದಶಧಾ ಪೂರ್ವಂ ತಥಾಷ್ಟಾದಶಧಾ ಪುನಃ ।
ಕಾಮಿಕಾದಿಸಮಾಖ್ಯಾಭಿಸ್ಸಿದ್ಧಃ ಸಿದ್ಧಾಂತಸಂಜ್ಞಿತಃ ॥ ೧೨ ॥

ಶ್ರುತಿಸಾರಮಯೋ ಯಸ್ತು ಶತಕೋಟಿಪ್ರವಿಸ್ತರಃ ।
ಪರಂ ಪಾಶುಪತಂ ಯತ್ರ ವ್ರತಂ ಜ್ಞಾನಂ ಚ ಕಥ್ಯತೇ ॥ ೧೩ ॥

ಯುಗಾವರ್ತೇಷು ಶಿಷ್ಯೇಷು ಯೋಗಾಚಾರ್ಯಸ್ವರೂಪಿಣಾ ।
ತತ್ರತತ್ರಾವತೀರ್ಣೇನ ಶಿವೇನೈವ ಪ್ರವರ್ತ್ಯತೇ ॥ ೧೪ ॥

ಸಂಕ್ಷಿಪ್ಯಾಸ್ಯ ಪ್ರವಕ್ತಾರಶ್ಚತ್ವಾರಃ ಪರಮರ್ಷಯಃ ।
ರುರುರ್ದಧೀಚೋಽಗಸ್ತ್ಯಶ್ಚ ಉಪಮನ್ಯುರ್ಮಹಾಯಶಾಃ ॥ ೧೫ ॥

ತೇ ಚ ಪಾಶುಪತಾ ಜ್ಞೇಯಾಸ್ಸಂಹಿತಾನಾಂ ಪ್ರವರ್ತಕಾಃ ।
ತತ್ಸಂತತೀಯಾ ಗುರವಃ ಶತಶೋಽಥ ಸಹಸ್ರಶಃ ॥ ೧೬ ॥

---

೧೨-೧೩. ಸ್ವತಂತ್ರವೆಂದೆನಿಸಿಕೊಂಡಿರುವ ಭೇದವು ಮೊದಲು ಹತ್ತು ವಿಧವಾಗಿರುವುದು. ಪ್ರಕಾರಾಂತರವಾಗಿ ಅದು ಹದಿನೆಂಟು ವಿಧವಾಗಿಯೂ ಇರುವುದು. ಕಾಮಿಕವೇ ಮೊದಲಾದ ಆಗಮಗಳಿಂದ ಚೆನ್ನಾಗಿ ಹೇಳಲ್ಪಟ್ಟಿರುವ ಈ ಅಶ್ರೌತವೆಂಬ ಭಾಗವು ಸಿದ್ಧಾಂತವೆಂದು ಹೆಸರನ್ನು ಹೊಂದಿರುವುದು. ಶ್ರುತಿಸಾರವೆಂಬುವುದು ನೂರುಕೋಟಿ ಗ್ರಂಥಗಳವರಿಗೂ ವಿಸ್ತಾರವಾಗಿರುವುದು. ಇದರಲ್ಲಿ ಉತ್ತಮವಾದ ಪಾಶುಪತವ್ರತವೂ, ಶಿವಸಂಬಂಧವಾದ ಜ್ಞಾನವೂ, ಚೆನ್ನಾಗಿ ಹೇಳಲ್ಪಟ್ಟಿರುವುದು.

೧೪. ಪ್ರತಿಚತುರ್ಯುಗಗಳಲ್ಲಿಯೂ ಶಿವನು ಶಿಷ್ಯಸಹಿತನಾಗಿ ಯೋಗಾಚಾರ್ಯನೆಂಬ ಗುರುವಿನ ರೂಪವನ್ನು ಹೊಂದಿ ಲೋಕದಲ್ಲಿ ಅಲ್ಲಲ್ಲಿ ಅವತಾರವನ್ನು ಮಾಡುವನು. ಆ ಶಿವನಿಂದಲೇ ಇದು ಎಲ್ಲಾ ಕಡೆಯಲ್ಲಿಯೂ ಪ್ರಚಾರವನ್ನು ಹೊಂದಿರುವದು.

೧೫-೧೬. ರುರು, ದಧೀಚಿ, ಅಗಸ್ತ್ಯ, ಬಹಳ ಯಶಶ್ಶಾಲಿಯಾದ ಉಪಮನ್ಯು ಎಂಬ ನಾಲ್ಕು ಜನ ಮಹರ್ಷಿಗಳು ಈ ಧರ್ಮವನ್ನು ಸಂಕ್ಷೇಪಮಾಡಿ ಲೋಕದಲ್ಲಿ ಪ್ರಚಾರಮಾಡಿರುವರು. ಅವರುಗಳು ಪಾಶುಪತವ್ರತವನ್ನು ಆಚರಿಸಿ ಪಾಶುಪತರೆಂದೆನಿಸಿಕೊಂಡಿರುವರು. ಮತ್ತು ಅವರು ಶಿವಸಂಹಿತೆಗಳನ್ನು ಪ್ರಚಾರ ಮಾಡಿರುವರು. ಅವರ ವಂಶದವರು ನೂರರಗಟ್ಟಲೆಯಾಗಿಯೂ, ಸಾವಿರಗಟ್ಟಲೆಯಾಗಿಯೂ ಲೋಕದಲ್ಲಿ ಗುರುಗಳಾಗಿರುವರು.

**ತತ್ರೋಕ್ತಃ ಪರಮೋ ಧರ್ಮಶ್ಚರ್ಯಾದ್ಯಾತ್ಮಾ ಚತುರ್ವಿಧಃ ।**
**ತೇಷು ಪಾಶಪತೋ ಯೋಗಃ ಶಿವಂ ಪ್ರತ್ಯಕ್ಷಯೇದ್ದೃಢಂ ॥ ೧೭ ॥**

**ತಸ್ಮಾಚ್ಛ್ರೇಷ್ಠಮನುಷ್ಠಾನಂ ಯೋಗಃ ಪಾಶುಪತೋ ಮತಃ ।**
**ತತ್ರಾಪ್ಯುಪಾಯಕೋ ಯುಕ್ತೋ ಬ್ರಹ್ಮಣಾ ಸ ತು ಕಥ್ಯತೇ ॥ ೧೮ ॥**

**ನಾಮಾಷ್ಟಕಮಯೋ ಯೋಗಶ್ಶಿವೇನ ಪರಿಕಲ್ಪಿತಃ ।**
**ತೇನ ಯೋಗೇನ ಸಹಸಾ ಶೈವೀ ಪ್ರಜ್ಞಾ ಪ್ರಜಾಯತೇ ॥ ೧೯ ॥**

**ಪ್ರಜ್ಞಯಾ ಪರಮಂ ಜ್ಞಾನಮಚಿರಾಲ್ಲಭತೇ ಸ್ಥಿರಂ ।**
**ಪ್ರಸೀದತಿ ಶಿವಸ್ತಸ್ಯ ಯಸ್ಯ ಜ್ಞಾನಂ ಪ್ರತಿಷ್ಠಿತಂ ॥ ೨೦ ॥**

**ಪ್ರಸಾದಾತ್ಪರಮೋ ಯೋಗೋ ಯಃ ಶಿವಂ ಚಾಪರೋಕ್ಷಯೇತ್ ।**
**ಶಿವಾಪರೋಕ್ಷಾತ್ಸಂಸಾರಕಾರಣೇನ ವಿಯುಜ್ಯತೇ ॥ ೨೧ ॥**

---

೧೭. ಆ ಸಂಹಿತೆಗಳಲ್ಲಿ ಉತ್ತಮವಾದ ಶಿವಧರ್ಮವು ಚರ್ಯಾ ಎಂಬುದೇ ಮೊದಲಾದ ನಾಲ್ಕು ವಿಧಗಳಿಂದ ಹೇಳಲ್ಪಟ್ಟಿರುವುದು. ಅವುಗಳಲ್ಲಿ ಹೇಳಿರುವ ಪಾಶುಪತಯೋಗವು ಶಿವನನ್ನು ಚೆನ್ನಾಗಿ ಪ್ರತ್ಯಕ್ಷವಾಗುವಂತೆ ಮಾಡಿಕೊಡುವುದು.

೧೮. ಆದ್ದರಿಂದ ಶ್ರೇಷ್ಠಾನುಷ್ಠಾನವೆಂದರೆ ಪಾಶುಪತಯೋಗವೆಂದು ತಿಳಿಯತಕ್ಕದ್ದು. ಅದರಲ್ಲಿಯೂ ಬ್ರಹ್ಮನು ಉಪಾಯದಿಂದ ಕೂಡಿರುವ ಯೋಗವನ್ನು ಬೇರೆಯಾಗಿ ಹೇಳಿರುವನು. ಅದನ್ನು ನಾನು ಹೇಳುವೆನು.

೧೯. ಶಿವನು ತನ್ನ ಎಂಟು ಹೆಸರುಗಳನ್ನು ಒಳಗೊಂಡ ಯೋಗಾನುಷ್ಠಾನ ಕ್ರಮವನ್ನೂ ಅದನ್ನು ಉಪಾಸನೆಮಾಡುವ ವಿಧಾನವನ್ನೂ ಹೇಳಿರುವನು. ಅದನ್ನು ಯೋಗಶಾಸ್ತ್ರದ ಪ್ರಕಾರದಿಂದ ಜಪಾದಿಗಳ ಮೂಲಕವಾಗಿ ಉಪಾಸನೆಯನ್ನು ಮಾಡಿದವನಿಗೆ ಬೇಗನೆ ಶಿವನ ಸಂಬಂಧವಾದ ಜ್ಞಾನವು ಉಂಟಾಗುವುದು.

೨೦-೨೧. ಶಿವಸಂಬಂಧವಾದ ಜ್ಞಾನದಿಂದ ಸ್ಥಿರವಾದ ಮತ್ತು ಉತ್ತಮವಾದ ಅಪರೋಕ್ಷಜ್ಞಾನವು ಬೇಗನೆ ಉಂಟಾಗುವುದು. ಜ್ಞಾನನಿಷ್ಠೆಯುಂಟಾದವನಿಗೆ ಶಿವನು ಪ್ರಸನ್ನನಾಗುವನು. ಶಿವನು ಪ್ರಸನ್ನನಾದನಂತರ ಶಿವನನ್ನು ಪ್ರತ್ಯಕ್ಷಮಾಡಿಕೊಳ್ಳಬಹುದಾದ ಉತ್ಕೃಷ್ಟವಾದ ಯೋಗವು ಸಿದ್ಧಿಸುವುದು. ಶಿವನು ಪ್ರತ್ಯಕ್ಷನಾದರೆ ಸಂಸಾರಕ್ಕೆ ಕಾರಣವು ಯಾವುದಿರುವುದೋ ಅದು ನಾಶವಾಗುವುದು.

ತತಃ ಸ್ಯಾನ್ಮುಕ್ತಸಂಸಾರೋ ಮುಕ್ತಃ ಶಿವಸಮೋ ಭವೇತ್ ।
ಬ್ರಹ್ಮಪ್ರೋಕ್ತ ಇತ್ಯುಪಾಯಃ ಸ ಏವ ಪೃಥಗುಚ್ಯತೇ ॥ ೨೨ ॥

ಶಿವೋ ಮಹೇಶ್ವರಶ್ಚೈವ ರುದ್ರೋ ವಿಷ್ಣುಃ ಪಿತಾಮಹಃ ।
ಸಂಸಾರವೈದ್ಯಃ ಸರ್ವಜ್ಞಃ ಪರಮಾತ್ಮೇತಿ ಮುಖ್ಯತಃ ॥ ೨೩ ॥

ನಾಮಾಷ್ಟಕಮಿದಂ ಮುಖ್ಯಂ ಶಿವಸ್ಯ ಪ್ರತಿಪಾದಕಂ ।
ಆದ್ಯಂ ತು ಪಂಚಕಂ ಜ್ಞೇಯಂ ಶಾಂತ್ಯತೀತಾದ್ಯನುಕ್ರಮಾತ್ ॥ ೨೪ ॥

ಸಂಜ್ಞಾಃ ಸದಾಶಿವಾದೀನಾಂ ಪಂಚೋಪಾಧಿಪರಿಗ್ರಹಾತ್ ।
ಉಪಾಧಿವಿನಿವೃತ್ತೌ ತು ಯಥಾಸ್ವಂ ವಿನಿವರ್ತತೇ ॥ ೨೫ ॥

ಪದಮೇವ ಹಿ ತಂ ನಿತ್ಯಮನಿತ್ಯಾಃ ಪದಿನಃ ಸ್ಮೃತಾಃ ।
ಪದಾನಾಂ ಪರಿವೃತ್ತೌ ತು ಮುಚ್ಯಂತೇ ಪದಿನೋ ಯತಃ ॥ ೨೬ ॥

---

೨೨-೨೪. ಅನಂತರ ಸಂಸಾರದಿಂದ ಬಿಡುಗಡೆಯನ್ನು ಹೊಂದಿ ಶಿವನಿಗೆ ಸಮನಾಗುವನು. ಈ ಉಪಾಯವನ್ನು ಬ್ರಹ್ಮನು ಒಂದು ವಿಧವಾಗಿ ಹೇಳಿರುವನು. ನಾನು ಅದನ್ನು ಪ್ರಕಾರಾಂತರವಾಗಿ ಹೇಳುವೆನು. ಶಿವ, ಮಹೇಶ್ವರ, ರುದ್ರ, ವಿಷ್ಣು, ಪಿತಾಮಹ, ಸಂಸಾರವೈದ್ಯ, ಸರ್ವಜ್ಞ, ಪರಮಾತ್ಮ, ಎಂಬ ಮುಖ್ಯವಾದ ಈ ಎಂಟು ಹೆಸರುಗಳು ಶಿವನನ್ನು ಪ್ರತಿಪಾದನೆ ಮಾಡುವವುಗಳು. ಇವುಗಳಲ್ಲಿ ಮೊದಲನೆಯ ಐದು ನಾಮಗಳು ಶಾಂತ್ಯತೀತವೇ ಮೊದಲಾದ ತತ್ತ್ವಗಳ ಕ್ರಮದಿಂದ ಇರುವವು.

೨೫. ಈ ಹೆಸರುಗಳು ಬರುವುದಕ್ಕೆ ಕಾರಣವೇನೆಂದರೆ—ಶಿವನು ಐದು ಉಪಾಧಿಗಳನ್ನು ಪರಿಗ್ರಹಮಾಡುವುದರಿಂದ ಸದಾಶಿವನೇ ಮೊದಲಾದ ಐದು ಹೆಸರುಗಳು ಶಿವನಿಗೆ ಬಂದಿರುವವು. ಈ ಉಪಾಧಿಯು ಕಳೆದುಹೋದನಂತರ ಈ ಹೆಸರುಗಳು ನಿಂತುಹೋಗಿ ಶುದ್ಧವಾದ ಪರಶಿವಭಾವವೇ ಉಳಿಯುವುದು.

೨೬. ಯಾವಾಗಲೂ ಶಬ್ದವೇ ಆಯಾಯ ವಸ್ತುವಾಚಕವಾಗಿರುವುದು. ಆಯಾಯ ಪದಗಳಿಂದ ಬೋಧ್ಯವಾದ ವಸ್ತು ಮಾತ್ರ ಬಿಡುಗಡೆಯನ್ನು ಹೊಂದುವುದು ಎಂದರೆ ಬೇರೆ ಬೇರೆಯಾಗುವುದು. ಆದ್ದರಿಂದ ಶಬ್ದವು ನಿತ್ಯವು. ಶಬ್ದಬೋಧ್ಯವಾದದ್ದು ವಸ್ತುವು. ಅದು ಅನಿತ್ಯವು. ಪದಗಳನ್ನು ಪರಿವೃತ್ತಿಮಾಡಿದರೆ ಎಂದರೆ ಸಮಾನಾರ್ಥಕವಾದ ಭಿನ್ನಾನುಪೂರ್ವಿಯುಳ್ಳ ಶಬ್ದವನ್ನು ಹೇಳಿದರೆ ಪದಾರ್ಥಕ್ಕೆ ಮಾತ್ರ ಮುಕ್ತಿಯುಂಟು.

**ಪರಿವೃತ್ತ್ಯಂತರೇ ಭೂಯಸ್ತತ್ಪದಪ್ರಾಪ್ತಿರುಚ್ಯತೇ ।**
**ಆತ್ಮಾಂತರಾಭಿಧಾನಂ ಸ್ಯಾದ್ಯದಾದ್ಯಂ ನಾಮಪಂಚಕಂ ॥ ೨೭ ॥**

**ಅನ್ಯತ್ತು ತ್ರಿತಯಂ ನಾಮ್ನಾಮುಪಾದಾನಾದಿಯೋಗತಃ ।**
**ತ್ರಿವಿಧೋಪಾಧಿವಚನಾಚ್ಛಿವ ಏವಾನುವರ್ತತೇ ॥ ೨೮ ॥**

**ಅನಾದಿಮಲಸಂಶ್ಲೇಷಃ ಪ್ರಾಗಭಾವಾತ್ಸ್ವಭಾವತಃ ।**
**ಅತ್ಯಂತಂ ಪರಿಶುದ್ಧಾತ್ಮೇತ್ಯತೋಽಯಂ ಶಿವ ಉಚ್ಯತೇ ॥ ೨೯ ॥**

**ಅಥವಾಶೇಷಕಲ್ಯಾಣಗುಣೈಕಘನ ಈಶ್ವರಃ ।**
**ಶಿವ ಇತ್ಯುಚ್ಯತೇ ಸದ್ಭಿಶ್ಶಿವತತ್ತ್ವಾರ್ಥವಾದಿಭಿಃ ॥ ೩೦ ॥**

---

೨೭. ಬೇರೆಯ ಶಬ್ದವನ್ನು ಹೇಳಿದರೆ ಈ ಶಬ್ದದಿಂದ ಮೊದಲು ಆವಶ್ಯಕವಾಗಿ ಹೇಳಬೇಕಾದ ಶಬ್ದವೆಂದು ಉಪಸ್ಥಿತವಾಗುತ್ತದೆ. ಮೊದಲು ಹೇಳಿರುವ ಶಿವಾದಿ ನಾಮಪಂಚಕವು ಬೇರೆಯಾದ ಆತ್ಮನನ್ನು ಹೇಳತಕ್ಕದ್ದಾಗಿರುವುದು.

೨೮. ಈ ಐದಕ್ಕಿಂತಲೂ ಬೇರೆಯಾಗಿರುವ ಮಿಕ್ಕ ಮೂರು ನಾಮಗಳು ಎಂದರೆ ಸಂಸಾರವೈದ್ಯ, ಸರ್ವಜ್ಞ, ಪರಮಾತ್ಮ ಎಂಬ ನಾಮಗಳು ಅವುಗಳ ಪ್ರವೃತ್ತಿ ನಿಮಿತ್ತಾನುಸಾರವಾಗಿ ಅವುಗಳ ಮುಖ್ಯಾರ್ಥಸಂಬಂಧವನ್ನು ಅನುಸರಿಸಿ ಲೋಕದಲ್ಲಿ ವ್ಯವಹರಿಸಲ್ಪಡುವುವು. ಇವು ಮೂರು ವಿಧವಾದ ಉಪಾಧಿಯನ್ನು ಹೇಳುವ ಕಾರಣ ಶಿವನಿಗೇ ಅನ್ವಯಿಸುವುದು.

೨೯. ಅನಾದಿಯಾದ ಮಲಸಂಬಂಧವು (ಜೀವರಿಗೆ) ಪಶುಗಳಿಗೆ ಸಂಬಂಧಪಟ್ಟಿರುವುದರಿಂದಲೂ, ಅದರ ಪ್ರಾಗಭಾವವು ಶಿವನಿಗೆ ಇರುವುದರಿಂದಲೂ ಎಂದರೆ ಮಲಸಂಬಂಧವು ಯಾವಾಗಲೂ ಶಿವನಿಗೆ ಇಲ್ಲದ್ದರಿಂದಲೂ ಶಿವನು ಬಹಳ ಪರಿಶುದ್ಧ ಸ್ವಭಾವವುಳ್ಳವನಾದುದರಿಂದಲೂ ಈಶ್ವರನಿಗೆ ಶಿವನೆಂದು ಹೆಸರು ಪ್ರಸಿದ್ಧವಾಗಿರುವುದು.

೩೦. ಅಥವಾ ಈಶ್ವರನು ಎಲ್ಲಾ ವಿಧವಾದ ಮಂಗಳಕರವಾದ ಗುಣಗಳಿಗೆ ನಿಧಿಯಂತೆ (ಆವಾಸಸ್ಥಾನದಂತೆ) ಇರುವನು. ಆದ್ದರಿಂದ ಶಿವತತ್ತ್ವವನ್ನು ಚೆನ್ನಾಗಿ ತಿಳಿದವರು ಇವನನ್ನು ಶಿವನೆಂದು ಹೇಳುವರು.

ತ್ರಯೋವಿಂಶತಿತತ್ತ್ವೇಭ್ಯಃ ಪ್ರಕೃತಿರ್ಹಿ ಪರಾ ಮತಾ ।
ಪ್ರಕೃತೇಸ್ತು ಪರಂ ಪ್ರಾಹುಃ ಪುರುಷಂ ಪಂಚವಿಂಶಕಂ ॥ ೩೧ ॥

ಯಂ ವೇದಾದೌ ಸ್ವರಂ ಪ್ರಾಹುರ್ವಾಚ್ಯವಾಚಕಭಾವತಃ ।
ವೇದೈಕವೇದ್ಯಯಾಥಾತ್ಮ್ಯಾದ್ವೇದಾಂತೇ ಚ ಪ್ರತಿಷ್ಠಿತಃ ॥ ೩೨ ॥

ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸ ಮಹೇಶ್ವರಃ ।
ತದಧೀನಪ್ರವೃತ್ತಿತ್ವಾತ್ಪ್ರಕೃತೇಃ ಪುರುಷಸ್ಯ ಚ ॥ ೩೩ ॥

ಅಥ ವಾ ತ್ರಿಗುಣಂ ತತ್ತ್ವಮುಪೇಯಮಿದಮವ್ಯಯಂ ।
ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ ॥ ೩೪ ॥

---

೩೧. ಪ್ರಕೃತಿ ಎಂಬುವುದು ಇಪ್ಪತ್ತುಮೂರು ತತ್ತ್ವಗಳಿಗಿಂತಲೂ ಬೇರೆಯಾಗಿರುವುದು. ಪುರುಷನು ಪ್ರಕೃತಿಗಿಂತಲೂ ಬೇರೆಯಾದವನಾಗಿ ಇಪ್ಪತ್ತೈದನೆಯ ತತ್ತ್ವದವನಾಗಿರುವನು.

೩೨. ಪ್ರಣವವು ವೇದಗಳಿಗೆಲ್ಲಕ್ಕೂ ಆದಿಯಾಗಿರುವುದು. ಇಂತಹ ಪ್ರಣವರೂಪದಿಂದ ಇರುವ ಈ ಶಿವನನ್ನು ಶಬ್ದಾರ್ಥಭಾವಗಳಿಂದಲೂ ಮುಖ್ಯವಾಗಿ ವೇದದಲ್ಲಿ ಪ್ರತಿಪಾದಿಸಲ್ಪಟ್ಟಿರುವ ತತ್ತ್ವಗಳಿಂದಲೂ ತಿಳಿಯಬಹುದು. ವೇದವೊಂದರಿಂದಲೇ ಮುಖ್ಯವಾಗಿ ಈ ಶಿವನ ನಿಜಸ್ವರೂಪವನ್ನು ತಿಳಿಯಲು ಸಾಧ್ಯವಾಗಿರುವುದರಿಂದ ಈ ಶಿವನು (ವೇದಾಂತ) ವೇದಗಳ ಸಾರಭೂತನೆಂದು ಶ್ರುತಿಗಳು ಹೇಳುವವು.

೩೩. ಪ್ರಕೃತಿಯು ಕಡೆಯಲ್ಲಿ ತನ್ನ ವಿಕಾರಪದಾರ್ಥಗಳೊಡನೆ ಈ ಶಿವನಲ್ಲಿಯೇ ಲೀನವಾಗುವುದು. ಇಂತಹ ಈ ಪ್ರಕೃತಿಗಿಂತಲೂ ಶಿವನು ಭಿನ್ನನಾಗಿರುವನು. ಎಂದರೆ ಬೇರೆಯಾಗಿರುವನು. ಪ್ರಕೃತಿಗಿಂತಲೂ ಭಿನ್ನನೂ ಶ್ರೇಷ್ಠನೂ ಆಗಿರುವುದರಿಂದಲೇ ಈ ಶಿವನಿಗೆ ಮಹೇಶ್ವರನೆಂದು ಹೆಸರು. ಪ್ರಕೃತಿಯೂ ಪುರುಷನೂ ಇವರಿಬ್ಬರೂ ಈ ಮಹೇಶ್ವರನಿಗೆ ಅಧೀನರಾಗಿರುವರು.

೩೪-೩೫. ಅಥವಾ ತ್ರಿಗುಣರೂಪವಾದ ಮಾಯಾ ಎಂಬ ತತ್ತ್ವವು ನಾಶರಹಿತವಾದ ಈ ಶಿವನನ್ನೇ ಹೊಂದಬೇಕಾಗಿರುವುದು. ಮಾಯೆಯನ್ನೇ ಪ್ರಕೃತಿಯೆಂದೂ, ಮಹೇಶ್ವರನನ್ನು ಮಾಯೆಯುಳ್ಳವನು ಎಂಬದಾಗಿಯೂ ತಿಳಿಯತಕ್ಕದ್ದು.

ಮಯಾವಿಕ್ಷೋಭಕೋಽನಂತೋ ಮಹೇಶ್ವರಸಮನ್ವಯಾತ್ ।
ಕಾಲಾತ್ಮಾ ಪರಮಾತ್ಮಾದಿಃ ಸ್ಥೂಲಃ ಸೂಕ್ಷ್ಮಃ ಪ್ರಕೀರ್ತಿತಃ ॥ ೩೫ ॥

ರುದ್ದುಃಖಂ ದುಃಖಹೇತುರ್ವಾ ತದ್ರಾವಯತಿ ನಃ ಪ್ರಭುಃ ।
ರುದ್ರ ಇತ್ಯುಚ್ಯತೇ ಸದ್ಭಿಃ ಶಿವಃ ಪರಮಕಾರಣಂ ॥ ೩೬ ॥

ತತ್ತ್ವಾದಿಭೂತಭೂಪರ್ಯಂತಂ ಶರೀರಾದಿಷ್ವತಂದ್ರಿತಃ ।
ವ್ಯಾಪ್ಯಾಧಿತಿಷ್ಠತಿ ಶಿವಸ್ತತೋ ರುದ್ರ ಇತಸ್ತತಃ ॥ ೩೭ ॥

ಜಗತಃ ಪಿತೃಭೂತಾನಾಂ ಶಿವೋ ಮೂರ್ತ್ಯಾತ್ಮನಾಮಪಿ ।
ಪಿತೃಭಾವೇನ ಸರ್ವೇಷಾಂ ಪಿತಾಮಹ ಉದೀರಿತಃ ॥ ೩೮ ॥

ಎಂದರೆ ಮಾಯೆಗೆ ಪ್ರಭುವಾಗಿರುವವನು ಮಹೇಶ್ವರನೇ ಆಗಿರುವನು. ಈ ಮಹೇಶ್ವರನು ಸೃಷ್ಟಿಕಾಲದಲ್ಲಿ ಮಾಯೆಯಲ್ಲಿ ಕ್ಷೋಭವನ್ನು ಅಥವಾ ಚಾಂಚಲ್ಯವನ್ನುಂಟುಮಾಡುವನು. ಅದರಿಂದ ಆ ಪ್ರಕೃತಿಯು ವಿಧವಿಧವಾದ ರೂಪಗಳನ್ನು ಹೊಂದಲು ಸಮರ್ಥವಾಗುವುದು. ಈ ಶಿವನು ಕಾಲರೂಪದಿಂದಲೂ, ಪರಮಾತ್ಮರೂಪದಿಂದಲೂ ಸ್ಥೂಲಸೂಕ್ಷ್ಮರೂಪಗಳಿಂದಲೂ ಇರುವನು.

೩೬. ರುತ್ ಎಂದರೆ ದುಃಖವು ಅಥವಾ ದುಃಖಕ್ಕೆ ಕಾರಣವು. ನಮ್ಮ ಪ್ರಭುವಾದ ಶಿವನು ಅದನ್ನು ನಾಶಪಡಿಸುವನು. ಆದ್ದರಿಂದ ಸತ್ಪುರುಷರು ಎಲ್ಲಕ್ಕೂ ಉತ್ಕೃಷ್ಟ ಕಾರಣನಾದ ಈ ಶಿವನನ್ನು ರುದ್ರನೆಂದು ಹೇಳುವರು.

೩೭. ಶಿವತತ್ವದಿಂದ ಹಿಡಿದು ಪಂಚಮಹಾಭೂತಗಳವರಿಗೂ ಪ್ರಾಣಿಗಳ ಶರೀರದಲ್ಲಿ ವ್ಯಾಪಿಸಿಕೊಂಡು ಇರುವನು. ಬಾಕಿಯ ಕಡೆಗಳೆಲ್ಲೂ ಹೀಗೆಯೇ ವ್ಯಾಪಿಸಿರುವನು. ಆದುದರಿಂದ ಇವನನ್ನು ರುದ್ರನೆಂದು ಹೇಳುವರು.

೩೮. ಲೋಕದಲ್ಲಿ ಶರೀರಧಾರಿಗಳಾದ ಪ್ರಾಣಿಗಳಿಗೆ ಸೃಷ್ಟಿಕರ್ತರಾದ ಬ್ರಹ್ಮವಿಷ್ಣ್ವಾದಿ ತ್ರಿಮೂರ್ತಿಗಳು ತಂದೆಯಂತಿರುವರು. ಆ ತ್ರಿಮೂರ್ತಿಗಳಿಗೂ ಇತರ ದೇವತೆಗಳಿಗೂ, ಸಮಸ್ತ ಪ್ರಾಣಿಗಳಿಗೂ ಈ ಶಿವನು ತಂದೆಯಂತಿರುವುದರಿಂದ ಇವನನ್ನು ಪಿತಾಮಹನೆಂದು ಹೇಳುವರು.

ನಿದಾನಜ್ಞೋ ಯಥಾ ವೈದ್ಯೋ ರೋಗಸ್ಯ ವಿನಿವರ್ತಕಃ ।
ಉಪಾಯೈರ್ಭೇಷಜೈಸ್ತದ್ವಲ್ಲಯಭೋಗಾಧಿಕಾರತಃ ॥ ೩೯ ॥

ಸಂಸಾರಸ್ಯೇಶ್ವರೋ ನಿತ್ಯಂ ಸಮೂಲಸ್ಯ ನಿವರ್ತಕಃ ।
ಸಂಸಾರವೈದ್ಯ ಇತ್ಯುಕ್ತಃ ಸರ್ವತತ್ತ್ವಾರ್ಥವೇದಿಭಿಃ ॥ ೪೦ ॥

ದಶಾರ್ಥಜ್ಞಾನಸಿಧ್ಯರ್ಥಮಿಂದ್ರಿಯೇಷ್ವೇಷು ಸತ್ಸ್ವಪಿ ।
ತ್ರಿಕಾಲಭಾವಿನೋ ಭಾವಾನ್ಸ್ಥೂಲಾನ್ಸೂಕ್ಷ್ಮಾನಶೇಷತಃ ॥ ೪೧ ॥

ಅಣವೋ ನೈವ ಜಾನಂತಿ ಮಾಯಯೈವ ಮಲಾವೃತಾಃ ।
ಅಸತ್ಸ್ವಪಿ ಚ ಸರ್ವೇಷು ಸರ್ವಾರ್ಥಜ್ಞಾನಹೇತುಷು ॥ ೪೨ ॥

ಯದ್ಯಥಾವಸ್ಥಿತಂ ವಸ್ತು ತತ್ತಥೈವ ಸದಾಶಿವಃ ।
ಅಯತ್ನೇನೈವ ಜಾನಾತಿ ತಸ್ಮಾತ್ಸರ್ವಜ್ಞ ಉಚ್ಯತೇ ॥ ೪೩ ॥

---

೩೯–೪೦. ರೋಗದ ಕಾರಣವನ್ನು ತಿಳಿದಿರುವ ವೈದ್ಯನು ರೋಗವು ನಾಶವಾಗಲು ತಕ್ಕದ್ದಾದ ಔಷಧಿಯನ್ನು ಉಪಾಯದಿಂದ ಉಪಯೋಗಿಸಿ ಆ ರೋಗವನ್ನು ನಾಶಮಾಡುವ ಹಾಗೆ, ಅನಾದಿಮಲಸಂಬಂಧದಿಂದಿರುವ ಪಶುಗಳ ಮಲವು ಲೀನವಾಗುವಂತೆಯೂ, ಭೋಗದಿಂದ ನಾಶವಾಗುವಂತೆಯೂ, ಮಾಡಿ ಅವರವರ ಸಂಸಾರವು ಬೆಳೆಯುವುದಕ್ಕೆ ತಕ್ಕ ಮೂಲಕಾರಣವಾದ ಮಲಸಂಬಂಧವನ್ನು ಸಂಪೂರ್ಣವಾಗಿ ನಾಶಪಡಿಸುವುದರಿಂದ ಇವನನ್ನು, ಸಮಸ್ತ ತತ್ತ್ವಾರ್ಥಗಳನ್ನು ಬಲ್ಲ ಜ್ಞಾನಿಗಳು ಸಂಸಾರವೈದ್ಯನೆಂದು ಹೇಳುವರು.

೪೧. ಅಣುಪ್ರಮಾಣದಿಂದಿರುವ ಪಶುಗಳು (ಜೀವರುಗಳು) ಮಾಯೆಯಿಂದಲೂ ಮಲಸಂಬಂಧದಿಂದಲೂ ಕೂಡಿದವರಾಗಿರುವ ಕಾರಣ, ಭೋಗಗಳನ್ನು ಅನುಭವಿಸಲು ಸಹಕಾರಿಗಳಾದ ಪಂಚಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು ಎಂಬ ಹತ್ತು ಇಂದ್ರಿಯಗಳಿದ್ದರೂ, ಭೂತಭವಿಷ್ಯದ್ವರ್ತಮಾನಗಳೆಂಬ ಮೂರು ಕಾಲಗಳಲ್ಲಿಯೂ ಎಡಬಿಡದೆ ನಡೆಯುತ್ತಿರುವ ಸ್ಥೂಲಸೂಕ್ಷ್ಮರೂಪವಾದ ಬದಲಾವಣೆಗಳನ್ನು ಭಾವಗಳನ್ನೂ ತಿಳಿಯಲಾರರು.

೪೨-೪೩. ಶಿವನು ಮಾತ್ರ ತನಗೆ ಜ್ಞಾನಬೋಧಕವಾದ ಇಂದ್ರಿಯಗಳ ಸಹಾಯವಿಲ್ಲದಿದ್ದರೂ ಆಯಾಯ ಪದಾರ್ಥಗಳ ವಸ್ತುಸ್ಥಿತಿಯನ್ನು ಆಯಾಯ

**ಸರ್ವಾತ್ಮಾ ಪರಮೈರೇಭಿರ್ಗುಣೈರ್ನಿತ್ಯಸಮನ್ವಯಾತ್ ।**
**ಸ್ವಸ್ಮಾತ್ಪರಾತ್ಮವಿರಹಾತ್ಪರಮಾತ್ಮಾ ಶಿವಃ ಸ್ವಯಂ ॥ ೪೪ ॥**

**ನಾಮಾಷ್ಟಕಮಿದಂ ಚೈವ ಲಬ್ಧ್ವಾಚಾರ್ಯಪ್ರಸಾದತಃ ।**
**ನಿವೃತ್ತ್ಯಾದಿಕಲಾಗ್ರಂಥಿಂ ಶಿವಾದ್ಯೈಃ ಪಂಚನಾಮಭಿಃ ॥ ೪೫ ॥**

**ಯಥಾಸ್ವಂ ಕ್ರಮಶಶ್ಛಿತ್ವಾ ಶೋಧಯಿತ್ವಾ ಯಥಾಗುಣಂ ।**
**ಗುಣಿತೈರೇವ ಸೋದ್ಘಾತೈರನಿರುದ್ಧೈರಥಾಪಿ ವಾ ॥ ೪೬ ॥**

**ಹೃತ್ಕಂಠತಾಲುಭ್ರೂಮಧ್ಯಬ್ರಹ್ಮರಂಧ್ರಸಮನ್ವಿತಾಂ ।**
**ಛಿತ್ವಾ ಪುರ್ಯಷ್ಟಕಾಕಾರಂ ಸ್ವಾತ್ಮಾನಂ ಚ ಸುಷುಮ್ಣಯಾ ॥ ೪೭ ॥**

**ದ್ವಾದಶಾಂತಃ ಸ್ಥಿತಸ್ಯೇಂದೋರ್ನೀತ್ವೋಪರಿ ಶಿವೌಜಸಿ ।**
**ಸಂಹೃತ್ಯ ಪದನಂ ಪಶ್ಚಾದ್ಯಥಾ ಸಂಸ್ಕರಣಂ ಲಯಾತ್ ॥ ೪೮ ॥**

---

ರೀತಿಯಿಂದ ಯಾವ ಪ್ರಯತ್ನವೂ ಇಲ್ಲದೆ ತಿಳಿಯುವ ಕಾರಣ ಶಿವನನ್ನು ಸರ್ವಜ್ಞ ನೆಂದು ಕರೆಯುವರು.

೪೪. ಶಿವನು ಈ ವಿಧವಾದ ಗುಣಗಳಿಂದ ಯಾವಾಗಲೂ ಕೂಡಿ ಸರ್ವಾತ್ಮ ಭಾವದಿಂದ ಇರುವನು. ಇವನಿಗಿಂತಲೂ ಉತ್ಕೃಷ್ಟರಾದವರು ಎಂದರೆ ಅಧಿಕ ರಾದವರು ಯಾರೂ ಇಲ್ಲದಿರುವುದರಿಂದ ಈ ಶಿವನು ತಾನೇ ಪರಮಾತ್ಮನೆನಿಸುವನು

೪೫. ಮೇಲೆಹೇಳಿರುವ ಈ ಎಂಟು ಹೆಸರುಗಳನ್ನು ಅರ್ಥಸಹಿತವಾಗಿ ಗುರುವಿನ ಅನುಗ್ರಹದಿಂದ ಉಪದೇಶವನ್ನು ಹೊಂದಿ ಶಿವನೇ ಮೊದಲಾದ ಐದು ನಾಮಗಳಿಂದ ನಿವೃತ್ತಿಯೇ ಮೊದಲಾದ ಐದು ಕಲೆಗಳ ಗ್ರಂಥಿಯನ್ನು ತನಗುಚಿತ ವಾದ ರೀತಿಯಿಂದ ಕ್ರಮವಾಗಿ ನಾಶಗೊಳಿಸಿ ಗುಣಗಳಿಗನುಸಾರವಾಗಿ ಪಂಚಭೂತ ಗಳ ಶೋಧನೆಯನ್ನು ಮಾಡಬೇಕು.

೪೬-೪೮. ತನ್ನ ಶರೀರದಲ್ಲಿರುವ ಪಂಚತತ್ವಗಳ ಅಥವಾ ಪಂಚಭೂತಗಳನ್ನು ದಹನಪ್ಲಾವನಾದಿಗಳಿಂದ ಶುದ್ಧಿಗೊಳಿಸಿ ಚಿಚ್ಛಕ್ತಿಯನ್ನು ಹೃದಯ, ಕಂಠ, ತಾಲು, ಭ್ರೂಮಧ್ಯ, ಬ್ರಹ್ಮರಂಧ್ರ ಈ ಪ್ರದೇಶಗಳಲ್ಲಿ ಕ್ರಮವಾಗಿ ತಂದು ಸೇರಿಸಿ, ಸುಷುಮ್ನಾ ನಾಡಿಯಿಂದ ಎಂಟು ಪುರಗಳರೂಪದಿಂದಿರುವ ತನ್ನ ಸ್ವರೂಪವನ್ನು ಶಿವನ ಭಾವನೆ ಯಿಂದ ಹನ್ನೆರಡು ಅಂಗುಲದವಳಗೆ ಇರುವ ಚಂದ್ರನ ಮೇಲುಗಡೆಯಲ್ಲಿರುವ ಶಿವನ

**ಶಾಕ್ತೇನಾಮೃತವರ್ಷೇಣ ಸಂಸಿಕ್ತಾಯಾಂ ತನೌ ಪುನಃ ।**
**ಅವತಾರ್ಯ ಸ್ವಮಾತ್ಮಾನಮಮೃತಾತ್ಮಾಕೃತಿಂ ಹೃದಿ ॥ ೪೯ ॥**

**ದ್ವಾದಶಾಂತಃ ಸ್ಥಿತಸ್ಯೇಂದೋಃ ಪರಸ್ತಾಚ್ಛ್ವೇತಪಂಕಜೇ ।**
**ಸಮಾಸೀನಂ ಮಹಾದೇವಂ ಶಂಕರಂ ಭಕ್ತವತ್ಸಲಂ ॥ ೫೦ ॥**

**ಅರ್ಧನಾರೀಶ್ವರಂ ದೇವಂ ನಿರ್ಮಲಂ ಮಧುರಾಕೃತಿಂ ।**
**ಶುದ್ಧಸ್ಫಟಿಕಸಂಕಾಶಂ ಪ್ರಸನ್ನಂ ಶೀತಲದ್ಯುತಿಂ ॥ ೫೧ ॥**

**ಧ್ಯಾತ್ವಾ ಹಿ ಮಾನಸೇ ದೇವಂ ಸ್ವಸ್ಥಚಿತ್ತೋಽಥ ಮಾನವಃ ।**
**ಶಿವನಾಮಾಷ್ಟಕೇನೈವ ಭಾವಪುಷ್ಪೈಸ್ಸಮರ್ಚಯೇತ್ ॥ ೫೨ ॥**

**ಅಭ್ಯರ್ಚನಾಂತೇ ತು ಪುನಃ ಪ್ರಾಣಾನಾಯಮ್ಯ ಮಾನವಃ ।**
**ಸಮ್ಯಕ್ಚಿತ್ತಂ ಸಮಾಧಾಯ ಶಾರ್ವಂ ನಾಮಾಷ್ಟಕಂ ಜಪೇತ್ ॥ ೫೩ ॥**

---

ಸಂಬಂಧವಾದ ತೇಜಸ್ಸಿನಲ್ಲಿ ಸೇರಿಸಬೇಕು. ಅನಂತರ ಲಯಸಂಸ್ಕಾರ ಕ್ರಮದಿಂದ ಆ ಸಂಸ್ಕಾರಕ್ಕನುಸಾರವಾಗಿ ಚಿಚ್ಛಕ್ತಿಯ ಮುಖವನ್ನು ಸಂಕ್ಷೇಪಮಾಡಬೇಕು.

೪೯-೫೨. ಅನಂತರ ತನ್ನ ಶರೀರವನ್ನು ಶಕ್ತಿಯ ಸಂಬಂಧವಾದ ಅಮೃತ ವರ್ಷದಿಂದ ಪ್ಲಾವನೆಯನ್ನು ಮಾಡಿದನಂತರ ಅಮೃತಾತ್ಮಾಕಾರದಿಂದ ಇರುವ ತನ್ನ ಆತ್ಮ ಸ್ವರೂಪವನ್ನು ಹೊಂದಿ ಹೃದಯದಲ್ಲಿರುವ ಹನ್ನೆರಡು ಅಂಗುಲದ ದೂರದಲ್ಲಿರುವ ಚಂದ್ರನಿಗಿಂತಲೂ ಮುಂಭಾಗದಲ್ಲಿ ಶಿವನನ್ನು ಧ್ಯಾನಮಾಡಬೇಕು. ಈ ಶಿವನು ಬಿಳಿಯಕಮಲದಲ್ಲಿ ಸುಖಾಸೀನನಾಗಿರುವನು. ಭಕ್ತವತ್ಸಲನು. ನಿರ್ಮಲವೂ ಮನೋಹರವೂ ಆದ ಅರ್ಧನಾರೀಶ್ವರ ರೂಪದಿಂದ ಕಂಗೊಳಿಸುತ್ತಿರುವನು. ಶುದ್ಧಸ್ಫಟಿಕದಂತೆ ಇರುವ ಶರೀರಕಾಂತಿಯಿಂದ ಬೆಳಗುತ್ತಾ ಪ್ರಸನ್ನವದನನಾಗಿ ಸುತ್ತಲೂ ಶೀತಲವಾದ ಕಾಂತಿಯನ್ನು ಬೀರುತ್ತಾ ಭಕ್ತರಿಗೆ ಆನಂದವನ್ನುಂಟುಮಾಡುತ್ತಿರುವನು. ಈರೀತಿ ಸುಖವಾಗಿ ಕುಳಿತಿರುವ ಶಿವನನ್ನು ತನ್ನ ಮನಸ್ಸಿನಲ್ಲಿ ಧ್ಯಾನವನ್ನು ಮಾಡಿದನಂತರ ಮೇಲೆ ಹೇಳಿದ ನಾಮಾಷ್ಟಕವೆಂಬ ಭಾವನಾಪುಷ್ಪಗಳಿಂದ ಎಂದರೆ ಮನಸ್ಸಿನಲ್ಲಿಯೇ ಕಲ್ಪಿಸಿದ ಪುಷ್ಪಗಳಿಂದ ಶಿವನ ಅರ್ಚನೆಯನ್ನು ಮಾಡಬೇಕು.

೫೩. ಉಪಾಸಕನಾದವನು ಹಿಂದೆ ಹೇಳಿದರೀತಿಯಿಂದ ಶಿವನ ಪೂಜೆಯನ್ನು ಮಾಡಿದನಂತರ ಪುನಃ ಪ್ರಾಣಾಯಾಮವನ್ನು ಮಾಡಿ ಮನಸ್ಸನ್ನು ಸಮಾಧಾನ ಭಾವದಿಂದ ಇರಿಸಿಕೊಂಡು ಶಿವನ ಸಂಬಂಧವಾದ ಆ ಎಂಟು ನಾಮಗಳನ್ನು ಜಪ ಮಾಡಬೇಕು.

ನಾಭೌ ಚಾಷ್ಟಾಹುತೀರ್ಹುತ್ವಾ ಪೂರ್ಣಾಹುತ್ಯಾ ನಮಸ್ತತಃ ।
ಅಷ್ಟಪುಷ್ಪಪ್ರದಾನೇನ ಕೃತ್ವಾಭ್ಯರ್ಚನಮಂತಿಮಂ ॥ ೫೪ ॥

ನಿವೇದಯೇತ್ಸ್ವಮಾತ್ಮಾನಂ ಚುಲುಕೋದಕವರ್ತ್ಮನಾ ।
ಏವಂ ಕೃತ್ವಾ ಚಿರಾದೇವ ಜ್ಞಾನಂ ಪಾಶುಪತಂ ಶುಭಂ ॥ ೫೫ ॥

ಲಭತೇ ತತ್ಪ್ರತಿಷ್ಠಾಂ ಚ ವೃತ್ತಂ ಚಾನುತ್ತಮಂ ತಥಾ ।
ಯೋಗಂ ಚ ಪರಮಂ ಲಬ್ಧ್ವಾ ಮುಚ್ಯತೇ ನಾತ್ರ ಸಂಶಯಃ ॥ ೫೬ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ಶ್ರೇಷ್ಠಾನುಷ್ಠಾನವರ್ಣನಂ ನಾಮ ದ್ವಾತ್ರಿಂಶೋಽಧ್ಯಾಯಃ



---

೫೪. ಅನಂತರ ಅಗ್ನಿಯಲ್ಲಿ ಎಂಟು ಹೋಮಗಳನ್ನು ಹೋಮಮಾಡಿ ಪೂರ್ಣಾಹುತಿಯನ್ನು ಕೊಟ್ಟನಂತರ ಈ ಎಂಟು ನಾಮಗಳಿಂದ ಅಷ್ಟಪುಷ್ಪಾರ್ಚನೆ ಮಾಡಿ ಪೂಜೆಯನ್ನು ಸಮಾಪ್ತಿಗೊಳಿಸಬೇಕು. ಆಮೇಲೆ ನೀರನ್ನು ತೆಗೆದುಕೊಂಡು ಅರ್ಘ್ಯವನ್ನು ಕೊಡುತ್ತಾ ಆತ್ಮಸಮರ್ಪಣೆಯನ್ನು ಮಾಡಬೇಕು.

೫೫-೫೬. ಹೀಗೆ ಮಾಡುತ್ತಾ ಬಂದಲ್ಲಿ ಮಂಗಳಕರವಾದ ಪಾಶುಪತಜ್ಞಾನವು ಬೇಗನೆ ಉಂಟಾಗುವುದು. ಮುಂದೆ ಆ ಪಾಶುಪತಜ್ಞಾನದಲ್ಲಿ ಸ್ಥಿರತೆಯೂ, ವ್ರತ ನಿಷ್ಠೆಯೂ, ಯೋಗಸಿದ್ಧಿಯೂ ಉಂಟಾಗಿ ಮೋಕ್ಷಪ್ರಾಪ್ತಿಯಾಗುವುದು. ಈ ವಿಷಯ ದಲ್ಲಿ ಸಂಶಯಪಡಬೇಕಾಲ್ಲ.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯ ಸಂಹಿತೆಯ ಪೂರ್ವಭಾಗದಲ್ಲಿ ಶ್ರೇಷ್ಠಾನುಷ್ಠಾನವರ್ಣನವೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ತ್ರಯಸ್ತ್ರಿಂಶೋಽಧ್ಯಾಯಃ

---

॥ ಋಷಯ ಊಚುಃ ॥

ಭಗವಞ್ಛ್ರೋತುಮಿಚ್ಛಾಮೋ ವ್ರತಂ ಪಾಶುಪತಂ ಪರಂ ।
ಬ್ರಹ್ಮಾದಯೋಽಪಿ ಯತ್ಕೃತ್ವಾ ಸರ್ವೇ ಪಾಶುಪತಾಃ ಸ್ಮೃತಾಃ ॥ ೧ ॥

॥ ವಾಯುರುವಾಚ ॥

ರಹಸ್ಯಂ ವಃ ಪ್ರವಕ್ಷ್ಯಾಮಿ ಸರ್ವಪಾಪನಿಕೃಂತನಂ ।
ವ್ರತಂ ಪಾಶುಪತಂ ಶ್ರೌತಮಥರ್ವಶಿರಸಿ ಶ್ರುತಂ ॥ ೨ ॥

---

## ಮೂವತ್ತಮೂರನೆಯ ಅಧ್ಯಾಯವು

೧. ಋಷಿಗಳು ಕೇಳುವರು.—ಎಲೈ ಪೂಜ್ಯನಾದ ವಾಯುದೇವನೆ, ಉತ್ಕೃಷ್ಟವಾದ ಪಾಶುಪತವೆಂಬ ವ್ರತದ ಕ್ರಮವನ್ನು ನಾವು ಕೇಳಬೇಕೆಂದಿರುವೆವು. ಬ್ರಹ್ಮನೇ ಮೊದಲಾದವರು ಈ ವ್ರತವನ್ನು ಮಾಡಿ ಪಾಶುಪತರೆಂದು ಹೆಸರನ್ನು ಹೊಂದಿರುವರು. ಆದುದರಿಂದ ಅದನ್ನು ನಮಗೆ ಹೇಳಬೇಕೆನಲು,

೨. ವಾಯುದೇವನು ಹೇಳುವನು.—ಈ ಪಾಶುಪತವೆಂಬ ವ್ರತವು ಎಲ್ಲಾ ವಿಧವಾದ ಪಾತಕಗಳನ್ನು ನಾಶಪಡಿಸುವುದು. ಬಹಳ ರಹಸ್ಯವಾಗಿರುವುದು ಇದರ ಕ್ರಮವು ಅಥರ್ವಸಿರಸ್ಸೆಂಬ ಉಪನಿಷತ್ತಿನಲ್ಲಿ ಹೇಳಿರುವುದು. ಆ ಪಾಶುಪತವ್ರತವನ್ನೇ ನಿಮಗೆ ನಾನು ಹೇಳುವೆನು.

ಕಾಲಶ್ಚೈತ್ರೀ ಪೌರ್ಣಮಾಸೀ ದೇಶಃ ಶಿವಪರಿಗ್ರಹಃ ।
ಕ್ಷೇತ್ರಾರಾಮಾದ್ಯರಣ್ಯಂ ವಾ ಪ್ರಶಸ್ತಶ್ಶುಭಲಕ್ಷಣಃ ॥ ೩ ॥

ತತ್ರ ಪೂರ್ವಂ ತ್ರಯೋದಶ್ಯಾಂ ಸುಸ್ನಾತಃ ಸುಕೃತಾಹ್ನಿಕಃ ।
ಅನುಜ್ಞಾಪ್ಯ ಸ್ವಮಾಚಾರ್ಯಂ ಸಂಪೂಜ್ಯ ಪ್ರಣಿಪತ್ಯ ಚ ॥ ೪ ॥

ಪೂಜಾಂ ವೈಶೇಷಿಕೀಂ ಕೃತ್ವಾ ಶುಕ್ಲಾಂಬರಧರಃ ಸ್ವಯಂ ।
ಶುಕ್ಲಯಜ್ಞೋಪವೀತೀ ಚ ಶುಕ್ಲಮಾಲ್ಯಾನುಲೇಪನಃ ॥ ೫ ॥

ದರ್ಭಾಸನೇ ಸಮಾಸೀನೋ ದರ್ಭಮುಷ್ಟಿಂ ಪ್ರಗೃಹ್ಯ ಚ ।
ಪ್ರಾಣಾಯಾಮತ್ರಯಂ ಕೃತ್ವಾ ಪ್ರಾಙ್ಮುಖೋ ವಾಪ್ಯುದಙ್ಮುಖಃ ।
ಧ್ಯಾತ್ವಾ ದೇವಂ ಚ ದೇವೀಂ ಚ ತದ್ವಿಜ್ಞಾಪನವರ್ತ್ಮನಾ ॥ ೬ ॥

---

೩. ಈ ವ್ರತವನ್ನು ಆಚರಿಸಲು ಚೈತ್ರಶುದ್ಧ ಪೌರ್ಣಿಮೆಯು ಉತ್ತಮವಾದದ್ದು. ಶಿವನ ಸನ್ನಿಧಾನವಿರುವ ದೇವಸ್ಥಾನ ಎಂದರೆ ಶಿವಾಲಯ, ತೀರ್ಥ ಪ್ರದೇಶ, ಉದ್ಯಾನವನ, ಇವೇ ಮೊದಲಾದ ಉತ್ತಮ ಲಕ್ಷಣಗಳಿಂದ ಕೂಡಿದ ಪ್ರದೇಶವು ಈ ವ್ರತಾಚರಣೆಗೆ ಉತ್ತಮವೆಂದು ಹೇಳಲ್ಪಟ್ಟಿರುವುದು.

೪-೫. ಈ ವ್ರತವನ್ನು ಆಚರಿಸತಕ್ಕವನು ಚೈತ್ರಶುದ್ಧ ತ್ರಯೋದಶಿಯ ದಿವಸ ಸರಿಯಾಗಿ ಸ್ನಾನವನ್ನು ಮಾಡಿಕೊಂಡು ತನ್ನ ನಿತ್ಯಾಹ್ನಿಕವೆಲ್ಲವನ್ನೂ ಮುಗಿಸಿ ತನ್ನ ಗುರುವಿನ ಅನುಜ್ಞೆಯನ್ನು ಪಡೆದು ಅವನಿಗೆ ವಿಶೇಷವಾಗಿ ಪೂಜೆಯನ್ನೂ, ನಮಸ್ಕಾರವನ್ನೂ ಮಾಡಿ ಶುಭ್ರವಾದ ಬಿಳಿಯ ಬಟ್ಟೆಯನ್ನು ಧರಿಸಿ, ಬೆಳ್ಳಗಿರುವ ಹೊಸ ಯಜ್ಞೋಪವೀತವನ್ನು ಹಾಕಿಕೊಂಡು ಬಿಳಿಯದಾದ ಹೂವು, ಗಂಧ ಇವುಗಳಿಂದಲಂಕೃತನಾಗಿ ದರ್ಭಾಸನದಲ್ಲಿ, ಒಂದು ಮುಷ್ಟಿ ದರ್ಭೆಯನ್ನು ಕೈಯಲ್ಲಿ ಹಿಡಿದುಕೊಂಡು ಪೂರ್ವಮುಖನಾಗಿಯಾಗಲಿ, ಉತ್ತರಮುಖನಾಗಿಯಾಗಲಿ ಕುಳಿತುಕೊಳ್ಳಬೇಕು.

೬. ಅನಂತರ ಪ್ರಾಣಾಯಾಮಗಳನ್ನು ಮಾಡಿ, ಪರಮೇಶ್ವರನನ್ನೂ, ದೇವಿಯಾದ ಪಾರ್ವತಿಯನ್ನೂ ಧ್ಯಾನಮಾಡಿ ಈ ವ್ರತವನ್ನು ನಾನು ಮಾಡುವೆನು ಎಂದು ಸಂಕಲ್ಪಮಾಡಿ ವ್ರತಾಚರಣೆಗೆ ಸಂಬಂಧಪಟ್ಟ ನಿಯಮವನ್ನು (ದೀಕ್ಷೆಯನ್ನು) ಅವಲಂಬಿಸಬೇಕು.

ವ್ರತಮೇತತ್ಕರೋಮೀತಿ ಭವೇತ್ಸಂಕಲ್ಪ್ಯ ದೀಕ್ಷಿತಃ ।
ಯಾವಚ್ಛರೀರಪಾತಂ ವಾ ದ್ವಾದಶಾಬ್ದಮಥಾಪಿ ವಾ ॥ ೭ ॥

ತದರ್ಧಂ ವಾ ತದರ್ಧಂ ವಾ ಮಾಸದ್ವಾದಶಕಂ ತು ವಾ ।
ತದರ್ಧಂ ವಾ ತದರ್ಧಂ ವಾ ಮಾಸಮೇಕಮಥಾಪಿ ವಾ ॥ ೮ ॥

ದಿನದ್ವಾದಶಕಂ ವಾಽಥ ದಿನಷಟ್ಕಮಥಾಪಿ ವಾ ।
ತದರ್ಧಂ ದಿನಮೇಕಂ ವಾ ವ್ರತಸಂಕಲ್ಪನಾವಧಿ ॥ ೯ ॥

ಅಗ್ನಿಮಾಧಾಯ ವಿಧಿವದ್ವಿರಜಾಹೋಮಕಾರಣಾತ್ ।
ಹುತ್ವಾಜ್ಯೇನ ಸಮಿದ್ಭಿಶ್ಚ ಚರುಣಾ ಚ ಯಥಾಕ್ರಮಾತ್ ॥ ೧೦ ॥

ಪೂರ್ಣಾಮಾಪೂರ್ಯ ತಾಂ ಭೂಯಸ್ತತ್ತ್ವಾನಾಂ ಶುದ್ಧಿಮುದ್ದಿಶನ್ ।
ಜುಹುಯಾನ್ಮೂಲಮಂತ್ರೇಣ ತೈರೇವ ಸಮಿದಾದಿಭಿಃ ॥ ೧೧ ॥

ತತ್ತ್ವಾನ್ಯೇತಾನಿ ಮದ್ದೇಹೇ ಶುಧ್ಯಂತಾಮಿತ್ಯನುಸ್ಮರನ್ ।
ಪಂಚಭೂತಾನಿ ತನ್ಮಾತ್ರಾಃ ಪಂಚಕರ್ಮೇಂದ್ರಿಯಾಣಿ ಚ ॥ ೧೨ ॥

---

೭-೮. ಈ ವ್ರತವನ್ನು ತಾನು ಬದುಕಿರುವವರೆಗೂ ಆಚರಿಸಬಹುದು. ಅಥವಾ ಹನ್ನೆರಡು ವರ್ಷಗಳು, ಆರು ವರ್ಷಗಳು, ಮೂರು ವರ್ಷಗಳು, ಹನ್ನೆರಡು ತಿಂಗಳು, ಆರು ತಿಂಗಳು, ಮೂರು ತಿಂಗಳು, ಒಂದು ತಿಂಗಳು, ಹನ್ನೆರಡುದಿನ, ಆರುದಿನ, ಮೂರುದಿನ, ಅಥವಾ ಒಂದುದಿನ ಪೂರ್ತಿಯಾಗುವವರಿಗೂ ವ್ರತವನ್ನು ಮಾಡುತ್ತೇನೆಂದು ಸಂಕಲ್ಪವನ್ನು ಮಾಡಿ ವಿರಜಾಹೋಮವನ್ನು ಮಾಡುವುದಕ್ಕಾಗಿ ಶಾಸ್ತ್ರದಲ್ಲಿ ಹೇಳಿರುವ ಕ್ರಮದಿಂದ ಅಗ್ನಿಯನ್ನು ಸಿದ್ಧಪಡಿಸಿಕೊಳ್ಳಬೇಕು.

೯-೧೧. ಸಿದ್ಧಪಡಿಸಿದ ಅಗ್ನಿಯಲ್ಲಿ ತುಪ್ಪ, ಸಮಿತ್ತು, ಚರು ಇವುಗಳನ್ನು ಕ್ರಮವಾಗಿ ಹೋಮಮಾಡಿ, ಪೂರ್ಣಾಹುತಿಯನ್ನು ಸಿದ್ಧಮಾಡಿಕೊಂಡು ತತ್ತ್ವಗಳ ಶುದ್ಧಿಗಾಗಿ ಪೂರ್ಣಾಹುತಿಯ ಹೋಮವನ್ನು ಮಾಡಿದನಂತರ “ಈ ತತ್ತ್ವಗಳು ನನ್ನ ಶರೀರದಲ್ಲಿ ಶುದ್ಧವಾಗಲಿ” ಎಂದು ಸ್ಮರಿಸುತ್ತಾ ಮೂಲಮಂತ್ರದಿಂದ ಮೊದಲು ಹೇಳಿದ ಸಮಿತ್ತು ಮೊದಲಾದುವುಗಳಿಂದ ಹೋಮವನ್ನು ಮಾಡಬೇಕು.

೧೨-೧೫. ಪಂಚಮಹಾಭೂತಗಳು, ಪಂಚತನ್ಮಾತ್ರಗಳು, ಪಂಚಕರ್ಮೇಂದ್ರಿಯಗಳು ಪಂಚಜ್ಞಾನೇಂದ್ರಿಯಗಳು, ಚರ್ಮವೇ ಮೊದಲಾದ ಏಳು ಧಾತುಗಳು,

ಜ್ಞಾನಕರ್ಮವಿಭೇದೇನ ಪಂಚಕರ್ಮವಿಭಾಗಶಃ ।
ತ್ವಗಾದಿಧಾತವಸ್ಸಪ್ತ ಪಂಚ ಪ್ರಾಣಾದಿವಾಯವಃ ॥ ೧೩ ॥

ಮನೋ ಬುದ್ಧಿರಹಂಖ್ಯಾತಿರ್ಗುಣಾಃ ಪ್ರಕೃತಿಪೂರುಷೌ ।
ರಾಗೋ ವಿದ್ಯಾಕಲೇ ಚೈವ ನಿಯತಿಃ ಕಾಲ ಏವ ಚ ॥ ೧೪ ॥

ಮಾಯಾ ಚ ಶುದ್ಧವಿದ್ಯಾ ಚ ಮಹೇಶ್ವರಸದಾಶಿವೌ ।
ಶಕ್ತಿಶ್ಚ ಶಿವತತ್ತ್ವಂ ಚ ತತ್ತ್ವಾನಿ ಕ್ರಮಶೋ ವಿದುಃ ॥ ೧೫ ॥

ಮಂತ್ರೈಸ್ತು ವಿರಜೈರ್ಹುತ್ವಾ ಹೋತಾಸೌ ವಿರಜೋ ಭವೇತ್ ।
ಶಿವಾನುಗ್ರಹಮಾಸಾದ್ಯ ಜ್ಞಾನವಾನ್ಸ ಹಿ ಜಾಯತೇ ॥ ೧೬ ॥

ಅಥ ಗೋಮಯಮಾದಾಯ ಪಿಂಡೀಕೃತ್ಯಾಭಿಮಂತ್ರ್ಯ ಚ ।
ವಿನ್ಯಸ್ಯಾಗ್ನೌ ಚ ಸಂಪ್ರೋಕ್ಷ್ಯ ದಿನೇ ತಸ್ಮಿನ್ಹವಿಷ್ಯಭುಕ್ ॥ ೧೭ ॥

ಪ್ರಭಾತೇ ತು ಚತುರ್ದಶ್ಯಾಂ ಕೃತ್ವಾ ಸರ್ವಂ ಪುರೋದಿತಂ ।
ದಿನೇ ತಸ್ಮಿನ್ನಿರಾಹಾರಃ ಕಾಲಂ ಶೇಷಂ ಸಮಾಪಯೇತ್ ॥ ೧೮ ॥

---

ಪ್ರಾಣವೇ ಮೊದಲಾದ ಪಂಚವಾಯುಗಳು, ಮನಸ್ಸು, ಬುದ್ಧಿ, ಅಹಂಕಾರ, ಗುಣಗಳು, ಪ್ರಕೃತಿ, ಪುರುಷರು, ರಾಗ, ವಿದ್ಯಾ, ಕಲಾ, ನಿಯತಿ, ಕಾಲ, ಮಾಯಾ, ಶುದ್ಧವಿದ್ಯಾ, ಮಹೇಶ್ವರ, ಸದಾಶಿವ, ಶಕ್ತಿ, ಶಿವತತ್ತ್ವ, ಇವೆಲ್ಲವೂ ಕ್ರಮವಾಗಿ ತತ್ತ್ವಗಳೆನಿಸಿಕೊಳ್ಳುವುವು. ಇವುಗಳ ಶುದ್ಧಿಗಾಗಿ ವಿರಜಾಹೋಮ ವನ್ನು ಮಾಡಬೇಕು. ವಿರಜಾಹೋಮದ ಮಂತ್ರಗಳು ತೈತ್ತಿರೀಯೋಪನಿಷತ್ತಿನಲ್ಲಿ ಹೇಳಲ್ಪಟ್ಟಿರುವವು. ಅದರಂತೆ ಮಾಡಬೇಕು.

೧೬. ವಿರಜಾಮಂತ್ರಗಳಿಂದ ಹೋಮವನ್ನು ಮಾಡಿದವನು ರಜೋಗುಣದ ಸಂಬಂಧವಿಲ್ಲದವನಾಗಿ ಶಿವನ ಅನುಗ್ರಹವನ್ನು ಹೊಂದಿ ಜ್ಞಾನವುಳ್ಳವನಾಗುವನು.

೧೭. ಅನಂತರ ಸಗಣಿಯನ್ನು ತಂದು ಅದನ್ನು ಉಂಡೆಮಾಡಿ, ಅಭಿಮಂತ್ರಿಸಿ ಅಗ್ನಿಯಲ್ಲಿ ಅದನ್ನು ಹಾಕಿ ಚೆನ್ನಾಗಿ ಪ್ರೋಕ್ಷಣೆಯನ್ನು ಮಾಡಬೇಕು. ಈ ದಿವಸ ಹವಿಶ್ಶೇಷವನ್ನು ಮಾತ್ರ ಭೋಜನಮಾಡಬೇಕು.

೧೮. ಮಾರನೆಯ ದಿವಸ ಬೆಳಿಗ್ಗೆ ಎಂದರೆ ಚತುರ್ದಶಿಯ ದಿವಸ, ಹಿಂದಿನ ದಿನ ಹೇಳಿದ ಪ್ರಕಾರ ಕರ್ಮಗಳನ್ನು ಮಾಡಿಕೊಂಡು, ಆ ದಿವಸವೆಲ್ಲವೂ ಯಾವ ವಿಧವಾದ ಆಹಾರವನ್ನೂ ತೆಗೆದುಕೊಳ್ಳದೆ ಉಪವಾಸವಿರಬೇಕು.

**ಪ್ರಾತಃ ಪರ್ವಣಿ ಚಾಪ್ಯೇವಂ ಕೃತ್ವಾ ಹೋಮಾವಸಾನತಃ ।**
**ಉಪಸಂಹೃತ್ಯ ರುದ್ರಾಗ್ನಿಂ ಗೃಹ್ಣೀಯಾದ್ಭಸ್ಮ ಯತ್ನತಃ ॥ ೧೯ ॥**

**ತತಶ್ಚ ಜಟಿಲೋ ಮುಂಡೀ ಶಿಖ್ಯೈಕಜಟ ಏವ ವಾ ।**
**ಭೂತ್ವಾ ಸ್ನಾತ್ವಾ ತತೋ ವೀತಲಜ್ಜಶ್ಚೇತ್ಸ್ಯಾದ್ದಿಗಂಬರಃ ॥ ೨೦ ॥**

**ಅತಿಕಾಷಾಯವಸನಶ್ಚರ್ಮಚೀರಾಂಬರೋಽಥ ವಾ ।**
**ಏಕಾಂಬರೋ ವಲ್ಕಲೀ ವಾ ಭವೇದ್ದಂಡೀ ಚ ಮೇಖಲೀ ॥ ೨೧ ॥**

**ಪ್ರಕ್ಷಾಲ್ಯ ಚರಣೌ ಪಶ್ಚಾದ್ದ್ವಿರಾಚಮ್ಯಾತ್ಮನಸ್ತನುಂ ।**
**ಸಂಕುಲೀಕೃತ್ಯ ತದ್ಭಸ್ಮ ವಿರಜಾನಲಸಂಭವಂ ॥ ೨೨ ॥**

**ಅಗ್ನಿರಿತ್ಯಾದಿಭಿರ್ಮಂತ್ರೈಃ ಷಡ್ಭಿರಾಥರ್ವಣೈಃ ಕ್ರಮಾತ್ ।**
**ವಿಸೃಜ್ಯಾಂಗಾನಿ ಮೂರ್ಧಾದಿಚರಣಾಂತಾನಿ ತೈಃ ಸ್ಪೃಶೇತ್ ॥ ೨೩ ॥**

---

೧೯. ಪೂರ್ಣಿಮೆಯ ದಿವಸ ಬೆಳಿಗ್ಗೆಯೂ ಹೀಗೆಯೇ ಮಾಡಿದನಂತರ ಹೋಮದ ಕೊನೆಯಲ್ಲಿ ರುದ್ರಾಗ್ನಿಯನ್ನು ಉಪಸಂಹಾರಮಾಡಿ ಪ್ರಯತ್ನಪೂರ್ವಕವಾಗಿ ಆ ಭಸ್ಮವನ್ನು ತೆಗೆದು ಇಟ್ಟುಕೊಳ್ಳಬೇಕು.

೨೦-೨೩. ಅನಂತರ ಸಾಧಕನಾದವನು ತನ್ನ ಶಿರಸ್ಸಿನಲ್ಲಿ ಜಟೆಯನ್ನು ಧರಿಸಬಹುದು. ಒಂದು ಜಟೆಯೋ, ಶಿಖೆಯೋ, ಅದೂ ಇಲ್ಲದಿದ್ದರೆ ಬೋಳುತಲೆಯಲ್ಲಾಗಲಿ ಇರಬಹುದು. ಈರೀತಿ ವೇಷವನ್ನು ಧರಿಸಿ ಸ್ನಾನಮಾಡಬೇಕು. ಬಳಿಕ ನಾಚಿಕೆಯಿಲ್ಲದಿದ್ದರೆ ಬೆತ್ತಲೆಯಾಗಿರಬಹುದು. ಇಲ್ಲದಿದ್ದರೆ ಕಾಷಾಯವಸ್ತ್ರ, ಚರ್ಮ, ನಾರುಮಡಿ, ಮರದತೊಗಟೆ ಇವುಗಳಲ್ಲಿ ತನಗಿಷ್ಟವಾದ ಯಾವುದಾದರೂ ಒಂದನ್ನು ಧರಿಸಬಹುದು. ಅನಂತರ ಕಾಲುಗಳನ್ನು ತೊಳೆದುಕೊಂಡು ಎರಡುಸಾರಿ ಶುದ್ಧಾಚಮನಮಾಡಿ ವಿರಜಾಗ್ನಿಯಿಂದ ಉಂಟಾದ ಆ ಭಸ್ಮವನ್ನು ತೆಗೆದುಕೊಂಡು " ಅಗ್ನಿರಿತಿಭಸ್ಮ " ಇತ್ಯಾದಿಯಾದ ಅಥರ್ವಣಕ್ಕೆ ಸಂಬಂಧಪಟ್ಟ ಆರು ಮಂತ್ರಗಳಿಂದ ತಲೆಯೇ ಮೊದಲಾಗಿ ಕಾಲಿನಕೊನೆಯವರಿಗೂ ತನ್ನ ಶರೀರದ ಎಲ್ಲಾ ಭಾಗಗಳನ್ನೂ ಆ ಭಸ್ಮದಿಂದ ಸ್ಪರ್ಶಮಾಡಿಕೊಳ್ಳಬೇಕು.

**ತತಸ್ತೇನ ಕ್ರಮೇಣೈವ ಸಮುದ್ಧೃತ್ಯ ಚ ಭಸ್ಮನಾ ।**
**ಸರ್ವಾಂಗೋದ್ಧೂಲನಂ ಕುರ್ಯಾತ್ಪ್ರಣವೇನ ಶಿವೇನ ವಾ ॥ ೨೪ ॥**

**ತತಸ್ತ್ರಿಪುಂಡ್ರಂ ರಚಯೇತ್ತ್ರಿಯಾಯುಷಸಮಾಹ್ವಯಂ ।**
**ಶಿವಭಾವಂ ಸಮಾಗಮ್ಯ ಶಿವಯೋಗಮಥಾಚರೇತ್ ॥ ೨೫ ॥**

**ಕುರ್ಯಾತ್ತ್ರಿಸಂಧ್ಯಮಪ್ಯೇವಮೇತತ್ಪಾಶುಪತಂ ವ್ರತಂ ।**
**ಭುಕ್ತಿಮುಕ್ತಿಪ್ರದಂ ಚೈತತ್ಪಶುತ್ವಂ ವಿನಿವರ್ತಯೇತ್ ॥ ೨೬ ॥**

**ತತ್ಪಶುತ್ವಂ ಪರಿತ್ಯಜ್ಯ ಕೃತ್ವಾ ಪಾಶುಪತಂ ವ್ರತಂ ।**
**ಪೂಜನೀಯೋ ಮಹಾದೇವೋ ಲಿಂಗಮೂರ್ತಿಸ್ಸನಾತನಃ ॥ ೨೭ ॥**

**ಪದ್ಮಮಷ್ಟದಲಂ ಹೈಮಂ ನವರತ್ನೈರಲಂಕೃತಂ ।**
**ಕರ್ಣಿಕಾಕೇಸರೋಪೇತಮಾಸನಂ ಪರಿಕಲ್ಪಯೇತ್ ॥ ೨೮ ॥**

---

೨೪. ಅನಂತರ ಹಿಂದೆಹೇಳಿದ ಕ್ರಮದಿಂದಲೇ ಆ ಭಸ್ಮವನ್ನು ತೆಗೆದುಕೊಂಡು ಪ್ರಣವಮಂತ್ರದಿಂದಲಾಗಲಿ, ಶಿವಪಂಚಾಕ್ಷರೀ ಮಂತ್ರದಿಂದಲಾಗಲಿ ಎಲ್ಲಾ ಅಂಗಗಳಲ್ಲಿಯೂ ಉದ್ಧೂಳನೆಯನ್ನು ಮಾಡಿಕೊಳ್ಳಬೇಕು.

೨೫. ತ್ರಿಯಾಯುಷವೆಂದು ಹೆಸರುಳ್ಳ ತ್ರಿಪುಂಡ್ರಧಾರಣೆಯನ್ನು ಮಾಡಿ ಶಿವಭಾವವನ್ನು ಹೊಂದಿ ಶಿವಯೋಗವನ್ನಾಚರಿಸಬೇಕು.

೨೬. ಮೂರು ಸಂಧ್ಯಾಕಾಲದಲ್ಲಿಯೂ ಹೀಗೆಯೇ ಮಾಡುತ್ತಿರಬೇಕು. ಇದನ್ನು ಪಾಶುಪತವ್ರತವೆಂದು ಹೇಳುವರು. ಈ ವ್ರತವು ಭುಕ್ತಿಯನ್ನೂ, ಮುಕ್ತಿಯನ್ನೂ ಕೊಡತಕ್ಕದ್ದಾಗಿರುವುದು. ಪಶುಭಾವವನ್ನು ನಾಶಮಾಡುವುದು.

೨೭. ಆ ಪಶುಭಾವವನ್ನು ಕಳೆದುಕೊಂಡು ಪಾಶುಪತವ್ರತವನ್ನು ಮಾಡುತ್ತಾ, ನಿತ್ಯನಾಗಿ ಲಿಂಗರೂಪದಿಂದ ಇರುವ ಮಹಾದೇವನನ್ನು ಪೂಜೆ ಮಾಡಬೇಕು.

೨೮–೨೯. ಕರ್ಣಿಕಾಕೇಸರಗಳಿಂದ ಕೂಡಿದ ಎಂಟು ದಳಗಳುಳ್ಳ ಕಮಲವನ್ನು ಚಿನ್ನದಿಂದ ಮಾಡಿಸಿ, ಅದನ್ನು ನವರತ್ನಗಳಿಂದ ಅಲಂಕರಿಸಿ ಶಿವನಿಗೆ ಪೀಠವನ್ನಾಗಿ ಒಪ್ಪಿಸಬೇಕು. ಹೀಗೆಮಾಡಲು ತಕ್ಕ ಸಂಪತ್ತು ಇಲ್ಲದಿದ್ದರೆ ಕೆಂಪು ಅಥವಾ

ವಿಭವೇ ತದಭಾವೇ ತು ರಕ್ತಂ ಸಿತಮಥಾಪಿ ವಾ ।
ಪದ್ಮಂ ತಸ್ಯಾಪ್ಯಭಾವೇ ತು ಕೇವಲಂ ಭಾವನಾಮಯಂ ॥ ೨೯ ॥

ತತ್ಪದ್ಮಕರ್ಣಿಕಾಮಧ್ಯೇ ಕೃತ್ವಾ ಲಿಂಗಂ ಕನೀಯಸಂ ।
ಸ್ಫಾಟಿಕಂ ಪೀಠಿಕೋಪೇತಂ ಪೂಜಯೇದ್ವಿಧಿವತ್ಕ್ರಮಾತ್ ॥ ೩೦ ॥

ಪ್ರತಿಷ್ಠಾಪ್ಯ ವಿಧಾನೇನ ತಲ್ಲಿಂಗಂ ಕೃತಶೋಧನಂ ।
ಪರಿಕಲ್ಪ್ಯಾಸನಂ ಮೂರ್ತಿಂ ಪಂಚವಕ್ತ್ರಪ್ರಕಾರತಃ ॥ ೩೧ ॥

ಪಂಚಗವ್ಯಾದಿಭಿಃ ಪೂರ್ಣೈರ್ಯಥಾವಿಭವಸಂಭೃತೈಃ ।
ಸ್ನಾಪಯೇತ್ಕಲಶೈಃ ಪೂರ್ಣೈರಷ್ಟಾಪದಸಮುದ್ಭವೈಃ ॥ ೩೨ ॥

ಗಂಧದ್ರವ್ಯೈಸ್ಸಕರ್ಪೂರೈಶ್ಚಂದನಾದ್ಯೈಸ್ಸಕುಂಕುಮೈಃ ।
ಸವೇದಿಕಂ ಸಮಾಲಿಪ್ಯ ಲಿಂಗಂ ಭೂಷಣಭೂಷಿತಂ ॥ ೩೩ ॥

---

ಬಿಳಿಯ ತಾವರೆಯ ಹೂವನ್ನು ಆಸನವನ್ನಾಗಿ ಒಪ್ಪಿಸಬಹುದು. ಅದೂ ಸಾಧ್ಯವಾಗದೆ ಇದ್ದರೆ ಪೀಠಕ್ಕಾಗಿ ಕಮಲವನ್ನು ಅರ್ಪಿಸಿರುವೆನು ಎಂದು ಮನಸ್ಸಿನಲ್ಲಿಯೇ ಭಾವನೆಯನ್ನು ಮಾಡಬೇಕು.

೩೦. ಆ ಕಮಲದ ಕರ್ಣಿಕೆಯ ಮಧ್ಯದಲ್ಲಿ ಪೀಠದಿಂದಕೂಡಿರುವ ಸ್ಫಟಿಕದ ಸಣ್ಣ ಲಿಂಗವನ್ನು ಇರಿಸಿ ಶಾಸ್ತ್ರವಿಹಿತರೀತಿಯಿಂದ ಕ್ರಮವಾಗಿ ಪೂಜಿಸಬೇಕು.

೩೧. ಶುದ್ಧಿಯನ್ನು ಮಾಡಿದ ಆ ಲಿಂಗವನ್ನು ಶಾಸ್ತ್ರಕ್ರಮದಿಂದ ಪ್ರತಿಷ್ಠೆಯನ್ನು ಮಾಡಿ ಆಸನವನ್ನು ಸಿದ್ಧಪಡಿಸಿ ಶಿವನ ಪಂಚಮುಖಗಳಿಂದ ಕೂಡಿದ ಮೂರ್ತಿಯ ಕ್ರಮವನ್ನನುಸರಿಸಿ ಪೂಜಿಸಬೇಕು.

೩೨-೩೩. ತನ್ನ ಸಂಪತ್ತಿಗೆ ಅನುಸಾರವಾಗಿ ಸಿದ್ಧಮಾಡಿರುವ ಪಂಚಗವ್ಯವೇ ಮೊದಲಾದ ದ್ರವ್ಯಗಳಿಂದ ತುಂಬಿರುವ ಚಿನ್ನದ ಕಲಶಗಳಿಂದಲೂ, ಚಂದನ, ಪಚ್ಚಕರ್ಪೂರ ಕುಂಕುಮಕೇಸರಿ ಇವುಗಳಿಂದ ಕೂಡಿರುವ ಗಂಧೋದಕಗಳಿಂದಲೂ, ಚೆನ್ನಾಗಿ ಅಭಿಷೇಕವನ್ನು ಮಾಡಬೇಕು. ಪಚ್ಚಕರ್ಪೂರ, ಚಂದನ, ಕುಂಕುಮ ಕೇಸರಗಳಿಂದ ಕೂಡಿರುವ ಗಂಧದ್ರವ್ಯಗಳಿಂದ ಪೀಠಸಹಿತವಾದ ಶಿವಲಿಂಗವನ್ನು ಚೆನ್ನಾಗಿ ಲೇಪನಮಾಡಿ ಆಭರಣಗಳಿಂದ ಅಲಂಕರಿಸಬೇಕು. ಬಿಲ್ವಪತ್ರೆ,

**ಬಿಲ್ವಪತ್ರೈಶ್ಚ ಪದ್ಮೈಶ್ಚ ರಕ್ತೈಃ ಶ್ವೇತೈಸ್ತಥೋತ್ಪಲೈಃ ।**
**ನೀಲೋತ್ಪಲೈಸ್ತಥಾನ್ಯೈಶ್ಚ ಪುಷ್ಪೈಸ್ತೈಸ್ತೈಸ್ಸುಗಂಧಿಭಿಃ ॥ ೩೪ ॥**

**ಪುಣ್ಯೈಃ ಪ್ರಶಸ್ತೈಃ ಪತ್ರೈಶ್ಚ ಚಿತ್ರೈರ್ದೂರ್ವಾಕ್ಷತಾದಿಭಿಃ ।**
**ಸಮಭ್ಯರ್ಚ್ಯ ಯಥಾಲಾಭಂ ಮಹಾಪೂಜಾವಿಧಾನತಃ ॥ ೩೫ ॥**

**ಧೂಪಂ ದೀಪಂ ತಥಾ ಚಾಪಿ ನೈವೇದ್ಯಂ ಚ ಸಮಾದಿಶೇತ್ ।**
**ನಿವೇದಯಿತ್ವಾ ವಿಭವೇ ಕಲ್ಯಾಣಂ ಚ ಸಮಾಚರೇತ್ ॥ ೩೬ ॥**

**ಇಷ್ಟಾನಿ ಚ ವಿಶಿಷ್ಟಾನಿ ನ್ಯಾಯೇನೋಪಾರ್ಜಿತಾನಿ ಚ ।**
**ಸರ್ವದ್ರವ್ಯಾಣಿ ದೇಯಾನಿ ವ್ರತೇ ತಸ್ಮಿನ್ವಿಶೇಷತಃ ॥ ೩೭ ॥**

**ಶ್ರೀಪತ್ರೋತ್ಪಲಪದ್ಮಾನಾಂ ಸಂಖ್ಯಾ ಸಾಹಸ್ರಿಕೀ ಮತಾ ।**
**ಪ್ರತ್ಯೇಕಮಪರಾ ಸಂಖ್ಯಾ ಶತಮಷ್ಟೋತ್ತರಂ ದ್ವಿಜಾಃ ॥ ೩೮ ॥**

**ತತ್ರಾಪಿ ಚ ವಿಶೇಷೇಣ ನ ತ್ಯಜೇದ್ಬಿಲ್ವಪತ್ರಕಂ ।**
**ಹೈಮಮೇಕಂ ಪರಂ ಪ್ರಾಹುಃ ಪದ್ಮಂ ಪದ್ಮಸಹಸ್ರಕಾತ್ ॥ ೩೯ ॥**

---

ಕೆಂಪುತಾವರೆಯಹೂವು, ಬಿಳಿಯತಾವರೆಯಹೂವು, ನೀಲೋತ್ಪಲಪುಷ್ಪ ಇವೇ ಮೊದಲಾದ ಸುವಾಸನೆಯುಳ್ಳ ಹೂವುಗಳಿಂದಲೂ, ಪವಿತ್ರವೂ ಉತ್ತಮವೂ ಆದ ಅನೇಕ ವಿಧವಾದ ಪತ್ರೆಗಳಿಂದಲೂ, ಗರಿಕೆ, ಮಂತ್ರಾಕ್ಷತೆ ಮೊದಲಾದ ತನಗೆ ದೊರತ ಶ್ರೇಷ್ಠದ್ರವ್ಯಗಳಿಂದಲೂ ಮಹಾಪೂಜೆಯ ವಿಧಾನದಿಂದ ಪೂಜೆಯನ್ನು ಮಾಡಬೇಕು.

೩೬–೩೭. ಧೂಪ, ದೀಪ, ನೈವೇದ್ಯಗಳನ್ನು ಪ್ರಭುವಾದ ಶಿವನಿಗೆ ಒಪ್ಪಿಸಬೇಕು. ನೈವೇದ್ಯವನ್ನು ಒಪ್ಪಿಸಿದನಂತರ ಮಂಗಳಾರತಿಯನ್ನು ಬೆಳಗಬೇಕು. ನ್ಯಾಯದಿಂದ ಸಂಪಾದಿಸಿದ ದ್ರವ್ಯದಿಂದ ಈ ವ್ರತದಲ್ಲಿ ಎಲ್ಲಾ ಉತ್ತಮ ದ್ರವ್ಯಗಳನ್ನೂ ಶಿವನಿಗೆ ವಿಶೇಷವಾಗಿ ಅರ್ಪಿಸಬೇಕು.

೩೮–೩೯. ಶ್ರೀಪತ್ರ, ಉತ್ಪಲ, (ಬಿಳೀನೈದಿಲೆಯಹೂವು) ಪದ್ಮ ಇವುಗಳನ್ನು ಸಾವಿರಗಟ್ಟಲೆಯಾಗಿ ಸಮರ್ಪಿಸಬಹುದು. ಇಷ್ಟು ದೊರೆಯದಿದ್ದರೆ ನೂರೆಂಟನ್ನಾದರೂ ಒಪ್ಪಿಸಬೇಕು. ಆದರಲ್ಲಿಯೂ ಕೂಡ ಬಿಲ್ವಪತ್ರೆಯನ್ನು ಮಾತ್ರ ಯಾವಾಗಲೂ ಬಿಡಕೂಡದು. ಸಾವಿರ ತಾವರೆಯ ಹೂವಿಗಿಂತ ಒಂದು ಚಿನ್ನದ ಕಮಲವು ಪೂಜೆಗೆ ಉತ್ತಮವೆಂದು ಹೇಳುವರು.

ನೀಲೋತ್ಪಲಾದಿಷ್ವಪ್ಯೇತತ್ಸಮಾನಂ ಬಿಲ್ವಪತ್ರಕೈಃ ।
ಪುಷ್ಪಾಂತರೇ ನ ನಿಯಮೋ ಯಥಾಲಾಭಂ ನಿವೇದಯೇತ್ ॥ ೪೦ ॥

ಅಷ್ಟಾಂಗಮರ್ಘ್ಯಮುತ್ಕೃಷ್ಟಂ ಧೂಪಾಲೇಪೌ ವಿಶೇಷತಃ ।
ಚಂದನಂ ವಾಮದೇವಾಖ್ಯೇ ಹರಿತಾಲಂ ಚ ಪೌರುಷೇ ॥ ೪೧ ॥

ಈಶಾನೇ ಭಸಿತಂ ಕೇಚಿದಾಲೇಪನಮಿತೀದೃಶಂ ।
ನ ಧೂಪಮಿತಿ ಮನ್ಯಂತೇ ಧೂಪಾಂತರವಿಧಾನತಃ ।
ಸಿತಾಗರುಮಘೋರಾಖ್ಯೇ ಮುಖೇ ಕೃಷ್ಣಾಗರುಂ ಪುನಃ ॥ ೪೨ ॥

ಪೌರುಷೇ ಗುಗ್ಗುಲಂ ಸವ್ಯೇ ಸೌಮ್ಯೇ ಸೌಗಂಧಿಕಂ ಮುಖೇ ।
ಈಶಾನೇಽಪಿ ಹ್ಯುಶೀರಾದಿ ದೇಯಾದ್ಧೂಪಂ ವಿಶೇಷತಃ ॥ ೪೩ ॥

ಶರ್ಕರಾಮಧುಕರ್ಪೂರಕಪಿಲಾಘೃತಸಂಯುತಂ ।
ಚಂದನಾಗರುಕಾಷ್ಠಾದ್ಯಂ ಸಾಮಾನ್ಯಂ ಸಂಪ್ರಚಕ್ಷತೇ ॥ ೪೪ ॥

---

೪೦. ನೀಲೋತ್ಪಲಪುಷ್ಪಗಳಿಗೂ ಬಿಲ್ವಪತ್ರೆಗಳಿಗೂ ಈ ನಿಯಮವೇ ಅನ್ವಯಿಸುವುದು. ಹೂವುಗಳ ವಿಷಯದಲ್ಲಿ ಯಾವ ವಿಧವಾದ ನಿಯಮವೂ ಇರುವುದಿಲ್ಲ. ಯಾವುದು ಎಷ್ಟು ಸಿಕ್ಕುವುದೋ ಅಷ್ಟನ್ನು ಪೂಜೆಮಾಡಬಹುದು.

೪೧-೪೩. ಅಷ್ಟಾಂಗವಾದ ಅರ್ಘ್ಯವು ಉತ್ತಮವಾದದ್ದು ಗಂಧಲೇಪವೂ, ಧೂಪವೂ ಇದರಂತೆಯೇ ಶ್ರೇಷ್ಠವು. ವಾಮದೇವಮೂರ್ತಿಗೆ ಚಂದನವನ್ನೂ, ತತ್ಪುರುಷಮೂರ್ತಿಗೆ ಹರಿತಾಳವನ್ನೂ, ಈಶಾನಮೂರ್ತಿಗೆ ಭಸ್ಮವನ್ನೂ, ಆಲೇಪನ ದ್ರವ್ಯವೆಂದು ಕೆಲವರು ಹೇಳುವರು. ಈ ಮೂರ್ತಿಗಳಿಗೆ ಧೂಪವನ್ನು ಅರ್ಪಿಸಬೇಕಾಗಿಲ್ಲವೆಂದು ಕೆಲವರ ಅಭಿಮತವು. ಅಘೋರಮೂರ್ತಿಗೆ ಬಿಳಿಯ ಮತ್ತು ಶ್ವೇತಾಗರುಗಳನ್ನು ಧೂಪದ್ರವ್ಯವನ್ನಾಗಿ ಉಪಯೋಗಿಸಬೇಕು. ತತ್ಪುರುಷಮೂರ್ತಿಗೆ ಗುಗ್ಗುಲವನ್ನೂ' ಈಶಾನಮೂರ್ತಿಗೆ ಚಂದನವೇ ಮೊದಲಾದ ಸುಗಂಧ ದ್ರವ್ಯವನ್ನೂ ಹೆಚ್ಚಾಗಿ ಉಪಯೋಗಿಸಬೇಕು.

೪೪-೪೫. ಸಕ್ಕರೆ, ಜೇನು, ಪಚ್ಚಕರ್ಪೂರ, ಕಪಿಲೆಹಸುವಿನ ತುಪ್ಪ ಇವುಗಳಿಂದ ಕೂಡಿದ ಚಂದನ, ಅಗಿಲು, ಗಂಧದಚಕ್ಕೆ ಇವುಗಳು ಸಾಮಾನ್ಯವಾಗಿ ಧೂಪದ್ರವ್ಯಗಳೆಂಬದಾಗಿ ಹೇಳುವರು. ಕರ್ಪೂರ, ತುಪ್ಪದಿಂದ ನೆನಸಿರುವ ಬತ್ತಿ ಇವು

**ಕರ್ಪೂರವರ್ತಿರಾಜ್ಯಾಢ್ಯಾ ದೇಯಾ ದೀಪಾವಲಿಸ್ತತಃ ।**
**ಅರ್ಘ್ಯಮಾಚಮನಂ ದೇಯಂ ಪ್ರತಿವಕ್ತ್ರಮತಃ ಪರಂ ॥ ೪೫ ॥**

**ಪ್ರಥಮಾವರಣೇ ಪೂಜ್ಯೌ ಕ್ರಮಾದ್ಧೇರಂಬಷಣ್ಮುಖೌ ।**
**ಬ್ರಹ್ಮಾಂಗಾನಿ ತತಶ್ಚೈವ ಪ್ರಥಮಾವರಣೇಽರ್ಚಿತೇ ॥ ೪೬ ॥**

**ದ್ವಿತೀಯಾವರಣೇ ಪೂಜ್ಯಾ ವಿಘ್ನೇಶಾಶ್ಚಕ್ರವರ್ತಿನಃ ।**
**ತೃತೀಯಾವರಣೇ ಪೂಜ್ಯಾ ಭವಾದ್ಯಾ ಅಷ್ಟಮೂರ್ತಯಃ ॥ ೪೭ ॥**

**ಮಹಾದೇವಾದಯಸ್ತತ್ರ ತಥೈಕಾದಶಮೂರ್ತಯಃ ।**
**ಚತುರ್ಥಾವರಣೇ ಪೂಜ್ಯಾಃ ಸರ್ವ ಏವ ಗಣೇಶ್ವರಾಃ ॥ ೪೮ ॥**

**ಬಹಿರೇವ ತು ಪದ್ಮಸ್ಯ ಪಂಚಮಾವರಣೇ ಕ್ರಮಾತ್ ।**
**ದಶದಿಕ್ಪತಯಃ ಪೂಜ್ಯಾಃ ಸಾಸ್ತ್ರಾಃ ಸಾನುಚರಾಸ್ತಥಾ ॥ ೪೯ ॥**

**ಬ್ರಹ್ಮಣೋ ಮಾನಸಾಃ ಪುತ್ರಾಃ ಸರ್ವೇಽಪಿ ಜ್ಯೋತಿಷಾಂ ಗಣಾಃ ।**
**ಸರ್ವಾ ದೇವ್ಯಶ್ಚ ದೇವಾಶ್ಚ ಸರ್ವೇ ಸರ್ವೇ ಚ ಖೇಚರಾಃ ॥ ೫೦ ॥**

---

ಗಳಿಂದ ಸಾಲು ದೀಪವನ್ನು ಹತ್ತಿಸಬೇಕು. ಶಿವನ ಪಂಚಮುಖಗಳಿಗೂ ಪ್ರತ್ಯೇಕವಾಗಿ ಅರ್ಘ್ಯವನ್ನೂ ಆಚಮನೀಯವನ್ನೂ ಕೊಡಬೇಕು.

೪೬-೪೮. ಮೊದಲನೆಯ ಆವರಣದಲ್ಲಿ ಗಣಪತಿ, ಷಣ್ಮುಖ, ಮತ್ತು ಬ್ರಹ್ಮನೇ ಮೊದಲಾದ ಅಂಗದೇವತೆಗಳು, ಇವರನ್ನು ಪೂಜಿಸಬೇಕು. ಪ್ರಥಮಾವರಣದ ಪೂಜೆಯು ಆದನಂತರ ಎರಡನೆಯ ಆವರಣದಲ್ಲಿ ಚಕ್ರದಲ್ಲಿರುವ ವಿಘ್ನೇಶ್ವರ ಷಣ್ಮುಖರಿಗೆ ಪೂಜೆಯನ್ನು ಮಾಡತಕ್ಕದ್ದು ಮೂರನೆಯ ಆವರಣದಲ್ಲಿ ಭವನೇ ಮೊದಲಾದ ಎಂಟು ಮೂರ್ತಿಗಳನ್ನೂ ಮತ್ತು ಮಹಾದೇವನೇ ಮೊದಲಾದ ಹನ್ನೊಂದು ಮೂರ್ತಿಗಳನ್ನು ಪೂಜಿಸಬೇಕು. ನಾಲ್ಕನೆಯ ಆವರಣದಲ್ಲಿ ಎಲ್ಲಾ ಗಣೇಶ್ವರರನ್ನೂ ಪೂಜೆಮಾಡಬೇಕು.

೪೯-೫೨. ಪದ್ಮದ ಹೊರಭಾಗದಲ್ಲಿ ಐದನೆಯ ಆವರಣದಲ್ಲಿ ಕ್ರಮವಾಗಿ ಹತ್ತುಜನ ದಿಕ್ಪಾಲಕರುಗಳನ್ನು ಅವರವರ ಆಯುಧಗಳು, ಅಸ್ತ್ರಗಳು, ಪರಿವಾರಗಳು, ಇವರೊಡನೆ ಪೂಜೆಯನ್ನು ಮಾಡಬೇಕು. ಮತ್ತು ಈ ಐದನೆಯ ಆವರಣದಲ್ಲಿಯೇ ಬ್ರಹ್ಮನ ಮಾನಸಪುತ್ರರು, ಎಲ್ಲಾ ವಿಧವಾದ ಜ್ಯೋತಿಶ್ಚಕ್ರದ ಸಮೂಹಗಳು,

ಪಾತಾಲವಾಸಿನಶ್ಚಾನ್ಯೇ ಸರ್ವೇ ಮುನಿಗಣಾ ಅಪಿ ।
ಯೋಗಿನೋ ಹಿ ಮಖಾಸ್ಸರ್ವೇ ಪತಂಗಾ ಮಾತರಸ್ತಥಾ ॥ ೫೧ ॥

ಕ್ಷೇತ್ರಪಾಲಾಶ್ಚ ಸಗಣಾಃ ಸರ್ವಂ ಚೈತಚ್ಚರಾಚರಂ ।
ಪೂಜನೀಯಂ ಶಿವಪ್ರೀತ್ಯಾ ಮತ್ವಾ ಶಂಭುವಿಭೂತಿಮತ್ ॥ ೫೨ ॥

ಅಥಾವರಣಪೂಜಾಂತೇ ಸಂಪೂಜ್ಯ ಪರಮೇಶ್ವರಂ ।
ಸಾಜ್ಯಂ ಸವ್ಯಂಜನಂ ಹೃದ್ಯಂ ಹವಿರ್ಭಕ್ತ್ಯಾ ನಿವೇದಯೇತ್ ॥ ೫೩ ॥

ಮುಖವಾಸಾದಿಕಂ ದತ್ವಾ ತಾಂಬೂಲಂ ಸೋಪದಂಶಕಂ ।
ಅಲಂಕೃತ್ಯ ಚ ಭೂಯೋಽಪಿ ನಾನಾಪುಷ್ಪವಿಭೂಷಣೈಃ ॥ ೫೪ ॥

ನೀರಾಜನಾಂತೇ ವಿಸ್ತೀರ್ಯ ಪೂಜಾಶೇಷಂ ಸಮಾಪಯೇತ್ ।
ಚಷಕಂ ಸೋಪಕಾರಂ ಚ ಶಯನಂ ಚ ಸಮರ್ಪಯೇತ್ ॥ ೫೫ ॥

---

ಎಲ್ಲಾ ದೇವಪತ್ನಿಯರು, ದೇವತೆಗಳು, ಅಂತರಿಕ್ಷದಲ್ಲಿ ಸಂಚರಿಸಕ್ಕ ಗಂಧರ್ವಾದಿಗಳು, ಪಾತಾಳದಲ್ಲಿ ವಾಸಮಾಡುವ ನಾಗಾದಿಗಳು, ಎಲ್ಲಾ ಋಷಿಗಳು, ಯೋಗಿಗಳು, ಯಜ್ಞಯಾಗಾದಿಗಳು, ಪಕ್ಷಿಗಳು, ಮಾತೃದೇವತೆಗಳು, ಪರಿವಾರ ಸಹಿತರಾದ ಕ್ಷೇತ್ರಪಾಲಕರು, ಚರಾಚರಾತ್ಮಕವಾದ ಎಲ್ಲ ವಸ್ತುಗಳು, ಇವುಗಳನ್ನೆಲ್ಲಾ ಪೂಜಿಸಬೇಕು. ಇವೆಲ್ಲವೂ ಶಿವಾತ್ಮಕಗಳೆಂದು ತಿಳಿದು ಶಿವಪ್ರೀತ್ಯರ್ಥವಾಗಿ ಪೂಜೆಮಾಡಬೇಕು.

೫೩. ಆವರಣ ಪೂಜೆಯನ್ನು ಮಾಡಿದನಂತರ ಪರಮೇಶ್ವರನ ಪೂಜೆಯನ್ನು ಮಾಡಬೇಕು. ಘೃತವ್ಯಂಜನಾದಿಗಳಿಂದ ಕೂಡಿದ ಷಡ್ರಸೋಪೇತವಾದ ಶಾಕಾದಿ ಮನೋಹರ ವಸ್ತುಗಳನ್ನೂ, ಭಕ್ಷ್ಯಭೋಜ್ಯಾದಿಗಳನ್ನೂ, ಹವಿಸ್ಸನ್ನೂ ಶಿವನಿಗೆ ಭಕ್ತಿಯಿಂದ ನಿವೇದನೆಮಾಡಬೇಕು.

೫೪. ಮುಖಶೋಧನೆಗಾಗಿ ಜಲವನ್ನು ಇರಿಸಿ, ಸುಗಂಧದ್ರವ್ಯ ಯುಕ್ತವಾದ ತಾಂಬೂಲವನ್ನು ಸಮರ್ಪಿಸಿ ಅನೇಕವಿಧವಾದ ಪುಷ್ಪ, ಆಭರಣಾದಿಗಳಿಂದ ಅಲಂಕಾರಮಾಡಿ ನೀರಾಜನವನ್ನು ಮಾಡಿ ಮಿಕ್ಕ ಪೂಜೆಯನ್ನು ಮಾಡಿ ಮುಗಿಸಬೇಕು.

೫೫. ಪಾನಪಾತ್ರೆಯನ್ನೂ, ಉಪದಂಶವನ್ನೂ, ಮಲಗುವುದಕ್ಕನುಕೂಲವಾದ ಹಾಸಿಗೆಯನ್ನೂ ಅರ್ಪಿಸಬೇಕು. ಆ ಹಾಸಿಗೆಯಲ್ಲಿ ಚಂದ್ರನಂತೆ ಹೊಳೆಯುತ್ತಿರುವ ಶುಭ್ರವಾದ ಹಾರವನ್ನು ಅರ್ಪಿಸಬೇಕು.

ಚಂದ್ರಸಂಕಾಶಹಾರಂ ಚ ಶಯನೀಯೇ ಸಮರ್ಪಯೇತ್ ।
ಆದ್ಯಂ ನೃಪೋಚಿತಂ ಹೃದ್ಯಂ ತತ್ಸರ್ವಮನುರೂಪತಃ ॥ ೫೬ ॥

ಕೃತ್ವಾ ಚ ಕಾರಯಿತ್ವಾ ಚ ಹಿತ್ವಾ ಚ ಪ್ರತಿಪೂಜನಂ ।
ಸ್ತೋತ್ರಂ ವ್ಯಪೋಹನಂ ಜಪ್ತ್ವಾ ವಿದ್ಯಾಂ ಪಂಚಾಕ್ಷರೀಂ ಜಪೇತ್ ॥೫೭॥

ಪ್ರದಕ್ಷಿಣಾಂ ಪ್ರಣಾಮಂ ಚ ಕೃತ್ವಾತ್ಮಾನಂ ಸಮರ್ಪಯೇತ್ ।
ತತಃ ಪುರಸ್ತಾದ್ದೇವಸ್ಯ ಗುರುವಿಪ್ರೌ ಚ ಪೂಜಯೇತ್ ॥ ೫೮ ॥

ದತ್ವಾರ್ಘ್ಯಮಷ್ಟೌ ಪುಷ್ಪಾಣಿ ದೇವಮುದ್ವಾಸ್ಯ ಲಿಂಗತಃ ।
ಅಗ್ನೇಶ್ಚಾಗ್ನಿಂ ಸುಸಂಯಮ್ಯ ಹ್ಯುದ್ವಾಸ್ಯ ಚ ತಮಪ್ಯತ ॥ ೫೯ ॥

ಪ್ರತ್ಯಹಂ ಚ ಜನಸ್ತ್ವೇವಂ ಕುರ್ಯಾತ್ಸೇವಾಂ ಪುರೋದಿತಾಂ ।
ತತಸ್ತತ್ಸಾಂಬುಜಂ ಲಿಂಗಂ ಸರ್ವೋಪಕರಣಾನ್ವಿತಂ ॥ ೬೦ ॥

---

೫೬. ರಾಜಯೋಗ್ಯವಾದ ಉತ್ತಮವಾದ ಉಪಚಾರಗಳೆಲ್ಲವನ್ನೂ, ಪೂಜೆಯನ್ನೂ ತಾನೇ ಮಾಡಬೇಕು. ಅಥವಾ ಇತರರಿಂದ ಮಾಡಿಸಬಹುದು. ಈ ರೀತಿಯಾಗಿ ಪೂಜೆಯನ್ನು ಸಮಾಪ್ತಿಗೊಳಿಸಿ ಪ್ರಾರ್ಥನಾರೂಪವಾದ ಸ್ತೋತ್ರವನ್ನು ಮಾಡಬೇಕು.

೫೭-೫೮. ಸ್ತೋತ್ರ ಪಠನವಾದ ಮೇಲೆ ಪಂಚಾಕ್ಷರೀಮಂತ್ರವನ್ನು ಜಪಿಸಬೇಕು. ಬಳಿಕ ಪ್ರದಕ್ಷಿಣೆ ಮತ್ತು ನಮಸ್ಕಾರಗಳನ್ನು ಮಾಡಿ ಆತ್ಮಸಮರ್ಪಣೆಯನ್ನು ಮಾಡಬೇಕು. ಅನಂತರ ದೇವನ ಪ್ರತಿಮೆಯ ಮುಂದುಗಡೆಯಲ್ಲಿ ತನ್ನ ಗುರುವನ್ನೂ, ಬ್ರಾಹ್ಮಣನನ್ನೂ ಸಹ ಪೂಜಿಸಬೇಕು.

೫೯. ಆಮೇಲೆ ಎಂಟು ಅರ್ಘ್ಯಗಳನ್ನು ಕೊಟ್ಟು, ಅಷ್ಟಪುಷ್ಪಗಳನ್ನು ಒಪ್ಪಿಸಿ, ಪೂಜೆಮಾಡಿದ ಶಿವಲಿಂಗದಲ್ಲಿ ದೇವನನ್ನು ಉದ್ವಾಸನೆಮಾಡಬೇಕು. ಅಗ್ನಿಯನ್ನು ಅಗ್ನಿಯಲ್ಲಿ ಸೇರಿಸಿದನಂತರ ಆ ಅಗ್ನಿಯನ್ನೂ ಉದ್ವಾಸನೆಮಾಡಬೇಕು.

೬೦-೬೨. ಶಿವನ ಪಾಶುಪತವ್ರತವನ್ನು ಆಚರಿಸುವವನು ಪ್ರತಿದಿನವೂ ಈರೀತಿಯಾಗಿ ಪೂಜಾದಿಗಳನ್ನುಮಾಡಿ ಶಿವನ ಸೇವೆಯನ್ನು ಮಾಡತಕ್ಕದ್ದು. ಅನಂತರ ಕಮಲದ ಹೂವಿನ ಜೊತೆಯಲ್ಲಿರುವ ಆ ಶಿವಲಿಂಗವನ್ನು ಪೂಜೆಮಾಡಿದ ಸಾಮಗ್ರಿಗಳೊಡನೆ ತನ್ನ ಗುರುವಿಗೆ ಅರ್ಪಿಸಬೇಕು ಅಥವಾ ಅದನ್ನು ಶಿವಾಲಯ

ಸಮುರ್ಪಯೇತ್ಸ್ವಗುರವೇ ಸ್ಥಾಪಯೇದ್ವಾ ಶಿವಾಲಯೇ ।
ಸಂಪೂಜ್ಯ ಚ ಗುರೂನ್ವಿಪ್ರಾನ್ವ್ರತಿನಶ್ಚ ವಿಶೇಷತಃ ॥ ೬೧ ॥

ಭಕ್ತಾನ್ ದ್ವಿಜಾಂಶ್ಚ ಶಕ್ತಶ್ಚೇದ್ದೀನಾನಾಥಾಂಶ್ಚ ತೋಷಯೇತ್ ।
ಸ್ವಯಂ ಚಾನಶನೇ ಶಕ್ತಃ ಫಲಮೂಲಾಶನೋಽಥ ವಾ ॥ ೬೨ ॥

ಪಯೋವ್ರತೋ ವಾ ಭಿಕ್ಷಾಶೀ ಭವೇದೇಕಾಶಾನಸ್ತಥಾ ।
ನಕ್ತಂ ಯುಕ್ತಾಶನೋ ನಿತ್ಯಂ ಭೂಶಯ್ಯಾನಿರತಃ ಶುಚಿಃ ॥ ೬೩ ॥

ಭಸ್ಮಶಾಯೀ ತೃಣೇಶಾಯೀ ಚೀರಾಜಿನಧೃತೋಽಥ ವಾ ।
ಬ್ರಹ್ಮಚರ್ಯವ್ರತೋ ನಿತ್ಯಂ ವ್ರತಮೇತತ್ಸಮಾಚರೇತ್ ॥ ೬೪ ॥

ಅರ್ಕವಾರೇ ತಥಾದ್ರಾರ್ಯಾಂ ಪಂಚದಶ್ಯಾಂ ಚ ಪಕ್ಷಯೋಃ ।
ಅಷ್ಟಮ್ಯಾಂ ಚ ಚತುರ್ದಶ್ಯಾಂ ಶಕ್ತಸ್ತೂಪವಸೇದಪಿ ॥ ೬೫ ॥

---

ದಲ್ಲಾದರೂ ಇರಿಸಬಹುದು. ತನ್ನ ಗುರುಗಳನ್ನೂ, ಬ್ರಾಹ್ಮಣರನ್ನೂ, ಪಾಶುಪತ ವ್ರತಮಾಡುವವರನ್ನೂ ಕೂಡ ಅತಿಶಯವಾಗಿ ಪೂಜಿಸಿ, ಶಿವಭಕ್ತರನ್ನೂ, ಬ್ರಾಹ್ಮಣರನ್ನೂ, ತನ್ನ ಭಕ್ತಿಗೆ ಅನುರೂಪವಾಗಿ ಅಶನ, ವಸನ, ದ್ರವ್ಯಾದಿಗಳಿಂದ ಸಂತೋಷಪಡಿಸಬೇಕು. ಆರ್ತರನ್ನೂ ದಿಕ್ಕಿಲ್ಲದವರನ್ನೂ ಹೀಗೆಯೇ ದಾನಾದಿಗಳಿಂದ ಸಂತೋಷಪಡಿಸಬೇಕು. ತನಗೆ ಶಕ್ತಿಯಿಲ್ಲದಿದ್ದರೆ ಹಣ್ಣು, ಗಡ್ಡೆ ಇವುಗಳನ್ನು ಆಹಾರವಾಗಿ ಉಪಯೋಗಿಸಬಹುದು. ಪಯೋವ್ರತವಿಧಿಯಿಂದಲಾಗಲೀ (ಎಂದರೆ ಬರೀಹಾಲನ್ನು ಮಾತ್ರ ಕುಡಿಯುವುದು) ಭಿಕ್ಷವನ್ನು ಬೇಡಿ ತಂದಾಗಲೀ ಒಂದು ಹೊತ್ತು ಮಾತ್ರ ಆಹಾರವನ್ನು ಸೇವಿಸುತ್ತಾ ನಿಯಮದಿಂದಿರಬೇಕು.

೬೩-೬೪. ಈ ವ್ರತವನ್ನು ಮಾಡುವವನು ನಕ್ತಭೋಜಿಯಾಗಿ ರಾತ್ರಿ ಕಾಲದಲ್ಲಿ ಒಪ್ಪತ್ತು ಊಟಮಾಡಬೇಕು. ಬರೀನೆಲದಮೇಲೆ ಮಲಗಬೇಕು. ಯಾವಾಗಲೂ ಶುಚಿಯಾಗಿರಬೇಕು ಭಸ್ಮವನ್ನು ಹರಡಿ ಅದರ ಮೇಲಾಗಲಿ, ಹುಲ್ಲಿನ ಮೇಲಾಗಲಿ ಮಲಗಬೇಕು. ನಾರುಮಡಿ, ಕೃಷ್ಣಾಂಜನಗಳನ್ನು ಧರಿಸಿ ಬ್ರಹ್ಮಚರ್ಯ ನಿಯಮನಿಷ್ಠನಾಗಿರಬೇಕು. ಈರೀತಿ ಈ ವ್ರತವನ್ನು ಪ್ರತಿದಿನವೂ ಆಚರಿಸುತ್ತಿರಬೇಕು.

೬೫. ಭಾನುವಾರ ಆದ್ರಾನಕ್ಷತ್ರ ಅಮಾವಾಸ್ಯಾ, ಪೂರ್ಣಿಮಾ ಅಷ್ಟಮೀ, ಚತುರ್ದಶಿ ಈ ದಿವಸಗಳಲ್ಲಿ ತನಗೆ ಸಾಮರ್ಥ್ಯವಿದ್ದರೆ ಉಪವಾಸವನ್ನು ಮಾಡಬೇಕು.

**ಪಾಖಂಡಿಪತಿತೋದಕ್ಯಾಸ್ಸೂತಕಾನ್ತ್ಯಜಪೂರ್ವಕಾನ್ ।**
**ವರ್ಜಯೇತ್ಸರ್ವಯತ್ನೇನ ಮನಸಾ ಕರ್ಮಣಾ ಗಿರಾ ॥ ೬೬ ॥**

**ಕ್ಷಮಾದಾನದಯಾಸತ್ಯಾಹಿಂಸಾಶೀಲಃ ಸದಾ ಭವೇತ್ ।**
**ಸಂತುಷ್ಟಶ್ಚ ಪ್ರಶಾಂತಶ್ಚ ಜಪಧ್ಯಾನರತಸ್ತಥಾ ॥ ೬೭ ॥**

**ಕುರ್ಯಾತ್ತ್ರಿಷವಣಸ್ನಾನಂ ಭಸ್ಮಸ್ನಾನಮಥಾಪಿ ವಾ ।**
**ಪೂಜಾಂ ವೈಶೇಷಿಕೀಂ ಚೈವ ಮನಸಾ ವಚಸಾ ಗಿರಾ ॥ ೬೮ ॥**

**ಬಹುನಾತ್ರ ಕಿಮುಕ್ತೇನ ನಾಚರೇದಶಿವಂ ವ್ರತೀ ।**
**ಪ್ರಮಾದಾತ್ತು ತಥಾಚಾರೇ ನಿರೂಪ್ಯ ಗುರುಲಾಘವೇ ॥ ೬೯ ॥**

---

೬೬. ಈ ವ್ರತವನ್ನಾಚರಿಸುತ್ತಿರುವ ಕಾಲದಲ್ಲಿ ಪತಿತ, ರಜಸ್ವಲೆ, ಅಂತ್ಯಜ ಇವರೇ ಮೊದಲಾದವರ ಸಂಗಡ ಮನೋವಾಕ್ಕಾಯಗಳಿಂದಲೂ ವ್ಯವಹಾರವನ್ನು ಬಿಡಬೇಕು.

೬೭. ಕ್ಷಮಾಗುಣವನ್ನು ಅವಲಂಬಿಸಿ ದಾನ, ದಯಾ, ಅಹಿಂಸೆ ಇವುಗಳನ್ನು ಪಾಲಿಸುತ್ತಾ ಯಾವಾಗಲೂ ಸಂತೋಷಚಿತ್ತನಾಗಿಯೂ, ಉಪಶಾಂತನಾಗಿಯೂ, ಜಪ ಧ್ಯಾನಗಳನ್ನು ಮಾಡುವುದರಲ್ಲಿ ಆಸಕ್ತನಾಗಿಯೂ ಇರಬೇಕು.

೬೮. ಮೂರು ಸವನಕಾಲದಲ್ಲಿಯೂ ಪ್ರಾತಃಕಾಲ, ಮಧ್ಯಾಹ್ನ ಸಾಯಂಕಾಲ ಸ್ನಾನವನ್ನು ಮಾಡಬೇಕು ಅಶಕ್ತನಾದರೆ ಭಸ್ಮಸ್ನಾನವನ್ನಾದರೂ ಮಾಡಬೇಕು. ವಿಶೇಷ ದಿನಗಳಲ್ಲಿ ಮನೋವಾಕ್ಕಾಯಗಳಿಂದ ಪೂಜೆಯನ್ನು ಅತಿಶಯವಾಗಿ ಮಾಡತಕ್ಕದ್ದು.

೬೯–೭೦. ಬಹಳ ಹೇಳುವುದರಿಂದೇನು ಪ್ರಯೋಜನ ? ವ್ರತವನ್ನು ಆಚರಿಸುವವನು ಯಾವಾಗಲೂ ಕೆಟ್ಟದ್ದನ್ನು ಆಚರಿಸಕೂಡದು. ತಾನು ಆಚರಿಸುತ್ತಿರುವ ನಿಯಮನಿಷ್ಠೆಗಳಲ್ಲಿ ಪ್ರಮಾದದಿಂದ ನ್ಯೂನತೆಯುಂಟಾದರೆ ಅದರ ಸಾಧಕಬಾಧಕಗಳನ್ನು ಚೆನ್ನಾಗಿ ವಿಚಾರಮಾಡಿ ಸಂಭವಿಸಿದ ಪ್ರಮಾದಕ್ಕನುಸಾರವಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ವ್ರತವು ಮುಗಿಯುವವರೆಗೂ ಯಾವ ವಿಧವಾದ

ಉಚಿತಾಂ ನಿಷ್ಕೃತಿಂ ಕುರ್ಯಾತ್ಪೂಜಾಹೋಮಜಪಾದಿಭಿಃ ।
ಆಸಮಾಪ್ತೇರ್ವ್ರತಸ್ಯೈವಮಾಚರೇನ್ನ ಪ್ರಮಾದತಃ ॥ ೭೦ ॥

ಗೋದಾನಂ ಚ ವೃಷೋತ್ಸರ್ಗಂ ಕುರ್ಯಾತ್ಪೂಜಾಂ ಚ ಸಂಪದಾ ।
ಭಕ್ತಶ್ಚ ಶಿವಪ್ರೀತ್ಯರ್ಥಂ ಸರ್ವಕಾಮವಿವರ್ಜಿತಃ ॥ ೭೧ ॥

ಸಾಮಾನ್ಯಮೇತತ್ಕಥಿತಂ ವ್ರತಸ್ಯಾಸ್ಯ ಸಮಾಸತಃ ।
ಪ್ರತಿಮಾಸಂ ವಿಶೇಷಂ ಚ ಪ್ರವದಾಮಿ ಯಥಾಶ್ರುತಂ ॥ ೭೨ ॥

ವೈಶಾಖೇ ವಜ್ರಲಿಂಗಂ ತು ಜ್ಯೇಷ್ಠೇ ಮಾರಕತಂ ಶುಭಂ ।
ಆಷಾಡೇ ಮೌಕ್ತಿಕಂ ವಿದ್ಯಾಚ್ಛ್ರಾವಣೇ ನೀಲನಿರ್ಮಿತಂ ॥ ೭೩ ॥

ಮಾಸೇ ಭಾದ್ರಪದೇ ಚೈವ ಪದ್ಮರಾಗಮಯಂ ಪರಂ ।
ಆಶ್ವಿನೇ ಮಾಸಿ ವಿದ್ಯಾದ್ವೈ ಲಿಂಗಂ ಗೋಮೇದಕಂ ವರಂ । ॥ ೭೪ ॥

---

ಪ್ರಮಾದವೂ ಬರದಂತೆ ಸರಿಯಾಗಿ ನೋಡಿಕೊಂಡು ಈ ವ್ರತವನ್ನು ಆಚರಿಸತಕ್ಕದ್ದು.

೭೧. ಶಿವನ ವ್ರತವನ್ನು ಆಚರಿಸುವ ಭಕ್ತನು ಗೋದಾನ, ವೃಷೋತ್ಸರ್ಗ, ಇವುಗಳನ್ನು ತನ್ನ ಸಂಪತ್ತಿಗೆ ಅನುಸಾರವಾಗಿ ಆಚರಿಸಬೇಕು. ಆದರೆ ಈ ವ್ರತವನ್ನು ಮಾಡುವವನಿಗೆ ಶಿವನಲ್ಲಿ ಭಕ್ತಿಯುಂಟಾಗಲಿ, ಶಿವನಿಗೆ ತನ್ನಲ್ಲಿ ಪ್ರೀತಿಯುಂಟಾಗಲಿ ಎಂಬ ಉದ್ದೇಶವಿರಬೇಕೇ ವಿನಹ ಬೇರೆಯದಾದ ಯಾವ ವಿಧವಾದ ಆಶೆಯೂ ಇರಬಾರದು.

೭೨. ಈ ಪಾಶುಪತವ್ರತದ ಸಾಮಾನ್ಯ ನಿಯಮಗಳೆಲ್ಲವನ್ನೂ ಸಂಕ್ಷೇಪವಾಗಿ ಹೇಳಿರುವೆನು. ಆಯಾಯ ತಿಂಗಳಿನಲ್ಲಿ ನಡೆಸಬೇಕಾದ ವಿಶೇಷಗಳನ್ನೂ ಆಚಾರಗಳನ್ನೂ ತಿಳಿದಮಟ್ಟಿಗೆ ಹೇಳುತ್ತೇನೆ.

೭೩-೭೫. ವೈಶಾಖದಲ್ಲಿ ವಜ್ರದ ಲಿಂಗವನ್ನು ಮಾಡಿ ಪೂಜಿಸಬೇಕು. ಹಾಗೆಯೇ ಜ್ಯೇಷ್ಠಮಾಸದಲ್ಲಿ ಮರಕತಲಿಂಗವನ್ನೂ, ಆಷಾಢಮಾಸದಲ್ಲಿ ಮುತ್ತಿನ ಲಿಂಗವನ್ನೂ, ಶ್ರಾವಣಮಾಸದಲ್ಲಿ ಇಂದ್ರನೀಲದ ಲಿಂಗವನ್ನೂ, ಭಾದ್ರಪದಮಾಸದಲ್ಲಿ ಪದ್ಮರಾಗರತ್ನದ ಲಿಂಗವನ್ನೂ, ಆಶ್ವಯುಜಮಾಸದಲ್ಲಿ ಗೋಮೇದಕರತ್ನದ

**ಕಾರ್ತಿಕ್ಯಾಂ ವೈದ್ರುಮಂ ಲಿಂಗಂ ವೈದೂರ್ಯಂ ಮಾರ್ಗಶೀರ್ಷಕೇ ।**
**ಪುಷ್ಪರಾಗಮಯಂ ಪೌಷೇ ಮಾಘೇ ದ್ಯುಮಣಿಜಂ ತಥಾ ॥ ೭೫ ॥**

**ಫಾಲ್ಗುನೇ ಚಂದ್ರಕಾಂತೋತ್ಥಂ ಚೈತ್ರೇ ತದ್ವ್ಯತ್ಯಯೋಽಥ ವಾ ।**
**ಸರ್ವಮಾಸೇಷು ರತ್ನಾನಾಮಲಾಭೇ ಹೈಮಮೇವ ವಾ ॥ ೭೬ ॥**

**ಹೈಮಾಭಾವೇ ರಾಜತಂ ವಾ ತಾಮ್ರಜಂ ಶೈಲಜಂ ತಥಾ ।**
**ಮೃಣ್ಮಯಂ ವಾ ಯಥಾಲಾಭಂ ಜಾತುಷಂ ಚಾನ್ಯದೇವ ವಾ ॥ ೭೭ ॥**

**ಸರ್ವಗಂಧಮಯಂ ವಾಥ ಲಿಂಗಂ ಕುರ್ಯಾದ್ಯಥಾರುಚಿ ।**
**ವ್ರತಾವಸಾನಸಮಯೇ ಸಮಾಚರಿತನಿತ್ಯಕಃ ॥ ೭೮ ॥**

**ಕೃತ್ವಾ ವೈಶೇಷಿಕೀಂ ಪೂಜಾಂ ಹುತ್ವಾ ಚೈವ ಯಥಾ ಪುರಾ ।**
**ಸಂಪೂಜ್ಯ ಚ ತಥಾಚಾರ್ಯಂ ವ್ರತಿನಶ್ಚ ವಿಶೇಷತಃ ॥ ೭೯ ॥**

---

ಲಿಂಗವನ್ನೂ, ಕಾರ್ತಿಕಮಾಸದಲ್ಲಿ ವಿದ್ರುಮರತ್ನದ ಲಿಂಗವನ್ನೂ, ಮಾರ್ಗಶಿರಮಾಸದಲ್ಲಿ ವೈಢೂರ್ಯರತ್ನದ ಲಿಂಗವನ್ನೂ, ಪುಷ್ಯಮಾಸದಲ್ಲಿ ಪುಷ್ಯರಾಗರತ್ನದ ಲಿಂಗವನ್ನೂ, ಫಾಲ್ಗುಣಮಾಸದಲ್ಲಿ ಚಂದ್ರಕಾಂತರತ್ನದ ಲಿಂಗವನ್ನೂ, ಚೈತ್ರಮಾಸದಲ್ಲಿ ಸೂರ್ಯಕಾಂತರತ್ನದ ಲಿಂಗವನ್ನೂ ಪೂಜಿಸಬೇಕು.

೭೬. ಈ ಶುದ್ಧವಾದ ರತ್ನಗಳು ಸಿಕ್ಕದಿದ್ದರೆ, ಎಲ್ಲಾ ತಿಂಗಳಿನಲ್ಲಿಯೂ ಚಿನ್ನದ ಲಿಂಗವನ್ನಾಗಲಿ, ಅದೂ ಇಲ್ಲದಿದ್ದರೆ ಬೆಳ್ಳಿಯ ಲಿಂಗ, ತಾಮ್ರದ ಲಿಂಗ, ಕಲ್ಲಿನ ಲಿಂಗ, ಮಣ್ಣಿನಲ್ಲಿ ಮಾಡಿದಲಿಂಗ, ಅರಗಿನಲ್ಲಿ ಮಾಡಿದಲಿಂಗ ಇವುಗಳಲ್ಲಿ ಯಾವುದನ್ನಾದರೂ ಮಾಡಿ ಪೂಜಿಸಬಹುದು.

೭೭-೮೦. ಅಥವಾ ಎಲ್ಲಾ ವಿಧವಾದ ಗಂಧವನ್ನೂ ಅರೆದು ಅದರಿಂದ ಲಿಂಗವನ್ನು ಮಾಡಿ ತನ್ನ ಇಚ್ಛಾನುಸಾರವಾಗಿ ಪೂಜೆಯನ್ನು ಮಾಡಬಹುದು. ನಿತ್ಯಕರ್ಮಗಳನ್ನು ಮುಗಿಸಿ ಹಿಂದೆ ಹೇಳಿದಂತೆ ಸಂದರ್ಭಾನುಸಾರ ವಿಶೇಷ ಪೂಜಾದಿಗಳನ್ನು ಮಾಡಬೇಕು. ಹೋಮಾದಿಗಳನ್ನು ಮಾಡಿ ಮುಗಿಸಿ ವೇಳೆಗೆ ಸರಿಯಾದ ಕಾಲದಲ್ಲಿ ನಿತ್ಯಕರ್ಮಗಳನ್ನು ಮಾಡಿ ಮುಗಿಸಿ ತನಗೆ ಗುರುವಾದ ಆಚಾರ್ಯನನ್ನೂ, ಈ ಪಾಶುಪತವ್ರತಮಾಡಿದವರನ್ನು ವಿಶೇಷವಾಗಿ ಪೂಜಿಸಿ, ತಾನು ಗುರುವಿನ ಆಜ್ಞೆಯಿಂದ ಪೂರ್ವಮುಖ ಅಥವಾ ಉತ್ತರ ಮುಖನಾಗಿ ದರ್ಭೆ

ದೇಶಿಕೇನಾಪ್ಯನುಜ್ಞಾತಃ ಪ್ರಾಙ್ಮುಖೋ ವಾಪ್ಯುದಙ್ಮುಖಃ ।
ದರ್ಭಾಸನೋ ದರ್ಭಪಾಣಿಃ ಪ್ರಾಣಾಪಾನೌ ನಿಯಮ್ಯ ಚ ॥ ೮೦ ॥

ಜಪಿತ್ವಾ ಶಕ್ತಿತೋ ಮೂಲಂ ಧ್ಯಾತ್ವಾ ಸಾಂಬಂ ತ್ರಿಯಂಬಕಂ ।
ಅನುಜ್ಞಾಪ್ಯ ಯಥಾಪೂರ್ವಂ ನಮಸ್ಕೃತ್ಯ ಕೃತಾಂಜಲಿ ॥ ೮೧ ॥

ಸಮುತ್ಸೃಜಾಮಿ ಭಗವನ್ವ್ರತಮೇತತ್ತ್ವದಾಜ್ಞಯಾ ।
ಇತ್ಯುಕ್ತ್ವಾ ಲಿಂಗಮೂಲಸ್ಥಾನ್ ದರ್ಭಾನುತ್ತರತಸ್ತ್ಯಜೇತ್ ॥ ೮೨ ॥

ತತೋ ದಂಡಜಟಾಚೀರಮೇಖಲಾ ಅಪಿ ಚೋತ್ಸೃಜೇತ್ ।
ಪುನರಾಚಮ್ಯ ವಿಧಿವತ್ಪಂಚಾಕ್ಷರಮುದೀರಯೇತ್ ॥ ೮೩ ॥

ಯಃ ಕೃತ್ವಾತ್ಯಂತಿಕೀಂ ದೀಕ್ಷಾಮಾದೇಹಾಂತಮನಾಕುಲಃ ।
ವ್ರತಮೇತತ್ಪ್ರಕುರ್ವೀತ ಸ ತು ವೈ ನೈಷ್ಠಿಕಃ ಸ್ಮೃತಃ ॥ ೮೪ ॥

---

ಯನ್ನು ಹಾಸಿಕೊಂಡು, ದರ್ಭೆಯನ್ನು ಕೈಯಲ್ಲಿ ಧರಿಸಿಕೊಂಡು, ಕುಳಿತು ಪ್ರಾಣಾಪಾನವಾಯುಗಳನ್ನು ಹತೋಟಿಯಲ್ಲಿಟ್ಟುಕೊಂಡು ಪ್ರಾಣಾಯಾಮವಮಾಡಬೇಕು.

೮೧-೮೨. ತನ್ನ ಶಕ್ತಿಗನುಸಾರವಾಗಿ ದೇವನಾದ ಶಿವನನ್ನು ಧ್ಯಾನ ಮಾಡುತ್ತಾ, ಮೂಲಮಂತ್ರವನ್ನು ಜಪಮಾಡಿಕೊಳ್ಳಬೇಕು. ಅನಂತರ ಹಿಂದಿನಂತೆ ಅನುಜ್ಞೆಯನ್ನು ಪಡೆದು ನಮಸ್ಕಾರವನ್ನು ಮಾಡಿ ಕೈಮುಗಿದುಕೊಂಡು "ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ದೇವದೇವನೆ, ನಿನ್ನ ಅಪ್ಪಣೆಯಿಂದ ಈ ವ್ರತವನ್ನು ಆಚರಿಸಿರುವೆನು. ನಿನ್ನ ಅಪ್ಪಣೆಯಿಂದಲೇ ಈಗ ವಿಸರ್ಜನೆಯನ್ನು ಮಾಡುವೆನು" ಎಂದು ಹೇಳಿ ತಾನು ಪೂಜಿಸಿದ ಶಿವಲಿಂಗದ ಬುಡದಲ್ಲಿರಿಸಿರುವ ದರ್ಭೆಗಳನ್ನು ಉತ್ತರದಿಕ್ಕಿಗೆ ತೆಗೆದುಹಾಕಬೇಕು.

೮೩. ಅನಂತರದಲ್ಲಿ ತಾನು ಧರಿಸಿದ್ದ ದಂಡ, ಜಟೆ, ನಾರುಮಡಿ, ದರ್ಭೆ, ಉಡಿದಾರ ಇವುಗಳನ್ನು ವಿಸರ್ಜನೆಮಾಡಬೇಕು. ಶಾಸ್ತ್ರಕ್ರಮದಂತೆ ಪುನಃ ಆಚಮನವನ್ನು ಮಾಡಿ ಪಂಚಾಕ್ಷರಿಯನ್ನು ಜಪಮಾಡಬೇಕು.

೮೪. ಈರೀತಿ ಹೇಳಿರುವ ದೀಕ್ಷೆಯನ್ನು ಕೈಗೊಂಡು ಯಾವನು ತನ್ನ ದೇಹಪಾತವಾಗುವವರೆಗೂ ನಿರಾಕುಲನಾಗಿ ಈ ವ್ರತವನ್ನು ಆಚರಿಸುವನೋ ಅವನು ನೈಷ್ಠಿಕನೆಂದೆನಿಸಿಕೊಳ್ಳುವನು.

**ಸೋಽತ್ಯಾಶ್ರಮೀ ಚ ವಿಜ್ಞೇಯೋ ಮಹಾಪಾಶುಪತಸ್ತಥಾ ।**
**ಸ ಏವ ತಪತಾಂ ಶ್ರೇಷ್ಠಃ ಸ ಏವ ಚ ಮಹಾವ್ರತೀ ॥ ೬೫ ॥**

**ನ ತೇನ ಸದೃಶಃ ಕಶ್ಚಿತ್ಕೃತಕೃತ್ಯೋ ಮುಮುಕ್ಷುಷು ।**
**ಮೋ ಯತಿರ್ನೈಷ್ಠಿಕೋ ಜಾತಸ್ತಮಾಹುರ್ನೈಷ್ಠಿಕೋತ್ತಮಂ ॥ ೬೬ ॥**

**ಯೋಽನ್ವಹಂ ದ್ವಾದಶಾಹಂ ವಾ ವ್ರತಮೇತತ್ಸಮಾಚರೇತ್ ।**
**ಸೋಽಪಿ ನೈಷ್ಠಿಕತುಲ್ಯಃ ಸ್ಯಾತ್ತೀವ್ರವ್ರತಸಮನ್ವಯಾತ್ ॥ ೬೭ ॥**

**ಘೃತಾಕ್ತೋ ಯಶ್ಚರೇದೇತದ್ವ್ರತಂ ವ್ರತಪರಾಯಣಃ ।**
**ದ್ವಿತ್ರ್ಯೇಕದಿವಸಂ ವಾಪಿ ಸ ಚ ಕಶ್ಚನ ನೈಷ್ಠಿಕಃ ॥ ೬೮ ॥**

**ಕೃತ್ಯಮಿತ್ಯೇವ ನಿಷ್ಕಾಮೋ ಯಶ್ಚರೇದ್ವ್ರತಮುತ್ತಮಂ ।**
**ಶಿವಾರ್ಪಿತಾತ್ಮಾ ಸತತಂ ನ ತೇನ ಸದೃಶಃ ಕ್ವಚಿತ್ ॥ ೬೯ ॥**

---

೬೫-೬೬. ಅವನನ್ನು ಅತ್ಯಾಶ್ರಮಿ ಅಥವಾ ಆಶ್ರಮಧರ್ಮಗಳನ್ನು ಮೀರಿದವನು ಎಂದು ಹೇಳುವರು. ಎಂದರೆ ಅವನಿಗೆ ವರ್ಣಾಶ್ರಮನಿಯಮಗಳನ್ನು ನಡೆಸಲೇ ಬೇಕೆಂಬ ನಿರ್ಬಂಧವಿಲ್ಲ. ಅವನುಮಹಾಪಾಶುಪತನೆನಿಸಿಕೊಳ್ಳುವನು. ಅವನೇ ತಪಸ್ವಿಗಳಲ್ಲಿ ಶ್ರೇಷ್ಠನು. ಅವನೇ ಮಹಾವ್ರತಿಯು. ಮೋಕ್ಷಪ್ರಾಪ್ತಿಗೆ ಅರ್ಹರಾದವರಲ್ಲಿ ಅವನ ಸಮಾನರಾರೂ ಇಲ್ಲ. ಈ ಪ್ರಕಾರದಿಂದಿರುವ ಸಂನ್ಯಾಸಿಯನ್ನು ನಾದ ನೈಷ್ಠಿಕನೆಂದು ಕರೆಯುವರು.

೬೭. ಪ್ರತಿನಿತ್ಯವಾಗಲಿ, ಹನ್ನೆರಡುದಿನಗಳು ಮಾತ್ರವಾಗಲಿ ಈ ವ್ರತವನ್ನು ಆಚರಿಸುವವನು ತೀವ್ರವಾದ ವ್ರತವನ್ನು ಆಚರಿಸುವವನಾದ ಕಾರಣ ನೈಷ್ಠಿಕನಿಗೆ ಸಮನಾಗಿರುವನು.

೬೮. ತುಪ್ಪದಿಂದ ತನ್ನ ಶರೀರವನ್ನು ನೆನಸಿಕೊಂಡು ಎರಡು, ಮೂರು ದಿನಗಳಾದರೂ ಈ ವ್ರತವನ್ನು ಆಚರಿಸುವವನು ನೈಷ್ಠಿಕನಾಗುವನು.

೬೯. ಈ ವ್ರತವನ್ನು ಮಾಡಬೇಕಾಗಿರುವುದು ತನ್ನ ಕರ್ತವ್ಯವೆಂದು ತಿಳಿದು ಯಾವ ವಿಧವಾದ ಆಸೆಯೂ ಇಲ್ಲದವನಾಗಿ ಉತ್ತಮವಾದ ಈ ವ್ರತವನ್ನು ಆಚರಿಸಿ, ತನ್ನ ಶರೀರಾದಿಗಳನ್ನು ಶಿವನಲ್ಲಿ ಅರ್ಪಿಸಿ, ಯಾವಾಗಲೂ ಸಂತೋಷದಿಂದ ಇರುವವನಿಗೆ ಸಮನಾದವನು ಎಲ್ಲಿಯೂ ಇಲ್ಲ.

ಭಸ್ಮಚ್ಛನ್ನೋ ದ್ವಿಜೋ ವಿದ್ವಾನ್ಮಹಾಪಾತಕಸಂಭವೈಃ ।
ಪಾಪೈಸ್ಸುದಾರುಣೈಸ್ಸದ್ಯೋ ಮುಚ್ಯತೇ ನಾತ್ರ ಸಂಶಯಃ ॥ ೯೦ ॥

ರುದ್ರಾಗ್ನಿರ್ಯತ್ಪರಂ ವೀರ್ಯಂ ತದ್ಭಸ್ಮ ಪರಿಕೀರ್ತಿತಂ ।
ತಸ್ಮಾತ್ಸರ್ವೇಷು ಕಾಲೇಷು ವೀರ್ಯವಾನ್ಭಸ್ಮ ಸಂಯುತಃ ॥ ೯೧ ॥

ಭಸ್ಮನಿಷ್ಠಸ್ಯ ನಶ್ಯಂತಿ ದೋಷಾ ಭಸ್ಮಾಗ್ನಿಸಂಗಮಾತ್ ।
ಭಸ್ಮಸ್ನಾನವಿಶುದ್ಧಾತ್ಮಾ ಭಸ್ಮನಿಷ್ಠ ಇತಿ ಸ್ಮೃತಃ ॥ ೯೨ ॥

ಭಸ್ಮನಾ ದಿಗ್ಧಸರ್ವಾಂಗೋ ಭಸ್ಮದೀಪ್ತತ್ರಿಪುಂಡ್ರಕಃ ।
ಭಸ್ಮಸ್ನಾಯೀ ಚ ಪುರುಷೋ ಭಸ್ಮನಿಷ್ಠ ಇತಿ ಸ್ಮೃತಃ ॥ ೯೩ ॥

ಭೂತಪ್ರೇತಪಿಶಾಚಾಶ್ಚ ರೋಗಾಶ್ಚಾತೀವ ದುಸ್ಸಹಾಃ ।
ಭಸ್ಮನಿಷ್ಠಸ್ಯ ಸಾನ್ನಿಧ್ಯಾದ್ವಿದ್ರವಂತಿ ನ ಸಂಶಯಃ ॥ ೯೪ ॥

---

೯೦. ತಿಳುವಳಿಕೆಯುಳ್ಳ ದ್ವಿಜನು ವಿರಜಾಹೋಮದ ಭಸ್ಮದಿಂದ ಉದ್ಧೂಳನೆಯನ್ನು ಮಾಡಿಕೊಂಡರೆ ಬಹಳ ಕ್ರೂರವಾದ ಮಹಾಪಾತಕಗಳಿಂದ ಉಂಟಾದ ಪಾಪಗಳಿಂದ ಆ ಕ್ಷಣದಲ್ಲಿಯೇ ಬಿಡುಗಡೆಯನ್ನು ಹೊಂದುವನು.

೯೧. ರುದ್ರಾಗ್ನಿಗೆ ಎಷ್ಟು ಶಕ್ತಿಯಿರುವುದೋ ಭಸ್ಮಕ್ಕೂ ಅಷ್ಟೇ ಶಕ್ತಿಯಿರುವುದು. ಆದ್ದರಿಂದ ಆ ಭಸ್ಮವನ್ನು ಧರಿಸಿದವನು ಎಲ್ಲಾ ಕಾಲದಲ್ಲಿಯೂ ಶಕ್ತಿವಂತನಾಗಿರುವನು.

೯೨ ಭಸ್ಮಧಾರಣೆ ಮಾಡಿಕೊಂಡವನು ಅಗ್ನಿರೂಪವಾದ ಭಸ್ಮದ ಸಂಬಂಧದಿಂದ ತನ್ನ ಸಮಸ್ತದೋಷಗಳನ್ನು ಕಳೆದುಕೊಂಡು ಪರಿಶುದ್ಧನಾಗಿ ಭಸ್ಮನಿಷ್ಠನೆನಿಸುವನು.

೯೩. ಭಸ್ಮದಿಂದ ತನ್ನ ಶರೀರದ ಸರ್ವಾವಯವಗಳನ್ನು ಲೇಪನಮಾಡಿಕೊಳ್ಳುವವನು, ಹಣೆಯಲ್ಲಿ ಭಸ್ಮದಿಂದ ತ್ರಿಪುಂಡ್ರವನ್ನು ಧರಿಸಿ ಪ್ರಕಾಶಿಸುವವನು, ಭಸ್ಮದಿಂದ ವಿಧಿಪ್ರಕಾರ ಸ್ನಾನಮಾಡುವವನು ಇವರೆಲ್ಲರೂ ಭಸ್ಮನಿಷ್ಠರೆನಿಸುವರು.

೯೪. ಭೂತಗಳು, ಪ್ರೇತಗಳು, ಪಿಶಾಚಗಳು, ಅಸಾಧ್ಯವಾದ ರೋಗಗಳು ಇವೆಲ್ಲವೂ ಭಸ್ಮನಿಷ್ಠನು ಸಮೀಪದಲ್ಲಿದ್ದರೆ ಓಡಿಹೋಗುವವು. ಈ ವಿಷಯದಲ್ಲಿ ಸಂಶಯಪಡಬೇಕಾಗಿಲ್ಲ.

**ಭಾಸನಾದ್ಭಸಿತಂ ಪ್ರೋಕ್ತಂ ಭಸ್ಮ ಕಲ್ಮಷಭಕ್ಷಣಾತ್ ।**
**ಭೂತಿರ್ಭೂತಿಕರೀ ಚೈವ ರಕ್ಷಾ ರಕ್ಷಾಕರೀ ಪರಂ ॥ ೯೫ ॥**

**ಕಿಮನ್ಯದಿಹ ವಕ್ತವ್ಯಂ ಭಸ್ಮಮಾಹಾತ್ಮ್ಯಕಾರಣಂ ।**
**ವ್ರತೀ ಚ ಭಸ್ಮನಾ ಸ್ನಾತಃ ಸ್ವಯಂ ದೇವೋ ಮಹೇಶ್ವರಃ ॥ ೯೬ ॥**

**ಪರಮಾಸ್ತ್ರಂ ಚ ಶೈವಾನಾಂ ಭಸ್ಮೈತತ್ಪಾರಮೇಶ್ವರಂ ।**
**ಧೌಮ್ಯಾಗ್ರಜಸ್ಯ ತಪಸಿ ವ್ಯಾಪದೋ ಯನ್ನಿವಾರಿತಾಃ ॥ ೯೭ ॥**

**ತಸ್ಮಾತ್ಸರ್ವಪ್ರಯತ್ನೇನ ಕೃತ್ವಾ ಪಾಶುಪತವ್ರತಂ ।**
**ಧನವದ್ಭಸ್ಮ ಸಂಗೃಹ್ಯ ಭಸ್ಮಸ್ನಾನರತೋ ಭವೇತ್ ॥ ೯೮ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ ಪೂರ್ವಭಾಗೇ ಪಶುಪತಿವ್ರತವಿಧಾನವರ್ಣನಂ ನಾಮ ತ್ರಯಸ್ತ್ರಿಂಶೋಽಧ್ಯಾಯಃ**

---

೯೫. ಚೆನ್ನಾಗಿ ಹೊಳೆಯುವುದರಿಂದ ಭಸಿತವೆಂತಲೂ, ಕಲ್ಮಷಗಳನ್ನು ನಾಶ ಮಾಡುವುದರಿಂದ ಭಸ್ಮವೆಂತಲೂ, ಐಶ್ವರ್ಯವನ್ನುಂಟುಮಾಡುವುದರಿಂದ ಭೂತಿಯೆಂತಲೂ, ರಕ್ಷೆಯನ್ನುಂಟುವಕಾರಣ ರಕ್ಷಾ, ರಕ್ಷಾಕ್ಷರೀ ಎಂತಲೂ ಭಸ್ಮಕ್ಕೆ ಈ ಹೆಸರುಗಳು ಬಂದಿರುವವು.

೯೬-೯೭. ಪಾಶುಪತವ್ರತವನ್ನು ಮಾಡಿ ಭಸ್ಮದಿಂದ ಸ್ನಾನಮಾಡಿದವನು ಸಾಕ್ಷಾನ್ಮಹೇಶ್ವರನೇ ಆಗಿರುವನು. ಇದಕ್ಕಿಂತ ಹೆಚ್ಚಾಗಿ ಭಸ್ಮದ ಮಹಾತ್ಮೆಯನ್ನು ಇನ್ನೇನು ಹೇಳಬೇಕಾಗಿರುವುದು ? ಶೈವರಿಗೆಲ್ಲರಿಗೂ ಪರಮೇಶ್ವರನ ಸಂಬಂಧವಾದ ಈ ಭಸ್ಮವೇ ಉತ್ತಮವಾದ ಅಸ್ತ್ರವಾಗಿರುವುದು. ಧೌಮ್ಯಋಷಿಯ ಅಣ್ಣನಾದ ಉಪಮನ್ಯುವು ತಪಸ್ಸನ್ನು ಮಾಡುವಾಗ ಅವನ ವಿಪತ್ತೆಲ್ಲವನ್ನೂ ಈ ಭಸ್ಮವು ನಾಶ ಮಾಡಿರುವುದು.

೯೮. ಆದ್ದರಿಂದ ಮನುಷ್ಯನಾದವನು ಬಹಳ ಪ್ರಯತ್ನಪಟ್ಟು ಈ ಪಾಶುಪತ ವ್ರತವನ್ನು ಮಾಡಿ, ಧನವನ್ನು ಸಂಪಾದಿಸುವ ಹಾಗೆ ಈ ಭಸ್ಮವನ್ನು ಸಂಪಾದಿಸಿ ಭಸ್ಮಸ್ನಾನವನ್ನು ಮಾಡುವುದರಲ್ಲಿ ಆಸಕ್ತನಾಗಿರಬೇಕು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯ ಸಂಹಿತೆಯ ಪೂರ್ವಭಾಗದಲ್ಲಿ ಪಾಶುಪತವ್ರತವಿಧಾನವರ್ಣನವೆಂಬ ಮೂವತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ಚತುಸ್ತ್ರಿಂಶೋಽಧ್ಯಾಯಃ

---

॥ ಋಷಯ ಊಚುಃ ॥

ಧೌಮ್ಯಾಗ್ರಜೇನ ಶಿಶುನಾ ಕ್ಷೀರಾರ್ಥಂ ಹಿ ತಪಃ ಕೃತಂ ।
ತಸ್ಮಾತ್ಕ್ಷೀರಾರ್ಣವೋ ದತ್ತಸ್ತಸ್ಮೈ ದೇವೇನ ಶೂಲಿನಾ ॥ ೧ ॥

ಸ ಕಥಂ ಶಿಶುಕೋ ಲೇಭೇ ಶಿವಶಾಸ್ತ್ರಪ್ರವಕ್ತೃತಾಂ ।
ಕಥಂ ವಾ ಶಿವಸದ್ಭಾವಂ ಜ್ಞಾತ್ವಾ ತಪಸಿ ನಿಷ್ಠಿತಃ ॥ ೨ ॥

ಕಥಂ ಚ ಲಬ್ಧವಿಜ್ಞಾನಸ್ತಪಶ್ಚರಣಪರ್ವಣಿ ।
ರುದ್ರಾಗ್ನೇರ್ಯತ್ಪರಂ ವೀರ್ಯಂ ಲೇಭೇ ಭಸ್ಮ ಸ್ವರಕ್ಷಕಂ ॥ ೩ ॥

---

## ಮೂವತ್ತನಾಲ್ಕನೆಯ ಅಧ್ಯಾಯವು

೧-೨. ಋಷಿಗಳು ಕೇಳಿದರು.—ಧೌಮ್ಯಋಷಿಯ ಅಣ್ಣನಾದ ಉಪಮನ್ಯುವು ತಾನು ಸಣ್ಣ ಹುಡುಗನಾಗಿದ್ದಾಗಲೇ ಹಾಲಿಗೋಸ್ಕರ ತಪಸ್ಸನ್ನು ಮಾಡಿದಾಗ ಶಿವನು ಅವನಿಗೆ ಹಾಲಿನ ಸಮುದ್ರವನ್ನು ಕೊಟ್ಟಿರುವನಷ್ಟೆ. ಅವನು ಸಣ್ಣ ಹುಡುಗನಾಗಿಯೇ ಶಿವಶಾಸ್ತ್ರಗಳನ್ನು ಹೇಳುವ ಶಕ್ತಿಯನ್ನು ಹೇಗೆ ಸಂಪಾದಿಸಿದನು? ಶಿವನ ಸದ್ಭಾವವನ್ನು ತಿಳಿದು ತಪಸ್ಸನ್ನು ಹೇಗೆ ಮಾಡಿದನು ?

೩. ತಪಸ್ಸನ್ನು ಮಾಡುವ ಕ್ರಮವು ಅವನಿಗೆ ಗೊತ್ತಾದ ಬಗೆ ಹೇಗೆ? ರುದ್ರಾಗ್ನಿಯಿಂದ ಉತ್ಪನ್ನವಾದ ಸ್ವರಕ್ಷಾಕರವಾದ ಆ ಶ್ರೇಷ್ಠ ಭಸ್ಮವು ಅವನಿಗೆ ಹೇಗೆ ದೊರೆಯಿತು ? ಇದನ್ನೆಲ್ಲಾ ನಮಗೆ ಹೇಳಬೇಕೆನಲು,

॥ ವಾಯುರುವಾಚ ॥

ನ ಹ್ಯೇಷ ಶಿಶುಕಃ ಕಶ್ಚಿತ್ಪ್ರಾಕೃತಃ ಕೃತವಾಂಸ್ತಪಃ ।
ಮುನಿವರ್ಯಸ್ಯ ತನಯೋ ವ್ಯಾಘ್ರಪಾದಸ್ಯ ಧೀಮತಃ ॥ ೪ ॥

ಜನ್ಮಾಂತರೇಣ ಸಂಸಿದ್ಧಃ ಕೇನಾಪಿ ಖಲು ಹೇತುನಾ ।
ಸ್ವಪದಪ್ರಚ್ಯುತೋ ದಿಷ್ಟ್ಯಾ ಪ್ರಾಪ್ತೋ ಮುನಿಕುಮಾರತಾಂ ॥ ೫ ॥

ಮಹಾದೇವಪ್ರಸಾದಸ್ಯ ಭಾಗ್ಯಾಪನ್ನಸ್ಯ ಭಾವಿನಃ ।
ದುಗ್ಧಾಭಿಲಾಷಪ್ರಭವದ್ವಾರತಾಮಗಮತ್ತಪಃ ॥ ೬ ॥

ಅತಃ ಸರ್ವಗಣೇಶತ್ವಂ ಕುಮಾರತ್ವಂ ಚ ಶಾಶ್ವತಂ ।
ಸಹ ದುಗ್ಧಾಬ್ಧಿನಾ ತಸ್ಮೈ ಪ್ರದದೌ ಶಂಕರಃ ಸ್ವಯಂ ॥ ೭ ॥

ತಸ್ಯ ಜ್ಞಾನಾಗಮೋಽಪ್ಯಸ್ಯ ಪ್ರಸಾದಾದೇವ ಶಂಕರಾತ್ ।
ಕೌಮಾರಂ ಹಿ ಪರಂ ಸಾಕ್ಷಾಜ್ಜ್ಞಾನಂ ಶಕ್ತಿಮಯಂ ವಿದುಃ ॥ ೮ ॥

---

೪. ವಾಯುದೇವನಿಂತೆಂದನು.—ಈ ಉಪಮನ್ಯುವು ಲೋಕದಲ್ಲಿ ಇರುವ ಸಾಧಾರಣ ಬಾಲಕರಲ್ಲೆಲ್ಲಾ ಬಹಳ ಬುದ್ಧಿವಂತನು. ಇವನು ವ್ಯಾಘ್ರಪಾದನೆಂಬ ಋಷಿಯ ಪುತ್ರನು.

೫. ಇವನು ತನ್ನ ಹಿಂದಿನ ಜನ್ಮದಲ್ಲಿ ಚೆನ್ನಾಗಿ ಮಂತ್ರಸಿದ್ಧಿಯನ್ನು ಪಡೆದು ಕಾರಣಾಂತರದಿಂದ ಸ್ಥಾನಭ್ರಷ್ಟನಾಗಿ ದೈವಗತಿಯಿಂದ ಮುನಿಕುಮಾರನಾಗಿ ಜನಿಸಿದನು.

೬. ಇವನಿಗೆ ಮುಂದೆ ಮಹಾದೇವನ ಅನುಗ್ರಹವು ಆಗಬೇಕಾದ ಯೋಗವಿದ್ದಿತು. ಈ ಅನುಗ್ರಹಕ್ಕೆ ಕ್ಷೀರಾರ್ಥವಾಗಿ ಇವನು ಮಾಡಿದ ತಪಸ್ಸೇ ಕಾರಣವಾಯಿತು.

೭. ಈ ಕಾರಣದಿಂದ ಇವನಿಗೆ ಶಿವನು ಪ್ರಸನ್ನನಾಗಿ ಸರ್ವಗಣಾಧಿಪತ್ಯವನ್ನೂ, ಕುಮಾರತ್ವವನ್ನೂ ಅನುಗ್ರಹಿಸಿದ್ದಲ್ಲದೆ, ಹಾಲಿಗಾಗಿ ತಪಸ್ಸುಮಾಡುತ್ತಿದ್ದುದರಿಂದ ಇವನಿಗೆ ಕ್ಷೀರಸಮುದ್ರವನ್ನೇ ಕೊಟ್ಟನು.

೮. ಇವನಿಗೆ ಉಂಟಾಗಿರುವ ಆ ಪ್ರಕಾರವಾದ ಜ್ಞಾನವೂ ಶಿವನ ಅನುಗ್ರಹದಿಂದಲೇ ಉಂಟಾಗಿರುವುದು. ಕುಮಾರಭಾವವೂ ಶಿವನನ್ನು ಸಾಕ್ಷಾತ್ಕರಿಸಿಕೊಳ್ಳುವ ಜ್ಞಾನವೂ ಶಿವನ ಶಕ್ತಿಯ ರೂಪದಿಂದಲೇ ಉಂಟಾಯಿತು.

ಶಿವಶಾಸ್ತ್ರಪ್ರವಕ್ತೃತ್ವಮಪಿ ತಸ್ಯ ಹಿ ತತ್ಕೃತಂ ।
ಕುಮಾರೋ ಮುನಿತೋ ಲಬ್ಧಜ್ಞಾನಾಬ್ಧಿರಿವ ನಂದನಃ ॥ ೯ ॥

ದೃಷ್ಟಂ ತು ಕಾರಣಂ ತಸ್ಯ ಶಿವಜ್ಞಾನಸಮನ್ವಯೇ ।
ಸ್ವಮಾತೃವಚನಂ ಸಾಕ್ಷಾಚ್ಛೋಕಜಂ ಕ್ಷೀರಕಾರಣಾತ್ ॥ ೧೦ ॥

ಕದಾಚಿತ್ಕ್ಷೀರಮತ್ಯಲ್ಪಂ ಪೀತವಾನ್ಮಾತುಲಾಶ್ರಮೇ ।
ಈರ್ಷ್ಯಯಾ ಮಾತುಲಸುತಂ ಸಂತೃಪ್ತಕ್ಷೀರಮುತ್ತಮಂ ॥ ೧೧ ॥

ಪೀತ್ವಾ ಸ್ಥಿತಂ ಯಥಾಕಾಮಂ ದೃಷ್ಟ್ವಾ ವೈ ಮಾತುಲಾತ್ಮಜಂ ।
ಉಪಮನ್ಯುರ್ವ್ಯಾಘ್ರಪಾದಿಃ ಪ್ರೀತ್ಯಾ ಪ್ರೋವಾಚ ಮಾತರಂ ॥ ೧೨ ॥

॥ ಉಪಮನ್ಯುರುವಾಚ ॥

ಮಾತರ್ಮಾತರ್ಮಹಾಭಾಗೇ ಮಮ ದೇಹಿ ತಪಸ್ವಿನಿ ॥
ಗವ್ಯಂ ಕ್ಷೀರಮತಿಸ್ವಾದು ನಾಲ್ಪಮುಷ್ಣಂ ಪಿಬಾಮ್ಯಹಂ ॥ ೧೩ ॥

---

೯. ಶಿವಶಾಸ್ತ್ರವನ್ನು ವಿವರಿಸಿ ಹೇಳುವ ಸಾಮರ್ಥ್ಯವು ಅವನಿಗೆ ಆ ಶಿವಾನುಗ್ರಹದಿಂದಲೇ ಉಂಟಾಯಿತು. ಆ ಕುಮಾರನು ಋಷಿಯಿಂದ ಅತಿಶಯವಾದ ಜ್ಞಾನವನ್ನು ಪಡೆದು ಎಲ್ಲರಿಗೂ ಆನಂದಕರನಾಗಿರುತ್ತಿದ್ದನು.

೧೦. ತನಗೆ ಕೊಡಲು ಹಾಲಿಲ್ಲವೆಂದು ದುಃಖಪಡುತ್ತಾ ತನ್ನ ತಾಯಿಯು ಹೇಳಿದ ಮಾತನ್ನೇ ಮುಖ್ಯವಾಗಿಟ್ಟುಕೊಂಡು ಹಾಲಿಗಾಗಿ ಶಿವನನ್ನು ಆರಾಧಿಸಿ ಆ ಮೂಲಕ ಅತಿಶಯವಾದ ಶಿವಜ್ಞಾನವನ್ನು ಪಡೆದನು. ಶಿವಜ್ಞಾನ ಪಡೆಯುವುದಕ್ಕೆ ಅದೇ ಕಾರಣವಾಯಿತು.

೧೧-೧೨. ವ್ಯಾಘ್ರಪಾದಋಷಿಯ ಮಗನಾದ ಈ ಉಪಮನ್ಯುವು ಒಂದಾನೊಂದು ಕಾಲದಲ್ಲಿ ತನ್ನ ಸೋದರಮಾವನ ಮನೆಯಲ್ಲಿದ್ದಾಗ ಕೊಂಚ ಹಾಲನ್ನು ಕುಡಿದನು. ಆದರಿಂದ ಅವನಿಗೆ ತೃಪ್ತಿಯುಂಟಾಗಲಿಲ್ಲ. ತನ್ನ ಸೋದರಮಾವನ ಮಗನು ಉತ್ತಮವಾದ ಹಾಲನ್ನು ಬಹಳವಾಗಿ ಕುಡಿದು ತೃಪ್ತಿಯನ್ನು ಹೊಂದಿರುವುದನ್ನು ನೋಡಿ ಅವನಲ್ಲಿ ಅಸೂಯೆಯುಂಟಾಯಿತು. ಬಳಿಕ ತನ್ನ ತಾಯಿಯನ್ನು ಕುರಿತು,

೧೩. ಅಮ್ಮಾ, ಬಿಸಿಯಾಗಿಯೂ, ರುಚಿಕರವಾಗಿಯೂ ಇರುವ ಹಾಲನ್ನು ಕುಡಿಯಬೇಕೆಂದು ಆಸೆಯಾಗುವುದು, ಅಂತಹ ಹಾಲನ್ನು ನನಗೆ ಬೇಕಾದಷ್ಟು ಕೊಡು ಎಂದನು.

॥ ವಾಯುರುವಾಚ ॥

ತಚ್ಛ್ರುತ್ವಾ ಪುತ್ರವಚನಂ ತನ್ಮಾತಾ ಚ ತಪಸ್ವಿನೀ ।
ವ್ಯಾಘ್ರಪಾದಸ್ಯ ಮಹಿಷೀ ದುಃಖಮಾಪತ್ತದಾ ಚ ಸಾ ॥ ೧೪ ॥

ಉಪಲಾಲ್ಯಾಥ ಸುಪ್ರೀತ್ಯಾ ಪುತ್ರಮಾಲಿಂಗ್ಯ ಸಾದರಂ ।
ದುಃಖಿತಾ ವಿಲಲಾಪಾಥ ಸ್ಮೃತ್ವಾ ನೈರ್ಧನ್ಯಮಾತ್ಮನಃ ॥ ೧೫ ॥

ಸ್ಮೃತ್ವಾ ಸ್ಮೃತ್ವಾ ಪುನಃ ಕ್ಷೀರಮುಪಮನ್ಯುಸ್ಸ ಬಾಲಕಃ ।
ದೇಹಿ ದೇಹೀತಿ ತಾಮಾಹ ರುದನ್ಭೂಯೋ ಮಹಾದ್ಯುತಿಃ ॥ ೧೬ ॥

ತದ್ಧಠಂ ಸಾ ಪರಿಜ್ಞಾಯ ದ್ವಿಜಪತ್ನೀ ತಪಸ್ವಿನೀ ।
ಶಾಂತಯೇ ತದ್ಧಠಸ್ಯಾಥ ಶುಭೋಪಾಯಮರೀರಚತ್ ॥ ೧೭ ॥

ಉಂಛವೃತ್ತ್ಯಾರ್ಜಿತಾನ್ಬೀಜಾನ್ಸ್ವಯಂ ದೃಷ್ಟ್ವಾ ಚ ಸಾ ತದಾ ।
ಬೀಜಪಿಷ್ಟಮಥಾಲೋಡ್ಯ ತೋಯೇನ ಕಲಭಾಷಿಣೀ ॥ ೧೮ ॥

---

೧೪. ವ್ಯಾಘ್ರಪಾದಋಷಿಯ ಹೆಂಡತಿಯಾದ ಉಪಮನ್ಯುವಿನ ತಾಯಿಗೆ ಮಗನ ಆ ಮಾತನ್ನು ಕೇಳಿ ಬಹು ದುಃಖವಾಯಿತು.

೧೫. ಆಗ ಅವಳು ಮಗನನ್ನು ಆದರದಿಂದ ತಬ್ಬಿಕೊಂಡು ಪ್ರೀತಿಯಿಂದ ಲಾಲನೆಯನ್ನು ಮಾಡಿ, ತನಗೆ ಅವನು ಹಾಲಿಗೋಸ್ಕರವಾಗಿ ಮಾಡುತ್ತಿರುವ ನಿರ್ಬಂಧಕ್ಕಾಗಿ ವ್ಯಸನಪಟ್ಟಳು.

೧೬. ಆ ಬಾಲಕನಾದ ಉಪಮನ್ಯುವಾದರೋ ತಾನು ಕುಡಿದ ಕೊಂಚ ಹಾಲನ್ನೇ ಸ್ಮರಿಸಿಕೊಂಡು ಹಾಲನ್ನು ಕೊಡೆಂದು ಮತ್ತೆ ಮತ್ತೆ ಕೇಳುತ್ತಾ ಅಳುತ್ತಿದ್ದನು.

೧೭. ತಪಸ್ವಿಯಾದ ಆ ಬ್ರಾಹ್ಮಣನ ಹೆಂಡತಿಯು, ಮಗನ ಆ ಪ್ರಕಾರವಾದ ಹಠವನ್ನು ನೋಡಿ ಅದಕ್ಕಾಗಿ ಒಂದುಪಾಯವನ್ನು ಮಾಡಿದಳು.

೧೮. ಆಗ ಅವಳು ಒಳ್ಳೆಯ ಮಾತಿನಿಂದಲೇ ಅವನನ್ನು ಸಮಾಧಾನ ಮಾಡುತ್ತಾ ತಾನು ಉಂಛವೃತ್ತಿಯಿಂದ ಸಂಪಾದಿಸಿದ ಧಾನ್ಯದ ಹಿಟ್ಟಿಗೆ ನೀರನ್ನು ಬೆರಸಿ, ತನ್ನ ಮಗನಾದ ಉಪಮನ್ಯುವನ್ನು ಮೃದುವಾದ ಮಾತಿನಿಂದ ಸಮೀಪಕ್ಕೆ

ಏಹ್ಯೇಹಿ ಮಮ ಪುತ್ರೇತಿ ಸಾನುಪೂರ್ವಂ ತತಸ್ಸುತಂ ।
ಆಲಿಂಗ್ಯಾದಾಯ ದುಃಖಾರ್ತಾ ಪ್ರದದೌ ಕೃತ್ರಿಮಂ ಪಯಃ ॥ ೧೯ ॥

ಪೀತ್ವಾ ಚ ಕೃತ್ರಿಮಂ ಕ್ಷೀರಂ ಮಾತ್ರಾ ದತ್ತಂ ಸ ಬಾಲಕಃ ।
ನೈತತ್ಕ್ಷೀರಮಿತಿ ಪ್ರಾಹ ಮಾತರಂ ಚಾತಿವಿಹ್ವಲಃ ॥ ೨೦ ॥

ದುಃಖಿತಾ ಸಾ ತದಾ ಪ್ರಾಹ ಸಂಪ್ರೇಕ್ಷ್ಯಾಘ್ರಾಯ ಮೂರ್ಧನಿ ।
ಸಂಮಾರ್ಜ್ಯ ನೇತ್ರೇ ಪುತ್ರಸ್ಯ ಕರಾಭ್ಯಾಂ ಕಮಲಾಯತೇ ॥ ೨೧ ॥

॥ ಜನನ್ಯುವಾಚ ॥

ತಟಿನೀ ರತ್ನಪೂರ್ಣಾಸ್ತ್ವಾಸ್ಸ್ವರ್ಗಪಾತಾಲಗೋಚರಾಃ ।
ಭಾಗ್ಯಹೀನಾ ನ ಪಶ್ಯಂತಿ ಭಕ್ತಿಹೀನಾಶ್ಚ ಯೇ ಶಿವೇ ॥ ೨೨ ॥

ರಾಜ್ಯಂ ಸ್ವರ್ಗಂ ಚ ಮೋಕ್ಷಂ ಚ ಭೋಜನಂ ಕ್ಷೀರಸಂಭವಂ ।
ನ ಲಭಂತೇ ಪ್ರಿಯಾಣ್ಯೇಷಾಂ ನ ತುಷ್ಯತಿ ಯದಾ ಶಿವಃ ॥ ೨೩ ॥

---

ಕರೆದು ಅಪ್ಪಾ ಮಗು, ಇಲ್ಲಿಬಾ, ಹಾಲನ್ನು ಕೊಡುವೆನು ಎಂದು ಅವನನ್ನು ತಬ್ಬಿಕೊಂಡು ದುಃಖದಿಂದ ಅದನ್ನೇ ಹಾಲೆಂದು ಅವನಿಗೆ ಕೊಟ್ಟಳು.

೧೯ ಹುಡುಗನಾದ ಉಪಮನ್ಯುವು ಹಾಲಿನ ರುಚಿಯನ್ನು ಹಿಂದೆಯೇ ಕಂಡಿದ್ದರಿಂದ ಕಪಟದಿಂದ ಮಾಡಿದ ಆ ಹಾಲನ್ನು ಕುಡಿದು ಇದು ಹಾಲಲ್ಲ ಎಂದು ತನ್ನ ತಾಯಿಯ ಸಂಗಡ ಹೇಳಿದನು.

೨೦-೨೧. ಆಗ ಅವನ ಮಾತನ್ನು ಕೇಳಿ ದುಃಖದಿಂದ ತನ್ನ ಮಗನನ್ನು ಹತ್ತಿರ ಕೂರಿಸಿಕೊಂಡು ಅವನ ನೆತ್ತಿಯನ್ನು ಪ್ರೀತಿಯಿಂದ ಸವರುತ್ತಾ ಅವನನ್ನು ತಬ್ಬಿಕೊಂಡು, ಕಮಲದಳದಂತಿರುವ ದೊಡ್ಡದಾದ ಅವನ ಕಣ್ಣುಗಳನ್ನು ವರಸುತ್ತಾ ಇಂತೆಂದಳು—

೨೨-೨೩. ಅಪ್ಪಾ ಮಗು ಸ್ವರ್ಗ, ಪಾತಾಳಲೋಕಗಳಲ್ಲಿ ಇರುವ ರತ್ನಾದ್ಯೈಶ್ವರ್ಯಗಳನ್ನೂ, ಹಾಲನ್ನೂ, ಶಿವನಲ್ಲಿ ಭಕ್ತಿಯಿಲ್ಲದವರೂ, ನಮ್ಮಂತಹ ಭಾಗ್ಯಹೀನರೂ ನೋಡಲಾರರು. ಅವರಿಗೆ ರಾಜ್ಯವೂ, ಸ್ವರ್ಗವೂ, ಮೋಕ್ಷವೂ, ಹಾಲಿನಿಂದ ಕೂಡಿರುವ ಭೋಜನವೂ, ಇನ್ನೂ ಇತರವಾದ ಸಂತೋಷಗಳು ಯಾವುವೂ ಲಭಿಸುವುದಿಲ್ಲ.

ಭವಪ್ರಸಾದಜಂ ಸರ್ವಂ ನಾನ್ಯದ್ದೇವಪ್ರಸಾದಜಂ ।
ಅನ್ಯದೇವೇಷು ನಿರತಾ ದುಃಖಾರ್ತಾ ವಿಭ್ರಮಂತಿ ಚ ॥ ೨೪ ॥

ಕ್ಷೀರಂ ತತ್ರ ಕುತೋಽಸ್ಮಾಕಂ ವನೇ ನಿವಸತಾಂ ಸದಾ ।
ಕ್ವ ದುಗ್ಧಸಾದನಂ ವತ್ಸ ಕ್ವ ವಯಂ ವನವಾಸಿನಃ ॥ ೨೫ ॥

ಕೃತ್ಸ್ನಭಾವೇನ ದಾರಿದ್ರ್ಯಾನ್ಮಯಾ ತೇ ಭಾಗ್ಯಹೀನಯಾ ।
ಮಥ್ಯಾದುಗ್ಧಮಿದಂ ದತ್ತಂ ಪಿಷ್ಟಮಾಲೋಡ್ಯ ವಾರಿಣಾ ॥ ೨೬ ॥

ತ್ವಂ ಮಾತುಲಗೃಹೇ ಸ್ವಲ್ಪಂ ಪೀತ್ವಾ ಸ್ವಾದು ಪಯಃ ಶೃತಂ ।
ಜ್ಞಾತ್ವಾಽ ಸ್ವಾದು ತ್ವಯಾ ಪೀತಂ ತಜ್ಜಾತೀಯಮನುಸ್ಮರನ್ ॥ ೨೭ ॥

---

೨೪ ಇವೆಲ್ಲವೂ ಶಿವನ ಅನುಗ್ರಹದಿಂದಲೇ ಉಂಟಾಗತಕ್ಕುವುಗಳು. ಇತರ ದೇವತೆಗಳ ಅನುಗ್ರಹದಿಂದ ಉಂಟಾಗುವುದಿಲ್ಲ. ಜನರು ಭ್ರಾಂತಿಯಿಂದ ಇತರ ದೇವತೆಗಳನ್ನು ಪೂಜಿಸುವುದರಲ್ಲಿ ಆಸಕ್ತರಾಗಿ ದುಃಖದಿಂದ ಸಂಕಟಪಡುತ್ತಾ ಸುತ್ತುತ್ತಿರುವರು.

೨೫. ಅಪ್ಪಾ ಮಗುವೆ ಕೇಳು. ಯಾವಾಗಲೂ ಕಾಡಿನಲ್ಲಿ ವಾಸಮಾಡುವ ನಮ್ಮಂತಹ ತಪಸ್ವಿಗಳಿಗೆ ಕಾಡಿನಲ್ಲಿ ಹಾಲು ಹೇಗೆ ದೊರೆಯುವುದು ? ಹಾಲನ್ನು ಕೊಡುವ ಹಸುವನ್ನಾಗಲಿ ಹಾಲನ್ನು ನಮಗೆ ಕೊಡುವವರಾಗಲಿ ಯಾರೂ ಇಲ್ಲ. ಕಾಡಿನಲ್ಲಿ ವಾಸಮಾಡುವ ನಮಗೆ ಹಾಲಂದರೇನು ? ಅದನ್ನು ದೊರಕಿಸುವ ಸಾಮರ್ಥ್ಯವೆಂದರೇನು ?

೨೬. ನಾವು ಭಾಗ್ಯಹೀನರು, ಕಡುಬಡವರು. ಆದುದರಿಂದ ನಾನು ಹಿಟ್ಟನ್ನು ನೀರಿನಲ್ಲಿ ಕದರಿ ಹಾಲೆಂದು ಸುಳ್ಳುಹೇಳಿ ನಿನಗೆ ಕೊಟ್ಟೆನು.

೨೭. ನೀನು ನಿನ್ನ ಸೋದರಮಾವನ ಮನೆಯಲ್ಲಿ ಅತಿರುಚಿಯಾದ ಹಾಲನ್ನು ಕೊಂಚಕುಡಿದೆ. ಅದು ನಿನಗೆ ರುಚಿಕರವಾಗಿತ್ತು. ನಾನು ಕೊಟ್ಟ ಹಾಲು ರುಚಿಕರವಾಗಿರಲಿಲ್ಲ. ನೀನು ಮಾತ್ರ ಆ ಹಾಲನ್ನು ಸ್ಮರಿಸುತ್ತಾ ಅದೇ ತರಹದ ಹಾಲನ್ನು ಕೊಡಲಿಲ್ಲ ಎಂದು ಕೇಳುತ್ತಾ ಅಳುತ್ತಿರುವೆ. ನಿನ್ನ ಅಳುವಿನಿಂದ ನನಗೆ ಅತಿ ದುಃಖವುಂಟಾಗಿರುವುದು.

ದತ್ತಂ ನ ಪಯ ಇತ್ಯುಕ್ತ್ವಾ ರುದನ್ದುಃಖೀ ಕರೋಷಿ ಮಾಂ ।
ಪ್ರಸಾದೇನ ವಿನಾ ಶಂಭೋಃ ಪಯಸ್ತವ ನ ವಿದ್ಯತೇ ॥ ೨೮ ॥

ಪಾದಪಂಕಜಯೋಸ್ತಸ್ಯ ಸಾಂಬಸ್ಯ ಸಗಣಸ್ಯ ಚ ।
ಭಕ್ತ್ಯಾ ಸಮರ್ಪಿತಂ ಯತ್ತತ್ಕಾರಣಂ ಸರ್ವಸಂಪದಾಂ ॥ ೨೯ ॥

ಅಧುನಾ ವಸುದೋಽಸ್ಮಾಭಿರ್ಮಹಾದೇವೋ ನ ಪೂಜಿತಃ ।
ಸಕಾಮಾನಾಂ ಯಥಾಕಾಮಂ ಯಥೋಕ್ತಫಲದಾಯಕಃ ॥ ೩೦ ॥

ಧನಾನ್ಯುದ್ದಿಶ್ಯ ನಾಸ್ಮಾಭಿರಿತಃ ಪ್ರಾಗರ್ಚಿತಃ ಶಿವಃ ।
ಅತೋ ದರಿದ್ರಾಸ್ಸಂಜಾತಾ ವಯಂ ತಸ್ಮಾನ್ನ ತೇ ಪಯಃ ॥ ೩೧ ॥

ಪೂರ್ವಜನ್ಮನಿ ಯದ್ದತ್ತಂ ಶಿವಮುದ್ದಿಶ್ಯ ವೈ ಸುತ ।
ತದೇವ ಲಭ್ಯತೇ ನಾನ್ಯದ್ವಿಷ್ಣುಮುದ್ದಿಶ್ಯ ವಾ ಪ್ರಭುಂ ॥ ೩೨ ॥

---

೨೮-೨೯. ಶಿವನ ಅನುಗ್ರಹವಿಲ್ಲದೆ ನಿನಗೆ ಹಾಲು ದೊರೆಯುವುದಿಲ್ಲ. ಜಗನ್ಮಾತೆಯಾದ ಪಾರ್ವತೀಯೊಡನೆಯೂ, ಗಣಗಳೊಡನೆಯೂ, ಕೂಡಿರುವ ಆ ದೇವದೇವನಾದ ಶಿವನ ಪಾದಕಮಲಗಳಲ್ಲಿ ಭಕ್ತಿಯಿಂದ ಸೇವೆಯನ್ನು ಅರ್ಪಿಸದೆ ಇರುವುದು ಈ ದಾರಿದ್ರ್ಯಕ್ಕೆ ಕಾರಣವಾಗಿರುತ್ತದೆ.

೩೦. ಕಾಮ್ಯಫಲವನ್ನಪೇಕ್ಷಿಸಿ ನಾವು ಐಶ್ವರ್ಯಪ್ರದನಾದ ಶಿವನನ್ನರ್ಚಿಸಲಿಲ್ಲ. ಆದುದರಿಂದ ನಮಗೆ ಈರೀತಿ ಬಡತನವು ಬಂದಿರುವುದು.

೩೧-೩೨. ನಾವು ಶಿವನನ್ನು ಧನಾರ್ಥಿಗಳಾಗಿ ಪೂಜಿಸಲಿಲ್ಲ. ಅದರಿಂದ ಈ ದಾರಿದ್ರ್ಯವು ನಮಗೆ ಬಂದಿರುತ್ತದೆ. ಅದರಿಂದ ನಿನಗೆ ಹಾಲು ದೊರೆಯಲಿಲ್ಲ. ಎಲೈ ಪುತ್ರನೇ ಕೇಳು. ನಾವು ಹಿಂದಿನ ಜನ್ಮದಲ್ಲಿ ಶಿವನನ್ನು ಉದ್ದೇಶಮಾಡಿಯಾಗಲಿ, ಪ್ರಭುವಾದ ವಿಷ್ಣುವನ್ನು ಉದ್ದೇಶಮಾಡಿಯಾಗಲಿ, ದಾನಮಾಡಿದ್ದಲ್ಲಿ ಅದು ದೊರೆಯುವುದೇ ಹೊರತು ಅನ್ಯಥಾ ದೊರೆಯಲಾರದು ಎಂದು ಸಮಾಧಾನ ಮಾಡಿದಳು.

॥ ವಾಯುರುವಾಚ ॥

ಇತಿ ಮಾತೃವಚಃ ಶ್ರುತ್ವಾ ತಥ್ಯಂ ಶೋಕಾದಿಸೂಚಕಂ ।
ಬಾಲೋಽಪ್ಯನುತಪನ್ನಂತಃ ಪ್ರಗಲ್ಭಮಿದಮಬ್ರವೀತ್ ॥ ೩೩ ॥

॥ ಉಪಮನ್ಯುರುವಾಚ ॥

ಶೋಕೇನಾಲಮಿತೋ ಮಾತಃ ಸಾಂಬೋ ಯದ್ಯಸ್ತಿ ಶಂಕರಃ ।
ತ್ಯಜ ಶೋಕಂ ಮಹಾಭಾಗೇ ಸರ್ವಂ ಭದ್ರಂ ಭವಿಷ್ಯತಿ ॥ ೩೪ ॥

ಶೃಣು ಮಾತರ್ವಚೋ ಮೇಽದ್ಯ ಮಹಾದೇವೋಽಸ್ತಿ ಚೇತ್ಕ್ವಚಿತ್ ।
ಚಿರಾದ್ವಾ ಹ್ಯಚಿರಾದ್ವಾಪಿ ಕ್ಷೀರೋದಂ ಸಾಧಯಾಮ್ಯಹಂ ॥ ೩೫ ॥

॥ ವಾಯುರುವಾಚ ॥

ಇತು ಶ್ರುತ್ವಾ ವಚಸ್ತಸ್ಯ ಬಾಲಕಸ್ಯ ಮಹಾಮತೇಃ ।
ಪ್ರತ್ಯುವಾಚ ತದಾ ಮಾತಾ ಸುಪ್ರಸನ್ನಾ ಮನಸ್ವಿನೀ ॥ ೩೬ ॥

॥ ಮಾತೋವಾಚ ॥

ಶುಭಂ ವಿಚಾರಿತಂ ತಾತ ತ್ವಯಾ ಮತ್ಪ್ರೀತಿವರ್ಧನಂ ।
ವಿಲಂಬಂ ಮಾ ಕೃಥಾಸ್ತ್ವಂ ಹಿ ಭಜ ಸಾಂಬಂ ಸದಾಶಿವಂ ॥ ೩೭ ॥

೩೩. ಬಾಲಕನಾದ ಉಪಮನ್ಯುವು ದುಃಖದಿಂದ ತನ್ನ ತಾಯಿಯು ಹೇಳಿದ ಈ ಮಾತನ್ನು ನಿಜವೆಂದು ತಿಳಿದು ತಾನು ಹುಡುಗನಾಗಿದ್ದಾಗ್ಯೂ ತನ್ನ ಮನಸ್ಸಿನಲ್ಲಿಯೇ ವ್ಯಸನಪಡುತ್ತಾ ಬುದ್ಧಿಯುಳ್ಳ ದೊಡ್ಡವರಂತೆ ಇಂತೆಂದನು—

೩೪-೩೫. ಎಲೈ ತಾಯಿಯೇ ಕೇಳು. ಇನ್ನು ಮುಂದೆ ದುಃಖಪಡುವುದನ್ನು ಬಿಟ್ಟುಬಿಡು. ಜಗನ್ಮಾತೆಯಾದ ಪಾರ್ವತಿಯೊಡನೆ ಶಂಕರನೆಂಬುವನೊಬ್ಬನು ಇರುವುದಾದರೆ ಎಲ್ಲವೂ ಒಳ್ಳೆಯದಾಗುವುದು. ಮಹಾದೇವನೆಂಬುವನು ಎಲ್ಲಿಯೇ ಇರಲಿ, ಅವನನ್ನು ತೃಪ್ತಿಪಡಿಸಿ ನಾನು ಕ್ಷೀರಸಮುದ್ರವನ್ನೇ ಸಾಧಿಸುವೆನು ಎಂದನು.

೩೬-೩೭. ಬಹಳ ಬುದ್ಧಿವಂತನಾದ ಆ ಬಾಲಕನಾಡಿದ ಈ ಮಾತನ್ನು ಕೇಳಿ ಅವನ ತಾಯಿಯು ಸಂತೋಷದಿಂದ ಎಲೈ ಮಗುವೆ, ನೀನು ಬಹಳ ಚೆನ್ನಾದ ಯೋಚನೆಯನ್ನೇ ಮಾಡಿರುವೆ. ಇದರಿಂದ ನಿನ್ನ ವಿಷಯದಲ್ಲಿ ನನಗೆ ತುಂಬಾ ಸಂತೋಷವುಂಟಾಯಿತು. ನೀನು ತಡಮಾಡಬೇಡ. ಜಗನ್ಮಾತೆಯೊಡನೆ ಇರುವ ಸದಾಶಿವನನ್ನು ತಪಸ್ಸಿನಿಂದ ಬೇಗನೆ ಸಂತೋಷಪಡಿಸು.

ಸರ್ವಸ್ಮಾದಧಿಕೋಽಸ್ತ್ಯೇವ ಶಿವಃ ಪರಮಕಾರಣಂ ।
ತತ್ಕೃತಂ ಹಿ ಜಗತ್ಸರ್ವಂ ಬ್ರಹ್ಮಾದ್ಯಾಸ್ತಸ್ಯ ಕಿಂಕರಾಃ ॥ ೩೮ ॥

ತತ್ಪ್ರಸಾದಕೃತೈಶ್ವರ್ಯಾ ದಾಸಾಸ್ತಸ್ಯ ವಯಂ ಪ್ರಭೋಃ ।
ತಂ ವಿನಾನ್ಯಂ ನ ಜಾನೀಮಃ ಶಂಕರಂ ಲೋಕಶಂಕರಂ ॥ ೩೯ ॥

ಅನ್ಯಾನ್ದೇವಾನ್ಪರಿತ್ಯಜ್ಯ ಕರ್ಮಣಾ ಮನಸಾ ಗಿರಾ ।
ತಮೇವ ಸಾಂಬಂ ಸಗಣಂ ಭಜ ಭಾವಪುರಸ್ಸರಂ ॥ ೪೦ ॥

ತಸ್ಯ ದೇವಾಧಿದೇವಸ್ಯ ಶಿವಸ್ಯ ವರದಾಯಿನಃ ।
ಸಾಕ್ಷಾನ್ನಮಶ್ಶಿವಾಯೇತಿ ಮಂತ್ರೋಽಯಂ ವಾಚಕಃ ಸ್ಮೃತಃ ॥ ೪೧ ॥

ಸಪ್ತಕೋಟಿಮಹಾಮಂತ್ರಾಃ ಸರ್ವೇ ಸಪ್ರಣವಾಃ ಪರೇ ।
ತಸ್ಮಿನ್ನೇವ ವಿಲೀಯಂತೇ ಪುನಸ್ತಸ್ಮಾದ್ವಿನಿರ್ಗತಾಃ ॥ ೪೨ ॥

೩೮. ಎಲ್ಲಕ್ಕಿಂತಲೂ ಅಧಿಕನೂ, ಎಲ್ಲಕ್ಕೂ ಕಾರಣನೂ ಆದ ಶಿವನು ಇದ್ದೇ ಇರುವನು. ಅವನು ಈ ಜಗತ್ತೆಲ್ಲವನ್ನೂ ನಿರ್ಮಿಸಿರುವನು. ಬ್ರಹ್ಮನೇ ಮೊದಲಾದವರೆಲ್ಲರೂ ಅವನಿಗೆ ಸೇವಕರಾಗಿರುವರು.

೩೯. ನಾವುಗಳು ಅವನ ಅನುಗ್ರಹದಿಂದ ಐಶ್ವರ್ಯವನ್ನು ಹೊಂದಿ ಪ್ರಭುವಾದ ಅವನಿಗೆ ದಾಸರಾಗಿರುವೆವು. ಲೋಕಗಳೆಲ್ಲಕ್ಕೂ ಸುಖವನ್ನುಂಟುಮಾಡುವವನು ಆ ಶಂಕರನಲ್ಲದೆ ಬೇರೆ ಯಾರೂ ಇಲ್ಲವೆಂದು ನಾವು ತಿಳಿದಿರುವೆವು.

೪೦. ಇತರ ದೇವತೆಗಳನ್ನು ಬಿಟ್ಟು ಮನೋವಾಕ್ಕಾಯಗಳಿಂದ ಪಾರ್ವತಿಯೊಡನೆಯೂ, ಗಣಗಳಿಂದ ಕೂಡಿಯೂ ಇರುವ ಆ ಶಿವನನ್ನೇ ಸದ್ಭಾವನೆಯಿಂದ ಸೇವಿಸು.

೪೧. ಆ ಶಿವನು ದೇವತೆಗಳೆಲ್ಲರಿಗಿಂತಲೂ ಅಧಿಕನಾದವನು. ಅವನೇ ಸರ್ವರಿಗೂ ವರವನ್ನು ಕೊಡುವವನು. "ನಮಶ್ಶಿವಾಯ" ಎಂಬುದೇ ಆ ಶಿವನನ್ನು ಪ್ರತಿಪಾದಿಸುವ ಮಹಾಮಂತ್ರವು. ಇದು ಶಿವನನ್ನು ವಾಚ್ಯವೃತ್ತಿಯಿಂದಲೇ ಬೋಧಿಸುವುದು.

೪೨-೪೩. ಪ್ರಣವಸಹಿತವಾದ ಬೇರೆ ಎಷ್ಟೋ ಮಂತ್ರಗಳಿರುವವು. ಅವು ಏಳುಕೋಟಿಯಿರುವವು. ಅವುಗಳನ್ನು ಮಹಾಮಂತ್ರಗಳೆಂದು ಕರೆಯುವರು.

ಸಪ್ರಸಾದಾಶ್ಚ ತೇ ಮಂತ್ರಾಃ ಸ್ವಾಧಿಕಾರಾದ್ಯಪೇಕ್ಷಯಾ ।
ಸರ್ವಾಧಿಕಾರಸ್ತ್ವೇಕೋಽಯಂ ಮಂತ್ರ ಏವೇಶ್ವರಾಜ್ಞಯಾ ॥ ೪೩ ॥

ಯಥಾ ನಿಕೃಷ್ಟಾನುತ್ಕೃಷ್ಟಾನ್ಸರ್ವಾನಸ್ಯಾತ್ಮನಃ ಶಿವಃ ।
ಕ್ಷಮತೇ ರಕ್ಷಿತುಂ ತದ್ವನ್ಮಂತ್ರೋಽಯಮಪಿ ಸರ್ವದಾ ॥ ೪೪ ॥

ಪ್ರಬಲಶ್ಚ ತಥಾ ಹ್ಯೇಷ ಮಂತ್ರೋ ಮಂತ್ರಾಂತರಾದಪಿ ।
ಸರ್ವರಕ್ಷಾಕ್ಷಮೋಽಪ್ಯೇಷ ನಾಪರಃ ಕಶ್ಚಿದಿಷ್ಯತೇ ॥ ೪೫ ॥

ತಸ್ಮಾನ್ಮಂತ್ರಾಂತರಾಂಸ್ತ್ಯಕ್ತ್ವಾ ಪಂಚಾಕ್ಷರಪರೋ ಭವ ।
ತಸ್ಮಿಞ್ಜಿಹ್ವಾಂತರಗತೇ ನ ಕಿಂಚಿದಿಹ ದುರ್ಲಭಂ ॥ ೪೬ ॥

ಅಘೋರಾಸ್ತ್ರಂ ಚ ಶೈವಾನಾಂ ರಕ್ಷಾಹೇತುರನುತ್ತಮಂ ।
ತಚ್ಚ ತತ್ಪ್ರಭವಂ ಮತ್ವಾ ತತ್ಪರೋ ಭವ ನಾನ್ಯಥಾ ॥ ೪೭ ॥

ಆ ಮಂತ್ರಗಳೆಲ್ಲವೂ ಶಿವನ ಮಂತ್ರವಾದ ಪಂಚಾಕ್ಷರ ಮಂತ್ರದಲ್ಲಿಯೇ ಹುಟ್ಟಿ ಅದರಲ್ಲಿಯೇ ಲೀನವಾಗುವವು. ಆ ಮಂತ್ರಗಳೆಲ್ಲವೂ ತಮ್ಮ ತಮ್ಮ ಯೋಗ್ಯತೆಗೆ ಅನುಸಾರವಾಗಿ ತಕ್ಕಮಟ್ಟಿನ ಅನುಗ್ರಹವನ್ನುಂಟುಮಾಡುವುವು. ಈಶ್ವರನ ಆಜ್ಞೆಯಿಂದ ಎಲ್ಲಾ ವಿಧವಾದ ಅನುಗ್ರಹವನ್ನುಂಟುಮಾಡುವ ಸಾಮರ್ಥ್ಯವುಳ್ಳ ಮಂತ್ರವು ಇದೊಂದೇ ಆಗಿರುವುದು.

೪೪.೪೬. ನಿಕೃಷ್ಟರನ್ನೂ ಉತ್ಕೃಷ್ಟರನ್ನೂ ಎಲ್ಲರನ್ನೂ ರಕ್ಷಿಸುವ ಸಾಮರ್ಥ್ಯವು ಈ ಮಂತ್ರಕ್ಕಿರುವುದು. ಈ ಮಂತ್ರವು ಬೇರೆ ಎಲ್ಲಾ ಮಂತ್ರಗಳಿಗಿಂತಲೂ ಬಹಳ ಸಾಮರ್ಥ್ಯವುಳ್ಳದ್ದಾಗಿರುವುದು. ಎಲ್ಲಾ ವಿಧದಿಂದಲೂ ಎಲ್ಲರನ್ನೂ ಕಾಪಾಡಬಲ್ಲ ಮಂತ್ರವು ಇದಕ್ಕಿಂತಲೂ ಬೇರೆ ಇನ್ನೊಂದಿಲ್ಲ. ಆದ್ದರಿಂದ ನೀನು ಇತರ ಮಂತ್ರಗಳನ್ನು ಬಿಟ್ಟು ಪಂಚಾಕ್ಷರೀ ಎಂಬ ಮಂತ್ರವನ್ನು ಜಪಮಾಡಲು ಪ್ರಾರಂಭಿಸಿದರೆ ನಿನಗೆ ದುರ್ಲಭವಾದುದು ಯಾವುದೂ ಇರುವುದಿಲ್ಲ.

೪೭. ಶಿವನನ್ನು ಸೇವಿಸುವ ಶೈವರಿಗೆಲ್ಲರಿಗೂ ಅಘೋರಾಸ್ತ್ರವೆಂಬುವುದು ಉತ್ತಮವಾದ ಸಂರಕ್ಷಣೆಯನ್ನು ಮಾಡುವ ಕವಚದಂತಿರುವುದು. ಆ ಅಸ್ತ್ರವು ಈ ಮಂತ್ರದಿಂದಲೇ ಉತ್ಪನ್ನವಾದದ್ದೆಂದು ತಿಳಿದು ಆ ಶಿವಮಂತ್ರದ ಜಪದಲ್ಲಿಯೇ ಸದಾ ಆಸಕ್ತನಾಗಿರು. ನಾನು ಹೇಳಿದ ಮಾತನ್ನು ಮೀರಿಹೋಗಬೇಡ.

ಭಸ್ಮೇದಂ ತು ಮಯಾ ಲಬ್ಧಂ ಪಿತುರೇವ ತವೋತ್ತಮಂ ।
ವಿರಜಾನಲಸಂಸಿದ್ಧಂ ಮಹಾವ್ಯಾಪನ್ನಿವಾರಣಂ ॥ ೪೮ ॥

ಮಂತ್ರಂ ಚ ತೇ ಮಯಾ ದತ್ತಂ ಗೃಹಾಣ ಮದನುಜ್ಞಯಾ ।
ಅನೇನೈವಾಶು ಜಪ್ತೇನ ರಕ್ಷಾ ತವ ಭವಿಷ್ಯತಿ ॥ ೪೯ ॥

॥ ವಾಯುರುವಾಚ ॥

ಏವಂ ಮಾತ್ರಾ ಸಮಾದಿಶ್ಯ ಶಿವಮಸ್ತ್ವಿತ್ಯುದೀರ್ಯ ಚ ।
ವಿಸೃಷ್ಟಸ್ತದ್ವಚೋ ಮೂರ್ಧ್ನಿ ಕುರ್ವನ್ನೇವ ತದಾ ಮುನಿಃ ॥ ೫೦ ॥

ತಾಂ ಪ್ರಣಮ್ಯೈವಮುಕ್ತ್ವಾ ಚ ತಪಃ ಕರ್ತುಂ ಪ್ರಚಕ್ರಮೇ ।
ತಮಾಹ ಚ ತದಾ ಮಾತಾ ಶುಭಂ ಕುರ್ವಂತು ತೇ ಸುರಾಃ ॥ ೫೧ ॥

ಅನುಜ್ಞಾತಸ್ತಯಾ ತತ್ರ ತಪಸ್ತೇಪೇ ಸ ದುಶ್ಚರಂ ।
ಹಿಮವತ್ಪರ್ವತಂ ಪ್ರಾಪ್ಯ ವಾಯುಭಕ್ಷಃ ಸಮಾಹಿತಃ ॥ ೫೨ ॥

---

೪೮. ನಾನು ನಿನ್ನ ತಂದೆಯಿಂದ ಈ ಭಸ್ಮವನ್ನು ಸಂಪಾದಿಸಿಟ್ಟಿರುತ್ತೇನೆ. ಇದು ಬಹಳ ಉತ್ತಮವಾದದ್ದು. ಇದು ವಿರಜಾಗ್ನಿಯಿಂದ ಸಿದ್ಧವಾದದ್ದು. ಇದು ದೊಡ್ಡ ವಿಪತ್ತನ್ನು ನಾಶಮಾಡುವ ಶಕ್ತಿಯುಳ್ಳದ್ದಾಗಿರುವುದು.

೪೯. ನಾನು ನಿನಗೆ ಈ ಮಂತ್ರವನ್ನು ಕೊಟ್ಟಿರುವೆನು. ನನ್ನ ಅನುಮತಿಯಂತೆ ಮಂತ್ರವನ್ನು ಪರಿಗ್ರಹಿಸು ಇದನ್ನು ನೀನು ಬೇಗ ಜಪವನ್ನು ಮಾಡಿದಲ್ಲಿ ನಿನಗೆ ಸಂರಕ್ಷಣೆಯುಂಟಾಗುವುದು ಎಂದಳು.

೫೦-೫೧. ಉಪಮನ್ಯುವಿನ ತಾಯಿಯು ಹೀಗೆ ಹೇಳಿ ಅವನನ್ನು ಕಳುಹಿಸಲು, ಅವನು ಹಾಗೇ ಆಗಲಿ ಎಂದು ಒಪ್ಪಿಕೊಂಡು ತಾಯಿಯ ಮಾತನ್ನು ಶಿರಸಾ ವಹಿಸಿ ಆ ಕ್ಷಣದಲ್ಲಿಯೇ ಅವಳಿಗೆ ನಮಸ್ಕಾರವನ್ನು ಮಾಡಿ ತಪಸ್ಸನ್ನು ಮಾಡಲುದ್ಯುಕ್ತನಾದನು. ಆಗ ಅವನ ತಾಯಿಯು ದೇವತೆಗಳು ನಿನಗೆ ಒಳ್ಳೆಯದನ್ನು ಮಾಡಲಿ ಎಂದು ಆಶೀರ್ವಾದವನ್ನು ಮಾಡಿದಳು.

೫೨. ಬಳಿಕ ಆ ಉಪಮನ್ಯುಋಷಿಯು ತಾಯಿಯ ಅನುಜ್ಞೆಯನ್ನು ಹೊಂದಿ ಹಿಮವತ್ಪರ್ವತಕ್ಕೆ ಹೋಗಿ ಅಲ್ಲಿ ಚಿತ್ತೈಕಾಗ್ರತೆಯಿಂದ ವಾಯುವನ್ನೇ ಆಹಾರ

ಅಷ್ಟೇಷ್ಟಕಾಭಿಃ ಪ್ರಾಸಾದಂ ಕೃತ್ವಾ ಲಿಂಗಂ ಚ ಮೃಣ್ಮಯಂ ।
ತತ್ರಾವಾಹ್ಯ ಮಹಾದೇವಂ ಸಾಂಬಂ ಸಗಣಮವ್ಯಯಂ ॥ ೫೩ ॥

ಭಕ್ತ್ಯಾ ಪಂಚಾಕ್ಷರೇಣೈವ ಪತ್ರೈಃ ಪುಷ್ಪೈರ್ವನೋದ್ಭವೈಃ ।
ಸಮಭ್ಯರ್ಚ್ಯ ಚಿರಂ ಕಾಲಂ ಚಚಾರ ಪರಮಂ ತಪಃ ॥ ೫೪ ॥

ತತಸ್ತಪಶ್ಚರಂತಂ ತಂ ಬಾಲಮೇಕಾಕಿನಂ ಕೃಶಂ ।
ಉಪಮನ್ಯುಂ ದ್ವಿಜವರಂ ಶಿವಸಂಸಕ್ತಮಾನಸಂ ॥ ೫೫ ॥

ಪುರಾ ಮರೀಚಿನಾ ಶಪ್ತಾಃ ಕೇಚಿನ್ಮುನಿಪಿಶಾಚಕಾಃ ।
ಸಂಪೀಡ್ಯ ರಾಕ್ಷಸೈರ್ಭಾವೈಸ್ತಪಸೋ ವಿಘ್ನಮಾಚರನ್ ॥ ೫೬ ॥

ಸ ಚ ತೈಃ ಪೀಡ್ಯಮಾನೋಽಪಿ ತಪಃ ಕುರ್ವನ್ಕಥಂಚನ ।
ಸದಾ ನಮಃ ಶಿವಾಯೇತಿ ಕ್ರೋಶಂತಿ ಸ್ಮಾರ್ತನಾದವತ್ ॥ ೫೭ ॥

---

ಮಾಡಿಕೊಂಡು ಯಾರೂ ಮಾಡಲು ಅಸಾಧ್ಯವಾದ ತಪಸ್ಸನ್ನು ಮಾಡಲುಪಕ್ರಮಿಸಿದನು.

೫೩-೫೪. ಅವನು ಎಂಟು ಇಟ್ಟಿಗೆಗಳನ್ನು ತಂದು ಅದರಿಂದ ಸಣ್ಣದಾಗಿ ದೇವಾಲಯವನ್ನು ಮಾಡಿ ಮಣ್ಣಿನಿಂದ ಶಿವಲಿಂಗವನ್ನು ಮಾಡಿ ಅದರಲ್ಲಿರಿಸಿ ಅದರಲ್ಲಿ ಶಿವನನ್ನು ಆವಾಹನೆಮಾಡಿ ಭಕ್ತಿಯಿಂದ ಪಂಚಾಕ್ಷರಿಯ ಮಂತ್ರದಿಂದ ಕಾಡಿನಲ್ಲಿ ಬೆಳದ ಪತ್ರಪುಷ್ಪಗಳಿಂದಲೇ ಪೂಜಿಸುತ್ತಾ ಬಹಳ ಕಾಲದವರೆಗೆ ಉತ್ತಮವಾದ ತಪಸ್ಸನ್ನು ಮಾಡಿದನು.

೫೫-೫೬. ಹೀಗೆ ಆ ಉಪಮನ್ಯು ಬಾಲಕನು ಶಿವನಲ್ಲಿಯೇ ನೆಟ್ಟಮನಸ್ಸಿನಿಂದ ತಪಸ್ಸುಮಾಡುತ್ತಿದ್ದನು ಕಾಡಿನಲ್ಲಿ ಒಬ್ಬಂಟಿಗನಾಗಿಯೇ ಇದ್ದನು. ಶರೀರವು ತಪಸ್ಸಿನಿಂದ ಕೃಶವಾಗಿದ್ದಿತು. ಹೀಗಿರಲು ಪೂರ್ವದಲ್ಲಿ ಮರೀಚಿಬ್ರಹ್ಮನಿಂದ ಶಾಪವನ್ನು ಹೊಂದಿದ ಪಿಶಾಚಿರೂಪದಿಂದ ಇದ್ದ ಕೆಲವು ಮುನಿಗಳು ರಾಕ್ಷಸಭಾವದಿಂದ ತೊಂದರೆಯನ್ನು ಪಡಿಸಿ ಅವನ ತಪಸ್ಸಿಗೆ ವಿಘ್ನವನ್ನುಂಟುಮಾಡಿದರು.

೫೭. ಆ ಉಪಮನ್ಯುವು ಅವರಿಂದ ತೊಂದರೆಯನ್ನು ಅನುಭವಿಸುತ್ತಿದ್ದರೂ ಅತಿ ಪ್ರಯಾಸದಿಂದ ತಪಸ್ಸನ್ನು ಮಾಡುತ್ತಾ, ಸಂಕಟವುಳ್ಳವನು ಆರ್ತನಾದಮಾಡುವಂತೆ ನಮಶ್ಶಿವಾಯ ಎಂದು ಜಪಮಾಡುತ್ತಿದ್ದನು.

**ತನ್ನಾದಶ್ರವಣಾದೇವ ತಪಸೋ ವಿಘ್ನಕಾರಿಣಃ ।**
**ತೇ ತಂ ಬಾಲಂ ಸಮುತ್ಸೃಜ್ಯ ಮುನಯಸ್ಸಮುಪಾಚರನ್ ॥ ೫೮ ॥**

**ತಪಸಾ ತಸ್ಯ ವಿಪ್ರಸ್ಯ ಚೋಪಮನ್ಯೋರ್ಮಹಾತ್ಮನಃ ।**
**ಚರಾಚರಂ ಚ ಮುನಯಃ ಪ್ರದೀಪಿತಮಭೂಜ್ಜಗತ್ ॥ ೫೯ ॥**

**ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯುವೀಯಸಂಹಿಯಾತಾಂ ಪೂರ್ವಭಾಗೇ ಉಪಮನ್ಯುತಪೋವರ್ಣನಂ ನಾಮ ಚತುಸ್ತ್ರಿಂಶೋಽಧ್ಯಾಯಃ**



೫೮. ಅವನು ಜಪಮಾಡುವ ಮಂತ್ರದ ಧ್ವನಿಯನ್ನು ಕೇಳಿದಕೂಡಲೆ ತಪಸ್ಸಿಗೆ ವಿಘ್ನವನ್ನು ಮಾಡುತ್ತಿದ್ದವರು ಆ ಬಾಲಕನನ್ನು ಬಿಟ್ಟು ದೂರವಾಗಿ ಹೊರಟುಹೋದರು.

೫೯. ಮಹಾಮಹಿಮನಾದ ಉಪಮನ್ಯುವೆಂಬ ಆ ದ್ವಿಜಬಾಲಕನು ಮಾಡುತ್ತಿದ್ದ ಉಗ್ರವಾದ ತಪಸ್ಸಿನ ಜ್ವಾಲೆಯಿಂದ ಚರಾಚರಾತ್ಮಕವಾದ ಪ್ರಪಂಚವೂ, ಮುನಿಗಳೂ ಸಹ ದಗ್ಧಪ್ರಾಯರಾದರು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯುವೀಯ ಸಂಹಿತೆಯ ಪೂರ್ವಭಾಗದಲ್ಲಿ ಉಪಮನ್ಯುವಿನ ತಪೋವರ್ಣನವೆಂಬ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಮಹಾಪುರಾಣೇ

## ವಾಯವೀಯಸಂಹಿತಾಯಾಂ ಪೂರ್ವಭಾಗೇ

## ಚತುಸ್ತ್ರಿಂಶೋಽಧ್ಯಾಯಃ

॥ ವಾಯುರುವಾಚ ॥

ಅಥ ಸರ್ವೇ ಪ್ರದೀಪ್ತಾಂಗಾ ವೈಕುಂಠಂ ಪ್ರಯಯುರ್ದ್ರುತಂ ।
ಪ್ರಣಮ್ಯಾಹುಶ್ಚ ತತ್ಸರ್ವಂ ಹರಯೇ ದೇವಸತ್ತಮಾಃ ॥ ೧ ॥

ಶ್ರುತ್ವಾ ತೇಷಾಂ ತದಾ ವಾಕ್ಯಂ ಭಗವಾನ್ಪುರುಷೋತ್ತಮಃ ।
ಕಿಮಿದಂ ತ್ವಿತಿ ಸಂಚಿಂತ್ಯ ಜ್ಞಾತ್ವಾ ತತ್ಕಾರಣಂ ಚ ಸಃ ॥ ೨ ॥

ಜಗಾಮ ಮಂದರಂ ತೂರ್ಣಂ ಮಹೇಶ್ವರದಿದೃಕ್ಷಯಾ ।
ದೃಷ್ಟ್ವಾ ದೇವಂ ಪ್ರಣಮ್ಯೈವಂ ಪ್ರೋವಾಚ ಸುಕೃತಾಂಜಲಿಃ ॥ ೩ ॥

## ಮೂವತ್ತ್ನಾಲ್ಕನೆಯ ಅಧ್ಯಾಯವು

೧. ವಾಯುದೇವನಿಂತೆಂದನು.—ಅನಂತರ ದೇವತೆಗಳ ಶರೀರಗಳು ದಗ್ಧಪ್ರಾಯವಾಗಲು, ಅವರೆಲ್ಲರೂ ಬೇಗನೆ ವೈಕುಂಠಕ್ಕೆ ಓಡಿಹೋಗಿ ಅಲ್ಲಿ ವಿಷ್ಣುವನ್ನು ಕಂಡು ನಮಸ್ಕರಿಸಿ ಅವನ ಸಂಗಡ ಉಪಮನ್ಯುವಿನ ವಿಷಯವೆಲ್ಲವನ್ನೂ ಹೇಳಿದರು.

೨-೩. ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವು ಆಗ ಅವರ ಮಾತನ್ನು ಕೇಳಿ, ಇದೇನಾಗಿರಬಹುದು, ಎಂದು ತನ್ನ ಮನಸ್ಸಿನಲ್ಲಿ ಆಲೋಚಿಸಿ ಹೀಗಾಗಿರುವುದಕ್ಕೆ ಕಾರಣವನ್ನು ತಿಳಿದು ಮಹೇಶ್ವರನನ್ನು ನೋಡುವುದಕ್ಕಾಗಿ ಬೇಗನೆ ಮಂದರಪರ್ವತಕ್ಕೆ ಹೋದನು. ಅಲ್ಲಿ ಮಹಾದೇವನನ್ನು ನೋಡಿ ಅವನಿಗೆ ನಮಸ್ಕಾರ ಮಾಡಿ ಅಂಜಲಿಬದ್ಧನಾಗಿ ಇಂತು ಪ್ರಾರ್ಥಿಸಿದನು.

॥ ವಿಷ್ಣುರುವಾಚ ॥

ಭಗವನ್ಬ್ರಾಹ್ಮಣಃ ಕಶ್ಚಿದುಪಮನ್ಯುರಿತಿ ಶ್ರುತಃ ।
ಕ್ಷೀರಾರ್ಥಮದಹತ್ಸರ್ವಂ ತಪಸಾ ತನ್ನಿವಾರಯ ॥ ೪ ॥

॥ ವಾಯುರುವಾಚ ॥

ಇತಿ ಶ್ರುತ್ವಾ ವಚೋ ವಿಷ್ಣೋಃ ಪ್ರಾಹ ದೇವೋ ಮಹೇಶ್ವರಃ ।
ಶಿಶುಂ ನಿವಾರಯಿಷ್ಯಾಮಿ ತತ್ತ್ವಂ ಗಚ್ಛ ಸ್ವಮಾಶ್ರಮಂ ॥ ೫ ॥

ತಚ್ಛ್ರುತ್ವಾ ಶಂಭುವಚನಂ ಸ ವಿಷ್ಣುರ್ದೇವವಲ್ಲಭಃ ।
ಜಗಾಮಾಶ್ವಾಸ್ಯ ತಾನ್ಸರ್ವಾನ್ಸ್ವಲೋಕಮಮರಾದಿಕಾನ್ ॥ ೬ ॥

ಏತಸ್ಮಿನ್ನಂತರೇ ದೇವಃ ಪಿನಾಕೀ ಪರಮೇಶ್ವರಃ ।
ಶಕ್ರಸ್ಯ ರೂಪಮಾಸ್ಥಾಯ ಗಂತುಂ ಚಕ್ರೇ ಮತಿಂ ತತಃ ॥ ೭ ॥

ಅಥ ಜಗಾಮ ಮುನೇಸ್ತು ತಪೋವನಂ-
ಗಜವರೇಣ ಸಿತೇನ ಸದಾಶಿವಃ ।

---

೪. ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ಮಹಾದೇವನೆ, ಉಪಮನ್ಯುವೆಂದು ಹೆಸರುಳ್ಳ ಓರ್ವ ಬ್ರಾಹ್ಮಣ ಬಾಲಕನು ಹಾಲಿಗೋಸ್ಕರವಾಗಿ ತಪಸ್ಸನ್ನು ಮಾಡುತ್ತಾ ತನ್ನ ತಪೋಜ್ವಾಲೆಯಿಂದ ಎಲ್ಲವನ್ನೂ ಸುಡುತ್ತಿರುವನು. ನೀನು ಅದನ್ನು ಬೇಗನೆ ತಪ್ಪಿಸಿ ಎಲ್ಲರನ್ನೂ ಸಲಹು ಎಂದನು.

೫. ಮಹೇಶ್ವರನು ವಿಷ್ಣುವು ಹೇಳಿದ ಆ ಮಾತನ್ನು ಕೇಳಿ, ಒಳ್ಳೇದು, ಹಾಗೆಯೇ ಆಗಲಿ. ಇನ್ನು ಮುಂದೆ ಆ ಬಾಲಕನ ತಪಸ್ಸನ್ನು ನಿಲ್ಲಿಸಿ ಎಲ್ಲರಿಗೂ ಕ್ಷೇಮವನ್ನುಂಟುಮಾಡುತ್ತೇನೆ. ನಿನ್ನ ಸ್ಥಾನಕ್ಕೆ ನೀನು ಹೋಗಬಹುದು ಎಂದನು.

೬. ದೇವಶ್ರೇಷ್ಠನಾದ ವಿಷ್ಣುವು ಆ ಮಹೇಶ್ವರನ ಮಾತನ್ನು ಕೇಳಿ, ದೇವತೆಗಳೆಲ್ಲರಿಗೂ ಅದನ್ನು ತಿಳಿಸಿ, ಅವರನ್ನು ಸಮಾಧಾನಮಾಡಿ ತನ್ನ ಲೋಕಕ್ಕೆ ಹೋದನು.

೭-೮. ಇಷ್ಟರೊಳಗೆ ಪಿನಾಕಧಾರಿಯಾದ ಮಹೇಶ್ವರನು ಇಂದ್ರನ ಆಕಾರವನ್ನು ಧರಿಸಿಕೊಂಡು ಉಪಮನ್ಯುವನ್ನು ಸಮಾಧಾನಪಡಿಸುವುದಕ್ಕಾಗಿ ಬಿಳಿಯ

ಸಹ ಸುರಾಸುರಸಿದ್ಧಮಹೋರಗೈ-
ರಮರರಾಜತನುಂ ಸ್ವಯಮಾಸ್ಥಿತಃ ॥ ೮ ॥

ಸ ವಾರಣಶ್ಚಾರು ತದಾ ವಿಭುಂ ತಂ-
ನಿಷೇವ್ಯ ವಾಲವ್ಯಜನೇನ ದಿವ್ಯಂ ।
ದಧಾರ ಶಚ್ಯಾ ಸಹಿತಂ ಸುರೇಂದ್ರಂ
ಕರೇಣ ವಾಮೇನ ಸಿತಾತಪತ್ರಂ ॥ ೯ ॥

ರರಾಜ ಭಗವಾನ್ಸೋಮಃ ಶಕ್ರರೂಪೀ ಸದಾಶಿವಃ ।
ತೇನಾತಪತ್ರೇಣ ಯಥಾ ಚಂದ್ರಬಿಂಬೇನ ಮಂದಿರಃ ॥ ೧೦ ॥

ಆಸ್ಥಾಯೈವಂ ಹಿ ಶಕ್ರಸ್ಯ ಸ್ವರೂಪಂ ಪರಮೇಶ್ವರಃ ।
ಜಗಾಮಾನುಗ್ರಹಂ ಕರ್ತುಮುಪಮನ್ಯೋಸ್ತದಾಶ್ರಮಂ ॥ ೧೧ ॥

---

ಐರಾವತನ್ನೇರಿ, ದೇವತೆಗಳು ದೈತ್ಯರು, ಸಿದ್ಧರು ನಾಗರು ಮೊದಲಾದವರು ಸುತ್ತಲೂ ಓಲೈಸುತ್ತಿರಲು, ಉಪಮನ್ಯುವಿನ ಆಶ್ರಮಕ್ಕೆ ಹೊರಟನು.

೯. ಆಗ ಶಿವನ ವಾಹನವಾಗಿರುವ ಆ ಆನೆಯು ತನ್ನ ಎಡಕೈಯಿಂದ ಶುಭ್ರವಾದ ಛತ್ರಿಯನ್ನು ಹಿಡಿದುಕೊಂಡು ಮೃದುವಾದ ಬೀಸಣಿಗೆಯಿಂದ ಪ್ರಭುವಾದ ಮಹೇಶ್ವರನನ್ನು ಸೇವಿಸುತ್ತಾ ಶಚೀದೇವಿಯಿಂದ ಕೂಡಿರುವ ಆ ಇಂದ್ರನನ್ನು ತನ್ನ ಬೆನ್ನಿನಲ್ಲಿ ಧರಿಸಿತು.

೧೦. ಇಂದ್ರನ ರೂಪವನ್ನು ಧರಿಸಿದ್ದ ಉಮಾಸಹಿತನಾದ ಶಿವನು ಆಗ ಶ್ವೇತ ಛತ್ರಿಯನ್ನು ಹಿಡಿದುಕೊಂಡು ತನ್ನನ್ನು ಸೇವಿಸುತ್ತಿರುವ ಆನೆಯಮೇಲೆ ಇರುವಾಗ, ಮಂದರಪರ್ವತವು ಚಂದ್ರಬಿಂಬದೊಡನೆ ಪ್ರಕಾಶಿಸುವಹಾಗೆ ಪ್ರಕಾಶಿಸುತ್ತಿದ್ದನು.

೧೧. ಪರಮೇಶ್ವರನು ಹೀಗೆ ಇಂದ್ರನ ಆಕಾರವನ್ನು ಧರಿಸಿಕೊಂಡು ಉಪಮನ್ಯುವಿಗೆ ಅನುಗ್ರಹವನ್ನು ಮಾಡುವುದಕ್ಕಾಗಿ ಅವನ ಆಶ್ರಮಕ್ಕೆ ಹೋದನು.

ತಂ ದೃಷ್ಟ್ವಾ ಪರಮೇಶಾನಂ ಶಕ್ರರೂಪಧರಂ ಶಿವಂ ।
ಪ್ರಣಮ್ಯ ಶಿರಸಾ ಪ್ರಾಹ ಮಹಾಮುನಿವರಃ ಸ್ವಯಂ ॥ ೧೨ ॥

॥ ಉಪಮನ್ಯುರುವಾಚ ॥

ಪಾವಿತಶ್ಚಾಶ್ರಮಸ್ಸೋಽಯಂ ಮಮ ದೇವೇಶ್ವರ ಸ್ವಯಂ ।
ಪ್ರಾಪ್ತೋ ಯತ್ತ್ವಂ ಜಗನ್ನಾಥ ಭಗವನ್ದೇವಸತ್ತಮ ॥ ೧೩ ॥

॥ ವಾಯುರುವಾಚ ॥

ಏವಮುಕ್ತ್ವಾ ಸ್ಥಿತಂ ಪ್ರೇಕ್ಷ್ಯ ಕೃತಾಂಜಲಿಪುಟಂ ದ್ವಿಜಂ ।
ಪ್ರಾಹ ಗಂಭೀರಯಾ ವಾಚಾ ಶಕ್ರರೂಪಧರೋ ಹರಃ ॥ ೧೪ ॥

॥ ಶಕ್ರ ಉವಾಚ ॥

ತುಷ್ಟೋಽಸ್ಮಿ ತೇ ವರಂ ಬ್ರೂಹಿ ತಪಸಾನೇನ ಸುವ್ರತ ।
ದದಾಮಿ ಚೇಪ್ಸಿತಾನ್ಸರ್ವಾನ್ ಧೌಮ್ಯಾಗ್ರಜ ಮಹಾಮುನೇ ॥ ೧೫ ॥

---

೧೨. ಇಂದ್ರನ ರೂಪವನ್ನು ಧರಿಸಿರುವ ಪ್ರಭುವಾದ ಶಿವನನ್ನು ಮುನಿ ಶ್ರೇಷ್ಠನಾದ ಉಪಮನ್ಯುವು ನೋಡಿ ಅವನಿಗೆ ತಲೆಬಾಗಿ ನಮಸ್ಕಾರಮಾಡಿ ಇಂತೆಂದನು—

೧೩. ಎಲೈ ಇಂದ್ರನೇ, ನೀನು ದೇವತೆಗಳೆಲ್ಲರಿಗೂ ಅಧಿಪತಿಯು. ನೀನು ನನ್ನ ಆಶ್ರಮಕ್ಕೆ ಬಂದಿರುವುದರಿಂದ ನನ್ನ ಈ ಆಶ್ರಮವೆಲ್ಲವೂ ಬಹಳವಾಗಿ ಪರಿಶುದ್ಧತೆ ಯನ್ನು ಹೊಂದಿರುವುದು ಎಂದನು.

೧೪. ತನ್ನೆದುರಿಗೆ ಅಂಜಲಿಬದ್ಧನಾಗಿ ಹೀಗೆ ಹೇಳುತ್ತಿರುವ ಉಪಮನ್ಯು ವನ್ನು ನೋಡಿ ಇಂದ್ರವೇಷಧಾರಿಯಾದ ಮಹೇಶ್ವರನು ಗಂಭೀರವಾದ ಧ್ವನಿ ಯಿಂದಿಂತೆಂದನು—

೧೫. ಧೌಮ್ಯಾಗ್ರಜನಾದ ಎಲೈ ಉಪಮನ್ಯುವೇ, ನಿನ್ನ ತಪಸ್ಸಿನಿಂದ ನಾನು ಸಂತುಷ್ಟನಾಗಿರುವೆನು. ನಿನಗೆ ಬೇಕಾದ ವರವನ್ನು ಕೇಳು, ಕೊಡುವೆನು ಎಂದನು.

॥ ವಾಯುರುವಾಚ ॥

ಏವಮುಕ್ತಸ್ತದಾ ತೇನ ಶಕ್ರೇಣ ಮುನಿಪುಂಗವಃ ।
ವರಯಾಮಿ ಶಿವೇ ಭಕ್ತಿಮಿತ್ಯುವಾಚ ಕೃತಾಂಜಲಿಃ ॥ ೧೬ ॥

ತನ್ನಿಶಮ್ಯ ಹರಿಃ ಪ್ರಾಹ ಮಾಂ ನ ಜಾನಾಸಿ ಲೇಖಪಂ ।
ತ್ರೈಲೋಕ್ಯಾಧಿಪತಿಂ ಶಕ್ರಂ ಸರ್ವದೇವನಮಸ್ಕೃತಂ ॥ ೧೭ ॥

ಮದ್ಭಕ್ತೋ ಭವ ವಿಪ್ರರ್ಷೇ ಮಾಮೇವಾರ್ಚಯ ಸರ್ವದಾ ।
ದದಾಮಿ ಸರ್ವಂ ಭದ್ರಂ ತೇ ತ್ಯಜ ರುದ್ರಂ ಚ ನಿರ್ಗುಣಂ ॥ ೧೮ ॥

ರುದ್ರೇಣ ನಿರ್ಗುಣೇನಾಪಿ ಕಿಂ ತೇ ಕಾರ್ಯಂ ಭವಿಷ್ಯತಿ ।
ದೇವಪಂಕ್ತಿಬಹಿರ್ಭೂತೋ ಯಃ ಪಿಶಾಚತ್ವಮಾಗತಃ ॥ ೧೯ ॥

---

೧೬. ವಾಯುದೇವನು ಹೇಳಿದನು.—ಆ ಇಂದ್ರನು ಹೇಳಿದ ಮಾತನ್ನು ಕೇಳಿ ಉಪಮನ್ಯುಮುನಿಯು ಕೈಮುಗಿದುಕೊಂಡು ಎಲೈ ಇಂದ್ರನೇ, ನನಗೆ ಶಿವನಲ್ಲಿ ಭಕ್ತಿಯುಂಟಾಗುವಂತೆ ವರವನ್ನು ಕೊಡು ಎನ್ನಲು,

೧೭–೧೯. ಇಂದ್ರನು ಅವನ ಮಾತನ್ನು ಕೇಳಿ ಎಲೈ ಮಹರ್ಷಿಯೆ ! ನಾನು ಇಂದ್ರನಾಗಿರುವೆನು. ನನ್ನನ್ನು ದೇವತೆಗಳಿಗೆ ದೊರೆಯನ್ನಾಗಿ ತಿಳಿದುಕೋ, ನಾನು ಮೂರು ಲೋಕಗಳಿಗೂ ರಾಜನಾಗಿರುವೆನು. ಇಂದ್ರನಾದ ನನಗೆ ದೇವತೆಗಳೆಲ್ಲರೂ ನಮಸ್ಕಾರವನ್ನು ಮಾಡುವರು. ನೀನು ನನಗೆ ಭಕ್ತನಾಗಿರು. ಎಲೈ ಮಹರ್ಷಿಯೆ ! ಯಾವಾಗಲೂ ನೀನು ನನ್ನನ್ನು ಪೂಜಿಸು. ನಿನಗೆ ಮಂಗಳವಾಗಲಿ. ಎಲ್ಲಾ ವಿಧವಾದ ಮಂಗಳಗಳನ್ನೂ ನಿನಗೆ ಉಂಟುಮಾಡಿಕೊಡುವೆನು. ರುದ್ರನು ನಿರ್ಗುಣನು, ಯಾವ ಗುಣವೂ ಇಲ್ಲದವನು. ಆದ್ದರಿಂದ ಅವನ ಸೇವೆಯನ್ನು ಬಿಡು. ಯಾವ ಗುಣವೂ ಇಲ್ಲದಿರುವ ಅವನ ಸೇವೆಯಿಂದ ನಿನಗೆ ಯಾವ ಕೆಲಸವು ಆಗುವುದು ? ಅವನು ದೇವತೆಗಳ ಗುಂಪಿನಲ್ಲಿಯೂ ಸೇರಿಲ್ಲದೆ ಪಿಶಾಚಿಯಾಗಿ ಇರುವುದರಿಂದ ಅವನ ಸೇವೆಯನ್ನು ಬಿಟ್ಟು ಇಂದ್ರನಾದ ನನ್ನನ್ನು ಸೇವಿಸು ಎಂದನು.

॥ ವಾಯುರುವಾಚ ॥

ತಚ್ಛ್ರುತ್ವಾ ಪ್ರಾಹ ಸ ಮುನಿರ್ಜಪನ್ಪಂಚಾಕ್ಷರಂ ಮನುಂ ।
ಮನ್ಯಮಾನೋ ಧರ್ಮವಿಘ್ನಂ ಪ್ರಾಹ ತಂ ಕರ್ತುಮಾಗತಂ ॥ ೨೦ ॥

॥ ಉಪಮನ್ಯುರುವಾಚ ॥

ತ್ವಯೈವಂ ಕಥಿತಂ ಸರ್ವಂ ಭವನಿಂದಾರತೇನ ವೈ ।
ಪ್ರಸಂಗಾದೇವ ದೇವಸ್ಯ ನಿರ್ಗುಣತ್ವಂ ಮಹಾತ್ಮನಃ ॥ ೨೧ ॥

ತ್ವಂ ನ ಜಾನಾಸಿ ವೈ ರುದ್ರಂ ಸರ್ವದೇವೇಶ್ವರೇಶ್ವರಂ ।
ಬ್ರಹ್ಮವಿಷ್ಣುಮಹೇಶಾನಾಂ ಜನಕಂ ಪ್ರಕೃತೇಃ ಪರಂ ॥ ೨೨ ॥

ಸದಸದ್ವ್ಯಕ್ತಮವ್ಯಕ್ತಂ ಯಮಾಹುರ್ಬ್ರಹ್ಮವಾದಿನಃ ।
ನಿತ್ಯಮೇಕಮನೇಕಂ ಚ ವರಂ ತಸ್ಮಾದ್ವೃಣೋಮ್ಯಹಂ ॥ ೨೩ ॥

---

೨೦. ಉಪಮನ್ಯುಋಷಿಯು ಅವನ ಮಾತನ್ನು ಕೇಳಿ ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಾ ತಾನು ಆಚರಿಸುವ ಧರ್ಮಕ್ಕೆ ವಿಘ್ನವನ್ನುಂಟುಮಾಡಿ ಅದನ್ನು ತಪ್ಪಿಸುವುದಕ್ಕಾಗಿ ಈ ಇಂದ್ರನು ಬಂದಿರುವನೆಂದು ತಿಳಿದು ಇಂತೆಂದನು—

೨೧-೨೨. ಎಲೈ ಇಂದ್ರನೇ, ನೀನು ಶಿವನಿಂದೆಯನ್ನು ಮಾಡುವುದರಲ್ಲಿ ಆಸಕ್ತನಾಗಿರುವೆ. ನೀನು ಹೇಳಿದ್ದೆಲ್ಲವೂ ತಿಳಿಯಿತು. ಮಹಾಮಹಿಮನಾದ ಶಿವನು ಯಾವ ಗುಣವೂ ಇಲ್ಲದವನೆಂದು ನೀನು ತಿಳಿದಿರುತ್ತೀಯೆ. ರುದ್ರನು ನಿನ್ನಂತಹ ಎಲ್ಲಾ ಇಂದ್ರರಿಗೂ ಸ್ವಾಮಿಯಾಗಿರುವನು. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಿಗೆ ಕಾರಣನು. ಪ್ರಕೃತಿಗಿಂತಲೂ ಬೇರೆಯಾಗಿರುವವನು.

೨೩. ಪರಬ್ರಹ್ಮಸ್ವರೂಪವನ್ನು ತಿಳಿದು ಅದನ್ನು ಉಪದೇಶಮಾಡುವವರು ಈ ರುದ್ರನನ್ನು ಸತ್ಪದಾಥ, ಅಸತ್ಪದಾರ್ಥ ವ್ಯಕ್ತ, ಅವ್ಯಕ್ತ ಈ ರೂಪಗಳಿಂದ ಇರುವವನೆಂದು ಹೇಳುವರು. ಇವನು ನಿತ್ಯನು ಎಂದರೆ ನಾಶರಹಿತನು. ಅವನು ಒಬ್ಬನೇ ಆದರೂ ಚರಾಚರಾತ್ಮಕವಾದ ಸಮಸ್ತ ರೂಪಗಳನ್ನೂ ಧರಿಸಿರುವನು. ಇಂತಹ ಶಿವನಿಂದ ಮಾತ್ರ ನಾನು ವರವನ್ನು ಬೇಡುವೆನು.

**ಹೇತುವಾದವಿನಿರ್ಮುಕ್ತಂ ಸಾಂಖ್ಯಯೋಗಾರ್ಥದಂ ಪರಂ ।**
**ಉಪಾಸತೇ ಯಂ ತತ್ತ್ವಜ್ಞಾ ವರಂ ತಸ್ಮಾದ್ವೃಣೋಮ್ಯಹಂ ॥ ೨೪ ॥**

**ನಾಸ್ತಿ ಶಂಭೋಃ ಪರಂ ತತ್ತ್ವಂ ಸರ್ವಕಾರಣಕಾರಣಾತ್ ।**
**ಬ್ರಹ್ಮವಿಷ್ಣ್ವಾದಿದೇವಾನಾಂ ಸ್ರಷ್ಟುರ್ಗುಣಪರಾದ್ವಿಭೋಃ ॥ ೨೫ ॥**

**ಬಹುನಾತ್ರ ಕಿಮುಕ್ತೇನ ಮಯಾದ್ಯಾನುಮಿತಂ ಮಹತ್ ।**
**ಭವಾಂತರೇ ಕೃತಂ ಪಾಪಂ ಶ್ರುತಾ ನಿಂದಾ ಭವಸ್ಯ ಚೇತ್ ॥ ೨೬ ॥**

**ಶ್ರುತ್ವಾ ನಿಂದಾಂ ಭವಸ್ಯಾಥ ತತ್ಕ್ಷಣಾದೇವ ಸಂತ್ಯಜೇತ್ ।**
**ಸ್ವದೇಹಂ ತನ್ನಿಹತ್ಯಾಶು ಶಿವಲೋಕಂ ಸ ಗಚ್ಛತಿ ॥ ೨೭ ॥**

**ಆಸ್ತಾಂ ತಾವನ್ಮಮೇಚ್ಛೇಯಂ ಕ್ಷೀರಂ ಪ್ರತಿ ಸುರಾಧಮ ।**
**ನಿಹತ್ಯ ತ್ವಾಂ ಶಿವಾಸ್ತ್ರೇಣ ತ್ಯಜಾಮ್ಯೇತಂ ಕಲೇವರಂ ॥ ೨೮ ॥**

---

೨೪-೨೫ ಎಲ್ಲಾ ಕಾರಣಪದಾರ್ಥಗಳಿಗೂ ಕಾರಣನಾದ ಶಿವನಿಗಿಂತಲೂ ಬೇರೆಯದಾದ ತತ್ತ್ವವು ಬೇರೊಂದಿಲ್ಲ. ಈ ಶಿವನು ಬ್ರಹ್ಮ, ವಿಷ್ಣು ಇವರೇ ಮೊದಲಾದ ಎಲ್ಲಾ ದೇವತೆಗಳಿಗಿಂತಲೂ ಶ್ರೇಷ್ಠನು. ಹೇತುವಾದರಹಿತವಾದ ಸಾಂಖ್ಯಶಾಸ್ತ್ರ ಪ್ರತಿಪಾದ್ಯನು, ತತ್ವಜ್ಞರಾದ ಮುನಿಗಳು ಇಂತಹ ಶಿವನನ್ನು ಉಪಾಸನೆ ಮಾಡುವರು ಆ ಶಿವನಿಂದ ಮಾತ್ರ ನಾನು ವರವನ್ನು ಬೇಡುವೆನು.

೨೬. ಈಗ ನಾನು ಹೆಚ್ಚು ಹೇಳಿ ಏನು ಪ್ರಯೋಜನವು ? ನಾನು ಜನ್ಮಾಂತರದಲ್ಲಿ ಬಹಳ ಪಾಪಗಳನ್ನು ಮಾಡಿರುವೆನಾದ್ದರಿಂದ ಆ ದೇವದೇವನಾದ ಶಿವನಿಂದೆಯನ್ನು ಕೇಳಿದೆನು. ಹೀಗೆಂದು ಊಹಿಸಬೇಕಾಗಿದೆ.

೨೭. ಶಿವನಿಂದೆಯನ್ನು ಕೇಳಿದಕೂಡಲೇ ಶರೀರವನ್ನು ಬಿಡಬೇಕು. ಶಿವನಿಂದೆಯನ್ನು ಮಾಡಿದವನನ್ನು ಕೊಂದು ನಂತರ ತನ್ನ ಶರೀರವನ್ನು ಬಿಟ್ಟವನು ಶಿವಲೋಕಕ್ಕೆ ಹೋಗುವನು ಎಂದು ಶಾಸ್ತ್ರವಿರುವುದು.

೨೮. ಎಲೈ, ನೀಚದೇವತೆಯಾದ ಇಂದ್ರನೇ! ನನಗೆ ಹಾಲಿನ ವಿಷಯದಲ್ಲಿ ಹುಟ್ಟಿರುವ ಇಚ್ಛೆಯು ಹಾಗಿರಲಿ. ಶಿವನ ಅಸ್ತ್ರದಿಂದ ನಿನ್ನನ್ನು ಕೊಂದು ಬಳಿಕ ಈ ಶರೀರವನ್ನು ತ್ಯಜಿಸುವೆನು ಎಂದನು.

॥ ವಾಯುರುವಾಚ ॥

ಏವಮುಕ್ತ್ವೋಪಮನ್ಯುಸ್ತಂ ಮರ್ತುಂ ವ್ಯವಸಿತಸ್ಸ್ವಯಂ ।
ಕ್ಷೀರೇ ವಾಂಛಾಮಪಿ ತ್ಯಕ್ತ್ವಾ ನಿಹಂತುಂ ಶಕ್ರಮುದ್ಯತಃ ॥ ೨೯ ॥

ಭಸ್ಮಾದಾಯ ತದಾ ಘೋರಮಘೋರಾಸ್ತ್ರಾಭಿಮಂತ್ರಿತಂ ।
ವಿಸೃಜ್ಯ ಶಕ್ರಮುದ್ದಿಶ್ಯ ನನಾದ ಸ ಮುನಿಸ್ತಥಾ ॥ ೩೦ ॥

ಸ್ಮೃತ್ವಾ ಶಂಭುಪದದ್ವಂದ್ವಂ ಸ್ವದೇಹಂ ದಗ್ಧುಮುದ್ಯತಃ ।
ಆಗ್ನೇಯೀಂ ಧಾರಣಾಂ ಬಿಭ್ರದುಪಮನ್ಯುರವಸ್ಥಿತಃ ॥ ೩೧ ॥

ಏವಂ ವ್ಯವಸಿತೇ ವಿಪ್ರೇ ಭಗವಾನ್ಭಗನೇತ್ರಹಾ ।
ವಾರಯಾಮಾಸ ಸೌಮ್ಯೇನ ಧಾರಣಾಂ ತಸ್ಯ ಯೋಗಿನಃ ॥ ೩೨ ॥

---

೨೯. ಉಪಮನ್ಯುವು ಹೀಗೆ ಹೇಳಿ ತಾನು ಮರಣವನ್ನು ಹೊಂದುವುದಕ್ಕೆ ನಿಶ್ಚಯಮಾಡಿ ಹಾಲಿನ ವಿಷಯದಲ್ಲಿ ತನಗೆ ಇರುವ ಇಚ್ಛೆಯನ್ನೂ ಬಿಟ್ಟು ಇಂದ್ರನನ್ನು ಕೊಲ್ಲುವುದಕ್ಕೆ ಸಿದ್ಧನಾದನು.

೩೦. ಬಳಿಕ ಆ ಉಪಮನ್ಯುವು ಭಯಂಕರವಾದ ಭಸ್ಮವನ್ನು ತೆಗೆದುಕೊಂಡು ಅಘೋರಾಸ್ತ್ರದಿಂದ ಅಭಿಮಂತ್ರಿಸಿ, ಇಂದ್ರನನ್ನು ಉದ್ದೇಶಮಾಡಿ ಆ ಅಸ್ತ್ರಾಭಿಮಂತ್ರಿತವಾದ ಭಸ್ಮವನ್ನು ಇಂದ್ರನಮೇಲೆ ಎಸೆದು ಘಟ್ಟಿಯಾಗಿ ಆರ್ಭಟವನ್ನು ಮಾಡಿದನು.

೩೧. ಅನಂತರ ಅವನು ಶಿವನ ಪಾದಕಮಲಗಳೆರಡನ್ನೂ ಸ್ಮರಿಸುತ್ತಾ ತನ್ನ ಶರೀರವನ್ನು ದಹಿಸಲು ಸಿದ್ಧನಾಗಿ ಯೋಗಶಾಸ್ತ್ರರೀತಿಯನ್ನನುಸರಿಸಿ ಅಗ್ನಿಯ ಸಂಬಂಧವಾದ ಧಾರಣೆಯನ್ನು ಧರಿಸಿಕೊಂಡನು.

೩೨. ಬ್ರಾಹ್ಮಣನಾದ ಉಪಮನ್ಯುವು ಹೀಗೆ ನಿಶ್ಚಯವನ್ನು ಮಾಡಿಕೊಂಡು ಮರಣಕ್ಕೆ ಸಿದ್ಧನಾದುದನ್ನು ನೋಡಿ ಭಗವಾನ್ ಶಿವನು ಸೌಮ್ಯಧಾರಣೆಯಿಂದ ಉಪಮನ್ಯುವಿನ ಆಗ್ನೇಯಧಾರಣೆಯನ್ನು ನಿವಾರಣೆಮಾಡಿದನು.

ತದ್ವಿಸೃಷ್ಟಮಘೋರಾಸ್ತ್ರಂ ನಂದೀಶ್ವರನಿಯೋಗತಃ ।
ಜಗೃಹೇ ಮಧ್ಯತಃ ಕ್ಷಿಪ್ತಂ ನಂದೀ ಶಂಕರವಲ್ಲಭಃ ॥ ೩೩ ॥

ಸ್ವಂ ರೂಪಮೇವ ಭಗವಾನಾಸ್ಥಾಯ ಪರಮೇಶ್ವರಃ ।
ದರ್ಶಯಾಮಾಸ ವಿಪ್ರಾಯ ಬಾಲೇಂದುಕೃತಶೇಖರಂ ॥ ೩೪ ॥

ಕ್ಷೀರಾರ್ಣವಸಹಸ್ರಂ ಚ ಪೀಯೂಷಾರ್ಣವಮೇವ ವಾ ।
ದಧ್ಯಾದೇರರ್ಣವಾಂಶ್ಚೈವ ಘೃತೋದಾರ್ಣವಮೇವ ಚ ॥ ೩೫ ॥

ಫಲಾರ್ಣವಂ ಚ ಬಾಲಸ್ಯ ಭಕ್ಷ್ಯಭೋಜ್ಯಾರ್ಣವಂ ತಥಾ ।
ಅಪೂಪಾನಾಂ ಗಿರಿಂ ಚೈವ ದರ್ಶಯಾಮಾಸ ಸ ಪ್ರಭುಃ ॥ ೩೬ ॥

ಏವಂ ಸ ದದೃಶೇ ದೇವೋ ದೇವ್ಯಾ ಸಾರ್ಧಂ ವೃಷೋಪರಿ ।
ಗಣೇಶ್ವರೈಸ್ತ್ರಿಶೂಲಾದ್ಯೈರ್ದಿವ್ಯಾಸ್ತ್ರೈರಪಿ ಸಂವೃತಃ ॥ ೩೭ ॥

---

೩೩. ಆಗ ಶಿವನ ಪ್ರೀತಿಗೆ ಪಾತ್ರನಾದ ನಂದೀಶ್ವರನು ಶಿವನ ಅಪ್ಪಣೆಯ ಮೇರೆ ಆ ಉಪಮನ್ಯುವು ಬಿಟ್ಟ ಅಘೋರಾಸ್ತ್ರವನ್ನು ಬೇಗನೆ ಮಧ್ಯದಲ್ಲಿಯೇ ಹಿಡಿದುಹಾಕಿದನು.

೩೪. ಅನಂತರ ಷಡ್ಗುಣೈಶ್ವರ್ಯಸಂಪನ್ನನಾದ ಪರಮೇಶ್ವರನು ಬಾಲ ಚಂದ್ರನನ್ನು ಆಭರಣವನ್ನಾಗಿ ಧರಿಸಿ ದಿವ್ಯಕಾಂತಿಯಿಂದ ಬೆಳಗುತ್ತಿರುವ ತನ್ನ ನಿಜ ವಾದ ರೂಪವನ್ನೇ ಆ ಮುನಿಕುಮಾರನಿಗೆ ತೋರಿಸಿದನು.

೩೫-೩೬. ಆ ಪರಮೇಶ್ವರನು ಸಾವಿರಾರು ಕ್ಷೀರಸಮುದ್ರಗಳನ್ನೂ, ಅಮೃತ ಮೊಸರು ಮೊದಲಾದುವುಗಳ ಸಮುದ್ರವನ್ನೂ, ಹಣ್ಣುಗಳ ರಾಶಿಯನ್ನೂ, ಭಕ್ಷ್ಯಗಳು ಮತ್ತು ತಿನ್ನುವದಕ್ಕೆ ಯೋಗ್ಯವಾದ ಪದಾರ್ಥಗಳನ್ನೂ, ಅಪೂಪಗಳ ಬೆಟ್ಟಗಳನ್ನೂ, ಉಪಮನ್ಯುವಿಗೆ ತೋರಿಸಿದನು.

೩೭. ದೇವದೇವನಾದ ಶಿವನು ದೇವಿಯಾದ ಪಾರ್ವತೀಸಹಿತನಾಗಿ, ವೃಷಭಾರೂಢನಾಗಿ ಕೈಗಳಲ್ಲಿ ತ್ರಿಶೂಲ ಮೊದಲಾದ ಆಯುಧಗಳನ್ನು ಧರಿಸಿ, ಸುತ್ತಲೂ ಗಣೇಶ್ವರರು ಓಲೈಸುತ್ತಿರಲು ಮಹಾವೈಭವದಿಂದ ಬೆಳಗುತ್ತಾ ಆ ಉಪ ಮನ್ಯುಋಷಿಗೆ ದರ್ಶನವನ್ನಿತ್ತನು.

ದಿವಿ ದುಂದುಭಯೋ ನೇದುಃ ಪುಷ್ಪವೃಷ್ಟಿಃ ಪಪಾತ ಚ ।
ವಿಷ್ಣುಬ್ರಹ್ಮೇಂದ್ರಪ್ರಮುಖೈರ್ದೇವೈಶ್ಛನ್ನಾ ದಿಶೋ ದಶ ॥ ೩೮ ॥

ಅಥೋಪಮನ್ಯುರಾನಂದಸಮುದ್ರೋರ್ಮಿಭಿರಾವೃತಃ ।
ಪಪಾತ ದಂಡವದ್ಭೂವೌ ಭಕ್ತಿನಮ್ರೇಣ ಚೇತಸಾ ॥ ೩೯ ॥

ಏತಸ್ಮಿನ್ಸಮಯೇ ತತ್ರ ಸಸ್ಮಿತೋ ಭಗವಾನ್ಭವಃ ।
ಏಹ್ಯೇಹೀತಿ ತಮಾಹೂಯ ಮೂರ್ಧ್ನ್ಯಾಘ್ರಾಯ ದದೌ ವರಾನ್ ॥೪೦॥

॥ ಶಿವ ಉವಾಚ ॥

ಭಕ್ಷ್ಯಭೋಜ್ಯಾನ್ಯಥಾಕಾಮಂ ಬಾಂಧವೈರ್ಭುಂಕ್ಷ್ವ ಸರ್ವದಾ ।
ಸುಖೀ ಭವ ಸದಾ ದುಃಖಾನ್ನಿರ್ಮುಕ್ತೋ ಭಕ್ತಿಮಾನ್ಮಮ ॥ ೪೧ ॥

---

೩೮. ಆಗ ಅಂತರಿಕ್ಷದಲ್ಲಿ ದೇವದುಂದುಭಿಗಳು ಮೊಳಗಿದವು. ಪುಷ್ಪವೃಷ್ಟಿಯಾಯಿತು. ಸುತ್ತಲೂ ನೆರದಿದ್ದ ಬ್ರಹ್ಮ, ವಿಷ್ಣು, ಇಂದ್ರ ಮೊದಲಾದ ದೇವತೆಗಳಿಂದ ಹತ್ತು ದಿಕ್ಕುಗಳೂ ತುಂಬಿಹೋದುವು.

೩೯. ಅನಂತರ ಉಪಮನ್ಯುಋಷಿಯು ಸಮುದ್ರದಂತೆ ಅಪಾರವಾದ ಸಂತೋಷದಿಂದ ಉಬ್ಬಿದವನಾಗಿ ಭಕ್ತಿಯಿಂದ ಮನಸ್ಸು ತುಂಬಿಬರಲು ಭೂಮಿಯಲ್ಲಿ ದಂಡಾಕಾರವಾಗಿ ನಮಸ್ಕಾರಮಾಡಿದನು.

೪೦. ಅಷ್ಟರಲ್ಲಿ ಆ ಭಗವಾನ್ ಶಿವನು ಮುಗುಳುನಗೆಯಿಂದ ನಗುತ್ತಾ, ಆ ಉಪಮನ್ಯುವನ್ನು ಪ್ರೀತಿಯಿಂದ ಇಲ್ಲಿ ಬಾರೆಂದು ಹತ್ತಿರಕ್ಕೆ ಕರೆದು, ಅವನ ನೆತ್ತಿಯನ್ನು ಆಘ್ರಾಣಿಸಿ ಅವನಿಗೆ ವರಗಳನ್ನು ಕೊಟ್ಟನು.

೪೧. ಶಿವನು ಹೇಳಿದನು.—ಎಲೈ ಉಪಮನ್ಯುವೇ ! ನೀನು ನೋಡುತ್ತಿರುವ ಈ ಭಕ್ಷ್ಯಭೋಜ್ಯಾದಿಗಳನ್ನು ನಿನ್ನ ಬಂಧುಗಳೊಡನೆ ಈಗ ನಿನ್ನ ಇಚ್ಛೆ ಬಂದಂತೆ ತಿಂದು ಯಾವಾಗಲೂ ಸುಖವಾಗಿರು. ನಿನಗೆ ಯಾವ ವಿಧವಾದ ದುಃಖವೂ ಇಲ್ಲದಿರಲಿ. ನನ್ನಲ್ಲಿ ಭಕ್ತಿಯುಂಟಾಗಲಿ.

**ಉಪಮನ್ಯೋ ಮಹಾಭಾಗ ತವಾಂಬೈಷಾ ಹಿ ಪಾರ್ವತೀ ।**
**ಮಯಾ ಪುತ್ರೀಕೃತೋ ಹ್ಯದ್ಯ ದತ್ತಃ ಕ್ಷೀರೋದಕಾರ್ಣವಃ ॥ ೪೨ ॥**

**ಮಧುನಶ್ಚಾರ್ಣವಶ್ಚೈವ ದಧ್ಯನ್ನಾರ್ಣವ ಏವ ಚ ।**
**ಆಜ್ಯೌದನಾರ್ಣವಶ್ಚೈವ ಫಲಾದ್ಯರ್ಣವ ಏವ ಚ ॥ ೪೩ ॥**

**ಅಪೂಪಗಿರಯಶ್ಚೈವ ಭಕ್ಷ್ಯಭೋಜ್ಯಾರ್ಣವಸ್ತಥಾ ।**
**ಏತೇ ದತ್ತಾ ಮಯಾ ತೇ ಹಿ ತ್ವಂ ಗೃಹ್ಣೀಷ್ವ ಮಹಾಮುನೇ ॥ ೪೪ ॥**

**ಪಿತಾ ತವ ಮಹಾದೇವೋ ಮಾತಾ ವೈ ಜಗದಂಬಿಕಾ ।**
**ಅಮರತ್ವಂ ಮಯಾ ದತ್ತಂ ಗಾಣಪತ್ಯಂ ಚ ಶಾಶ್ವತಂ ॥ ೪೫ ॥**

**ವರಾನ್ವರಯ ಸುಪ್ರೀತ್ಯಾ ಮನೋಭಿಲಷಿತಾನ್ವರಾನ್ ।**
**ಪ್ರಸನ್ನೋಽಹಂ ಪ್ರದಾಸ್ಯಾಮಿ ನಾತ್ರ ಕಾರ್ಯಾ ವಿಚಾರಣಾ ॥ ೪೬ ॥**

---

೪೨. ಎಲೈ ಅದೃಷ್ಟವಂತನಾದ ಉಪಮನ್ಯುವೇ ! ಕೇಳು. ಈ ಪಾರ್ವತಿಯೇ ನಿನಗೆ ತಾಯಿಯಾಗಿ ಇರುವಳು. ನಿನ್ನನ್ನು ನಾನು ಮಗನೆಂದು ಭಾವಿಸಿರುವೆನು. ಆದ್ದರಿಂದಲೇ ನಿನಗೆ ಕ್ಷೀರಸಮುದ್ರವನ್ನೇ ಕೊಟ್ಟಿರುವೆನು.

೪೩-೪೪. ಜೇನು ಸಮುದ್ರ, ಮೊಸರಿನ ಸಮುದ್ರ, ಮೊಸರನ್ನದ ರಾಶಿ, ತುಪ್ಪದ ಸಮುದ್ರ, ತುಪ್ಪದ ಅನ್ನದ ರಾಶಿ, ಹಣ್ಣೇ ಮೊದಲಾದುವುಗಳ ಸಮುದ್ರ, ಅಪೂಪದ ಬೆಟ್ಟ, ಇನ್ನೂ ಇತರ ವಿಧವಾದ ಭಕ್ಷ್ಯಭೋಜ್ಯಗಳ ಸಮುದ್ರ, ಇವೆಲ್ಲವನ್ನೂ ನಿನಗೆ ನಾನು ಕೊಟ್ಟಿರುವೆನು. ಎಲೈ ಮಹರ್ಷಿಯೇ ! ಇದನ್ನು ತೆಗೆದುಕೋ.

೪೫. ಮಹಾದೇವನಾದ ನಾನೇ ನಿನ್ನ ತಂದೆಯು. ಜಗನ್ಮಾತೆಯಾದ ಪಾರ್ವತಿಯೇ ನಿನ್ನ ತಾಯಿಯು. ನಿನಗೆ ದೇವಭಾವವನ್ನು ಕೊಟ್ಟಿರುವೆನು. ಮತ್ತು ಶಾಶ್ವತವಾದ ಗಣಾಧಿಪತ್ಯವನ್ನೂ ಕೊಟ್ಟಿರುವೆನು.

೪೬. ನೀನು ಬಹಳ ಸಂತೋಷವುಳ್ಳವನಾಗಿ ಬೇಕಾದ ವರಗಳನ್ನು ಕೇಳು. ನಾನು ನಿನಗೆ ಸಂತೋಷದಿಂದ ಅವುಗಳನ್ನು ಕೊಡುವೆನು. ಈ ವಿಷಯದಲ್ಲಿ ಸಂಶಯಪಡಬೇಡ ಎಂದನು.

|| ವಾಯುರುವಾಚ ||

ಏವಮುಕ್ತ್ವಾ ಮಹಾದೇವಃ ಕರಾಭ್ಯಾಮುಪಗಮ್ಯ ತಂ ।
ಮೂರ್ಧ್ನ್ಯಾಘ್ರಾಯ ಸುತಸ್ತೇಽಯಮಿತಿ ದೇವ್ಯೈ ನ್ಯವೇದಯತ್ ||೪೭||

ದೇವೀ ಚ ಗುಹವತ್ಪ್ರೀತ್ಯಾ ಮೂರ್ಧ್ನಿ ತಸ್ಯ ಕರಾಂಬುಜಂ ।
ವಿನ್ಯಸ್ಯ ಪ್ರದದೌ ತಸ್ಮೈ ಕುಮಾರಪದಮವ್ಯಯಂ || ೪೮ ||

ಕ್ಷೀರಾಬ್ಧಿರಪಿ ಸಾಕಾರಃ ಕ್ಷೀರಂ ಸ್ವಾದು ಕರೇ ದಧತ್ ।
ಉಪಸ್ಥಾಯ ದದೌ ಪಿಂಡೀಭೂತಂ ಕ್ಷೀರಮನಶ್ವರಂ || ೪೯ ||

ಯೋಗೈಶ್ವರ್ಯಂ ಸದಾ ತುಷ್ಟಿಂ ಬ್ರಹ್ಮವಿದ್ಯಾಮನಶ್ವರಾಂ ।
ಸಮೃದ್ಧಿಂ ಪರಮಾಂ ತಸ್ಮೈ ದದೌ ಸಂತುಷ್ಟಮಾನಸಾ || ೫೦ ||

ಅಥ ಶಂಭುಃ ಪ್ರಸನ್ನಾತ್ಮಾ ದೃಷ್ಟ್ವಾ ತಸ್ಯ ತಪೋಮಹಃ ।
ಪುನರ್ದದೌ ವರಂ ದಿವ್ಯಂ ಮುನಯೇ ಹ್ಯುಪಮನ್ಯವೇ || ೫೧ ||

---

೪೭. ವಾಯುದೇವನಿಂತೆಂದನು.—ಮಹಾದೇವನು ಹೀಗೆಂದು ಹೇಳಿ, ಅವನನ್ನು ತನ್ನ ಹಸ್ತಗಳಿಂದಲೇ ಆಲಿಂಗಿಸಿಕೊಂಡು ಅವನ ನೆತ್ತಿಯನ್ನು ಆಘ್ರಾಣಿಸಿ ದೇವಿಯಾದ ಪಾರ್ವತಿಯ ಸಂಗಡ ಇವನು ನಿನ್ನ ಮಗನೆಂದು ಹೇಳಿದನು.

೪೮. ಪಾರ್ವತೀದೇವಿಯೂ ಕೂಡ ಷಣ್ಮುಖನನ್ನು ನೋಡುವಂತೆ ಅವನನ್ನು ಪ್ರೀತಿಯಿಂದ ನೋಡಿ ಅವನ ತಲೆಯಮೇಲೆ ತನ್ನ ಪದ್ಮದಂತಿರುವ ಕೈಯನ್ನು ಇರಿಸಿ, ಅವನಿಗೆ ಪರಿಪೂರ್ಣವಾದ ಕುಮಾರಪದವಿಯನ್ನು ಕೊಟ್ಟಳು.

೪೯. ಕ್ಷೀರಸಮುದ್ರವೂ ಕೂಡ ತಾನೇ ಆಕಾರವನ್ನು ಧರಿಸಿಕೊಂಡು ಬಂದು ಅಕ್ಷಯವಾದ ಹಾಲನ್ನು ತನ್ನ ಕೈಯಿಂದಲೇ ಉಪಮನ್ಯುವಿಗೆ ಒಪ್ಪಿಸಿತು.

೫೦. ಆಗ ಪಾರ್ವತೀದೇವಿಯು ಸಂತೋಷಗೊಂಡು ಆ ಉಪಮನ್ಯುಋಷಿಗೆ ಯೋಗೈಶ್ವರ್ಯವನ್ನೂ, ಅಣಿಮಾದಿ ಸಿದ್ಧಿಗಳನ್ನೂ, ಯಾವಾಗಲೂ ಸಂತೋಷದಿಂದ ಇರುವ ಮನಸ್ಸನ್ನೂ, ನಾಶವಾಗದೆ ಇರುವ ಬ್ರಹ್ಮವಿದ್ಯೆಯನ್ನೂ, ಉತ್ತಮವಾದ ಐಶ್ವರ್ಯವನ್ನೂ ಕೊಟ್ಟಳು.

೫೧. ಅನಂತರ ಶಂಭುವು ಸಹ ಸಂತೋಷದಿಂದ ಆ ಉಪಮನ್ಯುವಿನ ತಪಸ್ಸಿಗೆ ಮೆಚ್ಚಿ ಅವನಿಗೆ ಉತ್ತಮವಾದ ವರವನ್ನು ಕೊಟ್ಟನು.

ವ್ರತಂ ಪಾಶುಪತಂ ಜ್ಞಾನಂ ವ್ರತಯೋಗಂ ಚ ತತ್ತ್ವತಃ ।
ದದೌ ತಸ್ಮೈ ಪ್ರವಕ್ತೃತ್ವಪಾಟವಂ ಸುಚಿರಂ ಪರಂ ॥ ೫೨ ॥

ಸೋಽಪಿ ಲಬ್ಧ್ವಾ ವರಾನ್ದಿವ್ಯಾನ್ಕುಮಾರತ್ವಂ ಚ ಸರ್ವದಾ ।
ತಸ್ಮಾಚ್ಛಿವಾಚ್ಚ ತಸ್ಯಾಶ್ಚ ಶಿವಾಯಾ ಮುದಿತೋಽಭವತ್ ॥ ೫೩ ॥

ತತಃ ಪ್ರಸನ್ನಚೇತಸ್ಕಃ ಸುಪ್ರಣಮ್ಯ ಕೃತಾಂಜಲಿಃ ।
ಯಯಾಚೇ ಸ ವರಂ ವಿಪ್ರೋ ದೇವದೇವಾನ್ಮಹೇಶ್ವರಾತ್ ॥ ೫೪ ॥

॥ ಉಪಮನ್ಯುರುವಾಚ ॥

ಪ್ರಸೀದ ದೇವದೇವೇಶ ಪ್ರಸೀದ ಪರಮೇಶ್ವರ ।
ಸ್ವಭಕ್ತಿಂ ದೇಹಿ ಪರಮಾಂ ದಿವ್ಯಾಮವ್ಯಭಿಚಾರಿಣೀಂ ॥ ೫೫ ॥

---

೫೨. ಪಾಶುಪತವ್ರತ ಸಂಬಂಧವಾದ ಜ್ಞಾನವನ್ನೂ, ಆ ವ್ರತವನ್ನು ಆಚರಿಸುವವನು ಅವಶ್ಯಕವಾಗಿ ತಿಳಿಯಬೇಕಾಗಿರುವ ಅದರ ತತ್ವವನ್ನೂ, ಅದನ್ನು ಇತರರಿಗೆ ಬೋಧಿಸುವ ಸಾಮರ್ಥ್ಯವನ್ನು ಯಾವಾಗಲೂ ಅವನಿಗೆ ತಪ್ಪದೆ ಇರುವ ಹಾಗೆ ವರವನ್ನು ಕೊಟ್ಟನು.

೫೩. ಆ ಉಪಮನ್ಯುವೂ ಕೂಡ ಆ ಶಿವನಿಂದಲೂ ಪಾರ್ವತಿಯಿಂದಲೂ ಪಡೆದಿರುವ ವರಗಳ ಜತೆಯಲ್ಲಿ ಯಾವಾಗಲೂ ಕುಮಾರನಾಗಿರುವಿಕೆಯನ್ನು (ಕುಮಾರತ್ವ) ಹೊಂದಿ ಸಂತೋಷವುಳ್ಳವನಾದನು.

೫೪. ಬಳಿಕ ಆ ಉಪಮನ್ಯುಋಷಿಯು ದೇವದೇವನಾದ ಮಹೇಶ್ವರನಿಗೆ ಸಂತೋಷದಿಂದ ನಮಸ್ಕಾರಮಾಡಿ ಅಂಜಲಿಬದ್ಧನಾಗಿ ತಾನು ಕೇಳುವ ವರವನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದನು.

೫೫. ಎಲೈ ಪರಮೇಶ್ವರನೇ, ನೀನು ದೇವಾಧಿದೇವತೆಗಳಿಗೂ ಅಧಿಪತಿಯು. ನೀನು ನನ್ನ ವಿಷಯದಲ್ಲಿ ಪ್ರಸನ್ನನಾಗಿ ಯಾವಾಗಲೂ ನಿನ್ನಲ್ಲಿ ದೃಢವಾದ ಭಕ್ತಿಯು ನೆಲಸುವಂತೆ ಅನುಗ್ರಹಿಸು.

ಶ್ರದ್ಧಾಂ ದೇಹಿ ಮಹಾದೇವ ಸ್ವಸಂಬಂಧಿಷು ಮೇ ಸದಾ ।
ಸ್ವದಾಸ್ಯಂ ಪರಮಂ ಸ್ನೇಹಂ ಸಾನ್ನಿಧ್ಯಂ ಚೈವ ಸರ್ವದಾ ॥ ೫೬ ॥

ಏವಮುಕ್ತ್ವಾ ಪ್ರಸನ್ನಾತ್ಮಾ ಹರ್ಷಗದ್ಗದಯಾ ಗಿರಾ ।
ಸ ತುಷ್ಟಾವ ಮಹಾದೇವಮುಪಮನ್ಯುರ್ದ್ವಿಜೋತ್ತಮಃ ॥ ೫೭ ॥

॥ ಉಪಮನ್ಯುರುವಾಚ ॥

ದೇವದೇವ ಮಹಾದೇವ ಶರಣಾಗತವತ್ಸಲ ।
ಪ್ರಸೀದ ಕರುಣಾಸಿಂಧೋ ಸಾಂಬ ಶಂಕರ ಸರ್ವದಾ ॥ ೫೮ ॥

॥ ವಾಯುರುವಾಚ ॥

ಏವಮುಕ್ತೋ ಮಹಾದೇವಃ ಸರ್ವೇಷಾಂ ಚ ವರಪ್ರದಃ ।
ಪ್ರತ್ಯುವಾಚ ಪ್ರಸನ್ನಾತ್ಮೋಪಮನ್ಯುಂ ಮುನಿಸತ್ತಮಂ ॥ ೫೯ ॥

---

೫೬. ಎಲೈ ಮಹಾದೇವನೇ! ನನ್ನ ಸಂಬಂಧಿಗಳಲ್ಲಿ ನನಗೆ ಯಾವಾಗಲೂ ಆದರವು ಉಂಟಾಗುವಂತೆಯೂ, ನಿನ್ನ ವಿಷಯದಲ್ಲಿ ಉತ್ತಮವಾದ ದಾಸಭಾವವು ಉಂಟಾಗುವ ಹಾಗೂ, ನಿನ್ನಲ್ಲಿ ಅತಿಶಯವಾದ ಪ್ರೀತಿಯಿರುವಂತೆಯೂ, ಯಾವಾಗಲೂ ನಿನ್ನ ಸಮೀಪದಲ್ಲಿರುವಂತೆಯೂ ಅನುಗ್ರಹವನ್ನು ಮಾಡು.

೫೭ ಈ ರೀತಿ ಪ್ರಾರ್ಥಿಸಿ ಆ ಉಪಮನ್ಯುಮುನಿಯು ಮನಸ್ಸಿನಲ್ಲಿ ಉಂಟಾದ ಸಂತೋಷಾತಿಶಯದಿಂದ ಮಾತುಗಳು ತೊದಲುತ್ತಿರಲು ಮಹೇಶ್ವರನನ್ನು ಪರಿಪರಿಯಾಗಿ ಸ್ತೋತ್ರಮಾಡಿದನು.

೫೮. ಎಲೈ ದೇವದೇವನೆ! ಮಹಾದೇವನೆ! ನೀನು ಶರಣಾಗತವತ್ಸಲನು. ಭಕ್ತರ ವಿಷಯದಲ್ಲಿ ದಯಾಸಮುದ್ರನು. ಸಕಲಲೋಕಕ್ಕೂ ಸುಖವನ್ನುಂಟುಮಾಡುವವನು. ಪಾರ್ವತಿಯೊಡನಿರುವ ನಿನ್ನನ್ನು ನಮಸ್ಕಾರಮಾಡುವೆನು. ನನಗೆ ಪ್ರಸನ್ನನಾಗು ಎಂದು ಅನೇಕ ವಿಧವಾಗಿ ಸ್ತೋತ್ರಮಾಡಿದನು.

೫೯. ವಾಯುದೇವನಿಂತೆಂದನು.—ಉಪಮನ್ಯುಮುನಿಯು ಹೀಗೆ ಸ್ತೋತ್ರಮಾಡಲು ಸರ್ವರಿಗೂ ವರಪ್ರದನಾದ ಮಹಾದೇವನು ಸಂತೋಷದಿಂದ ಆ ಮುನಿಕುಮಾರನನ್ನು ಕುರಿತು.

॥ ಶಿವ ಉವಾಚ ॥

ವತ್ಸೋಪಮನ್ಯೋ ತುಷ್ಟೋಽಸ್ಮಿ ಸರ್ವಂ ದತ್ತಂ ಮಯಾ ಹಿ ತೇ ।
ದೃಢಭಕ್ತೋಽಸಿ ವಿಪ್ರರ್ಷೇ ಮಯಾ ಜಿಜ್ಞಾಸಿತೋ ಹ್ಯಸಿ ॥ ೬೦ ॥

ಅಜರಶ್ಚಾಮರಶ್ಚೈವ ಭವ ತ್ವಂ ದುಃಖವರ್ಜಿತಃ ।
ಯಶಸ್ವೀ ತೇಜಸಾ ಯುಕ್ತೋ ದಿವ್ಯಜ್ಞಾನಸಮನ್ವಿತಃ ॥ ೬೧ ॥

ಅಕ್ಷಯಾ ಬಾಂಧವಾಶ್ಚೈವ ಕುಲಂ ಗೋತ್ರಂ ಚ ತೇ ಸದಾ ।
ಭವಿಷ್ಯತಿ ದ್ವಿಜಶ್ರೇಷ್ಠ ಮಯಿ ಭಕ್ತಿಶ್ಚ ಶಾಶ್ವತೀ ॥ ೬೨ ॥

ಸಾನ್ನಿಧ್ಯಂ ಚಾಶ್ರಮೇ ನಿತ್ಯಂ ಕರಿಷ್ಯಾಮಿ ದ್ವಿಜೋತ್ತಮ ।
ಉಪಕಂಠಂ ಮಮ ತ್ವಂ ವೈ ಸಾನಂದಂ ವಿಹರಿಷ್ಯಸಿ ॥ ೬೩ ॥

ಏವಮುಕ್ತ್ವಾ ಸ ಭಗವಾನ್ಸೂರ್ಯಕೋಟಿಸಮಪ್ರಭಃ ।
ಈಶಾನಸ್ಸ ವರಾನ್ದತ್ವಾ ತತ್ರೈವಾಂತರ್ದಧೇ ಹರಃ ॥ ೬೪ ॥

---

೬೦. ಶಿವನು ಹೇಳಿದನು.—ಅಪ್ಪಾ ಉಪಮನ್ಯುವೇ ! ನಿನ್ನ ವಿಷಯದಲ್ಲಿ ನಾನು ಸಂತೋಷದಿಂದ ಇರುವೆನು. ನೀನು ಕೇಳಿದ್ದೆಲ್ಲವನ್ನೂ ನಾನು ಕೊಟ್ಟಿರುವೆನು. ಎಲೈ ಬ್ರಹ್ಮರ್ಷಿಯೆ ! ನನ್ನಲ್ಲಿ ನಿನಗೆ ದೃಢವಾದ ಭಕ್ತಿಯಿರುವುದು. ಅದನ್ನು ನಾನು ಚೆನ್ನಾಗಿ ಪರೀಕ್ಷಿಸಿ ತಿಳಿದಿರುವೆನು.

೬೧. ನಿನಗೆ ಮುಪ್ಪು ಮರಣಾದಿಗಳುಂಟಾಗದಿರಲಿ. ಯಾವಾಗಲೂ ಯಶಸ್ವಿಯಾಗಿಯೂ ತೇಜಸ್ವಿಯಾಗಿಯೂ ಉತ್ತಮವಾದ ಶಿವಜ್ಞಾನದಿಂದ ಕೂಡಿದವನೂ ಆಗಿ ದುಃಖಾದಿಗಳಿಲ್ಲದೆ ಸುಖವಾಗಿ ಬಾಳು.

೬೨–೬೪. ನಿನಗೆ ಬಂಧುಗಳು ಬಹಳವಾಗಿರಲಿ. ನಿನ್ನ ಕುಲವೂ, ಗೋತ್ರವೂ ಯಾವಾಗಲೂ ನಾಶವಾಗದೆ ಇರಲಿ. ಎಲೈ ಬ್ರಾಹ್ಮಣಶ್ರೇಷ್ಠನೇ! ನಿನಗೆ ನನ್ನಲ್ಲಿ ಯಾವಾಗಲೂ ಶಾಶ್ವತವಾದ ಭಕ್ತಿಯುಂಟಾಗಲಿ. ನಿನ್ನ ಆಶ್ರಮದಲ್ಲಿ ನಾನು ಯಾವಾಗಲೂ ವಾಸಮಾಡುವೆನು. ನೀನೂ ನನ್ನ ಸಮೀಪದಲ್ಲಿಯೇ ಇರುತ್ತಾ ಸಂತೋಷದಿಂದ ವಿಹರಿಸುತ್ತಿರುವೆ. ಕೋಟಿಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ ಭಗವಾನ್ ಮಹೇಶ್ವರನು ಹೀಗೆ ಹೇಳಿ ಅವನಿಗೆ ವರವನ್ನು ಕೊಟ್ಟು ಅಲ್ಲಿಯೇ ಅಂತರ್ಧಾನನಾದನು.

ಉಪಮನ್ಯುಃ ಪ್ರಸನ್ನಾತ್ಮಾ ಪ್ರಾಪ್ಯ ತಸ್ಮಾದ್ವರಾದ್ವರಾನ್ ।
ಜಗಾಮ ಜನನೀಸ್ಥಾನಂ ಸುಖಂ ಪ್ರಾಪಾಧಿಕಂ ಚ ಸಃ ॥ ೬೫ ॥

ಇತಿ ಶ್ರೀ ಶಿವಮಹಾಪುರಾಣೇ ಸಪ್ತಮ್ಯಾಂ ವಾಯವೀಯಸಂಹಿತಾಯಾಂ
ಪೂರ್ವಭಾಗೇ ಉಪಮನ್ಯುಚರಿತವರ್ಣನಂ ನಾಮ
ಪಂಚತ್ರಿಂಶೋಽಧ್ಯಾಯಃ

ವಾಯವೀಯಸಂಹಿತಾಯಾಂ ಪೂರ್ವಭಾಗ ಸಮಾಪ್ತಃ.



೬೫. ಬಳಿಕ ಉಪಮನ್ಯುಋಷಿಯು ಶ್ರೇಷ್ಠನಾದ ಆ ಶಿವನಿಂದ ವರಗಳನ್ನು ಪಡೆದು ಸಂತೋಷಭರಿತನಾಗಿ ತನ್ನ ತಾಯಿಯು ಇರುವ ಸ್ಥಳಕ್ಕೆ ಹಿಂತಿರುಗಿ ಬಂದು ಮೊದಲಿಗಿಂತಲೂ ಹೆಚ್ಚಾಗಿ ಸುಖದಿಂದಿದ್ದನು.

ಇಲ್ಲಿಗೆ ಶಿವಮಹಾಪುರಾಣದ ಏಳನೆಯ ವಾಯವೀಯ ಸಂಹಿತೆಯ ಪೂರ್ವಭಾಗದಲ್ಲಿ
ಉಪಮನ್ಯುಚರಿತ್ರವರ್ಣನವೆಂಬ ಮೂವತ್ತೈದನೆಯ
ಅಧ್ಯಾಯವು ಮುಗಿದುದು.

ಏಳನೆಯದಾದ ವಾಯವೀಯಸಂಹಿತೆಯ ಪೂರ್ವಭಾಗವು ಮುಗಿದುದು.

— ಮಂಗಳಂ —



Printed by G. BASAPPA, proprietor,
SREE BASAVESWARA ELECTRIC PRESS,
Devaraja Market Buildings, MYSORE.